# ಒಂದಾಣೆ ಮಾಲೆ



೧ ಬುದ್ಧನ ಕಥೆಗಳು
೨ ಕೊಲೆಗಡುಕ
೩ ನಿಗೂಢ ರಹಸ್ಯ
೪ ಸದ್ರಿ ಸುಬ್ಬು.
೫ ಬಾಬಿಗೆ ಬಾಸಂಗ
೬ ಕುರಾಲ್
೭ ಉಪದೇಶ ಶತಕ
೮ ಸತೀ ಸಾವಿತ್ರಿ
೯ ಸುಭಾಷಿತ
೧೦ ಸಂಜ್ಞಾ ಜ್ಞಾನ ಕೋಶ
೧೧ ಸಂಗ್ರಾಮ ಸಂಹ
೧೨ ಧರ್ಮ ಶಿಕ್ಷಾ.
೧೩ ಮೀರಾ ಬಾಯಿ
೧೪ ಕರ್ಮ ದೇವಿ
೧೫ ಚಕುಟ್ಟ ಬಿಟ್ಟ ಧಿಟ್ಟ
೧೬ ಭಕ್ತ ವಾಣೆ.
೧೭ ಡಾಕ್ಟರ್ ಆರೋಗ್ಯಂ
೧೮ ಲಾಕಿಕ ನ್ಯಾಯಗಳು

# ಬುದ್ಧನ ಕಥೆಗಳು.



ಲೇಖಕರು: ಶ್ರೀ। ಗೋವಿಂದ ಪೈ.

ಅರಳಿದ ಪುಷ್ಪ ೭.

# ಬುದ್ಧನ ಕಥೆಗಳು.

(ಬುದ್ಧನನ್ನು ಕುರಿತ ಕೆಲವು ಕಥೆಗಳೂ ಆತನ ಸಾಮತಿಗಳೂ)



ಲೇಖಕರು:

ಡಾ। ಗೋವಿಂದ ಪೈ.

(ಮೊದಲನೆಯ ಮುದ್ರಣ)

1956

ಪ್ರಕಾಶಕರು:

ವಿಶಾಲ ಸಾಹಿತ್ಯ ಮಾಲೆ,

ಮಾರ್ಕೆಟ್ ರಸ್ತೆ : : ಮೂಡುಬಿದ್ರಿ, ದ. ಕ.

ಬೆಲೆ 1 ಆಣೆ.

# ಸಂಪಾದಕೀಯ

ನಮ್ಮ ಓದುಗರಿಗೂ, ಲೇಖಕರಿಗೂ, ಹಿತೈಷಿಗಳಿಗೂ ನಾಡಿನ ೧೦ನೆಯ ಸ್ವಾತಂತ್ರ್ಯೋತ್ಸವದ ಈ ಶುಭಸಂದರ್ಭದಲ್ಲಿ ಹೃತ್ಪೂರ್ವಕ ಅಭಿವಂದನೆಗಳು.

ರಾಷ್ಟ್ರಕವಿ ಶ್ರೀ ಗೋವಿಂದ ಪೈ, ಮಂಜೇಶ್ವರ ಇವರು ಸಾಹಿತ್ಯ ಮಾಲೆಯ ಅಭಿವೃದ್ಧಿಯನ್ನು ಬಯಸಿ, ಆಶೀರ್ವಾದ ರೂಪವಾಗಿ ತಮ್ಮ ಚಿಕ್ಕ ಕೃತಿಯೊಂದನ್ನು ಇತ್ತು ಸಹಕರಿಸಿದುದಕ್ಕೆ ನಾವು ಅವರಿಗೆ ಚಿರಋಣಿಗಳು.

ಈ ಪುಸ್ತಕದ ಮುಖಪುಟದ ಪಡಿಯಚ್ಚನ್ನು ಒದಗಿಸಿ ಪುಸ್ತಕದ ಅಂದವನ್ನು ಹೆಚ್ಚಿಸಲು ಕಾರಣರಾದ ಶ್ರೀ ಕೆ ಅನಂತ ಪದ್ಮನಾಭ ಉಡುಪ, (ಸಂಪಾದಕ: 'ಯುಗಪುರುಷ' ಕಿನ್ನಿಗೋಳಿ) ಇವರಿಗೂ, ಈ ಪುಸ್ತಕದ ಬಹುಭಾಗವನ್ನು ಸಂಗ್ರಹಿಸಿಕೊಟ್ಟು ನೆರವಾದ ಶ್ರೀ ಅಮ್ಮೆಂಬಳ ಶಂಕರನಾರಾಯಣ ನಾವಡ, ವಿದ್ವಾನ್ (ಸಂಪಾದಕ: ಸಾಹಿತ್ಯಾಂಜಲಿ ಗ್ರಂಥಮಾಲೆ, ಕೋಟೆಕಾರ್) ಇವರಿಗೂ ನಮ್ಮ ಕೃತಜ್ಞತೆಗಳು.

ವಿಶಾಲ ಸಾಹಿತ್ಯಮಾಲೆ,
ದಿನಾಂಕ ೧೫-೮-೧೯೫೬.

ಪಿ. ಮಾಧವರಾಯ ಭಟ್,
ಸಂಪಾದಕ.

ಬುದ್ಧಂ ಶರಣಂ ಗಚ್ಛಾಮಿ।
ಧರ್ಮಂ ಶರಣಂ ಗಚ್ಛಾಮಿ।
ಸಂಘಂ ಶರಣಂ ಗಚ್ಛಾಮಿ॥

# ಬುದ್ಧನ ಕಥೆಗಳು.

(ಬುದ್ಧನನ್ನು ಕುರಿತ ಕೆಲವು ಕಥೆಗಳೂ ಆತನ ಸೂಕ್ತಿಗಳೂ)

ಬುದ್ಧನ ಜೀವಮಾನದಲ್ಲಿಯ ಕಾಲವಿಷಯಕವಾದ ಒಂದು ಕೌತುಕವೆಂದರೆ, ಆತನು ಜನ್ಮವೆತ್ತುದುದೂ ವೈಶಾಖ ಶುಕ್ಲ ಪೂರ್ಣಿಮೆಯಂದು, ಆತನು ಬೋಧಿಜ್ಞಾನವನ್ನೂ ಗಳಿಸಿಕೊಂಡುದೂ ವೈಶಾಖ ಶುಕ್ಲ ಪೂರ್ಣಿಮೆಯಂದು ಮತ್ತು ಪರಿನಿರ್ವಾಣವನ್ನು ಹೊಂದಿದುದೂ ವೈಶಾಖ ಶುಕ್ಲ ಪೂರ್ಣಿಮೆಯಂದು ಮಾತ್ರವಲ್ಲ, ಆ ಮೂರೂ ಬಾರಿ ಚಂದ್ರನು ವಿಶಾಖ ನಕ್ಷತ್ರದಲ್ಲಿ ಇದ್ದಂದು. ಆ ಮೂರು ವೈಶಾಖ ಹುಣ್ಣಿಮೆಗಳಲ್ಲಿ ಆತನ ಹೆಸರಿನಲ್ಲಿ ಹುಟ್ಟಿ ಈಗಲೂ ಸಿಂಹಳದ್ವೀಪ, (Ceylon) ನೇಪಾಳ ಇತ್ಯಾದಿ ಬೌದ್ಧ ದೇಶಗಳಲ್ಲಿ ಬಳಕೆಯಲ್ಲಿರುವ ಅದೊಂದು ಶಕ ಮೊದಲಾದುದಾದರೆ ಆತನು ಬೋಧಿಜ್ಞಾನವನ್ನು ಪಡೆದ ವೈಶಾಖ ಹುಣ್ಣಿಮೆಯಂದು ತಾನೆ.

ನಾನು ಕಂಡುಹಿಡಿದಿರುವ ಮೇರೆಗೆ ಆ ವೈಶಾಖ ಹುಣ್ಣಿಮೆಗೆ ಸರಿಯಾದ ಕ್ರೈಸ್ತಶಕದ ತೇದಿ ಕ್ರಿ. ಪೂ. (ಕ್ರಿಸ್ತಪೂರ್ವ) ೫೪೭ನೇ ಇಸವಿಯ ಏಪ್ರಿಲ್ ತಿಂಗಳ ೩ನೆಯ ತಾರೀಕು ಬುಧವಾರ. ಆತನ ಮಿಕ್ಕವೆರಡು ವೈಶಾಖ ಹುಣ್ಣಿಮೆಗಳ ಕ್ರೈಸ್ತ ಕಾಲಮಾನದ ತೇದಿಗಳಾದರೂ ನನ್ನ ನಿರ್ಣಯಿಕೆಯ ಪ್ರಕಾರ ಹೀಗಿವೆ-

(೧) ಆತನು ಹುಟ್ಟಿದ ವೈಶಾಖ ಹುಣ್ಣಿಮೆಯ ತೇದಿ ಕ್ರಿ.ಪೂ. ೫೮೧ನೆಯ ಮಾರ್ಚಿ ೩೦ನೆಯ ತಾರೀಕು ಶುಕ್ರವಾರ, ಮತ್ತು

(೨) ಆತನ ಪರಿನಿರ್ವಾಣದ ವೈಶಾಖ ಹುಣ್ಣಿಮೆಯ ತೇದಿ ಕ್ರಿ. ಪೂ.

೫೦೧ನೆಯ ಏಪ್ರಿಲ್ ೧೫ನೆಯ ತಾರೀಕು ಕುಜವಾರ.

ಹೀಗೆ ಆತನು ಈ ಭೂತಳದಲ್ಲಿ ೮೦ ವರ್ಷಗಳ ವರೆಗೆ ಜೀವಿಸಿದನು.

ಇಲ್ಲಿ ಕೆಳಗೆ ಆತನನ್ನು ಕುರಿತ ಕೆಲ ಕತೆಗಳನ್ನೂ ಆತನ ಕೆಲ ಸಾಮತಿಗಳನ್ನೂ ಕೊಟ್ಟಿದೆ.

## ಬಯ್ಗುಗಳನ್ನು ಕುರಿತು

ಬುದ್ಧನು ಸಮಾಜದ ನಡವಳಿಕೆಯನ್ನು ಸೂಕ್ಷ್ಮವಾಗಿ ಗಮನಿಸುತ್ತ, ಮಂದಿ ತಂತಮ್ಮ ಒಣಜಂಬ, ಬಡಿವಾರಗಳನ್ನೂ ಸ್ವಾರ್ಥಪರವಾದ ಗರ್ವವನ್ನೂ ಮೆಚ್ಚಿಸಲೋಸುಗ ತಾನೆ ದ್ರೋಹಬುದ್ಧಿಯಿಂದ ಮಾಡುತ್ತಿರುವ ಮರುಳು ಅಪಚಾರಗಳಿಂದ ಜಗತ್ತಿನಲ್ಲಿ ಏತರ ಕ್ಲೇಶ ಉಂಟಾಗುತ್ತದೆ ಎಂದು ಕಂಡುಕೊಳ್ಳುತಿದ್ದನು.

ಒಮ್ಮೆ ಆತನು ಹೀಗೆಂದನು:– ಯಾವೊಬ್ಬನು ಹಿಂದುಮುಂದು ತಿಳಿಯದೆ ನನಗೆ ಅನ್ಯಾಯ ಮಾಡಿದರೆ, ಅದಕ್ಕೆ ನಾನಾತನಿಗೆ ನನ್ನ ಮನಃಪೂರ್ವಕವಾದ ಪ್ರೀತಿಯ ಮರೆಯನ್ನೀವೆ. ಆತನು ಹೆಚ್ಚೆಚ್ಚು ಕೇಡುಮಾಡುವಂತೆ ನಾನಾತನಿಗೆ ಹೆಚ್ಚೆಚ್ಚು ಒಳಿತನ್ನು ಮಾಡುವೆ. ಅದರಿಂದ ಯಾವಾಗಲೂ ಒಳಿತಿನ ಸುಗಂಧ ನನ್ನ ಕಡೆಗೆ ಬರುತ್ತದೆ, ಕೆಡುಕಿನ ದುರ್ಗಂಧ ಆತನ ಕಡೆ ಹೋಗುತ್ತದೆ.

ಹೀಗೆ ಬುದ್ಧನು ಕೆಡುಕಿಗೆ ಪ್ರತಿಯಾಗಿ ಒಳಿತನ್ನು ಮಾಡಬೇಕೆಂಬ ಅಕ್ಕರೆಯ ಕಟ್ಟಳೆಯನ್ನು ಕೈಗೊಂಡಿರುತ್ತಾನೆಂಬುದನ್ನು ಯಾವನೊಬ್ಬ ಅರೆಮರುಳನು ಕೇಳಿಕೊಂಡು ಆತನಿದ್ದಲ್ಲಿಗೆ ಹೋಗಿ ಆತನನ್ನು ಬಾಯಾರೆ ಬಯ್ದನು. ಬುದ್ಧನು ಆತನ ಅವಿವೇಕದ ಬಗ್ಗೆ ಆತನಲ್ಲಿ ಮನಮರುಗಿ ಸುಮ್ಮನಿದ್ದನು.

ಆ ಪ್ರಾಣಿಯ ಬಯ್ಗುಳು ಮುಗಿಯುತ್ತಲೆ ಬುದ್ಧನಾತನಿಗೆ 'ಮಗನೇ, ಯಾವನೊಬ್ಬನು ತನಗೆ ಮಾಡಿದ ಉಡುಗೊರೆಯನ್ನು ಒಲ್ಲನಾದರೆ, ಅದು ಯಾವಾತನಿಗೆ ಸಲ್ಲಬೇಕು? ಎಂದನು.

ಅದಕ್ಕಾತನು 'ಹಾಗಾದ ಪಕ್ಷಕ್ಕೆ ಅದನ್ನು ಕೊಟ್ಟಾತನಿಗೆ ಹೋಗಬೇಕು' ಎಂದನು.

ಬುದ್ಧನು, 'ಇಗೋ, ನೀನೀಗ ನನ್ನನ್ನು ಬಯ್ದೆ, ನಾನದನ್ನು ನಿರಾಕ

ರಿಸಿದೆ. ನಿನ್ನನ್ನು ವಿನಂತಿಸುತ್ತೇನೆ. ನೀನೇ ಅದನ್ನು ಇಟ್ಟುಕೋ: ಆಗ್ಗೆ ನಿನಗೊಂದು ದುಃಖಕ್ಕೆ ಕಾರಣವಾಗದೇ? ಮರುಧ್ವನಿ ಹೇಗೆ ಧ್ವನಿಗೆ ಸೇರಿರಬೇಕೋ ನೆರಳು ಹೇಗೆ ಒಡಲನ್ನು ಸೇರಿರಬೇಕೊ ಹಾಗೆಯೇ ದುಃಖವು ತಪ್ಪದೆ ಕೆಡುಕನನ್ನೇ ಬೆನ್ನು ಹತ್ತುತ್ತದೆ'.

ಬಯ್ವಾತನು ಉಸುರೆತ್ತಲಿಲ್ಲ ಬುದ್ಧನು ಮುಂದರಿಸಿದನು.

'ಸಜ್ಜನರನ್ನು ಹಳಿವ ದುರ್ಜನನೆಂದರೆ, ತನ್ನ ಮೋರೆಯನ್ನು ಮೇಲಕ್ಕೆತ್ತಿ ಬಾಂದಳದ ಕಡೆಗೆ ಉಗುಳುವವನಂತೆ. ಆತನ ಉಗುಟಾಟದಿಂದ ಆಕಾಶವೇನೂ ಕೊಳಕಾಗದು, ಆತನ ಉಗುಳಾದರೆ ಮರಳಿ ಕೆಳಕ್ಕಿಳಿದು ಆತನ ಮೈಮೇಲೆ ತಾನೆ ಬೀಳುವುದು. ನಿಂದಕನೆಂದರೆ ಗಾಳಿಗೆ ಎದುರಾಗಿ ದೂಳನ್ನು ಚಲ್ಲಾಡುವವನಂತೆ. ಆ ದೂಳು ಅದನ್ನು ಹಾರಿಸಿದಾತನ ಮೇಲೆಯೇ ಬೀಳುವುದು'.

ಬಯ್ದಾತನು ನಾಚಿಕೆಯಿಂದ ಹೋಗಿಬಿಟ್ಟನು. ಆತನು ಮರಳಿ ಬಂದು ಬುದ್ಧನನ್ನು ಶರಣುಹೊಕ್ಕನು, ಧರ್ಮವನ್ನು ಕೈಕೊಂಡನು, ಸಂಘವನ್ನು ಸೇರಿಕೊಂಡನು.

## ಚಂಡಾಲ

ಭಗವಂತನು ಶ್ರಾವಸ್ತಿಯಲ್ಲಿ ಜೇತವನದಲ್ಲಿ ಇದ್ದಾಗ, ಆತನು ತನ್ನ ದಿನಾಗಲಿನ ಕ್ರಮುಪ್ರಕಾರ ಮನೆಮನೆಗೆ ಹೋಗಿ ತಿರುವೆ ಎತ್ತುತ್ತಾ ಬರುತ್ತಿದ್ದವನು ಅಗ್ನಿಹೋತ್ರಿಯಾದ ಭಾರದ್ವಾಜನೆಂಬ ಒಬ್ಬ ಬ್ರಾಹ್ಮಣನ ಬಾಗಿಲಲ್ಲಿ ನಿಂತನು, ಒಮ್ಮೆ.

ಆಗ್ಗೆ ಅಗ್ನಿಯನ್ನು ಹೊತ್ತಿಸಿ ಪೂಜಿಸುತ್ತ, ಅದರಲ್ಲಿ ಆಹುತಿಗಳನ್ನು ಕೊಡುತ್ತಿದ್ದ ಭಾರದ್ವಾಜನು ಬುದ್ಧನನ್ನು ಕಂಡು 'ಎಲಾ ಬೋಳಾ, ನೀನು ಚಂಡಾಲ ಅಲ್ಲೇ ನಿಂತಿರು' ಎಂದು ಒದರಾಡಿದನು.

ಭಗವಂತನಾಗ ಹೀಗೆಂದನು–

'ಚಂಡಾಲನೆಂದರೆ ಯಾರು? ಆತನ ನಡತೆ ಹೇಗಿದೆ? ಬಲ್ಲೆಯಾ, ಬ್ರಾಹ್ಮಣಾ? ಅರಿಯೆಯಾದರೆ ಕೇಳು' ಎಂದನು. 'ಇದೋ ಯಾರು ಎಂದಿಗೆ ಸಿಟ್ಟುಗೊಳ್ಳುತ್ತಾನೊ, ಹೆರವರಲ್ಲಿ ಹಗೆಯನ್ನು ಸಾಧಿಸುತ್ತಾನೋ, ಆತನು ಚಂಡಾಲ. ಯಾವಾತನು ಕೆಡುಕನೊ, ಕಪಟಿಯೊ, ವಂಚಕನೊ, ನಾಸ್ತಿಕನೊ, ತನ್ನ ತಪ್ಪನ್ನು ಒಪ್ಪಲೊಲ್ಲನೊ, ಆತನು ಚಂಡಾಲ. ಯಾರು

ಕಳ್ಳತನವನ್ನು, ಸುಲಿಗೆಯನ್ನು ಮಾಡುವನೊ, ಯಾರು ಜೀವಿಗಳನ್ನು ಹಿಂಸಿಸುವನೊ, ಘಾತಿಸುವನೊ, ಯಾರ ಅಂತಃಕರಣದಲ್ಲಿ ಲೇಶಮಾತ್ರವು ದಯೆ ಇಲ್ಲವೊ, ಆತನು ಚಂಡಾಲ. ಯಾರು ಕೊಂಡ ಸಾಲವನ್ನು ತಿದ್ದಲೊಲ್ಲನೊ, ಯಾರು ತನಗಾಗಿ ಹೆರವರಿಗಾಗಿ, ಹಣಕ್ಕಾಗಿ ಸುಳ್ಳುಸಾಕ್ಷ್ಯವನ್ನು ನುಡಿವನೊ, ಆತನು ಚಂಡಾಲ. ಯಾರು ಹಾದರಿಸುವನೊ, ಯಾರು ಮುಪ್ಪಾದ ತನ್ನ ತಾಯಿತಂದೆಯನ್ನು ಸರಿಯಾಗಿ ಸಾಕಲೊಲ್ಲನೊ, ತನ್ನ ಬಂಧುಬಾಂಧವರನ್ನು ಬಯ್ಯುವನೊ, ಕಾಡುವನೊ, ಆತನು ಚಂಡಾಲ. ಯಾರು ಮತ್ಸರಿಯೊ, ಲೋಭಿಯೊ, ಕರ್ಮಗೇಡಿಯೊ, ನಾಚಿಕೆಗೇಡಿಯೊ, ಪಾಪವನ್ನು ಗೈಯ್ಯುವಲ್ಲಿ ನಿರ್ಭೀತನೊ, ಆತನೇ ಚಂಡಾಲ. ಬ್ರಾಹ್ಮಣಾ, ಜನ್ಮದಿಂದ ಯಾವಾತನೂ ಚಂಡಾಲನೂ ಆಗನು, ಬ್ರಾಹ್ಮಣನೂ ಆಗಲಾರನು. ತಂತನ್ನ ಕರ್ಮಗಳಿಂದ ತಾನೆ ಬ್ರಾಹ್ಮಣನಾಗುತ್ತಾನೆ, ಚಂಡಾಲನೂ ಆಗುತ್ತಾನೆ.

"ಇದಕ್ಕೊಂದು ಉದಾಹರಣೆಯನ್ನು ಹೇಳುತ್ತೇನೆ. ಮಾತಂಗ ಎಂಬ ಹೆಸರಿನಿಂದ ಪ್ರಸಿದ್ಧನಾದೊಬ್ಬ ಋಷಿ ಶ್ವಪಚನಾದ (ಅಂದರೆ ನಾಯಿಯ ಮಾಂಸವನ್ನು ತಿನ್ನುವ) ಚಂಡಾಲನಲ್ಲಿ ಜನ್ಮವೆತ್ತಿದನು. ಆತನ ಕೀರ್ತಿ ಎಷ್ಟರ ಮಟ್ಟಿಗೆ ಹಬ್ಬಿತೆಂದರೆ ದೊಡ್ಡ ದೊಡ್ಡ ಬ್ರಾಹ್ಮಣರೂ ಕ್ಷತ್ರಿಯರೂ ಬಂದು ಆತನನ್ನು ಸೇವಿಸಿ ಆತನ ಅನುಗ್ರಹವನ್ನು ಪಡೆದು ಹೋಗುತ್ತಿದ್ದರು. ಕೊನೆಗೆ ಆತನು ದೇಹವನ್ನು ಬಿಟ್ಟು ವಿಮಾನವನ್ನೇರಿ ಬ್ರಹ್ಮಲೋಕಕ್ಕೆ ಹೋದನಂತೆ. ಹಾಗೆ ಬ್ರಹ್ಮಲೋಕವನ್ನು ಸೇರುವಲ್ಲಿ ಆತನ ಜಾತಿ ಅಡ್ಡ ಬರಲಿಲ್ಲ. ಇಲ್ಲೀಗ ಎಷ್ಟೋ ಮಂದಿ ಕುಲೀನರಾದ ಬ್ರಾಹ್ಮಣರು ನಾನಾ ವಿಧದ ಹೇಯವಾದ ಪಾಪಕರ್ಮಗಳನ್ನು ಮಾಡುವುದನ್ನು ನಾವು ಕಾಣುತ್ತಲಿದ್ದೇವೆ. ಇಹದಲ್ಲಿ ಅವರನ್ನು ಹಿಂದು ಮುಂದು ನಿಂದಿಸುತ್ತಾರೆ. ಪರಲೋಕದಲ್ಲಿ ಅವರಿಗೆ ದುರ್ಗತಿಯಲ್ಲದೆ ಬೇರೆ ಗತಿ ಇಲ್ಲ. ಆಗ್ಗೆ ಅವರ ಹುಟ್ಟು ಜಾತಿ ಅವರನ್ನು ಇಂದಿನ ನಿಂದೆಯಿಂದಾಗಲಿ ಮುಂದಿನ ದುರ್ಗತಿಯಿಂದಾಗಲಿ ಕಾಪಾಡದು ಎಂದೇ ನಾನೆನ್ನುತ್ತೇನೆ, ಜನ್ಮದಿಂದ ಯಾವಾತನೂ ಬ್ರಾಹ್ಮಣನೂ ಆಗನು, ಜನ್ಮದಿಂದ ಚಂಡಾಲನೂ ಆಗಲಾರನು".

## ಅನ್ನಭಾರ

ಸುಮನನೆಂಬೊಬ್ಬ ಗೃಹಸ್ಥನ ಮನೆಯಲ್ಲಿ ಒಬ್ಬ ಜೀತವಾಳು ಅಂಥಾ

ಹಲವರಲ್ಲಿ ಒಬ್ಬನಾಗಿದ್ದನು. ಆತನೊಮ್ಮೆ ತನ್ನ ಧನಿಯ ಮನೆಯ ಮುಂದೆ ತಾನು ಕೊಯಿದಿದ್ದ ಹುಲ್ಲನ್ನು ಸೂಡುಕಟ್ಟುತಿದ್ದಾಗ ಒಬ್ಬ ಶ್ರಮಣನು ಆ ಹಾದಿಯಾಗಿ ಹಾದುಹೋಗುತ್ತಿರುವುದನ್ನು ಕಂಡು, ಆ ಹುಲ್ಲು ಹೊರೆಯನ್ನು ಅಲ್ಲಿಯೇ ಬಿಟ್ಟು ನೆಟ್ಟಗೆ ಹೋಗಿ ತನ್ನ ಮನೆ ಹೊಕ್ಕು ತನಗಾಗಿ ತೆಗೆದಿಟ್ಟ ತನ್ನ ಪಾಲಿನ ಅನ್ನವನ್ನು ತಂದು ಅದನ್ನು ಆ ಶ್ರಮಣನಿಗಿತ್ತನು. ಶ್ರಮಣ ನವನ್ನು ಉಂಡು ಆತನಿಗೆ ಕೆಲವು ಒಳ್ಳೇ ಮಾತುಗಳನ್ನು ಅರುಹಿ, 'ನೀನಿಂದು ನನಗೆ ಉಣಿಸನ್ನು ಇತ್ತ ಕಾರಣ ನೀನು ಇನ್ನು ಮುಂದೆ ಅನ್ನಭಾರ ಎಂದು ಹೆಸರಾದಿ' ಎಂದಾತನಿಗೆ ಹೇಳಿ ಅಲ್ಲಿಂದ ಮುಂದುವರಿದನು.

ಅದನ್ನೆಲ್ಲಾ ಮನೆಯ ಕಿಟಕಿಯಿಂದ ಕಾಣುತ್ತ ಕೇಳುತ್ತಲಿದ್ದ ಸುಮ ನನ ಮಗಳು ಆ ಆಳನ್ನು ಕರೆದು, 'ಭಲೇ, ಅನ್ನಭಾರ, ಒಳ್ಳೇದು ಮಾಡಿದೆ! ಚೆನ್ನಾಯಿತು, ನೆನೆಯದೇನೇ ಎಷ್ಟು ಪುಣ್ಯ ಗಳಿಸಿದೆ!' ಎಂದಳು. ಸುಮ ನನು ಆ ಮಾತುಗಳನ್ನು ಕೇಳಿ, 'ಏನು ತಾಯಿ? ಏನಾಯಿತು?' ಎಂದು ವಿಚಾ ರಿಸಲು, ಆಕೆ ಆ ಆಳಿನ ಭಕ್ತಿಯನ್ನೂ, ಆತನು ಉಣಿಸಿದ ಶ್ರಮಣನು ಬುದ್ಧ ನೆಂಬುದನ್ನೂ, ಆತನು ಆ ಆಳಿಗೆ ಉಪದೇಶಗೆಯ್ದನೆಂಬ ಸಂಗತಿಯನ್ನೂ ತನ್ನ ತಂದೆಗೆ ತಿಳಿಸಿದಳು.

ಅದನ್ನು ಕೇಳುತ್ತಲೇ ಸುಮನನು ಆ ಆಳಿನೊಂದಿಗೆ, ಆತನು ಬುದ್ಧ ನಿಂದ ಪಡೆದ ಉಪದೇಶದ ಒಂದು ಪಾಲನ್ನು ತನಗೂ ಕೊಡಬೇಕೆಂದೂ, ಅದಕ್ಕೆ ಪ್ರತಿಯಾಗಿ ಆತನಿಗೆ ಹೇರಳ ಧನವನ್ನು ತೆರುವೆನೆಂದೂ ಕೇಳಿ ಕೊಂಡನು

ಅದಕ್ಕೆ ಆ ಆಳು 'ಒಡೆಯಾ, ಆ ಕುರಿತು ಮೊದಲಾಗಿ ಆತನ ಅಪ್ಪಣೆ ಪಡೆದುಕೊಳ್ಳಬೇಕು. ಈ ಗಳಿಗೆಗೆ ಆತನ ಬೆನ್ನು ಹತ್ತಿಹೋಗಿ ಕೇಳಿಬರುವೆ' ಎಂದು ಪಟಪಟನೆ ಆತನ ದಾರಿಗೆ ಮುಟ್ಟಿ ಆತನನ್ನು ಕುರಿತು, 'ಭಗ ವನ್, ನನ್ನ ಒಡೆಯನು ನೀನೀಗ ನನಗೆ ಮಾಡಿದ ಉಪದೇಶದಲ್ಲಿ ಪಾಲನ್ನು ಯಾಚಿಸುತ್ತಲಿದ್ದಾನೆ. ಆತನಿಗೆ ಕೊಡಲೇ?' ಎಂದಾಗ, ಬುದ್ಧನು ಅದಕ್ಕೆ ಹೀಗೆಂದನು–

"ಈಗೋ, ಒಂದು ಹಳ್ಳಿಯಲ್ಲಿ ನೂರು ಮನೆಗಳಿವೆ, ಅವಲ್ಲಿಯ ಒಂದೇ ಮನೆಯಲ್ಲಿ ಒಂದೇ ಬೆಳಕು ಉರಿಯುತ್ತಿದೆ. ಒಬ್ಬನು ತನ್ನ ಕೈದೀವಿಗೆ ಯನ್ನು ಅಲ್ಲಿಗೆ ಕೊಂಡುಹೋಗಿ, ಆ ಬೆಳಕಿನಲ್ಲಿ ಅದನ್ನು ಹಚ್ಚಿಸಿಕೊಂಡು

ಹೋದನು ಹಾಗೆಯೇ ಮತ್ತೊಬ್ಬನು, ಮಗುದೊಬ್ಬನು, ಇನ್ನೊಬ್ಬನು, ಬೇರೊಬ್ಬನು ತಂತಮ್ಮ ದೀಪಗಳನ್ನು ಹಚ್ಚಿಸಿಕೊಂಡು ಹೋದರು. ಅದೇ ಪ್ರಕಾರ ಧರ್ಮದ ಬೆಳಕು ಕೂಡಾ ಹಬ್ಬುತ್ತದೆ; ಹಾಗೆ ಹಬ್ಬುವಲ್ಲಿ ಅದನ್ನು ಇತ್ತವನ ಬೆಳಕೇನೂ ಕುಂದುವುದಿಲ್ಲ. ಆದಾಗಿ ನಿನಗಿತ್ತ ಉಪದೇಶದ ಬೆಳಕನ್ನು ಈಗಲೇ ನಿನ್ನ ಒಡೆಯನೊಡನೆ ಹಂಚಿಕೊ".

ಹೀಗೆ ಭಗವಂತನ ಅಪ್ಪಣೆಯನ್ನು ಪಡಕೊಂಡು ಅನ್ನಭಾರನು ತನ್ನ ಒಡೆಯನ ಮನೆಗೆ ಬಂದು, 'ಒಡೆಯಾ, ಇದೋ ನಾನು ಪಡೆದ ಉಪದೇಶದಿಂದ ನಿನಗೂ ಪಾಲು. ನಿನಗೆ ನೀಡೆಂದು ಭಗವಂತನು ಆಜ್ಞಾಪಿಸಿರುತ್ತಾನೆ. ದಯಮಾಡಿ ತಗೊಳ್ಳು' ಎಂದನು.

ಸುಮನನು ಅದನ್ನು ಸ್ವೀಕರಿಸಿ, ಅನ್ನಭಾರನಿಗೆ ಪ್ರತಿಯಾಗಿ ಹೇರಳ ಹಣವನ್ನು ಕೊಡುವೆನೆಂದು ಒತ್ತಾಯಪಡಿಸಿದನು. ಅನ್ನಭಾರನಾದರೆ ಅದನ್ನೊಲ್ಲ. ಆಗ ಸುಮನನು 'ಇಗೋ ನಿನ್ನ ಬಿಡುಗಡೆಯನ್ನು ನಿನಗಿತ್ತೆ. ನನ್ನ ಸರ್ವಸ್ವದಲ್ಲಿ ನನ್ನೊಂದಿಗೆ ಸರಿಪಾಲನ್ನೂ ನಿನಗಿತ್ತೆ' ಎಂದನು. ಅದನ್ನೂ ಅನ್ನಭಾರನೊಲ್ಲದೆ, 'ನನ್ನೊಡೆಯಾ, ಈ ಜಗತ್ತನ್ನೇ ಪ್ರತಿಯಾಗಿ ಕೊಟ್ಟರೂ ಅದು ಭಗವಂತನ ಉಪದೇಶದ ಬೆಲೆಗೆ ಬಾರದು. ನಿನಗೊಡೆಯಾ, ಆ ಉಪದೇಶದ ಸರಿಪಾಲನ್ನು ನಾನು ಉಚಿತವಾಗಿತ್ತೆ. ಅದಕ್ಕೆ ಬದಲಾಗಿ ಏನನ್ನೂ ಒಲ್ಲೆ. ಏಕೆಂದರೆ ಈಗಲೀಗ ನನ್ನೊಂದಿಗೆ ಭಗವಂತನೆಂದಿಲ್ಲವೇ?-'ಕಟ್ಟವಶ್ಯಕೆ ಮಿಕ್ಕ ಧನವನೀಡಾಡು!' ಎಂದು? ನಿನ್ನ ಮನೆಯೂಳಿಗದಲ್ಲೇ ನನ್ನ ಕಾಲ ಕಳೆವೆ. ನನಗೆ ಬೇಕಾದುದಿಷ್ಟೇ, ನನ್ನ ಗುಡಿಸಲು ಮತ್ತು ನನ್ನ ಕುಡುಗೋಲು, ಆವೆರಡನ್ನೂ ನನ್ನ ಕೊನೆಗಾಲದ ವರೆಗೆ ಬಳಸುವಂತೆ ನನಗೆ ಅಪ್ಪಣೆ ಇತ್ತರೆ ಅಷ್ಟೇ ಸಾಕು' ಎಂದನು.

## ಸಾಸಿವೆ ಕಾಳು.

ಒಬ್ಬ ಶ್ರೀಮಂತನೊಂದಿಗೆ ಇದ್ದ ಬಂಗಾರವೆಲ್ಲವೂ ಒಂದು ದಿನ ಆಕಸ್ಮಿಕವಾಗಿ ಇದ್ದಕ್ಕಿದ್ದಂತೆ ಬೂದಿಯಾಯಿತು. ಅದನ್ನು ಕಂಡು ಆತನು ತಿನಿಸುಣಿಸನ್ನು ತೊರೆದು ಹಾಸಿಗೆ ಹಿಡಿದು ಮಲಗಿದ್ದು ಮನೋರೋಗದಿಂದ ಅರೆಮರುಳನಂತಾದನು. ಅದನ್ನು ಕೇಳಿ ಆತನ ಗೆಳೆಯನೊಬ್ಬನು ಆತನಿದ್ದಲ್ಲಿಗೆ ಹೋಗಿ, ಆತನ ಶೋಕದ ಕಾರಣವೇನೆಂದು ತಿಳಕೊಂಡು, ಆತನಿಗೆ

'ಅಗೋ, ನೀನೆಂದಿಗೂ ನಿನ್ನ ಧನದ ಸದುಪಯೋಗವನ್ನು ಮಾಡಿಲ್ಲ ನೀನದನ್ನು ಸಂಚಿಸಿದಾಗ ಅದು ಬೂದಿಗಿಂತ ಮೇಲಾಗಿರಲಿಲ್ಲ. ಈಗ ನನ್ನ ಮಾತನ್ನು ಕೇಳು: ಸಂತೆಯ ಬೀದಿಯಲ್ಲಿ ಚಾಪೆಗಳನ್ನು ಹಾಸಿ ಈ ಬೂದಿಯನ್ನು ಅವುಗಳ ಮೇಲೆ ರಾಶಿ ಹಾಕು, ಮತ್ತು ಅದನ್ನು ಮಾರುತ್ತಿರುವಂತೆ ತೋರ್ಪಡಿಸಿಕೋ' ಎಂದನು

ಆ ಧನಿಕನು ತನ್ನ ಗೆಳೆಯನು ಹೇಳಿಕೊಟ್ಟಂತೆ ಮಾಡಿದನು. ಆತನನ್ನು ಕಂಡು ಸೋಜಿಗದಿಂದ 'ಈ ಬೂದಿಯನ್ನು ಏತಕ್ಕೆಂದು ಮಾರಲಿರುವಿ?' ಎಂದು ವಿಚಾರಿಸಿದ ನೆರೆಕರೆಯವರಿಗೆ ಆತನು 'ಇದು ನನ್ನ ಒಡವೆ, ಅದನ್ನು ಮಾರಾಟಕ್ಕೆ ಇಟ್ಟಿದ್ದೇನೆ' ಎನ್ನುತಿದ್ದನು.

ಹೀಗೆಯೇ ಕೆಲ ಕಾಲಾನಂತರ ಆ ದಾರಿಯಾಗಿ ಹೋಗುತ್ತಿದ್ದ ಕೃಶಾ ಗೌತಮೀ§ ಎಂಬ ಅನಾಥಳೂ ದರಿದ್ರಳೂ ಆದೊಬ್ಬ ತರುಣಿ ಆ ಧನಿಕನನ್ನು ಕಂಡು, 'ಒಡೆಯಾ, ಚಿನ್ನ-ಬೆಳ್ಳಿಗಳನ್ನು ಮಾರಲಿಕ್ಕೆ ಹೀಗೇಕೆ ಕುಪ್ಪೆಹಾಕಿರುತ್ತೀ?' ಎಂದು ಕೇಳಿದಳು ಧನಿಕನಾಗ ಆಕೆಯೊಡನೆ ಕೇಳಿದನು,'ಮಗಳೇ, ನೀನಾ ಚಿನ್ನ-ಬೆಳ್ಳಿಗಳನ್ನೆತ್ತಿ ನನ್ನ ಕೈಗೆ ಕೊಡುವಿಯಾ?' ಕೂಡಲೇ ಆಕೆ ಆ ಕುಪ್ಪೆಯಿಂದ ಒಂದು ಹಿಡಿ ಬೂದಿಯನ್ನೆತ್ತಿ ಆತನ ಕೈಗಿತ್ತಳು. ತಟ್ಟನೆ ಅದು ಚಿನ್ನವಾಯಿತು.

ಕೃಶಾ ಗೌತಮಿಗೆ ಆತ್ಮಜ್ಞಾನದ ಒಳಗಣ್ಣು ಇದ್ದಿರಬೇಕು, ಆ ಕಾರಣವೇ ಆಕೆ ಮುಟ್ಟುತ್ತಲೇ ಬೂದಿ ಪುನರಪಿ ಬಂಗಾರವಾಯಿತು ಎಂದು ಆತನು ತಿಳಕೊಂಡು, ಆಕೆಯನ್ನು ತನ್ನ ಮಗನಿಗೆ ಹೆಂಡತಿಯಾಗಿ ತನ್ನ ಮನೆಗೆ ತಂದುಕೊಂಡು, 'ಕೆಲವರಿಗೆ ಬೂದಿಗಿಂತ ಚಿನ್ನ ಮೇಲಲ್ಲವಾದರೂ ಕೃಶಾ ಗೌತಮಿಯ ಕೈಯಲ್ಲಿ ಬೂದಿ ಬಂಗಾರವಾಗುತ್ತದೆ' ಎಂದು ಕೊಂಡಾಡುತಿದ್ದನು.

ಹಾಗೂ ಕೆಲ ಕಾಲ ಸಂದಿತು, ಆ ಧನಿಕನು ಕಾಲವಶವಾದನು. ಕೃಶಾ ಗೌತಮಿಗೆ ಒಂದು ಗಂಡು ಮಗು ಹುಟ್ಟಿತು, ಅದು ಪಾಪ! ಕಾಲು-ಬಾಯಿ ಬರುವ್ರೋದಿಗೆ ಚಿಕ್ಕಂದಿನಲ್ಲೇ ತೀರಿ ಹೋಯಿತು.

ಆಗ ಆ ಹತಭಾಗ್ಯಳ ಅಳಲಿಗೆ ದಿಕ್ಕಿಲ್ಲ! ಮಗುವಿನ ಹೆಣವನ್ನು ಎತ್ತಿಕೊಂಡು ಇದ್ದಲ್ಲಿಗೆಲ್ಲ ನೆರೆಹೊರೆಯವರಲ್ಲಿಗೆ ಹೋಗಿ, 'ಈ ಚಿಣ್ಣನಿಗೆ ಏನಾ

§ ಆಕೆಯ ಹೆಸರು 'ಗೌತಮಿ' ಎಂದು; ಆಕೆ ಮೈಯಲ್ಲಿ ತೆಳ್ಳಗಿದ್ದ (ಕೃಶಾ=ತೆಳ್ಳಗೆ ಇರುವಾಕೆ) ಕಾರಣವೇನೋ ಹಾಗೆ ಕರೆಯಲ್ಪಟ್ಟಿರಬೇಕು.

ದರೂ ಮದ್ದನ್ನು ಕೊಡಿಸುವಿರಾ? ಈತನನ್ನು ಮುನ್ನಂತೆ ಎದ್ದು ನಡಿಸುವಿರಾ?' ಎಂದು ಅಳುತ್ತ ಅಂಗಲಾಚುತ್ತ ಬೇಡಿಕೊಂಡಳು. ಆದರೆ ಯಾರೇನೂ ಮಾಡಿಯಾರು? ಯಾರಿಂದ ಏನಾದೀತು? ಅವರೆಲ್ಲರೂ ಮಗು ಸತ್ತದೆ, ಆಕೆಗೆ ಹುಚ್ಚು ಹತ್ತಿದೆ ಎಂದರು. ಕೊಟ್ಟಕೊನೆಗೆ ಯಾರೋ ಒಬ್ಬನು ಆಕೆಯನ್ನು ಕಂಡು ತುಂಬಾ ಮನಮರುಗಿ ಆಕೆಗೆಂದನು– 'ತಾಯೀ, ಈತನನ್ನು ವಾಸಿಮಾಡುವ ಮದ್ದನ್ನು ನಾನರಿಯೆ, ಮದ್ದುಗಾರನನ್ನು ಬಲ್ಲೆ. ಆತನು ಈ ರುಜೆಯನ್ನು ಮಾಣಿಸಬಲ್ಲ'. ಆಕೆಯಾಗ ಬಾಯಾರೆ ಬೇಡಿದಳು, 'ಅಯ್ಯಾ, ನಿನ್ನ ಕಾಲು ಹಿಡಿಯುತ್ತೇನೆ, ದಯಮಾಡಿ ಹೇಳು, ಆತನು ಯಾರು? ಎಲ್ಲಿದ್ದಾನೆ?' ಅದಕ್ಕೆ ಆತನೆಂದನು, 'ಆತನು ಶಾಕ್ಯಮುನಿ, ಬುದ್ಧ. ಆತನಿದ್ದಲ್ಲಿಗೆ ಹೋಗು'.

ಆ ಮಗನನ್ನು ಎತ್ತಿಕೊಂಡು ಆಕೆ ಬುದ್ಧನಿದ್ದಲ್ಲಿಗೆ ಓಡಿ ಬಂದಳು, ಗೋಳಾಡಿದಳು, ಮತ್ತೆ ಎಂದಳು, 'ಪ್ರಭೋ, ನನ್ನ ಮಗು ಗುಣವಾಗಿ ಎದ್ದು ನಿಲ್ಲತಕ್ಕಂಥಾ ಮದ್ದನ್ನು ದಯಮಾಡಿ ನೀಡಾ!'

ಆಗ್ಗೆ ಬುದ್ಧನು ಆಕೆಯನ್ನೂ ಆಕೆ ಹೊತ್ತುತಂದ ಆ ಹೆಣವನ್ನೂ ಕಂಡು, ಆಕೆಗೆ 'ಮಗಳೇ, ಈ ಬಗ್ಗೆ ನನಗೆ ಒಂದು ಹಿಡಿ ಸಾಸಿವೆಕಾಳು ಬೇಕಾಗಿದೆ' ಎಂದಾಗ, 'ಸೈ, ಅಷ್ಟೇ ಅಲ್ಲ? ಈಗ ತಂದೆ ಒಡೆಯಾ!' ಎಂದಾಕೆ ಹೊರಕ್ಕೆ ನೆಗೆವಷ್ಟರಲ್ಲಿ ಆತನು 'ಆದರೆ ಇಗೋ ನೋಡು, ನೀನದನ್ನು ಇಸಕೊಂಬ ಮನೆಯಲ್ಲಿ ಒಂದು ಮಗುವಾಗಲಿ, ಒಬ್ಬ ಗಂಡಸಾಗಲಿ, ಒಬ್ಬ ಹೆಂಗಸಾಗಲಿ, ಯಾರೂ ಎಂದೂ ಸತ್ತಿರಬಾರದು' ಎಂದು ಒಂದು ಕುಂಟು ಪಂಕ್ತಿಯನ್ನು ಕೂಡಿಸಿಟ್ಟನು.

ಬಡ ಕೃಶಾ ಗೌತಮಿ ಮನಸ್ಸಿನಲ್ಲಿ ಹಿಗ್ಗಿ ನೆಟ್ಟಗೆ ಹೋದಳು, ಸಾಸಿವೆ ಕಾಳನ್ನು ಬೇಡುತ್ತಾ ಮನೆಯಿಂದ ಮನೆಗೆ. ಆಕೆಯ ಗೋಳನ್ನು ಕಂಡು, ಮಂದಿ ಆಕೆಯನ್ನು ತುಂಬ ಕನಿಕರಿಸಿದರು, ಕಣ್ಣೀರು ತುಂಬಿ ಕನಿಕರಿಸಿದರು, ಮತ್ತು 'ಇಗೋ ತಾಯೀ, ತಗೋ ಇಲ್ಲಿದೆ ಬೇಕಷ್ಟು ಸಾಸಿವೆ ಕಾಳು' ಎಂದು ಕರೆಕರೆದು ಹಿಡಿಹಿಡಿ ಸಾಸಿವೆಕಾಳನ್ನು ಕೊಂಡು ಬಂದರು. ಆ ಕಾಳನ್ನು ಕೊಡಲಿಕ್ಕೆ ಅವರು ಕೆಯ್ಯೆತ್ತುವಾಗ, 'ತಾಳಿ, ನಿಮ್ಮ ಮನೆಯಲ್ಲಿ, ನಿಮ್ಮ ಬಳಗದಲ್ಲಿ ಯಾರಾದರೂ ಕಿರಿಯರು, ಹಿರಿಯರು, ಗಂಡಸರು, ಹೆಂಗಸರು ಸತ್ತಿಲ್ಲವಷ್ಟೇ?' ಎಂದಾಕೆ ಕೇಳುತ್ತಲೇ, ನೀಡಿದ ಕೈಗಳನ್ನು ಹಿಂದಕ್ಕೆ ಸೆಳೆದು ಕೊಂಡು ಅವರೆಂದರು, 'ತಾಯೀ, ಏನಿದೇನಿದು? ಯಾರೂ ಸಾಯದ ಮನೆ

ಇದೆಯೇ? ಯಾರೂ ಸತ್ತಿಲ್ಲದ ಬಳಗವಿದೆಯೇ? ಇದೇನೆಂಜೆ? ನೀನರಿಯೆಯಾ ತಂಗೀ, ಉಳಿದವರು ಕೆಲವರಷ್ಟೇ ಅಳಿದವರಾದರೆ ಅಸಂಖ್ಯೇಯರೆಂದು? ಸುಮ್ಮಗಿರುವ ನಮ್ಮ ಬೇಗುದಿಯನ್ನು ಎಚ್ಚರಿಸಬೇಡ, ತಾಯಿ, ಹೋಗು', ಹೀಗೆ ಆ ಊರಿನಲ್ಲಿ ತಂತಮ್ಮ ಪ್ರೀತಿಯ ಒಂದಲ್ಲ ಒಂದು ಪ್ರಾಣಿಯ ಮರಣ ವಾಗದಿರುವ ಒಂದೂ ಮನೆ ಇದ್ದಿಲ್ಲ.

ಹಾಗೆಯೇ ಸಂಜೆಯ ತನಕ ಮನೆಮನೆ ಸುತ್ತಾಡಿ, ಬಳಲಿ ನಿರಾಶಳಾಗಿ, ಕೊನೆಗೆ ಕೃಶಾ ಗೌತಮಿ ಬಂದು ಮಾರ್ಗದ ಪಕ್ಕದಲ್ಲಿ ಸುಮ್ಮಗೆ ಕುಳಿತು ಕೊಂಡು, ತನ್ನ ಮುಂದೆ ಊರಿನ ಬೆಳಕುಗಳು ಮಿನುಗುತ್ತಿರುವುದನ್ನೂ ನಂದುತ್ತಿರುವುದನ್ನೂ ನೋಡುತಿದ್ದಳು. ತರುವಾಯ ಸುತ್ತಮುತ್ತಲೂ ಕತ್ತಲು ಕವಿಯಿತು. ಆಗ್ಗೆ ಆ ಮನುಷ್ಯರ ಅದೃಷ್ಟವನ್ನು ಕುರಿತು ಚಿಂತಿ ಸುತ್ತ ಅವರ ಬಾಳ್ವೆಗಳು ಮಿನುಗುವುದನ್ನೂ ನಂದುವುದನ್ನೂ ಪರಿಭಾವಿಸಿ, ತನ್ನಲ್ಲೇ ತಾನು ಬಗೆದುಕೊಂಡಳು, 'ಈ ಶೋಕದಲ್ಲಿ ನಾನು ಎಷ್ಟು ಸ್ವಾರ್ಥ ಪರಳಾದೆ! ಮರಣವು ಸರ್ವಸಾಮಾನ್ಯವಾಗಿದೆ, ಎಲ್ಲರಿಗೂ ಏಕಪ್ರಕಾರ ವಾಗಿದೆ. ಆದರೂ ಈ ಶೂನ್ಯವಾದ ಕಂದರದಲ್ಲಿ ಒಂದು ಮಾರ್ಗವಿದೆ, ಅದಾ ದರೊ ತನ್ನ ಸ್ವಾರ್ಥವನ್ನು ಸಂಪೂರ್ಣವಾಗಿ ತ್ಯಜಿಸಿದವನನ್ನು ಅನಂತತೆಗೆ ನಡಸಿಕೊಂಡು ಹೋಗುತ್ತದೆ!'

ಹೀಗೆಂದು ತನ್ನ ಮಗುವಲ್ಲಿ ತನಗಿದ್ದ ಸ್ವಾರ್ಥಪರವಾದ ಅಕ್ಕರೆಯನ್ನು ಬದಿಗಿಟ್ಟು, ಆಕೆ ನೆಟ್ಟಗೆ ಕಾಡಿಗೆ ಹೋಗಿ ತನ್ನ ಮಗುವನ್ನು ಹೂಳಿಟ್ಟು, ಅಲ್ಲಿಂದ ಬುದ್ಧನ ಬಳಿಗೆ ಬಂದು, 'ದೇವಾ, ನೀನು ದಯೆದೋರಿ, ಕೊಟ್ಟ ಮದ್ದು ಹಿಡಿಯಿತು' ಎಂದು ಆತನ ಕಾಲುಹಿಡಿದು, ನೊಂದ ಹೃದಯಗಳ ವೇದನೆಯನ್ನೆಲ್ಲ ತೊಡೆದಿಕ್ಕುವ ದಿವ್ಯಾಂಜನದಂತಿರುವ ಆತನ ಉಪದೇಶವನ್ನು ಮನವಾರೆ ಕೇಳಿ ಆತನ ಧರ್ಮದ ಆಶ್ರಯವನ್ನು ಕೈಕೊಂಡಳು.

# ಬುದ್ಧನ ಸಾಮತಿಗಳು.

## ಬೆಂಕಿ ಹತ್ತಿದ ಮನೆ.

ಒಬ್ಬ ಹಣವಂತನಾದ ಗೃಹಸ್ಥನಿದ್ದನು. ಆತನ ಮನೆ ದೊಡ್ಡದೇ ಸರಿ, ಆದರೆ ತೀರ ಹಳತು, ಅದರ ತೊಲೆಗಳಿಗೆಲ್ಲ ಗೆದ್ದಲು ಹಿಡಿದಿದೆ, ಕಂಬ

ಗಳು ತುಂಬಾಗಿವೆ, ಅಷ್ಟಕ್ಕೆ ಬೆಂಕಿ ಕಡ್ಡಿ ತೋರಿಸಿದರೆ ಸಾಕು, ಹೊತ್ತುತ್ತಿದೆ. ಒಂದಾನೊಂದು ದಿನ ಆ ಮನೆಯಲ್ಲಿ ಬೆಂಕಿಯು ವಾಸನೆ ತೀಡಿತು. ಗೃಹಸ್ಥನು ಹೊರಕ್ಕೆ ಓಡಿ ಬಂದನು. ನೋಡಲೇನು! ಛಾವಣಿಗೆ ಬೆಂಕಿಯೇ ಬೆಂಕಿ! ಆತನಿಗೆ ಸಿಡಿಲು ಬಡಿದಂತಾಯಿತು. ಆತನ ಮುದ್ದು ಮಕ್ಕಳೆಲ್ಲವೂ ಮನೆಯೊಳಗೆ ಆಡುತ್ತಲೂ, ಅಡ್ಡಾಡುತ್ತಲೂ ಇವೆ. ಅವುಗಳ ಗತಿ ಏನು? ಅವರನ್ನು ಮುತ್ತುತ್ತಿರುವ ಆ ಕಂಟಕವನ್ನು ಕುರಿತು, ಅವು ಏನೂ ಅರಿಯವು. 'ಈಗಲೇನು ಮಾಡೋಣ?' ಎನಿಸಿತಾತನಿಗೆ. 'ಬಂದ ಆಪತ್ತನ್ನು ಮಕ್ಕಳು ಅರಿಯವು. ಅವರನ್ನು ಈಗ ಎಚ್ಚರಿಸಿಯೂ ನಿಷ್ಫಲ, ಅವನ್ನು ಹೊರಕ್ಕೆ ತರಲಿಕ್ಕೆ ನಾನು ಒಳಹೊಕ್ಕು ಹಿಡಕೊಂಡರೆ, ಅವು ಸರ್ರನೆ ಓಡಿ ಹೋದಾವು ಮಾತ್ರವಲ್ಲ, ಒಂದನ್ನು ಬದುಕಿಸಲಿಕ್ಕೆ ಹೋಗುವಾಗ ಮಿಕ್ಕವು ಭಸ್ಮವಾದಾವು'.

ಆಗ್ಗೆ ತಟ್ಟನೆ ಹೀಗೆ ಹೊಳೆಯಿತಾತನಿಗೆ, 'ನಮ್ಮ ಮಕ್ಕಳಿಗೆ ಮಕ್ಕಳಾಟಿಕೆಗಳೆಂದರೆ ಜೀವ. ಅದಾಗಿ ಇದೋ ಆಟಿಕೆಗಳೆಂದರೆ ಆ ಮಾತಿಗೆ ಅವೆಲ್ಲವೂ ಹೊರಗೆ ಹಾರಿ ಬಂದಾವು' ಕೂಡಲೇ ಆತನು ಗಟ್ಟಿಯಾಗಿ ಕರೆದನು, ಮಕ್ಕಳಿರಾ, ಹೊರಗೆ ಬನ್ನಿ. ಯಾವೆಲ್ಲ ಬಗೆಯ ತಿಂಡಿಗಳನ್ನು ನಿಮಗಾಗಿ ಇಲ್ಲಿ ಇಟ್ಟಿದೆ ನೋಡಿ, ನೀವು ಎಂದೂ ಕಾಣದ ಚೆಲುವಿನ ಆಟಿಕೆಗಳೆಲ್ಲ ಇಲ್ಲಿವೆ, ನೋಡಿ. ತಟ್ಟನೆ ಬನ್ನಿ. ಮತ್ತೆ ಎಂದರೆ ತಿಂಡಿಗಳೂ ಇಲ್ಲ, ಆಟಿಕೆಗಳೂ ಇಲ್ಲ. ಆ ಗಳಿಗೆಗೆ ಆ ಹೊತ್ತುತ್ತಿರುವ ಜ್ವಾಲೆಯಿಂದ ಮಕ್ಕಳೆಲ್ಲ ಧಾವಿಸಿ ಹೊರಗೆ ಬಂದವು. ತಿಂಡಿಗಳೂ ಆಟಿಕೆಗಳೂ ಎಂಬ ಮಾತುಗಳೇ ಮಂತ್ರದಂತಾದವು ಅವರಿಗೆ. ಆಗ ತುಂಬ ಸಂತುಷ್ಟನಾದ ಆ ತಂದೆ ವಿವಿಧ ಬಗೆಯ ಸವಿಸವಿ ತಿಂಡಿಗಳನ್ನೂ, ತರತರದ ಮಕ್ಕಳಾಟಿಕೆಗಳನ್ನೂ ಅವರಿಗೆ ತಂದುಕೊಟ್ಟನು. ತಮ್ಮ ಮನೆ ಸುಟ್ಟು ನೆಲಸಮವಾಗಿ ಹೋದುದನ್ನೂ ತಮ್ಮ ತಂದೆ ತಮಗೆ ತಿಂಡಿಗಳ ಮತ್ತು ಆಟಿಕೆಗಳ ಮೋಹ ತೋರಿಸಿ ತಮ್ಮನ್ನು ಅನ್ಯಥಾ ನಿಶ್ಚಯವಾಗಿ ಸುಟ್ಟು ಬೂದಿಯಾಗಿ ಹೋಗಬೇಕಾಗಿದ್ದ ಮರಣದಿಂದ ತಪ್ಪಿಸಿ ಕಾಪಾಡಿದ ಆತನ ಮಮತೆಯನ್ನೂ ಮನವರಿತು, ಆ ಮಕ್ಕಳು ಆತನನ್ನು ಹೊಗಳಿ ತುಂಬ ಅಕ್ಕರೆಗೈದುವು.

ಈ ಲೋಕದ ಮಂದಿ ಎಂದರೆ ತೀರ ಮಕ್ಕಳು. ಅವರಿಗೆ ಐಹಿಕ ಸುಖದ ಬೇಗಡೆಯೇ ಮುದ್ದು ಎಂಬು ತಥಾಗತನು ಬಲ್ಲನು. ಅದಾಗಿ ಆತನು ಅವರಿಗೆ

ಧರ್ಮದಿಂದ ದೊರೆವ ಆನಂದ ಎಂತಹದು ಎಂದು ಬೋಧಿಸುತ್ತ ಅವರು ಆತ್ಮ ನಾಶ ಹೋದಂತೆ ಕಾಪಾಡಲಿಕ್ಕೆ ಯತ್ನಿಸುತ್ತಾನೆ, ಹಾಗೂ ಅವರಿಗೆ ದಿವ್ಯ ವಾದ ಸತ್ಯದ ಸಂಪತ್ತನ್ನು ಕೊಡುತ್ತಾನೆ.

## ಹಸಿದ ನಾಯಿ.

ಬಹಳ ಕೆಡುಕನೊಬ್ಬ ಪ್ರಜಾಪೀಡಕನಾದ ಅರಸನಿದ್ದನು. ಒಮ್ಮೆ ದೇವತೆಗಳ ಒಡೆಯನಾದ ಇಂದ್ರನು ಆತನಿಗೆ ಬುದ್ಧಿ ಕಲಿಸಲೆಂದು, ತಾನು ಬೇಟೆಗಾರನಾಗಿ ತನ್ನ ಜತೆಯ ಮಾತಲಿಯನ್ನು ಸ್ಥೂಲಕಾಯವಾದ ಒಂದು ನಾಯಿಯಾಗಿಸಿ ಅದರೊಂದಿಗೆ ಭೂಮಿಗೆ ಇಳಿತಂದು ಅವರಿಬ್ಬರೂ ಆ ಅರ ಸನ ಅರಮನೆಯನ್ನು ಹೊಕ್ಕರು. ನಾಯಿ ಎಷ್ಟು ಆರ್ತಸ್ವರದಿಂದ ಬೊಗಳ ತೊಡಗಿತೆಂದರೆ ಆ ಬೊಬ್ಬೆಗೆ ಅರಮನೆ ಎಲ್ಲವೂ ತಳಹದಿಯನಕಾ ಅಲುಗಾ ಡಿತು. ಅರಸನು ಆ ಆಭೀಲನಾದ ಬೇಟೆಗಾರನನ್ನು ತನ್ನ ಸಮ್ಮುಖಕ್ಕೆ ಕರೆತರಿಸಿ ಆ ಬೊಗಳಾಟದ ಕಾರಣವೇನು? ಎಂದು ವಿಚಾರಿಸಿದನು. ಬೇಟೆ ಗಾರನೆಂದನು, ‘ಒಡೆಯಾ, ನನ್ನ ನಾಯಿ ಹಸಿದಿದೆ’.

ಅರಮನೆಯಲ್ಲೆಲ್ಲ ಅಂದು ಮಾಡಿದ ಊಟ-ಉಣಿಸು, ತಿಂಡಿ-ತಿನಸು ಎಲ್ಲವೂ ಎಷ್ಟಿದ್ದಿತೋ, ಅದೆಲ್ಲ ಆ ನಾಯಿಯ ಹೊಟ್ಟೆಯೊಳಗಾಯಿತು. ನಿನ್ನೆಯ ಉಳಿದುದೆಲ್ಲವೂ ಮೆದ್ದು ಮಾಯವಾಯಿತು. ಮತ್ತೂ ನಾಯಿ ಬೊಗಳುತ್ತಿದೆ, ಬೊಬ್ಬಿರಿಯುತ್ತಿದೆ. ಮತ್ತೆ ಊರಲ್ಲಿಯ ಮನೆಗಳಲ್ಲಿ ಅಂದು ಮಾಡಿದ್ದೆಲ್ಲ, ನಿನ್ನೆಯದು ಉಳಿದುದೆಲ್ಲ ತಿಂಡಿ-ತೀನಿ ತರಿಸಿತು. ಅದೂ ಮುಗಿಯಿತು. ಮತ್ತೂ ಬೊಗಳು, ಬೊಗಳು, ಬೊಗಳು.

ಅರಸನ ಗಂಟಲಾರಿತು. ‘ಇನ್ನೂ ತೀರಿಲ್ಲವೇ ಈ ಹೊಟ್ಟೆಹಾಳನ ಹೊಟ್ಟೆಬಾಕತನ? ಈ ಮಾರಿಯ ಮೂರಿಯ ಜಗದ್ಭಕ್ಷಕತನ? ಎಂದನಾ ತನು. ‘ಇಲ್ಲ, ಸ್ವಾಮಿಾ’ ಎಂದನಾಗ ಆ ಬೇಟೆಗಾರ, ‘ಅದರ ಹಗೆಯವರ ಮಾಂಸವನ್ನು ಮೆದ್ದಲ್ಲದೆ, ಅದರ ಹಸಿವು ನೀಗದು’. ‘ಯಾರಪ್ಪಾ, ಇದರ ಹಗೆಯವರು? ಎಂದನಾ ಅರಸು. ಬೇಟೆಗಾರ- ‘ಒಡೆಯಾ, ಎಂದಿನ ವರೆಗೆ ನಿನ್ನ ರಾಜ್ಯದಲ್ಲಿಯ ಮಂದಿ, ಆ ನಿನ್ನ ಪ್ರಜೆ ಹಸಿದಿರುತ್ತಾರೋ, ಅಂದಿನ ವರೆಗೆ ಈ ನಾಯಿ ಊಳುತ್ತಲೇ ಇರುವುದು. ಇದರ ಹಗೆಯವರೆಂದರೆ (ನಿನ್ನ ರಾಜ್ಯದಲ್ಲಿ) ಪ್ರಜೆಗಳಲ್ಲಿ ಅನೀತಿಯಿಂದ ಯಾರು ನಡೆಯುತ್ತಾರೊ ಆ

ಅಧಿಕಾರಿಗಳು, ಬಡವರನ್ನು ಯಾರು ಕಾಡುತ್ತಿರುವರೊ ಆ ಅಧಿಕಾರಿಗಳು'
ಎಂದನು.

ಆ ಪ್ರಜಾಪೀಡಕನಾದ ಅರಸನು ಪ್ರಜೆಗಳಿಗೆ ತಾನು ಮಾಡುವ, ಮಾಡಿಸುತ್ತಿರುವ ಕೆಡುಕೆಲ್ಲವನ್ನು ನೆನಸೆನಸಿದುಕೊಂಡು, ಆ ಬಗ್ಗೆ ಅತ್ಯಂತ ಪಶ್ಚಾತ್ತಾಪಪಟ್ಟು, ಆತನ ಜೀವಮಾನದಲ್ಲಿ ಮೊದಲನೆಯ ಬಾರಿಗೆ ಧರ್ಮ ವನ್ನು ಕಿವಿಗೊಟ್ಟು ಕೇಳತೊಡಗಿ, ಒಳ್ಳೆಯ ಹಾದಿಯನ್ನು ಹಿಡಿದು ಒಳ್ಳೆಯ ವನೆಂದು ಹೆಸರಾದನು.

## ಮೋಸಗಾರ ಕೊಕ್ಕರೆ.

ಒಂದಾನೊಂದು ಮಡುವಿನಲ್ಲಿ ಒಂದು ಕೊಕ್ಕರೆ ಇತ್ತು. ದಿನಹೋ ಗುತ್ತ ಬೇಸಗೆ ಮೊದಲಾಗುತ್ತಲೆ, ಅದು ಆ ಮಡುವಿನಲ್ಲಿಯ ಮೀನು ಗಳನ್ನು ಕುರಿತು, 'ತಮ್ಮಂದಿರಾ, ನಿಮ್ಮ ಮುಂದಣ ಬಾಳ್ವೆಯ ಗೊಡವೆ ನಿಮಗಿಲ್ಲವೇ? ಈ ಮಡುವಿನ ನೀರು ಪಾತಾಳಕ್ಕೆ ಇಳಿಯಿತು. ಇಲ್ಲಿ ತಿಂಡಿಗೆ ಇನ್ನು ಮುಳುವು. ನಾಳೆ-ನಾಡಿದು ಇದು ತೀರ ಬತ್ತಿಹೋಯಿತೆಂದರೆ, ಬಳಿಕ ಬರಗಾಲದಲ್ಲಿ ನೀವೇನು ಮಾಡೀರಿ?' ಎಂದಿತು.

ಮೀನುಗಳೆಂದವು— 'ಅಣ್ಣಾ, ನಿನ್ನ ಮಾತು ಸರಿಯೇ, ನಮಗೂ ಅದೇ ಚಿಂತೆ ಹತ್ತಿದೆ. ಆದರೆ ಹೊಲಬು ತೋಚದು. ನಾವೇನು ಮಾಡ ಬೇಕೆಂದು ಹೇಳುವಿಯಾ?'

ಕೊಕ್ಕರೆ: 'ಇಲ್ಲೇ ಬಳಿಯಲ್ಲಿ ಒಂದು ದೊಡ್ಡ ಕೊಳವಿದೆ. ಅದರ ನೀರು ಬತ್ತದು. ನನ್ನ ಬೆನ್ನೇರಿಸಿ ನಿಮ್ಮನ್ನು ಅಲ್ಲಿಗೆ ಕೊಂಡುಹೋಗಲೇ?'

ಆದರೆ ಮೀನುಗಳು ಕೊಕ್ಕರೆಯ ಆರ್ಜವವನ್ನು ನಂಬಲೊಲ್ಲವು. ಅದ ನ್ನರಿತು ಕೊಕ್ಕರೆ ಅವರಿಗೆಂದಿತು- 'ನನ್ನ ಪ್ರಾಮಾಣಿಕತೆಯ ಪರೀಕ್ಷೆಗಾಗಿ ನಿಮ್ಮೊಳಗೆ ಒಂದೇ ಒಂದು ಮೀನನ್ನು ನನ್ನ ಬೆನ್ನ ಮೇಲೇರಿಸಿ ಆ ಕೊಳದ ಬಳಿಗೆ ಕಳುಹಿಸಿ ನೋಡಿ'.

ದಿನೇ ದಿನೇ ಹೀಗೆ ಆಡುತ್ತಿರುವ ಕೊಕ್ಕರೆಯ ಮಾತಿಗೆ ಮೀನುಗಳು ಮರುಳಾಗುತ್ತಿರಲು, ಕಟ್ಟಕಡೆಗೆ ಅವಲ್ಲಿಯ ಸಾಕಷ್ಟು ದೊಡ್ಡದೊಂದು ಮೀನು ತನ್ನ ಬಳಗದ ಬಗ್ಗೆ ತಾನು ಅಪಾಯಕ್ಕೆ ತಲೆಗೊಡುವೆನೆಂದು ಮನಸ್ಸುಮಾಡಿ ಕೊಕ್ಕರೆಯ ಬೆನ್ನೇರಿತು. ಆ ಮೀನನ್ನು ಕೊಕ್ಕರೆ ಕೊಳದ

ವರೆಗೆ ಕೊಂಡೊಯ್ದು, ಅದಕ್ಕೆ ಆ ಕೆರೆ ತೋರಿಸಿ ಅದನ್ನು ಯಥಾಸ್ಥಾನಕ್ಕೆ ತಂದು ಮುಟ್ಟಿಸಿತು. ಅಲ್ಲಿಗೆ ಮೀನುಗಳ ಸಂಶಯವೆಲ್ಲವೂ ತೊಡೆದುಹೋಯಿತು, ಕೊಕ್ಕರೆಯಲ್ಲಿ ದೃಢವಾದ ವಿಶ್ವಾಸವೂ ಹುಟ್ಟಿತು. ಆಗಳಿಂದ ಕೊಕ್ಕರೆ ಬಾರಿಗೆ ಒಂದೊಂದರಂತೆ ಮೀನನ್ನು ತನ್ನ ಬೆನ್ನೇರಿಸಿ ಆ ಮಡುವಿನಿಂದ ಕೊಳಕ್ಕೆಂದು ಕೊಂಡೊಯ್ಯುತ್ತ ನಡುವೆ ಯಾವೊಂದು ವಿಶಾಲವಾದ ಆಲದ ಮರದಲ್ಲಿ ಎರಗಿ ಅಲ್ಲಿ ತನ್ನ ಹಸಿವನ್ನು ನೀಗಾಡಿಸುತ್ತಲಿತ್ತು.

ಅ ಮಡುವಿನಲ್ಲಿ ಒಂದು ನಳ್ಳಿಯೂ ಇದ್ದಿತು. ಇನ್ನು ಅದನ್ನು ಸವಿದು ನೋಡೋಣ, ಎಂದೊಮ್ಮೆ ಕೊಕ್ಕರೆಯ ತಲೆಗೆ ಹೋಗುತ್ತಲೇ, ಅದು ಆ ನಳ್ಳಿಯೊಡನೆ ಹೀಗೆಂದಿತು— 'ಈ ಮಡುವಿನಿಂದ ಮೀನುಗಳನ್ನೆಲ್ಲ ಕೊಂಡೊಯ್ದು ಬಹಳ ಸೊಗಸಾದ ದೊಡ್ಡದೊಂದು ಕೊಳದಲ್ಲಿ ಕೇಲಬಿಟ್ಟಿರುತ್ತೇನೆ. ಬಾ, ನಿನ್ನನ್ನೂ ಅಲ್ಲಿಗೊಯ್ಯುವೆ'.

'ಆದರೆ ನನ್ನನ್ನು ನೀನು ಹೇಗೆ ಹಿಡಕೊಳ್ಳುವಿ?' ಎಂದಿತಾ ನಳ್ಳಿ.

'ನಿನ್ನನ್ನು ನನ್ನ ಕೊಕ್ಕಿನಲ್ಲಿ ಕಚ್ಚಿ ಹಿಡಕೊಳ್ಳುವೆ.'

'ಹಾಗೆ ನನ್ನನ್ನು ಒಯ್ಯುವಲ್ಲಿ, ನಾನು ಬಿದ್ದುಹೋಗಬಹುದಲ್ಲ?'

'ನಿನಗೆ ರವೇಸೂ ಅಂಜಿಕೆ ಬೇಡ. ದಾರಿಯುದ್ದಕ್ಕೂ ನಾನು ನಿನ್ನನ್ನು ಬಿಗಿಯಾಗಿ ಹಿಡಕೊಳ್ಳುವೆ'.

ಆಗ್ಗೆ ನಳ್ಳಿ ತನ್ನೊಳಗೇ' ಈ ಕೊಕ್ಕರೆ ಮೀನನ್ನು ಹಿಡಕೊಂಡಿತೆಂದರೆ, ಅದನ್ನು ಎಂದಿಗೂ ಕೊಳದಲ್ಲಿ ಬಿಟ್ಟುಬಿಡಲೊಲ್ಲ. ನನ್ನನ್ನೀಗ ಈತ ಕೊಳದಲ್ಲಿ ಬಿಡುವುದೆಂದರೆ ಅದೊಂದು ಸೋಜಿಗವೇ ಸರಿ. ಆದಕಾರಣ ಈತನು ಹಾಗೆ ಮಾಡದಿದ್ದರೆ, ನಾನು ಹೇಗೂ ಈತನ ಕೊರಳು ಹಿಚುಕಿ ಕೊಲ್ಲುವೆ' ಎಂದುಕೊಂಡು, ಅದರೊಂದಿಗೆ ಹೇಳಿತು, 'ಇತ್ತ ನೋಡಣ್ಣ, ನೀನು ನನ್ನನ್ನು ಬಿಗಿ ಹಿಡಕೊಳ್ಳಲಾರೆ. ನಮಗಾದರೆ ಹುಟ್ಟಾಬಲ್ಲ, ಹೆಸರಾದ ಒಂದು ಬಗೆಯ ಹಿಡಿತವಿದೆ. ನನಗೆ ನಿನ್ನ ಕೊರಳ ಸುತ್ತ ನನ್ನ ಉಗುರಿಂದ ಹಾಗೆ ಹಿಡಿಯಗೊಟ್ಟರೆ, ನಾನು ಸುಖವಾಗಿ ನಿನ್ನೊಂದಿಗೆ ಹೋಗುವೆ'.

ನಳ್ಳಿ ತನ್ನನ್ನು ಮೋಸಗೊಳಿಸುವ ಹೂಟದಲ್ಲಿದೆ ಎಂದು ಕೊಕ್ಕರಗೆ ತಿಳಿಯದು, ಹಾಗಾಗಿ ಅದು ನಳ್ಳಿಯ ಮಾತಿಗೆ ಒಪ್ಪಿತು. ಆಗ ನಳ್ಳಿ ಅದರ ಕೊರಳನ್ನು ಇಕ್ಕುಳದಿಂದ ಹೇಗೋ ಹಾಗೆ ತನ್ನ ಉಗುರುಗಳಿಂದ ಬಿಗಿ ಹಿಡ

ಕೊಂಡು 'ಇನ್ನು ಹಾರು, ನೋಡೋಣ' ಎಂದು ಅದನ್ನು ಚಪ್ಪರಿಸಿತು.

ಕೊಕ್ಕರೆ ಅದನ್ನು ಕೊಳದ ಬಳಿಗೊಯ್ದು ಕೊಳವನ್ನು ಅದಕ್ಕೆ ತೋರಿಸಿ, ಅಲ್ಲಿಂದ ಹಿಂದಿರುಗಿ ಆ ಆಲದ ಮರದ ಕಡೆಗೆ ಹಾರುತ್ತಿರುವಾಗ, ನಳ್ಳಿ ಎಂದಿತು, 'ಮುದ್ದು ಮಾವ, ಇದೇನಃ ಚೋದ್ಯ! ಕೊಳ ಅತ್ತ ಕಡೆಗೆ ಇದೆ, ನೀನು ನನ್ನನ್ನು ಇತ್ತ ಕಡೆಗೆ ತರುತ್ತೀ! ಇದೇನು ಕಥೆ?'

ಕೊಕ್ಕರೆ ಉತ್ತರಿಸಿತು— 'ನಾನು ನಿನ್ನ ಮುದ್ದು ಮಾವನೆಂಬಿಯಾ? ಅಂದರೆ ನಾನೇನು ನೀನು ಬೆಲೆಗೆ ಕೊಂಡುಕೊಂಡ ತೊತ್ತೆಂದು ತಿಳಿಕೊಳ್ಳಬೇಕೆಂಬಿಯಾ? ನಿನಗೆಲ್ಲಿಗೆ ಬೇಕೋ ನಾನಲ್ಲಿಗೆ ನಿನ್ನನ್ನು ಒಯ್ದಾಡುತ್ತಿರಬೇಕೆಂಬಿಯಾ? ಒಲ್ಲೆ, ಒಲ್ಲೆ. ಅಗೋ, ಆ ಆಲದ ಮರದ ಬುಡದಲ್ಲಿ ಗುಪ್ಪೆಗೊಂಡಿರುವ ಮೀಂಗಳ ಎಲುಬಿನ ಗುಡ್ಡವನ್ನು ನೋಡ. ಅವನ್ನು ಹೇಗೆ ನಾನು ತಿಂದು ಮುಗಿಸಿದೆನೊ, ಹಾಗೆಯೇ ಈಗ ನಿನ್ನನ್ನೂ ತಿಂದು ಮುಗಿಸುವೆ'.

'ಆಹಾ,' ಎಂದಿತಾಗ ಆ ನಳ್ಳಿ, 'ಆ ಮೀನುಗಳು ತಮ್ಮ ಮಂಕುತನಕ್ಕೆ ಪಕ್ಕಾಗಿ ತಾನೆ ನಿನ್ನ ಕೊಕ್ಕಿಗೆ ಈಡಾಗಿ, ತಮ್ಮನ್ನು ತಾವೇ ಕೊಲಿಸಿಕೊಂಡವು ನಾನಾದರೆ ಹಾಗಲ್ಲ, ನಿನಗೆ ನನ್ನನ್ನು ಕೊಲ್ಲಗೊಡೆ, ಅದಕ್ಕೆ ಪ್ರತಿಯಾಗಿ ನಾನೀಗ ನಿನ್ನನ್ನೇ ಕೊಲ್ಲದೆ ಬಿಡೆ. ನಿನಗೆ ನಾನೊಡ್ಡಿದ ಬಲೆಯನ್ನು ನೀನು ಕಾಣದೆ ಹೋದಿ. ಇನ್ನು ಸಾಯುವುದಾದರೆ ನಾವಿಬ್ಬರೂ ಒಟ್ಟಿಗೆ ಸಾಯುವೆವು ಇಗೋ ನೋಡು, ನಿನ್ನ ತಲೆಯನ್ನು ಇದೀಗ ಮುಂಡದಿಂದ ಮಿಂಗಡಿಸಿ ನಿನ್ನನ್ನು ನೆಲಕ್ಕೆ ಕೆಡಮಿಬಿಟ್ಟೆ'.

ಹೀಗೆಂದು ಕೊಕ್ಕರೆಯ ಕೊರಳನ್ನು ನಳ್ಳಿ ತನ್ನ ಉಗುರಿಂದ ಹಿಸುಕತೊಡಗಿತು. ಕೊಕ್ಕರೆಯ ಪ್ರಾಣ ಮೇಲುಕೆಳಗಾಯಿತು. ಅದು ಏದೇದುತ್ತ, ಕಣ್ಣೀರು ಸುರಿಸುತ್ತ ನಳ್ಳಿಯೊಡನೆ ಅಂಗಲಾಚಿ ಬೇಡಿಕೊಂಡಿತು, 'ನನ್ನೊಡೆಯಾ, ನಾನು ಎಂದಿಗೂ ನಿನ್ನನ್ನು ತಿನ್ನಬಯಸಿಲ್ಲ. ನನ್ನ ಜೀವದಾನವನ್ನು ನನಗೀಯು'. 'ಒಳ್ಳೇದು' ಎಂದಿತು ನಳ್ಳಿ. 'ಕೆಳಕ್ಕೆ ಎರಗು, ಮತ್ತು ನನ್ನನ್ನು ಆ ಕೊಳದಲ್ಲಿ ಬಿಟ್ಟುಬಿಡು'.

ಕೊಕ್ಕರೆ ಹಿಂದಿರುಗಿ ಕೊಳಕ್ಕೆ ಇಳಿದು ಆ ನಳ್ಳಿಯನ್ನು ಅದರ ಕರೆಯಲ್ಲಿಯ ಕೆಸರಿನಲ್ಲಿ ಇಳಿಸಿತು. ಆದರೆ ನಳ್ಳಿಯಾದರೊ ಅದರ ಕೊರಳಿನ್ನು ತನ್ನ ಉಗುರುಗಳಿಂದ ಹಿಸುಕಿ ಅದನ್ನು ಕೋದಿಕ್ಕಿ ತಾನು ಕೊಳವನ್ನು ಸೇರಿತು.

****

ಅರಳಿದ ಪುಷ್ಪ ೬

# ಕೊಲೆಗಡುಕಿ.

(ಪ್ರಪಂಚದಲ್ಲಿ ಅತಿ ಭಯಂಕರಳಾದ ಸ್ತ್ರೀಯೊಬ್ಬಳ ಸತ್ಯ ಕಥೆ)

['ಕಾರ್ಡಿನಲ್ಲಿ ಕಥೆಗಳು' ವಿಭಾಗದೊಂದಿಗೆ]



ಅನುವಾದಕರು:

ಶ್ರೀ ಬಳ್ಕೂರು ಸುಬ್ರಾಯ ಅಡಿಗ, ಗಂಗೊಳ್ಳಿ.

ಪ್ರಕಾಶಕರು:

ವಿಶಾಲ ಸಾಹಿತ್ಯ ಮಾಲೆ,

ಮಾರ್ಕೆಟ್ ರಸ್ತೆ :: ಮೂಡುಬಿದ್ರಿ, ದ. ಕ.

ಬೆಲೆ 1 ಆಣೆ.

## ನಮ್ಮ ಜನಪ್ರಿಯ ಪ್ರಕಟಣೆಗಳು.

೧. ಚತುರ ಚೋರಪುತ್ರಿಯು*
೨. ಶಾಲಿನಿ ಮನೆಗೆ ಬಂದಳು!*
೩. ಪ್ರೇಮ ಪ್ರತಾಪ*
೪. ನಿಗೂಢ ರಹಸ್ಯ*
೫. ಪರಿವರ್ತನೆ ಮತ್ತು ವಿನೋದ ಕಥೆಗಳು
೬. ಕೊಲೆಗಡುಕಿ

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

## ಜನಪ್ರಿಯತೆಗೆ ಕಾರಣ ಇಲ್ಲಿದೆ . . . . .

ಕನ್ನಡ ಸಾಹಿತ್ಯ ಪ್ರಪಂಚದಲ್ಲೇ ನೂತನ ಮಾದರಿಯ ಪ್ರಕಟಣೆಗಳು.
ಸುಲಭ ಬೆಲೆಯಲ್ಲಿ ಪ್ರತಿಯೋರ್ವ ಕನ್ನಡಿಗನೂ ಸಂಗ್ರಹಿಸಬೇಕಾದ ಪ್ರಕಟಣೆಗಳು.
ಓದುಗರ ಅಭಿರುಚಿಗೆ ತಕ್ಕಂತ ಉತ್ತಮ ಸಾಹಿತ್ಯ ಪ್ರಕಟಣೆಗಳು.
ಓದುವಾಗ ಅರ್ಧದಲ್ಲಿ ಕೆಳಗಿಡಲಾಗದಂತಹ ಆಕರ್ಷಕ ಪ್ರಕಟಣೆಗಳು.

## ವಿಶಾಲ ಸಾಹಿತ್ಯಮಾಲೆಯಲ್ಲಿ . . .

ಶ್ರೀಗಳಾದ ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈ, ವೈದ್ಯ ಗುರು ಎಮ್. ಆರ್. ಭಟ್, ಪಿ.ಎಚ್.ಡಿ., (ಸಂಪಾದಕ: 'ದೀರ್ಘಾಯು' ಮಂಗಳೂರು), ಅಮ್ಮೆಂಬಳ ಶಂಕರ ನಾರಾಯಣ ನಾವಡ, ವಿದ್ವಾನ್, (ಸಂಪಾದಕ: ಸಾಹಿತ್ಯಾಂಜಲಿ ಗ್ರಂಥಮಾಲೆ, ಕೋಟೆಕಾರು), ಕೆ. ಕಾಂತ ರೈ, ವಿದ್ವಾನ್, (ಕರ್ನಾಟಕ ಯಕ್ಷಗಾನ ಸಾಹಿತ್ಯಮಾಲೆ, ಮೂಡುಬಿದ್ರಿ). ಕೆ. ಎಸ್. ಶರ್ಮಾ, ವಿದ್ವಾನ್, ಕಾಸರಗೋಡು, ಬಳ್ಕೂರು ಸುಬ್ರಾಯ ಅಡಿಗ, ವಿಶಾರದ, ಗಂಗೊಳ್ಳಿ., ರಾಜಾರಾಮ ಮುಜವೀಕರ, (ಸಾಹಿತ್ಯ ಸೇವಾ ನಿಲಯ, ಗೋಕಾಕ), ಸಿ. ಕೆ. ರಾಘವೇಂದ್ರ ರಾವ್, ಬಿ.ಎಸ್.ಸಿ. ಹಿರಿಯೂರು., ಚಂದ್ರಶೇಖರ ಕಂಬಾರ, ಬೆಳಗಾವಿ., ವಿದ್ವಾನ್ ಅ.ಗೌ. ಕಿನ್ನಿಗೋಳಿ., ಬಿ.ಆರ್. ಶಂಕರ್, ಮೈಸೂರು., ವತ್ಸಲಾ, ಆರ್. ಪ್ರಭು, ಉಡುಪಿ., ಸಂ. ಜ. ರಾವ್, ಸಂಪಿಗೆ., "ಆನಂದಸಾಗರ", ಕಿನ್ನಿಗೋಳಿ., "ವಾಣಿ", ಹುಬ್ಬಳ್ಳಿ., "ಕುಮುದಪ್ರಿಯ", ಬೆಂಗಳೂರು., "ರಘು", ಚಾಮರಾಜನಗರ., "ರಸಿಕ", ಪುತ್ತಿಗೆ. ಮೊದಲಾದ ಪ್ರಸಿದ್ಧ ಹಾಗೂ ಉದಯೋನ್ಮುಖ ಬರಹಗಾರರ ಕೃತಿಗಳನ್ನು ನಿರೀಕ್ಷಿಸಬಹುದು.

# ಸಂಪಾದಕೀಯ.

ಆರನೆಯ ಪ್ರಕಟಣೆಯಾಗಿ ಹೊರಡಬೇಕಾಗಿದ್ದ 'ರಸಿಕ' ಪುತ್ತಿಗೆ, ಇವರ ಏಕಾಂಕ ನಾಟಕ ''ದೋಸ್ತಿ'' ಯನ್ನು ಕಾರಣಾಂತರಗಳಿಂದ ತಡೆಹಿಡಿಯಲಾಗಿದೆ ಎಂದು ತಿಳಿಸಲು ತುಂಬಾ ವಿಷಾದಪಡುತ್ತೇವೆ.

ಇದೀಗ ನಿಮ್ಮ ಕೈಯಲ್ಲಿರುವುದು ಶ್ರೀ। ಬಳ್ಮ್ಯಾರು ಸುಬ್ರಾಯ ಅಡಿಗರಿಂದ ಅನುವಾದಿಸಲ್ಪಟ್ಟ ನೀಳ್ಗತೆ. ಇದೊಂದು ಸತ್ಯಕಥೆಯೆಂದು ಹೇಳಿದರೆ ನಿಮಗೆ ಆಶ್ಚರ್ಯವಾಗಬಹುದು. ಹಂತಕಿ ಬೇಲ್‌ಗನೇಸ ಈಗ ಬದುಕಿದ್ದರೆ ೮೦ ವರ್ಷದ ಮುದುಕಿಯಾಗುತ್ತಿದ್ದಳು. ಇತ್ತೀಚೆಗೆ ನಡೆದ ಬೆಂಗಳೂರಿನ ಕೊಲೆಗಳ ಕುರಿತು ಕೇಳಿದವರಿಗೆ ಬೇಲಳ ಈ ಭಯಂಕರ ಕೃತ್ಯ ಅಸಂಗತವೆನಿಸಲಾರದು.

ಸಾಹಿತ್ಯ ಮಾಲೆಯ ಮುಂದಿನ ಪ್ರಕಟಣೆ **ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈ** ಕೃತ 'ಬುದ್ಧನ ಕಥೆಗಳು'. ನಿಮ್ಮೆಲ್ಲರ ಪ್ರೋತ್ಸಾಹದಿಂದ ಸಾಹಿತ್ಯಮಾಲೆಯು ದಿನದಿಂದ ದಿನಕ್ಕೆ ಪ್ರಗತಿ ಪಥದಲ್ಲಿ ಸಾಗುತ್ತಿರುವುದು ಸಂತಸದ ವಿಷಯ. ಇದೇ ರೀತಿಯಲ್ಲಿ ಸದಾ ನಿಮ್ಮ ಸಹಕಾರ ಹಾರೈಸಲಾಗಿದೆ.

ಇತಿ,

**ಪಿ. ಮಾಧವರಾಯ ಭಟ್,**
ಸಂಪಾದಕ.

ವಿಶಾಲ ಸಾಹಿತ್ಯಮಾಲೆ,
ದಿನಾಂಕ ೧—೮—೧೯೫೬.

# ಕಾರ್ಡಿನಲ್ಲಿ ಕಥೆಗಳು.

[ಈ ವಿಭಾಗದಲ್ಲಿ ಓದುಗರಿಂದ ಬರುವ ಕಿರುಗತೆಗಳನ್ನು ಪ್ರಕಟಿಸಲಾಗುತ್ತದೆ. ಕಥೆಗಳು ಚುಟುಕಾಗಿ ಸ್ವಾರಸ್ಯವಾಗಿರಬೇಕು. ಬರಹಗಾರರು ಇದರ ಸದುಪಯೋಗ ಪಡೆಯುವರೆಂದು ಆಶಿಸಲಾಗಿದೆ.] —ಸಂಪಾದಕ.

## ಕಾರ್ಯಾತುರ!

ಆ ದಿನ ಪ್ರೊಫೆಸರರು ಸಂಜೆ ವಾಕಿಂಗಿಗೆ ಹೋದವರು ಏನೋ ನೆನೆದು ರೈಲ್ವೇ ಸ್ಟೇಶನಿಗೆ ಹೋದರು. ಗಾಡಿ ಹೊರಡುತಿತ್ತು. ಓಡೋಡಿ ಗಾಡಿಯಲ್ಲಿ ಕುಳಿತುಕೊಳ್ಳಲು ಸಾಕೋ ಸಾಕಾಯಿತು. ಹತ್ತಿರದ ಪ್ರಯಾಣಿಕ ಕೇಳಿದ- 'ಯಾವೂರಿಗೆ ಹೋಗಬೇಕು ರಾಯರೇ?' ಪ್ರಶ್ನೆ ಕೇಳುತ್ತಲೇ ಪ್ರೊಫೆಸರರು ಗಾಬರಿಯಾದರು. 'ಅಯ್ಯೋ, ನನ್ನ ತಲೆಯೇ; ಈ ಗಾಡಿ ಹತ್ತಲು ನಾನು ಬಂದದ್ದೇ ಅಲ್ಲ. ಸ್ಟೇಶನ್ ಮಾಸ್ತರರನ್ನು ನಾಳೆ ಊಟಕ್ಕೆ ಹೇಳಲೆಂದು ಬಂದಿದ್ದೆ'.

---

## ಸ್ವಂತ ತಯಾರಿ?

ಚೊಚ್ಚಲ ಮಗುವಿಗಾಗಿ ಒಂದು ಕೈಗಾಡಿ ಕೊಳ್ಳಲು ದಂಪತಿಗಳು ಮಗುವಿನೊಂದಿಗೆ ಪೇಟೆಗೆ ಹೋಗಿದ್ದರು. ಗಾಡಿ ಕೊಂಡು ಕೂಡಲೇ ಮಗುವನ್ನು ಅದರಲ್ಲಿ ಮಲಗಿಸಿ ದೂಡುತ್ತಾ ಹೊರಟರು. ದಾರಿಹೋಕರೆಲ್ಲ ಅವರನ್ನೊಮ್ಮೆ, ಗಾಡಿಯನ್ನೊಮ್ಮೆ ನೋಡಿ ಕಿಸಕ್ಕನೆ ನಕ್ಕು ಮುಂದೆ ಹೋಗುತ್ತಿದ್ದರು. ದಂಪತಿಗಳಿಗೆ ಬಹು ಹೊತ್ತಿನ ತನಕ ಇದರ ಮರ್ಮ ತಿಳಿಯಲಿಲ್ಲ. ಕೊನೆಗೆ ಅವರು ಗಾಡಿಯ ಎದುರಿನಲ್ಲಿ ಕಂಪೆನಿಯವರು ತೂಗಹಾಕಿದ್ದ ರಟ್ಟಿನ ತುಂಡನ್ನು ಕಂಡರು. ಅದರಲ್ಲಿ ದೊಡ್ಡ ಅಕ್ಷರಗಳಿಂದ... ...'ನಮ್ಮ ಸ್ವಂತ ತಯಾರಿ' ಎಂದು ಬರೆದಿತ್ತು.

---

# ಮಿತಿಮೀರಿದ ತಾಳ್ಮೆ!

ನಾನು ಸಣ್ಣವನಿದ್ದಾಗ ಒಮ್ಮೆ ಕಾಹಿಲೆ ಬಿದ್ದಿದ್ದೆ. ಆಗ ತಂದೆ ನನ್ನನ್ನು ಆಸ್ಪತ್ರೆಗೆ ಕರೆದೊಯ್ದರು. ಅಲ್ಲಿ ನನ್ನಂತೆಯೇ ಎಷ್ಟೋ ರೋಗಿಗಳೂ ಬಂದಿದ್ದರು. ಅವರಲ್ಲಿ ಒಬ್ಬನು ಡಾಕ್ಟರರ ಬಳಿಗೆ ಬಂದು ತನಗೆ ಜ್ವರ ಬಂದಿದೆಯೆನ್ನಲು ಡಾಕ್ಟರರು ಅವನ ನಾಡಿ ನೋಡಿ ಔಷಧ ಕೊಟ್ಟರು.

'ಪಥ್ಯವಾವುದು?' 'ಹಾಲನ್ನವನ್ನುಣ್ಣಿರಿ'.

'ಬೇಳೆ ಮೊದಲಾದುವನ್ನು ತಿನ್ನಲೇ?' 'ಸ್ವಲ್ಪ ತಿಂದರೆ ಅಡ್ಡಿ ಇಲ್ಲ'

'ಸ್ವಲ್ಪ ಸ್ವಲ್ಪ ಮೆಂತೆ, ಹರಿವೆಸೊಪ್ಪು ಉಪಯೋಗಿಸಿದರೆ ಹೇಗೆ?'

'ಆದೀತು'.

'ಹಾಲಿನಲ್ಲಿ ಬೇಯಿಸಿದ ವಸ್ತು ಅಂದರೆ ಖೀರು ಮುಂತಾದುವುಗಳನ್ನು ಕುಡಿಯಬಹುದೆ?' 'ಕುಡಿಯಬಹುದು'.

'ಕಿತ್ತಳೆ, ದಾಳಿಂಬ, ಮುಸುಂಬಿ ಮೊದಲಾದ ಹಣ್ಣುಗಳನ್ನು ತೆಗೆದುಕೊಂಡರೆ ಹಾನಿಯಿದೆಯೇ?' 'ಇಲ್ಲ'.

'ಬಾಯಿರುಚಿಗಾಗಿ ಮಿಠಾಯಿ, ಬಿಸ್ಕತ್ತು, ವೀಳ್ಯ ತಿಂದರೆ ಏನಾದರೂ ತೊಂದರೆಯಿದೆಯೆ?'

ಡಾಕ್ಟರರಾದರೂ ಎಷ್ಟರ ತನಕ ಸೈರಿಸಿಯಾರು? ಅವರಿಗೆ ಸಿಟ್ಟು ಬಂದೇ ಬಿಟ್ಟಿತು ಅವರು ಸಿಡಿಮಿಡಿಗೊಂಡು.....

'ಎಲ್ಲವನ್ನೂ ತಿನ್ನಿರಿ; ಆದರೆ ಡಾಕ್ಟರರ ಮೆದುಳನ್ನು ಮಾತ್ರ ತಿನ್ನಬೇಡಿ'. ಎಂದರು. ಆ ಮನುಷ್ಯ ಲಜ್ಜಿತನಾಗಿ ಅಲ್ಲಿಂದ ತೆರಳಿದ.

---

# ದೀಪಾವಳಿಯ ಉಡುಗೊರೆ.

ರಾಮರಾಯರು ತಮ್ಮ ವಕೀಲರಲ್ಲಿಗೆ ಹೋಗಿ ನ್ಯಾಯಾಧೀಶರ ಹೆಸರು ಮತ್ತು ವಿಳಾಸ ಕೇಳಿದರು. ಆಗ 'ಇದೆಲ್ಲ ಏಕೆ'ಂದು ವಕೀಲರು ಪ್ರಶ್ನಿಸಿದರು.

ರಾಮರಾಯ:- ಅವರಿಗೆ ದೀಪಾವಳಿಯ ಮಿಠಾಯಿ ಕಳುಹಿಸಬೇಕೆಂದಿದ್ದೇನೆ.

ವಕೀಲ:- ಹಾಂ, ಜೋಕೆ! ಇಂತಹ ಹುಚ್ಚಾಟ ಮಾಡಬೇಡಿರಿ.

ನ್ಯಾಯಾಧೀಶರು 'ಸ್ಟ್ರಿಕ್ಟ್'. ಅವರಿಗೆ ಕಾಣಿಕೆ ಕಳುಹಿಸುವವರ ವಿರುದ್ಧವಾಗಿಯೇ ಅವರು ತೀರ್ಪು ಕೊಡುತ್ತಾರೆ.

ಕೆಲವು ದಿನಗಳು ಕಳೆದ ಬಳಿಕ ವಕೀಲರು ರಾಯರೊಡನೆ- ...'ನೀವು ಮೊಕದ್ದಮೆಯಲ್ಲಿ ಗೆದ್ದಿದ್ದೀರಿ' ಎಂದು ತಿಳಿಸಿದರು. ಆಗ ರಾಮರಾಯರು ನಗುತ್ತಾ....'ದೀಪಾವಳಿಯ ಮಿಠಾಯಿ ಉಪಯೋಗಕ್ಕೆ ಬಂತು' ಎಂದರು.

ವಕೀಲ:- ಅಂದರೆ..! ನೀವು ನ್ಯಾಯಾಧೀಶರಿಗೆ ಮಿಠಾಯಿ ಕಳು ಕಳುಹಿದ್ದೀರಾ!

ರಾಮರಾಯ:- ಹೌದು, ಆದರೆ ನಾನದನ್ನು ಪ್ರತಿವಾದಿಯ ಹೆಸರಲ್ಲಿ ಕಳುಹಿಸಿದ್ದೆ.

---

ಅನುವಾದಕ: **ಬಳ್ಕೂರು ಸುಬ್ರಾಯ ಅಡಿಗ.**

# ಕೊಲೆಗಡುಕಿ.

**(ಪ್ರಪಂಚದಲ್ಲಿ ಅತಿ ಭಯಂಕರಳಾದ ಸ್ತ್ರೀಯೊಬ್ಬಳ ಸತ್ಯಕಥೆ!)**

ಬೇಲಳಿಗೆ ಆರು ವರ್ಷ ತುಂಬುವುದರೊಳಗೇ ಭಯಾನಕ ಘಟನೆಯೊಂದರ ಪರಿಚಯವಾಯಿತು. ಈ ಘಟನೆ ಅಸಾಧಾರಣವೂ ರೋಮಾಂಚಕಾರಿಯೂ ಮೆದುಳಿನ ಮೇಲೆ ವಿಲಕ್ಷಣ ಪ್ರಭಾವ ಬೀಳುವಂತಹುದೂ ಆಗಿತ್ತು. ಆದಿತ್ಯವಾರವೊಂದನ್ನುಳಿದು ವಾರದ ಮತ್ತೆಲ್ಲ ದಿನಗಳಲ್ಲೂ ತನ್ನ ತಂದೆ, ತಾಯಿಯ ರುಂಡವನ್ನು ಮುಂಡದಿಂದ ಬೇರ್ಪಡಿಸುವ ಭೀಭತ್ಸ ದೃಶ್ಯವನ್ನು ಅವಳು ಕಾಣುತ್ತಿದ್ದಳು.

ಬೇಲಳ ತಾಯಿತಂದೆಯರು ಒಂದು 'ಥಿಯೇಟ್ರಿಕಲ್ ಕಂಪೆನಿ'ಯ ಸದಸ್ಯರಾಗಿದ್ದರು. ಈ ಕಂಪೆನಿಯು ಆಗ ಸ್ಕೇಂಡಿನೇವಿಯನ್ ದೇಶಗಳಲ್ಲೆಲ್ಲಾ ಸಂಚಾರ ಕೈಗೊಂಡಿತ್ತು. ಬೇಲಳ ತಂದೆ ಅದರಲ್ಲಿ ಜಾದೂ ಆಟಗಳನ್ನು ತೋರಿಸುತ್ತಿದ್ದರು. ಮತ್ತು ಅವರ ಮನೋರಂಜಕ ಆಟಗಳಲ್ಲಿ ಪತ್ನಿಯ ರುಂಡವನ್ನು ಮುಂಡದಿಂದ ಬೇರ್ಪಡಿಸುವುದು ಅತಿ ಮುಖ್ಯವಾಗಿತ್ತು. ಅವರು ಪತ್ನಿಯ ತಲೆಯನ್ನು ಒಂದು ಕಲ್ಲಿನ ಮೇಲಿಟ್ಟು ಒಂದು ಸಣ್ಣ 'ಜಿಲೆಟಿ' ನನ್ನು (ತಲೆಕಡಿಯುವ ವಿಶೇಷ ಉಪಕರಣ) ಅದರ ಮೇಲೆ ಬೀಳಿಸುತ್ತಿದ್ದರು. ಆಗ ತಲೆ ಕತ್ತರಿಸಿ ಬೇರ್ಪಡುವುದನ್ನು ಪ್ರೇಕ್ಷಕರು ಕಣ್ಣಾರೆ ಕಾಣುತ್ತಿದ್ದರು. ಕೃತಕ ರಕ್ತವು ನಿಜವಾದ ರಕ್ತದಂತೆಯೇ ಸ್ಟೇಜಿನ ಮೇಲೆಲ್ಲ ಚಿಮ್ಮುತ್ತಿತ್ತು; ಮತ್ತು ಭೀಭತ್ಸ ಶಬ್ದದೊಡನೆ ಕತ್ತರಿಸಲ್ಪಟ್ಟ ರುಂಡವು ಬುಟ್ಟಿಯೊಂದರೊಳಗೆ ಬಂದು ಬೀಳುತ್ತಿತ್ತು.

ಅತ್ಯಧಿಕ ಪರಿಣಾಮಕಾರಿಯಾದ ಈ ಆಟವನ್ನು ಪ್ರೇಕ್ಷಕರು ತುಂಬಾ ಮೆಚ್ಚುತ್ತಿದ್ದರು. ಕಿರುಹರೆಯದ ಬೇಲಳಿಗೂ ಇದು ಪ್ರಿಯವೆನಿಸುತ್ತಿತ್ತು. ಮತ್ತು ಪ್ರತೀದಿನ ಸಂಜೆ ಅವಳದನ್ನು ತಪ್ಪದೆ ನೋಡುತ್ತಿದ್ದಳು. ಅವಳಿಗೆ ಈ ಆಟದಲ್ಲಿ ಎಲ್ಲರಿಗಿಂತಲೂ ಹೆಚ್ಚು ಅಭಿರುಚಿಯಿತ್ತು.

ಕೆಲದಿನಗಳ ಬಳಿಕ ಆಕೆ ಬಾಲಸಹಜವಾದ ಅನುಕರಣಕ್ಕೂ ತೊಡಗಿದಳು. ಅದಕ್ಕೆ ಹೆಚ್ಚು ಸಾಧನಗಳೇನೂ ಬೇಕಿರಲಿಲ್ಲ. ಒಂದು ಬೊಂಬೆ ಹಾಗೂ ಒಂದು ಕತ್ತರಿ ಇಷ್ಟೇ ಸಾಕಿತ್ತು. ಮೆಲ್ಲಮೆಲ್ಲನೆ ಅವಳಿಗೆ ಈ ಆಟದಿಂದ ವಿಶೇಷ ಆನಂದವಾಗತೊಡಗಿತು. ಅವಳು ಎಲ್ಲ ಬೊಂಬೆಗಳ ತಲೆಯನ್ನೂ ಕತ್ತರಿಸಿ ಹಾಕುತಿದ್ದಳು.

ಕೆಲವು ವರ್ಷಗಳಲ್ಲೇ ಬೇಲಳ ತಂದೆ ಸತ್ತುಹೋದರು. ಬಳಿಕ ತಾಯಿ ಅವಳನ್ನು ನೋರ್ವೆಯಿಂದ ಶಿಕಾಗೋವಿಗೆ ಕರೆದೊಯ್ದಳು. ಇಲ್ಲೇ ಬೇಲ್ ಬಳೆದಳು. ಅವಳ ಅಪ್ರತಿಮ ಸೌಂದರ್ಯಕ್ಕೆ ಜನರೆಲ್ಲ ಮಾರು ಹೋಗಿದ್ದರು.

ಬೇಲಳಿಗೆ ೧೮ ವರ್ಷ ತುಂಬುತಿದ್ದಾಗಲೇ ತಾಯಿಯೂ ತೀರಿಹೋದಳು. ಒಂಟಿ ಜೀವನಕ್ಕೆ ಬೇಸತ್ತ ಬೇಲಳು ಮೆರೆಲ್ ಸೊರೆನ್ಸನ್ ಎಂಬ ಮಧ್ಯಮ ವಯಸ್ಕನ ಕಡೆ ಆಕೃಷ್ಟಳಾದಳು. ಕೆಲದಿನಗಳ ಹಿಂದೆ ಅವನ ಮೊದಲ ಹೆಂಡತಿ ತೀರಿಹೋಗಿದ್ದಳು. ಹೀಗಾಗಿ ಇವರಿಬ್ಬರ ಜೀವನ ನಿರಾತಂಕವಾಗಿ ಸಾಗಿತು. ಸೊರೆನ್ಸನ್ ಒಬ್ಬ ಖಾಸಗೀ ಪತ್ತೇದಾರನಾಗಿದ್ದ. ತನ್ನ ಕಾರ್ಯರಂಗದಲ್ಲಿ ಅವನು ಸಾಕಷ್ಟು ಖ್ಯಾತಿ ಗಳಿಸಿದ್ದ. ಆದರೆ ಬೇಲ್ ಅದಾವುದನ್ನೂ ಲಕ್ಷಿಸಲಿಲ್ಲ.

ಇವರ ವಿವಾಹವಾಗಿ ಒಂದು ವರ್ಷ ಕಳೆಯುವುದರೊಳಗೇ ಬೇಲ್ ಇದ್ದ ಮನೆಗೆ ಬೆಂಕಿಬಿತ್ತು. ಇಡೀ ಮನೆಯೇ ಸುಟ್ಟು ಬೂದಿಯಾಯಿತು. ಅದು ಸೊರೆನ್ಸನ ಸ್ವಂತ ಮನೆಯಾಗಿದ್ದು ಅವನು ಮೊದಲೇ ಅದರ ಇನ್ಶೂರೆನ್ಸ್ ತೆಗೆದಿದ್ದುದರಿಂದ ಆ ಬಗ್ಗೆ ೨೦೦೦ ಡಾಲರುಗಳು ದೊರೆತುಬಿಟ್ಟವು. ಈ ಆಕಸ್ಮಿಕ ಧನಪ್ರಾಪ್ತಿಯಿಂದ ಅವಳ ಸಂಪತ್ತಿದಾಹ ಹೆಚ್ಚಿತು. ಇದೇ ರೀತಿ ಹಣಗಳಿಸಲು ಬೇರಾವ ದಾರಿಯೂ ಇಲ್ಲವೆ?– ಎಂದು ಅವಳು ಯೋಚಿಸತೊಡಗಿದಳು.

ಆಗಲೇ ಅವಳಿಗೆ ತನ್ನ ಪತಿ ೩೫೦೦ ಡಾಲರಿನ ಜೀವವಿಮೆ ತೆಗೆದಿದ್ದಾನೆಂದು ತಿಳಿಯಿತು. ಇನ್ನೂ ೫೦೦೦ ~~ರೂಪಾಯಿ~~ ವಿಮೆ ತೆಗೆಯಬೇಕೆಂದು ಅವಳು ಪತಿಯನ್ನು ಒತ್ತಾಯಿಸಿದಳು. ಅವನು ~~ಅವಳ ಹೇಳಿಕೆಯಂತೆ~~ ಹಾಗೆಯೇ ಮಾಡಿದ. ಬೇಲಳೀಗ 'ಲಾಪೋರ್ಟೆ' ಎಂಬಲ್ಲಿ ಒಂದು ಫಾರ್ಮು ಕೊಂಡುಕೊಂಡಳು. ಅವಳಲ್ಲಿ ಬೇರಾವ ಗುಣಗಳಿರದಿದ್ದರೂ ಅಸಾಧಾರಣ

ಬುದ್ಧಿಶಕ್ತಿಯಿತ್ತೆಂದು ಯಾರೂ ಒಪ್ಪಿಕೊಳ್ಳಬೇಕು. ಶಿಕಾಗೋದಂತಹ ದೊಡ್ಡ ನಗರವಲ್ಲಿ ಪೋಲೀಸರ ಕಣ್ಣಿಗೆ ಮಣ್ಣೆರಚುವುದು ಕಠಿಣವೆಂದೇ ಅವಳು ದೂರಾಲೋಚನೆಯಿಂದ ಬಹುದೂರದಲ್ಲಿರುವ ಸಾಧಾರಣ ಗ್ರಾಮ ವೊಂದರಲ್ಲಿ ಈ ಫಾರ್ಮ್ ಮತ್ತು ಅದಕ್ಕೆ ಸಂಬಂಧಪಟ್ಟ ಮನೆಯನ್ನು ಕೊಂಡುಕೊಂಡಳು. ಅದು ಬಹಳ ಏಕಾಂತ ಸ್ಥಳವಾಗಿತ್ತು.

ಈ ಹೊಸ ಆಸ್ತಿಯನ್ನು ಕೊಂಡ ಮೂರು ತಿಂಗಳೊಳಗೇ ಅದೇ ಮನೆಯೊಳಗೆ ಸೊರೆನ್ಸನ್ ಸತ್ತುಹೋದ. ಶಿಕಾಗೋದಲ್ಲಿ ಅವನು ಚಾಣಾಕ್ಷ ಪತ್ತೇದಾರನಾಗಿದ್ದರೂ ಲಾಪೋರ್ಟೆಯ ಈ ಮನೆಯಲ್ಲಿ ಅವನ ಕೊನೆಯುಸಿರು ಹೋಗುವ ತನಕವೂ, ಕಾಫಿಯೊಟ್ಟಿಗೆ ಶಂಖಪಾಷಾಣವನ್ನು ಬೆರಸಿ ತನಗೆ ಕೊಡಲಾಗಿತ್ತೆಂದು ಅವನರಿಯದಾದ. ಡಾಕ್ಟರರೂ ಸಾಭಾವಿಕ ಮೃತ್ಯುವೆಂದು ಸರ್ಟಿಫಿಕೇಟ್ ಕೊಟ್ಟುದರಿಂದ ವಿಮಾಕಂಪೆನಿಯು ೮೫೦೦ ಡಾಲರುಗಳನ್ನು ಚಾಚೂ ಎನ್ನದೆ ಬೇಲಳಿಗೆ ಕೊಟ್ಟುಬಿಡಬೇಕಾಯಿತು.

ಬೇಲಳ ಎರಡನೇ ಮದುವೆ 'ಪೀಟರ್ ಗನೇಸ'ನೊಡನೆ ಜರಗಿತು. ಅಂದಿನಿಂದ ಅವಳು 'ಬೇಲ್‌ಗನೇಸ್' ಎಂದು ಪ್ರಖ್ಯಾತಳಾದಳು. ಏಕೆಂದರೆ ಅವಳು ಅವನೊಡನೆ ಎಲ್ಲರಿಗಿಂತಲೂ ಹೆಚ್ಚು ಸಮಯದ ವರೆಗೆ ಬಾಳ್ವೆಮಾಡಿದಳು.

ಬೇಲ್ ಸುಮಾರು ೨ ವರ್ಷಗಳ ವರೆಗೆ ಅವನೊಟ್ಟಿಗಿದ್ದಳು. ಈ ನಡುವೆ ಅವಳು ಜನತೆಯ ಮೇಲೆ ತನ್ನ ಪ್ರಭಾವ ಬೀರುವುದರಲ್ಲೇ ಮಗ್ನಳಾದಳು. ಪ್ರತಿಯೊಂದು ಸಾಮಾಜಿಕ ಕಾರ್ಯಕಲಾಪದಲ್ಲೂ ಅವಳು ಮುಖಂಡಳಾಗಿಯೇ ಭಾಗವಹಿಸುತ್ತಿದ್ದಳು. ಲಾಪೋರ್ಟೆಯ ಅನಾಥಾಲಯದಿಂದ ಮೂವರು ಮಕ್ಕಳನ್ನು ಅವಳು ದತ್ತಕ್ಕೆ ತೆಗೆದುಕೊಂಡಳು. ಔದಾರ್ಯದಲ್ಲಿ ಅವಳೇ ಎಲ್ಲರಿಗೂ ಮೇಲ್ಪಂಕ್ತಿಯಾಗಿದ್ದಳು. ಯಾರಿಗೂ ಕೆಡುಕನ್ನುಂಟುಮಾಡುತ್ತಿರಲಿಲ್ಲ. ಕೇರಿಯ ಎಷ್ಟೋ ಅನಾಥ ಬೆಕ್ಕುಗಳಿಗೆ ಪುಕ್ಕಟೆಯಾಗಿ ಹಾಲುಕುಡಿಸುವ ಏರ್ಪಾಡುಮಾಡಿದಳು. ಹೀಗೆ ಆ ಊರಿನ ಜನತೆಯ ಮೇಲೆ ತನ್ನ ಸದ್ಗುಣಗಳ ಪ್ರಭಾವ ಬೀರುವುದರಲ್ಲಿ ಅವಳು ಯಶಸ್ವಿಯಾದಳು.

ಇಷ್ಟೆಲ್ಲ ಪೂರ್ವಸಿದ್ಧತೆಯ ಬಳಿಕ ಒಂದು ದಿನ ಅವಳು ಮಾಂಸ ಕತ್ತರಿಸುವ ದೊಡ್ಡ ಕತ್ತಿಯಿಂದ ಪೀಟರ್ ಗನೇಸನ ಬಕ್ಕತಲೆಯ ಮೇಲೆ ಬಲ

ವಾಗಿ ಪ್ರಹಾರಮಾಡಿದಳು. ಪತ್ನಿಯ ಅಸಾಧಾರಣ ಆಚರಣವನ್ನು ಕಂಡು ಹಾರಿಹೋದ ಪೀಟರ್ ಗನೇಸನ ಜೀವ ತಿರುಗಿ ಬರಲೇ ಇಲ್ಲ.

ಬೇಲಳು ಕೂಡಲೇ ಡಾಕ್ಟರರನ್ನು ಕರೆತಂದಳು. ಆದರೆ ಅವರು ಸರ್ಟಿಫಿಕೇಟ್ ಕೊಡದೆ ಪೋಲೀಸರನ್ನು ಬರಹೇಳಿದರು.

ಕಪಾಟಿನ ಮೇಲಿದ್ದ ಕತ್ತಿ ಆಕಸ್ಮಾತ್ ಪತಿಯ ಬಕ್ಕತಲೆಯ ಮೇಲೆ ಬಿತ್ತೆಂದೂ ಅದರಿಂದ ಸಾವು ಸಂಭವಿಸಿತೆಂದೂ ಬೇಲಳು ಕಣ್ಣೀರ ಧಾರೆಯನ್ನೇ ಹರಿಸುತ್ತ ಹೇಳಿದರೂ ಅವರೊಪ್ಪಲಿಲ್ಲ. 'ಕೇವಲ ಒಂದಡಿ ಎತ್ತರದ ಸ್ಥಳ ದಿಂದ ಬಿದ್ದ ಕತ್ತಿ ಇಷ್ಟು ಆಳವಾದ ಗಾಯ ಮಾಡಬಹುದೆಂದು ನಂಬುವು ದೆಂತು?'– ಎನ್ನುತ್ತ ಅವರು ಅವಳ ಯಾವ ಮಾತಿಗೂ ಕಿವಿಗೊಡದೆ, ಅವ ಳನ್ನು ಸೆರೆಮನೆಗೊಯ್ದರು. ಏಕೆಂದರೆ ಪೀಟರ್ ಸಾಯುವಾಗ ಅವಳೊ ಬ್ಬಳೇ ಇದ್ದುದರಿಂದ ಅವಳನ್ನು ಹಾಗೆಯೇ ಬಿಡುವುದು ಜಾಣತನವಲ್ಲವೆಂದು ಅವರೆಣಿಸಿದರು.

ಆದರೆ ಬೇಲ್ ಹೆಚ್ಚು ಸಮಯ ಬಂದಿಯಾಗಿರಬೇಕಾಗಲಿಲ್ಲ. ಕೇರಿಯ ಜನರೆಲ್ಲ ಒಟ್ಟಾಗಿ ಅವಳ ಬಂಧನದ ವಿರುದ್ಧ ಗಲಭೆಯೆಬ್ಬಿಸಿದರು. ಬೇಲಳಂ ತಹ ಧರ್ಮಿಷ್ಠ ಮಹಿಳೆಯು ಇಂತಹ ಕ್ಷುದ್ರ ಕೃತ್ಯಮಾಡಿಯಾಳೆಂದು ಅವ ರೆಂತು ತಿಳಿಯಬೇಕು? ಕಾಹಿಲೆಯೆಂದರೆ ಮಿಡಿಯುವ ಜೀವ ಅವಳದು! ಅನಾಥರನ್ನು ಕಂಡರೆ ಅಪಾರ ಕರುಣೆ!! ಅಹಿಂಸೆಯ ಮೂರ್ತಿಮತ್ ಸ್ವರೂ ಪಳಾಗಿದ್ದಳು!!! ಅಂತವಳ ಬಿಡುಗಡೆಗಾಗಿ ಜನ ತನ್ನ ಸರ್ವಸ್ವವನ್ನೂ ಅರ್ಪಿಸಲು ಸಿದ್ಧವಿತ್ತು. ಜನತೆಯ ಬಲವತ್ತರ ವಿರೋಧವನ್ನು ಕಂಡು ಪೋಲೀಸ್ ಅಧಿಕಾರಿಗಳು ನಿರುಪಾಯರಾಗಿ ಬೇಲಳನ್ನು ಬಿಟ್ಟುಬಿಟ್ಟರು. ವಿಮಾಕಂಪೆನಿಯು ಪೀಟರ್ ಗನೇಸನ ೪೦೦೦ ಡಾಲರುಗಳನ್ನು ಮಾತೆತ್ತದೆ ತೆರಬೇಕಾಯಿತು.

ಬೇಲ್‌ಗನೇಸ್ ಈ ಬಾರಿ ಸನ್ಮಾನಪೂರ್ವಕವಾಗಿ ಬಿಡುಗಡೆಹೊಂದಿ ದರೂ ಇದರಿಂದ ಅವಳೊಂದು ಪಾಠ ಕಲಿತಂತಾಯಿತು. ಇನ್ನು ಮುಂದೆ ತನ್ನ ಮನೆಯಲ್ಲಿ ಯಾವ ಹೆಣವೂ ಪೋಲೀಸರಿಗೆ ದೊರೆಯದಂತೆ ನೋಡಿ ಕೊಳ್ಳಬೇಕೆಂದು ಅವಳು ಭಾವಿಸಿದಳು.

ತಾನು 'ಹಂದಿಸಾಕಣೆ'ಯನ್ನಾರಂಭಿಸುತ್ತೇನೆಂದು ಘೋಷಿಸಿ, ಮಾಂಸ ಕತ್ತರಿಸುವ ಒಂದು ಕಟ್ಟಡವನ್ನು ಕಟ್ಟಿಸತೊಡಗಿದಳು.

ಹಂದಿಗಳನ್ನು ಕತ್ತರಿಸುವ ಈ ಕಟ್ಟಡಕ್ಕೆ ತಾಗಿ ಒಂದು ದೊಡ್ಡ ಗದ್ದೆಯಿತ್ತು. ಅವರಲ್ಲಿ ತರಕಾರಿ ಬೆಳೆಯಿಸಬೇಕೆಂದು ಅವಳು ನಿರ್ಧರಿಸಿದಳು. ಆ ಗದ್ದೆಗೆ ಒಂದು ಗಟ್ಟಿಮುಟ್ಟಾದ ಬೇಲಿಹಾಕಿಸಿ, ಸಾಕಷ್ಟು ಹಂದಿಗಳನ್ನು ತಂದು ಕೂಡಿದಳು. ಇಷ್ಟೆಲ್ಲವನ್ನೂ ಮುಗಿಸಿ, ಪ್ರಸಿದ್ಧ ಪತ್ರಿಕೆಯೊಂದರಲ್ಲಿ ಈ ಕೆಳಗಿನಂತೆ ವಿಜ್ಞಾಪನೆ ಹೊರಡಿಸಿದಳು:–

"ಅತ್ಯಂತ ಸುಂದರಿಯಾದ ವಿಧವೆಯೊಬ್ಬಳಿಗೆ ವರನು ಬೇಕಾಗಿದ್ದಾನೆ. ವರನು ಕುಲೀನನೂ ಸಂಪನ್ನನೂ ಆಗಿರಬೇಕು. ಬೇಕಾದವರು ಸ್ವತಃ ಲಾಪೋರ್ಟೆಗೆ ಬಂದು ಭೇಟಿಯಾಗಲಿ. ಪತ್ರವ್ಯವಹಾರದ ಕಡೆ ಗಮನಕೊಡಲಾಗುವುದಿಲ್ಲ".

ಬೇಲ್‌ಗನೇಸಳ ವಿಜ್ಞಾಪನೆಗೆ ಮೊತ್ತಮೊದಲು ಲಿಂಡವೋ ಎಂಬವನು ಉತ್ತರವಿತ್ತ. ಅವನು ಶಿಕಾಗೋ ನಿವಾಸಿಯಾದ ಧನಿಕನಾಗಿದ್ದನು. ಮಧ್ಯಮ ವಯಸ್ಕನಾದ ಅವಿವಾಹಿತ ಯುವಕನವನು. ೨೦೦ ಡಾಲರುಗಳನ್ನು ತೆಗೆದುಕೊಂಡು ಅವನು ಲಾಪೋರ್ಟೆಗೆ ಬಂದ. ಇದಲ್ಲದೆ ಅವನ ಬಳಿ ೫೦೦ ಡಾಲರು ಬೆಲೆಬಾಳುವ ಒಂದು ಉಂಗುರ ಹಾಗೂ ಒಂದು ರಿಸ್ಟ್‌ವಾಚ್ ಇದ್ದವು. ಲಿಂಡವೋ ಒಬ್ಬ ರಸಿಕ ಯುವಕನಾಗಿದ್ದ. ಬೇಲಳು ಸುಲಭವಾಗಿ ಅವನ ಹಣವನ್ನೂ ಆ ಬೆಲೆಬಾಳುವ ಸಾಮಾನುಗಳನ್ನೂ ವಶಪಡಿಸಿಕೊಂಡಳು. ಆದರೆ ಲಿಂಡವೋ ಮದುವೆಯ ಮಾತೆತ್ತಿದಾಗ ಅವಳು ಉಪಹಾಸದ ನಗುವನ್ನು ನಕ್ಕು ಹೀಗೆಂದಳು– 'ನಿಮಗೆ ನನ್ನ ಮೇಲೆ ಅಕೃತ್ರಿಮ ಪ್ರೇಮವಿದೆಯೆಂದು ತಿಳಿದಾಗಲೇ ನಾನು ವಿವಾಹಕ್ಕೊಪ್ಪಬಲ್ಲೆ. ಏಕೆಂದರೆ ನಾನು ಇಷ್ಟರೊಳಗೆ ಎರಡು ಬಾರಿ ಮದುವೆಯಾಗಿ ಕಟು ಅನುಭವಗಳಿಗೆ ಗುರಿಯಾಗಿದ್ದೇನೆ'. 'ಪ್ರೇಮವನ್ನು ಒರೆಗೆ ಹಚ್ಚುವ ಒರೆಗಲ್ಲಾವುದು?' ಅವನು ಪ್ರಶ್ನಿಸಿದ.

'ನೀವು ಕೆಲದಿನಗಳ ವರೆಗೆ ಫಾರ್ಮಿನಲ್ಲಿ ಕೆಲಸಮಾಡಿರಿ, ಎಲ್ಲ ಕೆಲಸವನ್ನು ವ್ಯವಸ್ಥಿತವಾಗಿ ಮಾಡಬಲ್ಲಿರೆಂದು ನನಗೆ ಮನದಟ್ಟಾಯಿತೆಂದರೆ ನಾನು ನಿಮ್ಮನ್ನು ವಿವಾಹವಾಗುವೆ'.

ಲಿಂಡವೋ ಸಹರ್ಷನಾಗಿ ಈ ಶರ್ತವನ್ನು ಸ್ವೀಕರಿಸುತ್ತಾ.....'ಆದರೆ ನನಗೆಷ್ಟು ಸಂಬಳಕೊಡುವೆ?' ಎಂದು ಕೇಳಿದ. ಬೇಲಳಿಗೆ ಈ ಮಾತು ಅಷ್ಟೇನೂ ರುಚಿಸಲಿಲ್ಲ. 'ಪ್ರೇಮಿಗೂ ಸಂಬಳಕೊಡುವ ಸಾಹಸ ನಾನು ಮಾಡುವೆನೆ?'– ಎಂದಳು.

ಕಟ್ಟಕಡೆಗೆ ವೇತನವಿಲ್ಲದೆ ಕೆಲಸಮಾಡಲು ಲಿಂಡವ್ರೋ ಒಪ್ಪಿಬಿಟ್ಟ. ಎರಡು ತಿಂಗಳು ಕಳೆದುವು. ಬೇಲಳು ಸಂಬಳ ಕೊಡಲಿಲ್ಲ. ಮದುವೆಯಾಗಲೂ ಇಲ್ಲ. ಆಗ ಅವನು ಬೇಲಳನ್ನು ಭೇಟಿಯಾಗಿ....ಒಂದೋ ತನ್ನನ್ನು ಮದುವೆಯಾಗಬೇಕೆಂದೂ ಇಲ್ಲದಿದ್ದರೆ ಸಂಬಳದ ಹಣ ಸಲ್ಲಿಸಬೇಕೆಂದೂ ಹೇಳಿಬಿಟ್ಟ. ಇವೆರಡರಲ್ಲಿ ಯಾವುದಕ್ಕಾದರೂ ಒಂದು ದಿನದೊಳಗೆ ಒಪ್ಪಿಗೆಯಾಗಬೇಕೆಂದು ಖಡಾಖಡಿಯಾಗಿ ತಿಳಿಸಿಬಿಟ್ಟ.

'ಆಗಲಿ ಇಂದೇ ರಾತ್ರಿ ನಿರ್ಣಯಿಸುವೆ. ಈಗ ಹೋಗಿ ತೋಟದಲ್ಲಿ ಒಂದು ದೊಡ್ಡ ಹೊಂಡ ತೋಡಿರಿ. ಕಸಕಡ್ಡಿಗಳನ್ನು ಹಾಕಬೇಕಾಗಿದೆ'. ಎಂದಳು.

ಲಿಂಡವ್ರೋ ದೊಡ್ಡದೊಂದು ಹೊಂಡ ತೋಡಿದ. ಬೆಳಗಾಗುವುದರೊಳಗೆ ಅದು ಮುಚ್ಚಿಯೂಹೋಯಿತು. ಆದರೆ ಆ ಬಳಿಕ ಲಿಂಡವ್ರೋ ಒಮ್ಮೆಂದೊಮ್ಮೆ ಕಣ್ಮರೆಯಾದ. ಸುಮಾರು ಆರು ವರ್ಷಗಳ ಬಳಿಕ ಅವನ ಅಸ್ಥಿಪಂಜರವನ್ನು ಹೊರತೆಗೆದು ಗುರುತಿಸಲಾಯಿತು.

ಬೇಲ್‌ಗನೇಸ್ ಲಿಂಡವ್ರೋಗಾಗಿ ಅಳುತ್ತ ಕುಳಿತುಕೊಳ್ಳಲಿಲ್ಲ. ಹಿಂದಿನ ಆ ವಿಜ್ಞಾಪನೆಯನ್ನೇ ಮರಳಿ ಪ್ರಕಟಿಸಬೇಕೆಂದು ಆ ಪತ್ರಿಕೆಗೆ ಪುನಃ ಒಂದು ಪತ್ರ ಬರೆದಳು.

ಈ ಬಾರಿ 'ಮಿನೀಸೋಟಾ' ಎಂಬ ಸ್ಥಳದ ಜಾನ್‌ಮೂಸ್ ಎಂಬವನು ಬೇಲಳನ್ನು ವಿವಾಹವಾಗಲು ಬಂದ. ಅವನೊಬ್ಬ ಧನಿಕ ರೈತನಾಗಿದ್ದ. ಅವನು ೫೦೦೦ ಡಾಲರ್ ಸಮೇತ ಅವಳನ್ನು ನೋಡ ಬಂದನು.

ಜಾನ್‌ಮೂಸನೂ ತನ್ನೆಲ್ಲ ಸಂಪತ್ತನ್ನು ಬೇಲಳಿಗೆ ಒಪ್ಪಿಸಿ ಲಿಂಡವ್ರೋನಂತೆಯೇ ತನ್ನ ಪ್ರೇಯಸಿಯ ಗದ್ದೆಯಲ್ಲಿ ಕೆಲಸಮಾಡಲಾರಂಭಿಸಿದ. ಮೂರು ತಿಂಗಳ ಬಳಿಕ ಅವನು ಅದೊಂದು ವಿಷಗಳಿಗೆಯಲ್ಲಿ ಆಕಸ್ಮಾತ್ತಾಗಿ ಕಣ್ಮರೆಯಾಗಿಯೇಬಿಟ್ಟ.

ಜಾನ್‌ಮೂಸನು ತನ್ನೂರಿಗೆ ಹೋಗಿದ್ದಾನೆಂದು ಬೇಲ್ ಜನರಲ್ಲಿ ವದಂತಿ ಹುಟ್ಟಿಸಿ, ಅವರು ನಂಬುವಂತೆಯೇ ಮಾಡಿದ್ದಳು. ತೋಟದಲ್ಲಿ ಮತ್ತೊಂದು ಹೊಂಡವನ್ನು ತೋಡಿ ಮುಚ್ಚಲಾಯಿತು.

ಆ ಬಳಿಕ ಲೇಂಫಿಯರ್ ಬೇಲಳ ಜೀವನದಲ್ಲಿ ಕಾಲಿಟ್ಟ. ಆದರೆ ಇವನು ಬಹುಶಃ ತುಂಬಾ ಅದೃಷ್ಟಶಾಲಿಯಾಗಿರಬೇಕು. ಏಕೆಂದರೆ ಬೇಲಳು ಹಾರ್ದಿ

ಕವಾಗಿ ಅವನೆಡೆಗೆ ಆಕೃಷ್ಟಳಾಗಿದ್ದಳು.

ಅವಳು ಲೇಂಫಿಯರ್‌ನಿಗೆ ತನ್ನ ಗದ್ದೆಯಲ್ಲಿ ಕೆಲಸಕೊಟ್ಟಳು, ಅಲ್ಲದೆ ಸಂಬಳವನ್ನು ಕೊಡತೊಡಗಿದಳು. ಲೇಂಫಿಯರ್ ಈ ಅಸಾಧಾರಣ ಧನಿಕ ಮಹಿಮೆಯ ಕೃಪಾಕಟಾಕ್ಷಕ್ಕೊಳಗಾಗಿ ಕೃತಾರ್ಥನೆನಿಸಿದ. ಅವರಿಬ್ಬರ ಹಾರ್ದಿಕ ಪ್ರೇಮ ಹೆಚ್ಚುತ್ತಾ ಹೋಯಿತು. ಆದರೆ ವೈವಾಹಿಕ ಬಂಧನದಲ್ಲಿ ಸಿಲುಕಲು ಅದೇಕೋ ಬೇಲ್ ಇಷ್ಟಪಡಲಿಲ್ಲ.

ಲೇಂಫಿಯರ್ ಫಾರ್ಮಿನಲ್ಲಿ ಕೆಲಸಮಾಡುತ್ತಿರುವಾಗಲೇ ಏರಿಕ್ ಎಂಡರ್ಸನ್ ಎಂಬೊಬ್ಬನು ಲಾಪೋರ್ಟೆಗೆ ಬಂದ. ಅವನ ಕೈಯಲ್ಲಿ, ಬೇಲ್‌ಗನೇಸಳು ಈಗ ಮೂರನೇ ಬಾರಿ ಪ್ರಕಟಿಸಿದ ಆ ಆಕರ್ಷಕ ವಿಜ್ಞಾಪನೆಯುಳ್ಳ ಪತ್ರಿಕೆಯಿತ್ತು. ಏರಿಕ್ ಎಂಡರ್ಸನನ ಪೂರ್ವಿಕರು ಸ್ವೀಡನ್ ನಿವಾಸಿಗಳಾಗಿದ್ದರು, ಮತ್ತು ಕೆಲದಿನಗಳ ಹಿಂದೆಯೇ ಅವನ ಮೊದಲ ಹೆಂಡತಿ ಮೃತಳಾಗಿದ್ದಳು. ಹೆಂಡತಿಯ ಜೀವವಿಮೆಯಿಂದ ಸಿಕ್ಕಿದ ಹಣದೊಂದಿಗೆ ಅವನು ಬೇಲಳನ್ನು ವಿವಾಹವಾಗಲು ಲಾಪೋರ್ಟೆಗೆ ಬಂದಿದ್ದ.

ಲೇಂಫಿಯರ್‌ನಿಗೆ ಎಂಡರ್ಸನನ ಆಗಮನ ಅಷ್ಟೇನೂ ಹಿಡಿಸಲಿಲ್ಲ. ಆದರೆ ಬೇಲಳು ಬಹುಬೇಗನೆ ಏರಿಕ್ ಎಂಡರ್ಸನನ ಹಣವನ್ನೆಲ್ಲಾ ವಶಪಡಿಸಿಕೊಂಡು ಅವನನ್ನು ವಿವಾಹವಾಗುವುದಕ್ಕೂ ಒಪ್ಪಿಗೆಯಿತ್ತಳು. ನಿರಾಶ ಪ್ರೇಮಿ ಲೇಂಫಿಯರ್ ಶರಾಬಿನ ಭಕ್ತನಾಗಿ, ಆ ಅಮಲಿನಲ್ಲಿ ತನ್ನ ದುಃಖವನ್ನು ಮರೆಯಲೆತ್ನಿಸಿದ.

ಈಗ ಏರಿಕ್ ಎಂಡರ್ಸನನು ಆದಷ್ಟು ಬೇಗನೆ ವಿವಾಹಕಾರ್ಯವನ್ನು ಪೂರೈಸಿಬಿಡಬೇಕೆಂದು ಬೇಲಳನ್ನು ಒತ್ತಾಯಿಸುತ್ತಿದ್ದಾಗ ಲೇಂಫಿಯರ್ ಶರಾಬಿನಂಗಡಿಯಲ್ಲಿ ತನ್ನನ್ನು ತಾನೇ ಮರೆತು ಯಾವುದೋ ಲೋಕದಲ್ಲಿ ವಿಚರಿಸುತ್ತಿದ್ದ. ಹೀಗೆಯೇ ಎಷ್ಟೋ ದಿನ ಕಳೆದ ಮೇಲೆ ಅದೊಂದು ದಿನ ಸಂಜೆ ಅಕಸ್ಮಾತ್ ಬೇಲಳು ಲೇಂಫಿಯರನೊಡನೆ......‘ಇನ್ನು ಮುಂದೆ ನಮ್ಮಿಬ್ಬರ ಸಂಬಂಧವು ಮೊದಲಿನಂತೆಯೇ ಇರುವುದೆ’ಂದು ತಿಳಿಸಿದಳು.

‘ಎಂಡರ್ಸನ್ ಎಲ್ಲಿ ಹೋದ?’ –ತುಸು ಆಶ್ಚರ್ಯದಿಂದ ಅವನು ಕೇಳಿದ.

‘ಅವನು ಹೋಗಿಬಿಟ್ಟ. ಕೊನೆಗೂ ನನ್ನನ್ನು ಮೋಸಗೊಳಿಸಿದ. ಈಗವನು ‘ಶಿಕಾಗೋ’ದ ತರುಣಿಯೊಬ್ಬಳನ್ನು ವರಿಸಲು ಹೋಗುತ್ತಿದ್ದಾನೆ’. –ಬೇಲಳೆಂದಳು.

'ಶಿಕಾಗೊ? ಅಲ್ಲಿಗೆ ತಾನೆಂದೂ ಹೋಗಿಲ್ಲವೆಂದು ಅವನೆನ್ನುತ್ತಿದ್ದ. ಅಲ್ಲಿಯ ತರುಣಿಯ ಪರಿಚಯ ಅವನಿಗೆಂತಾಯಿತು?' –ತುಸು ಬಿರುಸಾಗಿಯೇ ಅವನು ಪ್ರಶ್ನಿಸಿದ.

'ಅದೆಲ್ಲ ನಿಮಗೇಕೆ? ಅವನು ಹೊರಟುಹೋದನೇನೋ ನಿಜ. ನನ್ನೊಡನೆ ಸುಳ್ಳೇ ಹೇಳಿರಬಹುದು. ಇನ್ನು ಅವನ ಕುರಿತು ಮಾತಾಡಿ ಫಲವೇನು? ಈಗ ನಾನಿದ್ದೇನೆ, ನೀವಿದ್ದೀರಿ....' ಎಂದು ಮೋಹಕ ಭಾವಭಂಗಿಯಲ್ಲಿ ತಿಳಿಸಿದಳು.

೧೯೦೩ರಿಂದ ೧೯೦೭ರ ವರೆಗೆ ಬೇಲ್‌ಗನೇಸಳ ವಿವಾಹ ವಿಜ್ಞಾಪನೆಯು ಪತ್ರಿಕೆಗಳಲ್ಲಿ ಅಚ್ಚಾಯಿತು. ಸುಮಾರು ನಾಲ್ಕಾರು ಜನ ಉಮೇದ್ವಾರರೂ ಬಂದರು. ಆ ಸಮಯ ಲೇಂಫಿಯರನ ಸಿಡುಕು ಹೇಳತೀರದು; ಆದರೆ ಅವರಾರನ್ನೂ ಬೇಲ್ ಮದುವೆಯಾಗಲಿಲ್ಲ.

ಯಾವಾಗಲೂ ಬೇಲಳು ಮಾಂಸಕತ್ತರಿಸುವ ಆ ಏಕಾಂತ ಕೋಣೆಯಲ್ಲೇ ಇರುವುದು ಲೇಂಫಿಯರ್‌ನಿಗೆ ಅಚ್ಚರಿಯನ್ನುಂಟುಮಾಡುತ್ತಿತ್ತು. ಅಲ್ಲದೆ ತನ್ನ ಎದುರಾಳಿಗಳೆಲ್ಲ ಆಕಸ್ಮಾತ್ತಾಗಿ ಕಾಣೆಯಾಗುವುದೂ ಅವನಿಗೆ ಬಿಡಿಸಲಾರದ ಒಗಟಾಗಿತ್ತು. ಇಷ್ಟೇ ಅಲ್ಲದೆ ಸುಣ್ಣದ ಚೀಲ ಚೀಲಗಳನ್ನೇ ತರಿಸಿದರೂ ಅವೆಲ್ಲ ಯಾವ ಕೆಲಸಕ್ಕಾಗಿ ಖರ್ಚಾಗುತ್ತಿವೆಯೆಂಬುದನ್ನು ಅವನರಿಯದಾದ ತನ್ನೆಲ್ಲ ಇಚ್ಛೆಗಳನ್ನು ಮನಸ್ಸಿನಲ್ಲೇ ಹತ್ತಿಕ್ಕಿ ಅವನು ಕಾರ್ಯತತ್ಪರನಾಗುತ್ತಿದ್ದ.

ಬೇಲಳ ಸಂಪರ್ಕಕ್ಕೆ ಬರುವವರ ಸಾವು ಸಾಧಾರಣ ನಿಶ್ಚಿತವೇ ಆಗಿತ್ತು. ಆದರೆ ಟಾರ್ಕಿಯೋ ನಿವಾಸಿಯಾದ ಜಾರ್ಜ್ ಎಂಡರ್ಸನ್ ಎಂಬವನು ಮಾತ್ರ ಅವಳ ಭಯಾನಕ ಹಿಡಿತದಿಂದಲೂ ತಪ್ಪಿಸಿಕೊಂಡನು.

ಜಾರ್ಜನೂ ಬೇಲಳ ಈ ಆಕರ್ಷಕ ವಿಜ್ಞಾಪನೆಯನ್ನೋದಿದ. ಅವನಲ್ಲಿ ಬೇಕಾದಷ್ಟು ಸಂಪತ್ತಿತ್ತು. ಅವನು ಕೂಡಲೇ ಗಂಟುಮೂಟೆ ಕಟ್ಟಿ ಲಾಪೋರ್ಟೆಯ ಕಡೆ ಹೊರಟುಬಿಟ್ಟ. ಅವನ ಬಳಿ ಯಾತ್ರಿಕರ ಚೆಕ್ ಪುಸ್ತಕವಿತ್ತು. ಬೇಲಳು ಅದನ್ನು ನೋಡಿ ತುಂಬಾ ನಿರಾಶಳಾದಳು. ಏಕೆಂದರೆ ಯಾತ್ರಿಕರ ಚೆಕ್ಕುಗಳಲ್ಲಿ ಪ್ರತಿಯೊಂದರ ಮೇಲೂ ಜಾರ್ಜನ ಸಹಿಯಿಲ್ಲದೆ ಹಣ ಸಿಗುವಂತಿರಲಿಲ್ಲ. ಹೀಗಾಗಿ ಅವಳು ಏನು ಮಾಡಲೂ ಅರಿಯದಾದಳು. ಅವನೊಡನೆ.....'ನಿದ್ರಿಸುವುದಕ್ಕಿಂತ ಮೊದಲು ಈ ಎಲ್ಲ ಚೆಕ್ಕುಗಳಿಗೆ ಸಹಿ

ಹಾಕಿದರೆ ಹೇಗೆ?' ಎಂದಳು.

ಜಾರ್ಜ್ ಬೇಲಲ ಇತರ ಪ್ರೇಮಿಗಳಂತೆ ಮೂರ್ಖನಾಗಿರಲಿಲ್ಲ. ಹುಬ್ಬು ಗಂಟಿಕ್ಕುತ್ತಾ ಅವನು----'ಇಷ್ಟೇಕೆ ತರಾತುರಿ?' ಎಂದ.

'ರಾತ್ರಿ ಮಲಗಿದ ಮನುಷ್ಯ ಬೆಳಿಗ್ಗೆ ಏಳುತ್ತಾನೋ ಇಲ್ಲವೋ, ಅದಾರು ಬಲ್ಲರು? ಈ ಅಸ್ಥಿರ ಸಂಸಾರದಲ್ಲಿ ಯಾವಾಗ ಏನೇನು ಸಂಭವಿಸುತ್ತದೆಂದು ಹೇಗೆನ್ನಬಹುದು?'

ಜಾರ್ಜನ ಮುಖದ ಮೇಲೆ ಕಿಂಚಿತ್ ಮಂದಹಾಸ ನಲಿದಾಡಿತು-----'ರಾತ್ರಿ ನನಗೇನಾದರೂ ಸಂಭವಿಸಿತೆಂದರೆ ಈ ಚೆಕ್ಕುಗಳ ಮೇಲೆ ಅದೇಕೆ ಸಹಿ ಹಾಕಬೇಕು? ಹೇಗೂ ನನ್ನ ಸಂಪತ್ತು ನನ್ನ ಉತ್ತರಾಧಿಕಾರಿಗಳಿಗೆ ಸಿಕ್ಕಿಯೇ ಸಿಕ್ಕುವುದು. ಈಗಂತೂ ನಾನು ಸ್ವಸ್ಥನಿದ್ದೇನೆ. ಆ ಸಂದೇಹವಾದರೂ ನಿನ್ನ ಮನದಲ್ಲಿ ಅದೆಂತು ಜಡಮೂಡಿತು?'

'ಈ ಅಸ್ಥಿರ ಪ್ರಪಂಚದಲ್ಲಿ ಆಕಸ್ಮಿಕ ಘಟನೆಗಳಿಗೇನು ಕೊರತೆ? ನೂರಾರು ಜನರು ಇರುಳು ನಿದ್ದೆಹೋದವರು ದೀರ್ಘನಿದ್ರೆಯಲ್ಲೇ ಮುಳುಗಿ ಬಿಡುತ್ತಾರೆ'

ಜಾರ್ಜ್ ತುಸು ಪ್ರಸನ್ನನಾದ. ಅವನಿಗಾಗಿ ನಿಶ್ಚಿತವಾದ ಕೋಣೆಯಲ್ಲಿ ನಿದ್ರಿಸುವ ವೇಳೆಯಲ್ಲಿಯೂ ಅವನು ಸಿಟ್ಟಿನಿಂದ ಬಡಬಡಿಸುತ್ತಿದ್ದ.

ಅರ್ಧ ರಾತ್ರಿಯ ವೇಳೆ ಅಕಸ್ಮಾತ್ ಸರಸರ ಶಬ್ದ ಕೇಳಿ ಅವನ ನಿದ್ರೆ ಹಾರಿಹೋಯಿತು. ಕಣ್ಣು ತೆರೆಯುತ್ತಲೇ ಬೇಲಲು ಕಾಣಸಿಕ್ಕಳು. ಅವಳ ಒಂದು ಕೈಯಲ್ಲಿ ಮೇಣದ ಬತ್ತಿಯಿತ್ತು. ಮತ್ತೊಂದರಲ್ಲಿ ದೊಡ್ಡ ಕತ್ತಿಯಿತ್ತು.

ಜಾರ್ಜ್ ಹಾರಿ ಎದ್ದುನಿಂತ. ಅವನು ತೀಕ್ಷ್ಣ ಸ್ವರದಲ್ಲಿ---'ನೀನಿಲ್ಲಿ ಏನು ಮಾಡುತ್ತಿರುವೆ?'–ಎಂದು ಕೇಳಿದ.

'ನನಗೆ ನಿದ್ದೆ ಬರಲಿಲ್ಲ. ಮಾಂಸ ಕತ್ತರಿಸುವ ಉಪಕರಣಗಳನ್ನು ಒಮ್ಮೆ ಹರಿತಗೊಳಿಸಿ ಬರೋಣವೆಂದು ಹೊರಟೆ. ಹಾಗೆಯೇ ದಾರಿಯಲ್ಲಿ ನಿಮ್ಮನ್ನು ಒಮ್ಮೆ ನೋಡಿಹೋಗಲು ಬಂದೆ'– ಮುಗುಳ್ನಗುತ್ತಾ ಅವಳೆಂದಳು

ಜಾರ್ಜ್ ಜೀವನದಲ್ಲಿ ತುಂಬಾ ಗಂಡಾಂತರಗಳನ್ನೆದುರಿಸಿರಬಹುದು; ಆದರೆ ಸಾಕ್ಷಾತ್ ಮೃತ್ಯುವೇ ತನ್ನೆದುರಿಗೆ ನಿಂತಿರುವ ಈ ದೃಶ್ಯವು ಅವನಿಗೆ ಎಲ್ಲಕ್ಕಿಂತ ಭಯವೆನಿಸಿತು. ಅವನು ಕೂಡಲೇ ಸಹಿಹಾಕಿದ ತನ್ನ ಚೆಕ್

ಬುಕ್ ಸಹಿತ ಲಾಪೋರ್ಟೆಗೆ ಅಂತಿಮ ವಂದನೆ ಸಲ್ಲಿಸಿ ಜಾರಿಬಿಟ್ಟ.

೧೯೦೭ರಲ್ಲಿ ಜಾನ್ ಆಲ್ಡೇನ್ ಎಂಬವನು ಬಂದ. ಎರಡು ವಾರಗಳ ತನಕ ಅವನೂ ಆ ಕತ್ತಿಗೆ ಬಲಿಯಾಗದೆ ಉಳಿದ

ಅದೊಂದು ದಿನ ಬೇಲಳು ಲೇಂಫಿಯರ್‌ನನ್ನು ಯಾವುದೋ ಕೆಲಸದ ನೆಪದಿಂದ ದೂರ ಕಳುಹಿಸಿದಳು. ಅವನು ಮೂರು ಗಂಟೆಯ ವರೆಗೆ ಹಿಂದಿರುಗಲಾರನೆಂದು ನಿರ್ಧರಿಸಿ ಅವಳು ಆಲ್ಡೇನನ್ನು ವಿಚಾರಿಸಲನುವಾದಳು. ಆದರೆ ದುರ್ಭಾಗ್ಯದಿಂದ ಲೇಂಫಿಯರ್ ತನ್ನ ಕೆಲಸಕ್ಕೆ ಹೋಗದೆ ದಾರಿಯಲ್ಲೇ ಸಿಗುವ ಶರಾಬಿನಂಗಡಿಗೆಯನ್ನು ಹೊಕ್ಕ. ಆದರೆ ಅಂಗಡಿಯವನು ನಗದಿ ಹಣವಿಲ್ಲದೆ ಶರಾಬು ಕೊಡಲೊಪ್ಪದುದರಿಂದ ಅವನು ನಿರಾಶನಾಗಿ ಮನೆಗೆ ಹಿಂದಿರುಗಿದ.

ಮನೆಗೆ ತಲುಪುತ್ತಲೇ ಅವನ ದೃಷ್ಟಿ ಮೊತ್ತಮೊದಲು ಜಾನ್ ಆಲ್ಡೇನನ ಮೃತ ಶರೀರದತ್ತ ಚಲಿಸಿತು.

'ಅಯ್ಯೋ ದೇವರೆ!'–ಎಂದು ಭಯದಿಂದ ನಡುಗುತ್ತ ಅವನು ಬೇಲಳೊಡನೆ....'ನೀನೇನು ಮಾಡಿಬಿಟ್ಟೆ?' ಎಂದನು.

'ಇವನು ನನ್ನ ಮರ್ಯಾದೆ ತೆಗೆಯಲೆತ್ನಿಸಿದ. ಅದಕ್ಕಾಗಿಯೇ ಈ ಶಿಕ್ಷೆ ವಿಧಿಸಿದ್ದೇನೆ'– ಸ್ವಲ್ಪವೂ ಭಯಪಡದೆ ಅವಳೆಂದಳು.

ಲೇಂಫಿಯರನು ಭಯದಿಂದಲೋ ಬೇಲಳ ಮೇಲಿನ ಹಾರ್ದಿಕ ಪ್ರೇಮದಿಂದಲೋ, ಈ ಘಟನೆಯನ್ನು ಯಾರಿಗೂ ತಿಳಿಸಲಿಲ್ಲ.

ಜಾನ್ ಆಲ್ಡೇನ್ ಸತ್ತ ಕೆಲವೇ ದಿನಗಳಲ್ಲಿ ಓಲ್‌ಬುಡ್‌ಸ್ವರ್ಗ್ ಎಂಬ ಚಿತ್ರಕಾರನೊಬ್ಬನು ಲಾಪೋರ್ಟೆಗೆ ಬಂದ. ಅವನು ಹಿಂದಿನ ಪ್ರೇಮಿಗಳಂತೆಯೇ ಕೆಲವೇ ದಿನಗಳಲ್ಲಿ ಹಣವನ್ನೂ ಪ್ರಾಣವನ್ನೂ ಕಳೆದುಕೊಂಡನು.

ಎಂಡ್ರ್ಯೂ ಹೆಲ್ಗೇಸಿನ್ ಬೇಲಳ ಜೀವನದಲ್ಲಿ ಕಾಲಿಟ್ಟ ಕಟ್ಟಕಡೆಯ ಪ್ರೇಮಿ. ಅವನು ದಕ್ಷಿಣ ಡೆಕೋಟಾದ ನಿವಾಸಿಯಾಗಿದ್ದ. ಅವನೂ ಹಿಂದಿನ ಪ್ರೇಮಿಗಳಂತೆ ಆವನೂ ಬೇಲಳ ಆಕರ್ಷಕ ವಿಜ್ಞಾಪನೆಯನ್ನೋದಿ ಬೇಂಕಿನಿಂದ ಸಾಕಷ್ಟು ಹಣಪಡೆದು ಲಾಪೋರ್ಟೆಗೆ ತಲುಪಿದ. ಅವನು ಅತ್ಯಂತ ಧನಿಕನಾಗಿದ್ದ.

ಬೇಲಳಿಗಾಗ ೩೭ ವರ್ಷಗಳಾಗಿದ್ದರೂ ತನ್ನ ರೂಪ ಯೌವನಗಳ ಜ್ವಾಲೆಗೆ ಎಂತಹ ಜಿತೇಂದ್ರಿಯನನ್ನೂ ಬಲಿಬೀಳಿಸುವ ಅಪಾರಶಕ್ತಿಯಿತ್ತು.

ಎಂಡ್ರೂ ಅವಳ ನಯನ ಬಾಣಗಳಿಂದ ಗಾಯಗೊಂಡು ವಿಲಿವಿಲಿ ಒದ್ದಾಡ ತೊಡಗಿದ. ಆಗಲೇ ಬೇಲಳು ಅವನೊಡನೆ ಹಾರ್ದಿಕ ಪ್ರೇಮದ ಸರ್ಟಿಫಿಕೇಟ್ ಬೇಡಿದಳು. ಎಂಡ್ರೂ ಆವೇಶದಿಂದ ತಂದ ಹಣವೆಲ್ಲವನ್ನೂ ಅವಳಿಗೆ ಕೊಟ್ಟುಬಿಟ್ಟ. ಆದರೆ ಬೇಲಳಿಗೆ ಇದರಿಂದ ಸಂತೋಷವಾಗಲಿಲ್ಲ. ಆಗ ಅವನು 'ಬೇಂಕಿನ ನನ್ನೆಲ್ಲ ಹಣವನ್ನೂ ತಂತಿಯ ಮೂಲಕ ನಿನ್ನ ಹೆಸರಿಗೆ ತರಿಸಿಕೊಡುತ್ತೇನೆಂದು ಮಾತುಕೊಟ್ಟ. ಬೇಲಳು ಇದರಿಂದ ಪ್ರಸನ್ನಳಾಗುವಳೆಂದು ತಿಳಿದು ಅವನು ಪ್ರೇಮದ ಆವೇಶದಲ್ಲಿ ಹಾಗೆಯೇ ಮಾಡಿದ. ಒಂದು ವಾರದೊಳಗೆ ಎಂಡ್ರೂಸನ ಹಣವೆಲ್ಲ ತಂತಿಯ ಮೂಲಕ ಬೇಲಳಿಗೆ ಸಿಕ್ಕಿತು. ಆ ಬಳಿಕ ಅದೊಂದು ದಿನ ತರಕಾರಿ ತೋಟದಲ್ಲಿ ಎಂಡ್ರೂವಿನ ಜೀವನಯಾತ್ರೆಯು ಮುಗಿದುಹೋಯಿತು.

೧೯೦೫ನೇ ಎಪ್ರಿಲ್ ತಿಂಗಳಲ್ಲಿ ತನ್ನ ಜೀವಮಾನದಲ್ಲೇ ವಿಶೇಷ ಗಾಬರಿಯಾದಳು. ಲೇಂಫಿಯರನು ಶರಾಬಿನ ಅಮಲಿನಲ್ಲಿ ಪೋಲೀಸರಿಗೆ ಎಲ್ಲ ಸಂಗತಿಯನ್ನೂ ಹೇಳಿಬಿಟ್ಟನೆಂದು ಅವಳಿಗೆ ಸುದ್ದಿ ತಲುಪಿತು. ಆದರೆ ಈಗಲೂ ಅವಳು ಸೋಲಲಿಲ್ಲ. ಅವಳೇ ಠಾಣೆಗೆ ಹೋಗಿ, ಲೇಂಫಿಯರನು ತನ್ನ ವಿರುದ್ಧ ಒಳಸಂಚು ಹೂಡಿದ್ದಾನೆಂದೂ ತನ್ನನ್ನು ಕೊಂದು ಆಸ್ತಿಯೆಲ್ಲವನ್ನೂ ವಶಪಡಿಸಿಕೊಳ್ಳಲು ಎಷ್ಟೋ ಬಾರಿ ಪ್ರಯತ್ನಿಸಿದ್ದಾನೆಂದೂ ಅವನ ಮೇಲೆ ಆಪಾದನೆ ಹೊರಿಸಿದಳು. ಈ ಹೇಳಿಕೆಯಿಂದಾಗಿ ಲೇಂಫಿಯರನನ್ನು ಪೋಲೀಸರು ಬಂಧಿಸಿಬಿಟ್ಟರು. ಇದಾದ ಕೆಲದಿನಗಳಲ್ಲೇ ಬೇಲಳು ಲೇಂಫಿಯರನನ್ನು ಏಕಾಂತದಲ್ಲಿ ಭೇಟಿಯಾದಳು. ಅವರಿಬ್ಬರೊಳಗೆ ಏನೇನೋ ಮಾತುಕತೆ ನಡೆದು ಸಂಧಿಯಾಯಿತು. ಮರುದಿನವೇ ಬೇಲ್ ಅವನ ಮೇಲಿನ ಆರೋಪವನ್ನು ಹಿಂದಗೆದುಕೊಂಡಳು. ಲೇಂಫಿಯರ್ ಬಿಡುಗಡೆಹೊಂದಿದ.

ಆದರೆ ಬೇಲಳಿಗೆ ಆತ್ಮಶಾಂತಿ ದೊರೆಯಲಿಲ್ಲ. ಬಹುಶಃ ಇಷ್ಟರೊಳಗೆ ಅವಳ ಪಾಪದ ಕೊಡ ತುಂಬಿಹೋಗಿರಬೇಕು!

೧೯೦೮ನೇ ಎಪ್ರಿಲ್ ೨೭ರ ರಾತ್ರಿ ಅಕಸ್ಮಾತ್ ಅವಳ ಮನೆಗೆ ಬೆಂಕಿ ತಗಲಿತು. ಆ ಸುದ್ದಿ ಜನರಿಗೆ ತಿಳಿಯುವುದರೊಳಗೆ, ಸಾಕಷ್ಟು ಸಮಯ ಕಳೆದಿತ್ತು. ಹೀಗಾಗಿ ಇಡೀ ಮನೆಯೇ ಸುಟ್ಟು ಬೂದಿಯಾಯಿತು.

ಮರುದಿನ ಸುಟ್ಟ ಮನೆಯ ಅವಶೇಷಗಳನ್ನು ಹುಡುಕಲಾಯಿತು. ಅಲ್ಲಿ ೪ ದಗ್ಧ ಶವಗಳು ದೊರೆತವು. ಅವುಗಳಲ್ಲಿ ಒಂದು ಯಾವಳೋ ಹೆಂಗ

ಸಿನದು. ಉಳಿದವು ಬೇಲಳು ಸಾಕಿದ ಮೂರು ಅನಾಥ ಶಿಶುಗಳು. ಬೇಲಳೂ ಆ ಮೂವರು ಮಕ್ಕಳೂ ಬೆಂಕಿಗುಲ್ಲಿ ಬೆಂದುಹೋಗಿದ್ದರೆಂದು ಯಾರೂ ಊಹಿಸಬಹುದಿತ್ತು. ಬೇಲಳು ಮೊದಲೇ ಕೊಟ್ಟಿದ್ದ ಹೇಳಿಕೆ ಮೇರೆಗೆ ಈ ಪೈಶಾಚಿಕ ಕಾರ್ಯ ಲೇಂಫಿಯರನದೇ ಎಂಬುದರಲ್ಲಿ ಯಾವ ಸಂದೇಹವೂ ಉಳಿಯಲಿಲ್ಲ. ಅವನನ್ನು ಕೂಡಲೇ ಹಿಡಿಯಲಾಯಿತು. ಆ ನಾಲ್ಕೂ ಶವಗಳನ್ನೂ ಪರೀಕ್ಷೆಗಾಗಿ ಕಳುಹಿಸಲಾಯಿತು. ಆದರೆ ಡಾಕ್ಟರರ ಪರೀಕ್ಷೆ ಮುಗಿದ ಬಳಿಕ ಆ ದೊಡ್ಡ ಶವವು ಬೇಲಳದಲ್ಲವೆಂದು ತೀರ್ಮಾನವಾಯಿತು.

ಇತ್ತ ಲೇಂಫಿಯರನೂ ಬಿಡುಗಡೆಗಾಗಿ ಚಡಪಡಿಸುತ್ತಿದ್ದ. ಆದ್ದರಿಂದ ಅವನು ಪೋಲೀಸ್ ಅಧಿಕಾರಿಗಳಿಗೆ ಎಲ್ಲವನ್ನೂ ಸ್ಪಷ್ಟವಾಗಿ ತಿಳಿಸಿಬಿಟ್ಟ. ಬೇಲಳು ಹೇಗೆ ತನ್ನ ಪ್ರೇಮಿಗಳನ್ನು ವಂಚಿಸಿ ತೋಟದಲ್ಲಿ ಸಮಾಧಿಗೊಳಿಸುತ್ತಿದ್ದಳೆಂಬುದನ್ನೂ ತಿಳಿಸಿದ.

ಸಂಜೆಯ ವರೆಗೆ ಬೇಲಳ ತೋಟವನ್ನು ಅಗೆದ ಬಳಿಕ ೧೨ ಅಸ್ಥಿಪಂಜರಗಳು ದೊರೆತವು; ಕೆಲವುದರ ಗುರುತು ಸಿಕ್ಕಿತು; ಉಳಿದವುಗಳನ್ನು ಪರೀಕ್ಷೆಗಾಗಿ ಕಳುಹಲಾಯಿತು.

ಮುಂದೆ ಮತ್ತೊಬ್ಬ ವಿಶೇಷಜ್ಞ ಡಾಕ್ಟರನು ಆ ಮೂರು ಮಕ್ಕಳ ದೇಹಗಳನ್ನೂ ಪರೀಕ್ಷಿಸಿ, ಅವುಗಳು ಬೆಂಕಿಯಿಂದಲೇ ಸತ್ತಿಲ್ಲವೆಂದೂ, ಬೆಂಕಿ ತಗಲುವ ಮೊದಲೇ ಯಾವುದೋ ಹರಿತ ಆಯುಧದಿಂದ ಹೊಡೆದು ಕೊಂದಿರಬೇಕೆಂದೂ ಬೇಲ್ ತನ್ನ ಅಪರಾಧವನ್ನು ಮುಚ್ಚಿಡಲೆಂದು ಬೆಂಕಿಯ ಆಟ ಹೂಡಿರಬೇಕೆಂದೂ ಅಭಿಪ್ರಾಯಪಟ್ಟರು. ಈಗ ಬೇಲಳೇ ನೀಚ ಕೃತ್ಯವನ್ನೆಸಗಿದವಳೆಂದು ಸ್ಪಷ್ಟವಾಯಿತು. ಆದರೆ ಬೇಲಳನ್ನೇ ಹೋಲುತ್ತಿರುವ ಆ ಮೃತ ವ್ಯಕ್ತಿ ಯಾರೆಂದು ಕೊನೆಗೂ ಪತ್ತೆಯಾಗಲಿಲ್ಲ! ಈ ರೀತಿ ಬೇಲಳು ಸತ್ತಳೆಂದು ತಿಳಿದು ಪೋಲೀಸರು ಸಮಾಧಾನ ತಾಳಲೆಂದು ಅವಳು ಹೂಡಿದ ಹಂಚಿಕೆ ನಿಷ್ಫಲವಾಯಿತು.

ಆ ಬಳಿಕ ಬೇಲಳನ್ನು ಜೀವಂತ ಸೆರೆಹಿಡಿದಾಗಲೀ, ಕೊಂದಾಗಲೀ ತಂದುಕೊಟ್ಟವರಿಗೆ ಹೇರಳ ಹಣ ಕೊಡಲಾಗುವುದೆಂದು ಪ್ರಪಂಚದ ಮೂಲೆ ಮೂಲೆಯಲ್ಲಿ ಪ್ರಸಿದ್ಧಗೊಳಿಸಲಾಯಿತು. ಆದರೆ ಮತ್ತೆ ಯಾರೂ ಅವಳನ್ನು ಕಾಣಲಿಲ್ಲ.



ಅರಳಿದ ಪುಷ್ಪ ೪.

ಪತ್ತೇದಾರ ಗಿರಿಧರರಾಯರ ಎರಡನೆಯ ಸಾಹಸ.

# ನಿಗೂಢ ರಹಸ್ಯ.

(ರಹಸ್ಯಮಯ ಪತ್ತೇದಾರಿ ಕತೆ)

["ಕಾರ್ಡಿನಲ್ಲಿ ಕಥೆಗಳು" ವಿಭಾಗದೊಂದಿಗೆ]



ಲೇಖಕ:

ಪಿ. ಮಾಧವರಾಯ ಭಟ್.

ಪ್ರಕಾಶಕರು:

ವಿಶಾಲ ಸಾಹಿತ್ಯ ಮಾಲೆ,

ಮಾರ್ಕೆಟ್ ರಸ್ತೆ ★ ಮೂಡುಬಿದ್ರಿ, ದ. ಕ.

ಬೆಲೆ I ಆಣೆ.

# ಸಂಪಾದಕೀಯ.

ನಿಮ್ಮೆಲ್ಲರ ಪ್ರೋತ್ಸಾಹ, ಸಹಕಾರಗಳಿಂದ ಸಾಹಿತ್ಯಮಾಲೆಯು ಇದೀಗ ತನ್ನ ನಾಲ್ಕನೆಯ ಪ್ರಕಟಣೆಯನ್ನು ನಿಮ್ಮ ಮುಂದಿರಿಸಿದೆ.

ಈ ಪುಸ್ತಕದಿಂದ 'ಕಾರ್ಡಿನಲ್ಲಿ ಕಥೆಗಳು' ಎಂಬ ನವೀನ ವಿಭಾಗವೊಂದನ್ನು ಪ್ರಾರಂಭಿಸಿರುತ್ತೇವೆ. ಹಲವು ಲೇಖಕರು— "ಲೇಖನಗಳಿವೆ. ಕಳುಹಿಸಲೇ? ಪ್ರಕಟಿಸುವಿರಾ?" ಎಂಬುದಾಗಿ ವಿಚಾರಿಸಿ ಪತ್ರ ಬರೆಯುತ್ತಿದ್ದಾರೆ. ಲೇಖನಗಳು ಉತ್ತಮವಾಗಿದ್ದಲ್ಲಿ ಖಂಡಿತ ಪ್ರಕಟಿಸಲಾಗುತ್ತದೆ. ನಾಟಕ ಹಾಸ್ಯಲೇಖನಗಳಿಗೆ ಹೆಚ್ಚಿನ ಗಮನ ಕೊಡಲಾಗುತ್ತದೆ.

ಸಾಹಿತ್ಯಮಾಲೆಯ ವತಿಯಿಂದ ಏರ್ಪಡಿಸಿದ ಕಥಾಸ್ಪರ್ಧೆಗೆ ಈಗಾಗಲೇ ಕರ್ನಾಟಕದ ಮೈಸೂರು, ಉತ್ತರಕನ್ನಡ, ಕೊಡಗು ಮೊದಲಾದ ಕಡೆಗಳಿಂದ ಸುಮಾರು ಮೂವತ್ತಕ್ಕೂ ಮಿಕ್ಕಿ ಕತೆಗಳು ಬಂದಿದ್ದು, ಫಲಿತಾಂಶವನ್ನು ಜೂನ್ ಎರಡನೇ ವಾರದಲ್ಲಿ ಪ್ರಕಟಿಸಲಾಗುತ್ತದೆ. ಸ್ಪರ್ಧೆಗೆ ಬಂದ ಎಲ್ಲಾ ಉತ್ತಮ ಕಥೆಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸಲಾಗುತ್ತದೆ.

ನಮ್ಮ ಪ್ರಕಟಣೆಗಳ ವಿಷಯದಲ್ಲಿ ಓದುಗರಿಂದ ಬರುವ ಅಮೂಲ್ಯ ಸಲಹೆಗಳನ್ನು ಅತ್ಯಾದರದಿಂದ ಸ್ವೀಕರಿಸುತ್ತೇವೆ.

ವಿಶಾಲ ಸಾಹಿತ್ಯಮಾಲೆ, ಮೂಡುಬಿದ್ರಿ.
ದಿನಾಂಕ ೧—೬—೧೯೫೬

ಪಿ. ಮಾಧವರಾಯ ಭಟ್,
ಸಂಪಾದಕ.



# ಕಾರ್ಡಿನಲ್ಲಿ— ಕಥೆಗಳು.

[ಇದೊಂದು ಹೊಸ ವಿಭಾಗ. ಈ ವಿಭಾಗದಲ್ಲಿ ಓದುಗರಿಂದ ಬರುವ ಕಿರುಗತೆಗಳನ್ನೂ ವಿನೋದ ಲೇಖನಗಳನ್ನೂ ಪ್ರಕಟಿಸಲಾಗುತ್ತದೆ. ಕಥೆಗಳು ಚುಟುಕಾಗಿ ಸ್ವಾರಸ್ಯವಾಗಿರಬೇಕು. ಬರಹಗಾರರು ಇದರ ಸದುಪಯೋಗ ಪಡೆಯುವರೆಂದು ಆಶಿಸಲಾಗಿದೆ.
ಸಂಪಾದಕ.]

## ೧. ಸಾಮ್ಯವಾದ?

ಅಮೇರಿಕದ ಧನ ಕುಬೇರರಾದ ರಾಕ್ ಫೆಲರ್ ತನ್ನ ಆಫೀಸಿನಲ್ಲಿ ಕೆಲಸದಲ್ಲಿ ಮಗ್ನರಾಗಿದ್ದರು. ಆಗಲೇ ಸೇವಕನು ಒಂದು ಕಾರ್ಡು ತಂದು ಅವರ ಕೈಗಿತ್ತ. ತಮ್ಮ ಸ್ವಭಾವಕ್ಕನುಸಾರವಾಗಿ, ಎಷ್ಟೇ ಕೆಲಸವಿದ್ದರೂ ಅವರು ಆಗಂತುಕನನ್ನು ಒಳಗೆ ಕರೆದರು.

ಬಂದವನು ಒಬ್ಬ ಹದಿನಾರಾಣೆಯ ಕಮ್ಯುನಿಷ್ಟನಾಗಿದ್ದನು. ಬರುತ್ತಲೇ ಅವನು ಭಂಡವಾಳಶಾಹೀ ಕ್ರಮವನ್ನು ಮನಸ್ವೀ ಜರೆಯತೊಡಗಿದನು. ರಾಕ್ ಫೆಲರ್ ಮೌನವಾಗಿ ಕೇಳುತ್ತಾ ಕುಳಿತರು. ಅವನ ಮಾತು ಮುಗಿಯುತ್ತಲೇ ರಾಕ್ ಫೆಲರ್ ಶಾಂತವಾಗಿ....... "ಸಾಮ್ಯವಾದವೆಂದರೇನು?'' ಎಂದು ಪ್ರಶ್ನಿಸಲು ಆ ವ್ಯಕ್ತಿ ಆವೇಶದಿಂದ ಉತ್ತರವಿತ್ತನು. "ಸಮಾಜದಲ್ಲಿರುವ ಸಂಪತ್ತಿನ ಸಮಾನ ವಿತರಣ''.

ರಾಕ್ ಫೆಲರ್ ಕರೆಗಂಟೆ ಬಾರಿಸಿ, ತಮ್ಮ ಕಾರ್ಯದರ್ಶಿಯನ್ನು ಕರೆದು ಈಗ ತಮ್ಮ ಒಟ್ಟು ಸಂಪತ್ತು ಎಷ್ಟಿದೆಯೆಂದು ಪ್ರಶ್ನಿಸಿದರು. ತುಸು ಹೊತ್ತಿನಲ್ಲಿ ಕಾರ್ಯದರ್ಶಿ ಒಂದು ಲೆಕ್ಕವೊಪ್ಪಿಸಿದ. "ಇದನ್ನು ವಿಶ್ವದ ಜನಸಂಖ್ಯೆಯಿಂದ ಭಾಗಿಸಿ, ಪ್ರತಿಯೊಬ್ಬನ ಪಾಲಿಗೆ ಎಷ್ಟು ಹಣ ಬರುತ್ತದೆಂದು ತಿಳಿಸು'' ಎಂದರು. ಕಾರ್ಯದರ್ಶಿ ಲೆಕ್ಕಮಾಡಿ ತಿಳಿಸಿದ. "ಒಂದು ಡಾಲರ್ ಒಂಭತ್ತು ಸೆಂಟ್ಸ್''.

ರಾಕ್ ಫೆಲರ್ ಶಾಂತವಾಗಿ ತಮ್ಮ ಕೋಶಾಧ್ಯಕ್ಷನ ಹೆಸರಿಗೆ ಒಂದು

ಪತ್ರ ಬರೆದು ಆ ಕಾಪ್ರೆಡ್ ಮಹಾಶಯನ ಕೈಯಲ್ಲಿಡುತ್ತ........"ನಿಮ್ಮ ಪಾಲಿನ ಒಂದು ಡಾಲರ್ ಒಂಭತ್ತು ಸೆಂಟ್ಸ್ ಕೊಂಡುಹೋಗಿರಿ. ಇನ್ನು ನಮಗೂ ನಿಮಗೂ ಯಾವ ವೈಮನಸ್ಸೂ ಇರಲಾರದಷ್ಟೇ'' ಎಂದರು.

---

## ೨. ಯೋಗ್ಯ ಉಪಾಯ.

ಉಗಿಬಂಡಿಯಲ್ಲಿ ಪ್ರಯಾಣಿಸುತ್ತಿದ್ದ ಇಬ್ಬರು ಹೆಂಗಸರೊಳಗೆ ಜಗಳ ಪ್ರಾರಂಭವಾಗಿತ್ತು. ಕಿಟಕಿ ತೆರೆದಿಡಬೇಕೆಂದೊಬ್ಬಳು— ಮುಚ್ಚಬೇಕೆಂದು ಮತ್ತೊಬ್ಬಳು ಹೀಗೆ ಇಬ್ಬರೂ ಹಟಹಿಡಿದಿದ್ದರು. ಕೊನೆಗೆ ಗದ್ದಲ ಕೇಳಿ ಗಾರ್ಡ್ ಅಲ್ಲಿಗೆ ಬಂದ. "ಕಿಟಕಿ ತೆರೆದರೆ ನನಗೆ ಶೀತವಾಗುವುದು ಖಂಡಿತ. ಜ್ವರ ಬಂದು ನಾನು ಸತ್ತರೆ ಏನು ಮಾಡಬೇಕು?" ಎಂದು ಒಬ್ಬಳು ಕೂಗಿದಳು. "ಕಿಟಕಿ ಮುಚ್ಚಿದರೆ ಉಸಿರು ಕಟ್ಟಿ ನಾನು ಸತ್ತರೆ ಏನು ಮಾಡಬೇಕು?'' ಎಂದು ಮತ್ತೊಬ್ಬಳು ಕಿರುಚಿದಳು. ಗಾರ್ಡನಿಗೆ ಏನೂ ತೋಚದಾಯ್ತು. ಆದರೆ ಗಾಡಿಯಲ್ಲಿ ಕುಳಿತ ಪ್ರಯಾಣಿಕನೊಬ್ಬ ಒಂದು ಉಪಾಯ ಸೂಚಿಸಿದ— "ಮೊದಲು ಕಿಟಕಿ ತೆರೆಯಿರಿ; ಒಬ್ಬಳು ಸಾಯಲಿ; ಆ ಮೇಲೆ ಮುಚ್ಚಿರಿ, ಇನ್ನೊಬ್ಬಳು ಸಾಯುವಳು. ಆ ಬಳಿಕ ಒಂದಿಷ್ಟು ಶಾಂತಿ ನೆಲಸಬಹುದು!''

ಗಾರ್ಡನಿಗೆ ಅದು ಸರಿಯೆಂದು ಕಂಡಿತು.

---

## ೩. ಬರಿದಾದ ತಲೆ!

ಉಪಾಧ್ಯಾಯರೊಬ್ಬರು ರಕ್ತಪರಿಚಲನೆಯ ಕುರಿತು ವಿವರಿಸುತ್ತಿದ್ದರು...."ನಾನು ತಲೆ ಕೆಳಗಾಗಿ ನಿಂತುಕೊಂಡರೆ ರಕ್ತವು ನನ್ನ ತಲೆಯ ಕಡೆ ಹರಿಯುವುದಲ್ಲವೇ?'' ಎಂದು ಚಿಕ್ಕ ಹುಡುಗನೊಬ್ಬನನ್ನು ಪ್ರಶ್ನಿಸಿದರು.

"ಹೌದು ಸರ್'' ಹುಡುಗ ಉತ್ತರಿಸಿದ.

"ಹಾಗಿದ್ದರೆ ನಾನು ಕಾಲ ಮೇಲೆ ನಿಂತಾಗ ರಕ್ತವು ನನ್ನ ಕಾಲುಗಳ ಕಡೆ ಅದೇಕೆ ಹರಿಯುವುದಿಲ್ಲ?'' –ಉಪಾಧ್ಯಾಯರು ಪ್ರಶ್ನಿಸಿದರು.

ಹುಡುಗ ಕೂಡಲೇ ಉತ್ತರಿಸಿದ —"ಏಕೆಂದರೆ ನಿಮ್ಮ ಕಾಲುಗಳು ತಲೆಯಂತೆ- ಬರಿದಾಗಿಲ್ಲ''.

---

ಅನುವಾದಕ: ಬಳ್ಕೂರು ಸುಬ್ರಾಯ ಅಡಿಗ, ಗಂಗೊಳ್ಳಿ.

## ೪. ಚತುರ ಚಿಕ್ಕಪ್ಪ.

ಅಂದು ಮಧ್ಯರಾತ್ರಿಯಾಗಿತ್ತು. ಚಿಕ್ಕಪ್ಪ ಮನೆಗೆ ಬರುವಾಗ ಚಿಕ್ಕಮ್ಮ ಅವರಿಗಾಗಿ ಕಾದಿದ್ದವರು ಒಳಗೆ ಹೋಗಿ ಊಟಕ್ಕೆ ಮಣೆ ಹಾಕಿದರು.

ಊಟ ತೀರಿಸಿ ಕೋಣೆಗೆ ಹೋದಾಗ ಅಲ್ಲೊಬ್ಬ ಕಳ್ಳ ಅಡಗಿದ್ದ. ಆತನನ್ನು ಕಂಡ ಚಿಕ್ಕಪ್ಪ ಗಡಿಬಿಡಿ ಮಾಡಲಿಲ್ಲ. ನಿಧಾನವಾಗಿ ಚಿಕ್ಕಮ್ಮನನ್ನು ಕರೆದರು.

ಚಿಕ್ಕಮ್ಮ "-ಏನೂಂದ್ರೆ'' ಎನ್ನುತ್ತಾ ಒಳಗೆ ಕಾಲಿರಿಸಿದರು.

ಅವರನ್ನು ಮಂಚದಲ್ಲಿ ಕುಳ್ಳಿರಿಸಿ, "ಹೌದೇನೇ. ನಮ್ಮ ಮುಂದಿನ ಮಗುವಿಗೆ ಏನೂಂತ ಹೆಸರಿಡುವ?'' ಎಂದು ಕೇಳಿದರು.

"ಛೀ ನಿಮಗೇನಾಗಿದೆ ಇಂದು?''

"ಏನೂ ಇಲ್ಲ ಕಣೇ, ನಮಗೆ ಮುಂದಿನ ಸಲ ಗಂಡು ಮಗು ಹುಟ್ಟುತ್ತದೆ''.

"ಸಾಕು, ಸುಮ್ಮನಿರೀಂದ್ರೆ''.

"ಯಾಕೆ? ಆ ಗಂಡು ಮಗುವಿಗೆ ನಾನು ಹೈದರ್ ಅಂತ ಹೆಸರಿಡುತ್ತೇನೆ''

''ಅಯ್ಯೋ, ನಿಮಗೇನಾಗಿದೆ? ಹಿಂದುಗಳು ಮುಸಲ್ಮಾನರ ಹೆಸರಿಡುತ್ತಾರೆಯೇ?''

''ಅಯ್ಯೋ, ಮಂಕೆ! ಹೈದರ್ ಎಂಬ ಹೆಸರು ಎಷ್ಟು ಚೆನ್ನಾಗಿದೆ! ಹುಡುಗ ಆಡಲು ಹೊರಗೆ ಹೋದರೆ ಏ ಹೈದರ್, ಏ ಹೈದರ್ ಎಂದು ಕರೀತೇನೆ''— ಎಂದು ಗಟ್ಟಿಯಾಗಿ ಕರೆದರು.

ಚಿಕ್ಕಮ್ಮ ಬೆರಗಾಗಿ ನೋಡುತ್ತಿದ್ದರು.

ಅಷ್ಟರಲ್ಲಿ ಪಕ್ಕದ ಮನೆಯ ಹೆಡ್ ಕಾನ್‌ಸ್ಟೇಬಲ್ ಹೈದರ್‌ಖಾನ್ ಕರೆದುದನ್ನು ಕೇಳಿ ಬಂದರು. ಚಿಕ್ಕಪ್ಪ ನಿಧಾನವಾಗಿ ಹೊರಗೆ ಬಂದು ಕಳ್ಳನನ್ನು ತೋರಿಸಿದರು.

"ರಸಿಕ'' ಪತ್ರಿಕೆ.

---

# ನಿಗೂಢ ರಹಸ್ಯ.

## (ರಹಸ್ಯಮಯ ಪತ್ತೇದಾರಿ ಕತೆ)

ಡಾ। ರಾಯ್ ಮಂಗಳೂರಿನ ತನ್ನ ಬಂಗಲೆಯಲ್ಲಿ ಕುಳಿತುಕೊಂಡು ಸಿಗರೇಟನ್ನು ಸೇದಿ ಹೊಗೆಯನ್ನು ಸುರುಳಿ ಸುರುಳಿಯಾಗಿ ಬಿಡುತ್ತಾ ಬರಲಿರುವ ಸುಖದ ಸ್ವಪ್ನ ಸಾಮ್ರಾಜ್ಯದಲ್ಲಿ ವಿಹರಿಸುತ್ತಿದ್ದರು. ಮೇಜಿನ ಮೇಲೆ ಅರೆ ತೆರೆದಿಟ್ಟ ಪುಸ್ತಕಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ಸಿಗರೇಟಿನ ಬೂದಿಯನ್ನು "ಆಷ್ ಟ್ರೇ"ಯಲ್ಲಿ ಹಾಕುವುದೂ ಅವರಿಗೆ ಮರೆತು ಹೋದಂತಿತ್ತು.

"ಟ್ರೀನ್s....ಟ್ರೀನ್s.... ." ಕರೆ ಗಂಟೆ (Calling Bell)ಯ ವಿಲಕ್ಷಣ ಸದ್ದು ಅವರನ್ನು ಭಾವ ಸಮಾಧಿಯಿಂದ ಹೊಡೆದೆಬ್ಬಿಸಿತು. ಕೈಯಲ್ಲಿದ್ದ ಅರ್ಧ ಸೇದಿದ ಸಿಗರೇಟನ್ನು "ಆಷ್ ಟ್ರೇ"ಯಲ್ಲಿ ಕುಕ್ಕಿ, ತನ್ನಷ್ಟಕ್ಕೆ ಗೊಣಗುಟ್ಟುತ್ತಾ ಬಾಗಿಲನ್ನು ತೆರೆದರು. ಕೂಡಲೇ ಪೋಸ್ಟ್ ಮೇನ್ "ಟೆಲಿಗ್ರಾಮ್, ಸರ್" ಎಂದು ಒದರಿ, ಅವರ ರುಜುವನ್ನು ಪಡೆದುಕೊಂಡು "ಟೆಲಿಗ್ರಾಮು"ನ್ನು ಅವರ ಕೈಗಿತ್ತು ಬಂದಂತೆ ತೆರಳಿದ. ಡಾಕ್ಟರರು ಕುತೂಹಲದಿಂದ "ಟೆಲಿಗ್ರಾಮ್" ಒದತೊಡಗಿದರು.

"ಮುಂಬಯಿಯಿಂದ ಹೊರಟಿದ್ದೇನೆ. ೯ ಗಂಟೆಯ ವಿಮಾನದಲ್ಲಿ ಬರುತ್ತೇನೆ. ಬಜ್ಪೆ ನಿಲ್ದಾಣಕ್ಕೆ ಬರುವುದು". —ರೀಟಾ.

ಡಾಕ್ಟರರ ಮುಖ ಹಿಗ್ಗಿ ಹೀರೆಕಾಯಿಯಾಯಿತು. ಕೈಗಡಿಯಾರ ನೋಡಿಕೊಂಡರು. ಗಂಟೆ ೮॥ ದಾಟಿತ್ತು. ಬಜ್ಪೆಗೆ ಅರ್ಧ ಗಂಟೆಯ ದಾರಿಯಿತ್ತು. ಡಾ। ರಾಯ್ ಇದ್ದ ಡ್ರೆಸ್ಸನ್ನೇ ಸರಿಪಡಿಸಿಕೊಂಡು ವರಾಂಡದಲ್ಲಿ ನಿಲ್ಲಿಸಿದ್ದ ತನ್ನ "ಬ್ಲ್ಯಾಕ್' ಕಾರನ್ನು ಹೊರತಂದು, ವೇಗದಿಂದ ಬಜ್ಪೆಯ ಕಡೆ ಹೊರಟರು. ದುರದೃಷ್ಟವಶಾತ್ ಅರ್ಧ ದಾರಿಯಲ್ಲಿ ಬರುತ್ತಿರುವಾಗ ಕಾರಿನಲ್ಲಿ ಪೆಟ್ರೋಲ್ ಮುಗಿಯುತ್ತಾ ಬಂದಿರುವುದು ಅವರ ಗೋಚರಕ್ಕೆ ಬಂದಿತು. ಅವರಿಗೆ ಸಿಟ್ಟು ತಡೆಯದಾಯ್ತು. "ವಿಘ್ನೇಶ್ವರನ ಮದುವೆಗೆ

ನೂರೆಂಟು ವಿಘ್ನ'' ಎಂಬಂತೆ, ಸಿಟ್ಟಿನಿಂದ ಕಾರನ್ನು ಹಿಂತಿರುಗಿಸಿ ಹತ್ತಿರದ "ಪೆಟ್ರೋಲ್ ಬಂಕಿ''ನ ಕಡೆಗೆ ಹೊರಟರು. "ಬಂಕ್''ನಲ್ಲಿ ಆಳುಗಳ್ಯಾರೂ ಬಂದಿರಲಿಲ್ಲ. ಡಾಕ್ಟರರು ಆಳುಗಳನ್ನು ಶಪಿಸುತ್ತಾ ಕಾರಿನಿಂದಿಳಿದು "ಬಂಕಿನ'' ಆಫೀಸಿನ ಕಡೆಗೆ ಹೊರಟರು. ಅವರು ಅತ್ತ ಸರಿದಿದ್ದರೋ ಇಲ್ಲವೋ ಭಯಂಕರ ಸದ್ದಿನಿಂದ ಅವರ "ಬ್ಯೂಕ್'' ಕಾರು ನುಚ್ಚು ನೂರಾಗಿ ಸಿಡಿದುಹೋಯಿತು. ಕಾರಿನಿಂದ ಸಿಡಿದ ಕನ್ನಡಿಯ ತುಂಡುಗಳು ಡಾಕ್ಟರರ ಮೈ ಕೈಗಳಿಗೆ ತಾಗಿ ರಕ್ತ ಸುರಿಯಹತ್ತಿತು. ಕಾರಿನ ಯಂತ್ರ ಬೆಂಕಿಹಿಡಿದು ಉರಿಯಲಾರಂಭಿಸಿತು. ಕಾರಿನ ಅಕಸ್ಮಾತ್ ಸ್ಫೋಟನದ ಸದ್ದಿನಿಂದ ಗಾಭರಿಗೊಂಡ ಜನಸಮುದಾಯ ಆ ಕಡೆಗೆ ಧಾವಿಸಹತ್ತಿತು. ಅತ್ತಿತ್ತ ನೋಡುವುದರೊಳಗೆ ಅಲ್ಲಿ ಚಿಕ್ಕದೊಂದು ಜನಜಾತ್ರೆಯೇ ನೆರೆದಿತ್ತು.

ಪೋಲೀಸರಿಗೆ ಇದರ ವಿಷಯ "ಫೋನಿ''ನಲ್ಲಿ ತಿಳಿಸಲಾಗಿ "ಪೋಲೀಸ್ ಜೀಪಿ''ನಲ್ಲಿ ಇನ್‌ಸ್ಪೆಕ್ಟರ್ ರಮಾನಂದರಾಯರು ಸಿಬಂಧಿ ಸಮೇತರಾಗಿ ಧಾವಿಸಿ ಬಂದರು. ಪೋಲೀಸರು ಕ್ರಮಪ್ರಕಾರ ತನಿಖೆ ನಡೆಸಿ, ಸಿಡಿಮದ್ದಿನಿಂದ ಕಾರು ಸ್ಫೋಟನಗೊಂಡಿದೆಯೆಂಬುದಾಗಿ ಅಭಿಪ್ರಾಯಪಟ್ಟರು. ಆದರೆ ಇನ್‌ಸ್ಪೆಕ್ಟರ್ ರಮಾನಂದರಾಯರಿಗೆ ಅದರ ಮೂಲ ಕಾರಣವನ್ನು ಕಂಡುಹಿಡಿಯದೆ ಸಮಾಧಾನವಿರಲಿಲ್ಲ. ಆದುದರಿಂದ ಅವರು ಕೂಡಲೇ "ಫೋನ್'' ಮಾಡಿ *ಸಿ.ಐ.ಡಿ. ಇನ್‌ಸ್ಪೆಕ್ಟರ್ ಗಿರಿಧರರಾಯರನ್ನು ಬರಮಾಡಿಕೊಂಡರು. ಪತ್ತೇದಾರ ಗಿರಿಧರರಾಯರು ಬಂದವರೇ ಕಾರು ಅಪಘಡವ ಸ್ಥಳವನ್ನು ಸೂಕ್ಷ್ಮವಾಗಿ ಪರಿಶೀಲಿಸಹತ್ತಿದರು. ಹುಡುಕುತ್ತಿದ್ದಂತೆ ಅವರ ಕೈಗೆ ಸ್ವದೇಶಿ ಸಿಡಿಬಾಂಬಿನ ಕೆಲವು ತುಣುಕುಗಳು ಸಿಗಲು ಅವರ ಮುಖವು ಪ್ರಸನ್ನವಾಯಿತು. ಡಾಕ್ಟರರ ಮೇಲಿನ ಸೇಡಿನಿಂದ ಯಾವನೋ ಒಬ್ಬ ಅಜ್ಞಾತ ವ್ಯಕ್ತಿಯು ಅವರ ಕಾರಿನಲ್ಲಿ ಸ್ವದೇಶಿ "ಟೈಂಬಾಂಬ''ನ್ನು ಇಟ್ಟು ಅದರಿಂದ ಅವರನ್ನು ನಾಶಗೊಳಿಸಲು ಯತ್ನಿಸಿರಬಹುದೆಂದು ಅವರು ತರ್ಕಿಸಿದರು. ಅನಂತರ ಅವರು ಚಿಕಿತ್ಸೆಯನ್ನು ಪಡೆಯುತ್ತಿದ್ದ ಡಾಕ್ಟರ್ ರಾಯ್‌ರನ್ನು ಭೆಟ್ಟಿಯಾಗಲು ಅವರಿದ್ದ ಆಸ್ಪತ್ರೆಗೆ ತೆರಳಿದರು. ಡಾಕ್ಟರ್ ರಾಯ್ ಪತ್ತೇ

*ಪತ್ತೇದಾರ ಗಿರಿಧರರಾಯರ ಮೊದಲನೆಯ ಸಾಹಸ "ಚತುರ ಚೋರತ್ರಯ" ಪತ್ತೇದಾರಿ ಕತೆ. ಲೇಖಕ: ಪಿ. ಮಾಧವರಾಯ ಭಟ್. ವಿಶಾಲ ಸಾಹಿತ್ಯಮಾಲೆಯ ಒಂದನೆಯ ಪ್ರಕಟಣೆ. [ಪ್ರತಿಗಳು ತೀರಿವೆ] . ದ್ವಿತೀಯ ಮುದ್ರಣ...... ನಿರೀಕ್ಷಿಸಿರಿ.

ಡಾರನ್ನು ಕಾಣುತ್ತಲೇ ಸಂತೋಷಗೊಂಡರು. ಅವರಿಗೆ ಇದಕ್ಕೆ ಮೊದಲೇ ಪರಿಚಯವಿದ್ದುದರಿಂದ ಪರಿಚಯ ಮಾಡಿಕೊಳ್ಳುವ ಅಗತ್ಯವಿದ್ದಿರಲಿಲ್ಲ. ಡಾಕ್ಟರರ ಮೈಕೈಗಳಿಗೆ "ಬೇಂಡೇಜ್" ಕಟ್ಟಿದ್ದರೂ ಅವರು ಉಲ್ಲಸಿತರಾಗಿದ್ದರು. ಇಬ್ಬರೂ ಒಬ್ಬರಿಗೊಬ್ಬರು ನಮಸ್ಕರಿಸುತ್ತಾ ಆಸೀನರಾದರು. ಗಿರಿಧರರಾಯರು ಕಿಸೆಯಿಂದ ಸಿಗರೇಟೊಂದನ್ನು ತೆಗೆದು ಅದಕ್ಕೆ ಅಗ್ನಿಸಂಪರ್ಕ ಮಾಡುತ್ತಾ ಡಾಕ್ಟರರನ್ನುದ್ದೇಶಿಸಿ,

"ಡಾಕ್ಟರ್, ನೀವು ಇಂದು ಬೆಳಿಗ್ಗೆ ಕಾರಿನಲ್ಲಿ ಎಲ್ಲಿಗೆ ಹೊರಟಿದ್ದಿರಿ?"

"ಮುಂಬಯಿಯಿಂದ ಮಿಸ್ ರೀಟಾ ಎಂಬವರೊಬ್ಬರು ಬೆಳಗ್ಗಿನ ವಿಮಾನದಲ್ಲಿ ಬರುವವರಿದ್ದುದರಿಂದ, ಬಜ್ಪೆ ವಿಮಾನ ನಿಲ್ದಾಣಕ್ಕೆ ಹೊರಟಿದ್ದೆ. ಅಷ್ಟರಲ್ಲಿ------"

"ನಿಮ್ಮ ಮನೆಯಲ್ಲಿ ಯಾ, ದಾರಿಯಲ್ಲಿ ಯಾರಾದರೂ ನಿಮ್ಮೊಡನೆ ಮಾತನಾಡಲು ಸಿಕ್ಕಿದರೇ?"

"ಇಲ್ಲ, ಈ ದಿನ ಬೆಳಗ್ಗೆ ನಾನು ಎದ್ದ ಮೇಲೆ ಯಾರೂ ನನ್ನನ್ನು ಭೇಟಿಯಾದುದೇ ಇಲ್ಲ".

"ನೀವು ನಿಮ್ಮ ಕಾರನ್ನು ಮನೆಯ ಹೊರಗಡೆ ಇಡುತ್ತೀರಾ?"

"ಇಲ್ಲ, ಕಾರನ್ನು ಮನೆಯ ವರಾಂಡದಲ್ಲಿ ನಿಲ್ಲಿಸುತ್ತೇನೆ. ಮತ್ತು ಘೂರ್ಖಾ ಸಿಪಾಯಿಯೊಬ್ಬ ಕಾವಲಿರುವುದರಿಂದ ಅನುಮಾನಾಸ್ಪದ ವ್ಯಕ್ತಿಗಳು ಬರುವ ಸಂದರ್ಭವೇ ಇಲ್ಲ".

"ಸರಿಯಾಗಿ ಜ್ಞಾಪಿಸಿಕೊಳ್ಳಿ. ಸಾಮಾನ್ಯ ವಿಷಯಗಳೆಂದು ಕಡೆಗಾಣಿಸಬೇಡಿ".

ಹಾಂ! ಅಂದ ಹಾಗೆ, "ಟೆಲಿಗ್ರಾಮ್" ಕೊಡಲಿಕ್ಕೆಂದು ಪೋಸ್ಟ್‌ಮೇನನೊಬ್ಬ ಬಂದಿದ್ದ...."

"ಟೆಲಿಗ್ರಾಮ್ ಏನೆಂದು ಬಂದಿತ್ತು ತಿಳಿಸಬಹುದೇ?"

"ಓಹೋ, ಅದಕ್ಕೇನು. ಆದೇ ಹೇಳಿದೆನಲ್ಲಾ, ಮಿಸ್ ರೀಟಾ ಮುಂಬಯಿಯಿಂದ ಬರುತ್ತೇನೆಂಬುದಾಗಿ ತಿಳಿಸಿದ್ದಳು".

"ನಿಮ್ಮ ಕಾರು ಅಪಘಾತವಾದುದು ಮಿಸ್ ರೀಟಾಳಿಗೆ ತಿಳಿದಿದೆಯೇ?"

"ಇಲ್ಲ, ಏಕೆಂದರೆ ವಿಮಾನ ಬಂದ ನಂತರ ನಿಲ್ದಾಣದ ಅಧಿಕಾರಿಯನ್ನು "ಫೋನಿ'ನಲ್ಲಿ ವಿಚಾರಿಸಲಾಗಿ, ಬೆಳಗ್ಗಿನ ವಿಮಾನದಲ್ಲಿ ಹೆಂಗಸರಾರೂ ಬಂದಿ

ಲ್ಲವೆಂಬುದಾಗಿ ತಿಳಿಸಿರುತ್ತಾರೆ''.

"ಹಾಗಾದರೆ ನಿಮ್ಮ ವಿರೋಧಿಗಳು ಸುಳ್ಳು ಸುದ್ದಿಯನ್ನು ಕೊಟ್ಟಿರಬಹುದೇ?''

''ಹಾಗೂ ಇರಬಹುದು. ನನಗೇನೂ ಹೊಳೆಯುವುದೇ ಇಲ್ಲ''.

''ನಿಮ್ಮ ವ್ಯವಹಾರಗಳಲ್ಲಿ ಯಾರಾದರೂ ಎದುರಾಳಿಗಳು ಇದ್ದಾರೆಯೇ?''

''ಇಲ್ಲವೆಂದೇ ಹೇಳಬಹುದು. ಇದ್ದರೂ ಕೊಲೆಗೈಯುವಂತವರಲ್ಲ; ಆದರೆ ಹಲವು ವರ್ಷಗಳ ಹಿಂದೆ ಓರ್ವ ಹೆಂಗಸಿನ ವಿಷಯದಲ್ಲಿ ನನಗೂ ಪ್ರೊಫೆಸರ್ ಅರ್ಮುಗಂ ಎಂಬವರಿಗೂ ಕಚ್ಚಾಟವಾಗಿ ನನ್ನನ್ನು ಈ ಲೋಕದಲ್ಲಿ ಇಲ್ಲದಂತೆ ಮಾಡುವೆನೆಂಬುದಾಗಿ ಶಪಥ ಮಾಡಿದ್ದರು. ಆದರೆ ಎರಡು ವರ್ಷಗಳಿಂದೀಚೆಗೆ ಅವರ ಸಮಾಚಾರವೇ ನನಗೆ ತಿಳಿದಿಲ್ಲ''.

ಪತ್ತೇದಾರರು ಡಾಕ್ಟರರನ್ನು ತುಸು ವಿಶ್ರಾಂತಿ ಪಡೆಯುವಂತೆ ಸೂಚಿಸಿ ತನ್ನ ಮನೆಯ ಕಡೆಗೆ ಹೊರಟರು. ಡಾಕ್ಟರರ ಹೇಳಿಕೆಯಿಂದ ಅಜ್ಞಾತ ಶತ್ರುವು ಡಾಕ್ಟರರ ಕೊಲೆಮಾಡುವ ಸಲುವಾಗಿ ಕಾರಿನಲ್ಲಿ ''ಟೈಂಬಾಂಬ''ನ್ನು ಇಟ್ಟು ''ಟೆಲಿಗ್ರಾಮಿ''ನ ನೆಪದಿಂದ ಅವರನ್ನು ಕಾರಿನಲ್ಲಿ ಕುಳ್ಳಿರಿಸಿ ಕಾರು ಸಹಿತ ನಾಶಮಾಡುವ ಹಂಚಿಕೆಮಾಡಿದುದು ಸ್ಪಷ್ಟವಾಗುತ್ತಿತ್ತು. ಶತ್ರುಗಳ ಅಪಾರ ವಿದ್ವತ್ತಿಗೆ ಪತ್ತೇದಾರರು ತಲೆದೂಗಿದರು.

* * * * * * * *

ಡಾಕ್ಟರ್ ರಾಯ್‌ರಿಗೂ, ಮಿಸ್ ರಿಟಾಳಿಗೂ ಅದೇ ತಿಂಗಳಲ್ಲಿ ಮದುವೆ ನಿಶ್ಚಯವಾಗಿತ್ತು. ಅದೊಂದು ಶುಭದಿನದಲ್ಲಿ ರಿಜಿಸ್ಟ್ರಾರ್ರ ಸಮ್ಮುಖದಲ್ಲಿ, ಬಂಧುಮಿತ್ರರ ಕೂಡುವಿಕೆಯಲ್ಲಿ ಮದುವೆಯು ನಡೆಯುವುದೆಂದು ಏರ್ಪಾಡಾಗಿತ್ತು. ಮದುವೆಗೆ ನಾಲ್ಕು ದಿನಗಳಿಗೆ ಮೊದಲು ರೀಟಾ ಮುಂಬಯಿಯಿಂದ ವಿಮಾನದಲ್ಲಿ ಹಕ್ಕಿಯಂತೆ ಹಾರಿ ಬಂದಿದ್ದಳು ಡಾಕ್ಟರರಿಗಾದ ಚಿಕ್ಕ ಪುಟ್ಟ ಗಾಯಗಳು ಗುಣಮುಖವಾಗಿದ್ದುವು

ಮದುವೆಗೆ ಎರಡು ದಿನ ಉಳಿದಿತ್ತು. ಅಂದು ಸಂಜೆ ಡಾಕ್ಟರರು ಚಿಕಿತ್ಸೆಗಾಗಿ ಶ್ರೀಮಂತ ರೋಗಿಯೊಬ್ಬರಲ್ಲಿ ಹೋಗಿದ್ದರಿಂದ ಸಂಜೆಯ ಹೊತ್ತಿನಲ್ಲಿ ಗಾಳಿ ಸಂಚಾರಕ್ಕೆ ರೀಟಾ ಓರ್ವಳೇ ಹೊರಟಿದ್ದಳು. ಆಧುನಿಕ ವೇಷ ಭೂಷಣಗಳಿಂದಲಂಕೃತಳಾಗಿ ಬಳ್ಳಿಯಂತೆ ಬಳುಕುತ್ತಾ ದಾರಿಯಲ್ಲಿ ಗಂಭೀರ

ವಾಗಿ ಸಾಗುತ್ತಿದ್ದಳು ರೀಟಾ. ಮನಸ್ಸಿನಲ್ಲಿ ಯೋಚನೆ ನಡೆದೇ ಇತ್ತು — ಅವಳ ರೂಪಕ್ಕೆ ಮರುಳಾಗಿ ಅವಳಿಗಾಗಿ ಕಚ್ಚಾಡಿಕೊಂಡವರೆಷ್ಟೋ ಮಂದಿ. ಹಲವು ವರ್ಷಗಳ ಹಿಂದೆ ಅವಳನ್ನು ಮದುವೆಮಾಡಿಕೊಳ್ಳುವ ಸಲುವಾಗಿ ಡಾಕ್ಟರ್ ರಾಯರಿಗೂ, ಪ್ರೊಫೆಸರ್ ಅಮೃಗಂರಿಗೂ ಭಯಂಕರ ರೀತಿಯಲ್ಲಿ ಕಾದಾಟ ನಡೆದು, ಡಾಕ್ಟರರು ಪ್ರೊಫೆಸರರನ್ನು ಊರಿನಿಂದ ಓಡಿಹೋಗು ವಂತೆ ಮಾಡಿ.......

"....ಡಾಕ್ಟರನ ಸಂಗಡ ವಿವಾಹವಾಗುತ್ತೇನೆಂದು ಕನಸಿನ ಮಂಡಿಗೆ ತಿನ್ನದಿರು. ಮದುವೆಯ ದಿನ ನಿನ್ನ ಸಮ್ಮುಖದಲ್ಲಿ ಡಾಕ್ಟರನನ್ನು ಕೊಲ್ಲುತ್ತೇನೆ. ಸೇಡಿನ ರುಚಿ ತಿಳಿದಿರು.....ನೆನಪಿರಲಿ......."

"ಹಾಃ!"–ರೀಟಾ ಭಾವಸಮಾಧಿಯಿಂದೆದ್ದು ಹಿಂದಿರುಗಿ ನೋಡಿದಳು. ಯಾರೂ ಇಲ್ಲ! ಸುತ್ತ ಮುತ್ತ ನೋಡಿದಳು. ಯಾರೂ ಇಲ್ಲ! ಹಾಗಾದರೆ ಆಕಾಶವಾಣಿಯಂತೆ ಮೇಲಿನ ಗಂಭೀರವೂ, ಭಯಂಕರವೂ ಆದ ಮಾತುಗಳನ್ನು ಹೇಳಿದವರು ಯಾರು? ರೀಟಾಳಿಗೆ ಸಮಸ್ಯೆ ಬಗೆಹರಿಯಲಿಲ್ಲ. ಹತ್ತು ಹೆಜ್ಜೆಗಳ ಹಿಂದಿನಿಂದ ಬರುತ್ತಿದ್ದ ಪೋಸ್ಟ್‌ಮೇನನೊಬ್ಬ ಅವಳನ್ನು ದಾಟಿ ಹೋದಾಗ, ಅವಳಿಗೆ ತನ್ನ ಮುಂದಿನ ಕಾರ್ಯಕ್ರಮ ಹೊಳೆದಂತಾಯಿತು. ಅವಳು ಕೂಡಲೇ ಹತ್ತಿರದ "ಪಬ್ಲಿಕ್ ಟೆಲಿಫೋನ್ ಬೂತಿ"ಗೆ ಹೋಗಿ ತಾನು ಕೇಳಿದ ಮಾತುಗಳನ್ನು ಸಂಕ್ಷೇಪವಾಗಿ ತನ್ನ ಭಾವೀ ಪತಿ ಡಾಕ್ಟರರಿಗೂ, ಪತ್ತೇದಾರ ಗಿರಿಧರರಾಯರಿಗೂ, ಇನ್‌ಸ್ಪೆಕ್ಟರ್ ರಮಾನಂದರಾಯರಿಗೂ ತಿಳಿಸಿದಳು.

ರೀಟಾ ದಾರಿ ಸಾಗುತ್ತಿದ್ದಂತೆ ಅದೇ ವಿಷಯವಾಗಿ ಯೋಚಿಸುತ್ತಿದ್ದಳು. ಹಿಂದಿನಿಂದ ಬರುತ್ತಿದ್ದ ಸೈಕಲ್ ಸವಾರನೊಬ್ಬನು ತನ್ನ ದಾರಿ ಗಡ್ಡವಾಗಿ ನಡೆಯುತ್ತಿರುವ ಆ ಸುಂದರಿಯನ್ನು ತನ್ನ ಸೈಕಲಿನ 'ಬೆಲ್'ನಿಂದ ಎಚ್ಚರಿಸಿ ಮತ್ತೆ ಮುಂದರಿದ. ರೀಟಾಳಿಗೆ ನಾಚಿಕೆಯಾಯ್ತು. ತಾನು ಹೀಗೆ ದಾರಿಯಲ್ಲಿ ನಡೆಯುತ್ತಾ ಹೋದರೆ ಏನಾದರೊಂದು ಅಪಘಾತವಾಗುವುದು ಖಂಡಿತವೆಂಬುದಾಗಿ ಎಣಿಸಿ ರೀಟಾ ಕೂಡಲೇ ಮನೆಗೆ ಹಿಂತಿರುಗಿದಳು.

* * * * * * * *

ಮದುವೆಯ ದಿನ ಬಂದೇ ಬಂದಿತು. ಸ್ವತಹ ಡಿ. ಎಸ್. ಪಿ. ಸಾಹೇಬರು ತನ್ನ ಸಿಬಂಧಿಯೊಂದಿಗೆ ಡಾಕ್ಟರರ ಮನೆಯಲ್ಲಿ ಹಾಜರಿದ್ದರು. ಪತ್ತೇ

ದಾರ ಗಿರಿಧರರಾಯರು ಕಣ್ಣಲ್ಲಿ ಎಣ್ಣೆ ಹಾಕಿ ಅನುಮಾನಾಸ್ಪದವಾದ ಪ್ರತಿಯೊಂದು ವಸ್ತುವನ್ನೂ ಪರಿಶೀಲಿಸುತ್ತಿದ್ದರು. ಹತ್ತಿಪ್ಪತ್ತು ಸಿಪಾಯಿಗಳು ಮನೆಯ ಸುತ್ತಲೂ ಕಾವಲಿದ್ದರು. ಅತಿಥಿ ಅಭ್ಯಾಗತರನ್ನು ಒಳಕ್ಕೆ ಬಿಡುವಾಗಲೂ ತುಂಬಾ ಎಚ್ಚರಿಕೆ ವಹಿಸುತ್ತಿದ್ದರು. ಯಾವ ರೀತಿಯ ದುರ್ಘಟಣೆಯೂ ನಡೆಯದೆ ಸಮಾರಂಭವು ಕೊನೆಗೊಂಡಿತು. ಊಟವಾದ ಬಳಿಕ ಡಾಕ್ಟರರು ಡಿ. ಎಸ್. ಪಿ. ಸಾಹೇಬರನ್ನೂ ಉಳಿದ ಹಿತೈಷಿಗಳನ್ನೂ ಅಭಿನಂದಿಸುತ್ತಾ ಬೀಳ್ಕೊಟ್ಟರು. ಡಿ. ಎಸ್. ಪಿ. ಸಾಹೇಬರು ಮುಂಜಾಗ್ರತೆಯಿಂದ ನಾಲ್ಕೈದು ಸಿಪಾಯಿಗಳನ್ನು ಆ ದಿನದ ಮಟ್ಟಿಗೆ ಅಲ್ಲಿ ಕಾವಲಿಗೆ ನಿಲ್ಲಿಸಿ, ಪತ್ತೇದಾರ ಗಿರಿಧರರಾಯರಿಗೆ ಅವರ ಮೇಲ್ತನಿಖೆ ನೋಡಲು ನಿಯಮಿಸಿ ಹಿಂತೆರಳಿದರು.

"ಟೆಲಿಗ್ರಾಮ್" —ಪೋಸ್ಟ್‌ಮೇನ್ ಕೂಗಿದ. ಡಾಕ್ಟರರು ಶುಭ ಸಂದೇಶವಿರಬಹುದೆಂದು ಕುತೂಹಲದಿಂದ ಹಜಾರಕ್ಕೆ ಬಂದರು......

* * * * * * * *

**ಅರ್ಧ ಗಂಟೆ ಕಳೆದಿತ್ತು......**

ರೀಟಾ ಮನೆಯಲ್ಲಿ ಗಂಡನ ಇರವನ್ನು ಕಾಣದೆ, ಅವನನ್ನು ಹುಡುಕುತ್ತಾ ಹಜಾರಕ್ಕೆ ಬರಲು ಡಾಕ್ಟರರು ಬೋರಲಾಗಿ ನೆಲದಲ್ಲಿ ಬಿದ್ದಿದ್ದರು. ರಕ್ತದಲ್ಲಿ ಅವರ ದೇಹವು ತೊಯ್ದಿತ್ತು. ಇದನ್ನು ನೋಡುತ್ತಲೇ ರೀಟಾ "ಕಿಟಾರೆ'ಂದು ಕಿರುಚಿ ಸ್ಮೃತಿ ತಪ್ಪಿ ಬಿದ್ದಳು. ಹೊರಗೆ ಕಾವಲಿದ್ದ ಸಿಪಾಯಿಗಳೂ, ಒಳಗಿನ ಕೆಲಸದ ಆಳುಗಳೂ ಆ ಕಡೆಗೆ ಧಾವಿಸಿದರು. ಕೂಡಲೇ ಪೋಲೀಸ್ ಸ್ಟೇಶನಿಗೆ "ಫೋನಿ"ನಲ್ಲಿ ಇದನ್ನು ತಿಳಿಸಲು ಗಿರಿಧರರಾಯರು ಸೈಕಲು ಮೋಟಾರಿನಲ್ಲಿ ಅಲ್ಲಿಗೆ ಧಾವಿಸಿ ಬಂದರು. ಬಂದವರೇ ಡಾಕ್ಟರರನ್ನು ಪರೀಕ್ಷಿಸಲು ಪಿಸ್ತೂಲಿನ ಗುಂಡು ಅವರ ಬೆನ್ನಿನಿಂದ ಹೊಟ್ಟೆಯ ಎಡಬದಿಯನ್ನು ಪ್ರವೇಶಿಸಿದ್ದಿತು. ಶ್ವಾಸವಿನ್ನೂ ಆಡುತಿತ್ತು. ಆದುದರಿಂದ ಗಿರಿಧರರಾಯರು ಕೂಡಲೇ ಅವರನ್ನು ಆಸ್ಪತ್ರೆಗೆ ಸಾಗಿಸಿದರು.

ಗಿರಿಧರರಾಯರು ಕಾವಲಿದ್ದ ಪೋಲೀಸರನ್ನು ಈ ವಿಷಯದಲ್ಲಿ ವಿಚಾರಿಸಲಾಗಿ —ತಾವು ಯಾರನ್ನೂ ಒಳಕ್ಕೆ ಬಿಟ್ಟಿಲ್ಲನೆಂದೂ, ಪಿಸ್ತೂಲಿನ ಸದ್ದು ಕೇಳಿಸಿಲ್ಲವೆಂದೂ —ಉತ್ತರ ಬಂದಿತು. ಪತ್ತೇದಾರ ಗಿರಿಧರರಾಯರು ಈಗ ಬಿಕ್ಕಟ್ಟಿಗೆ ಸಿಲುಕಿದರು. ಯೋಚಿಸಿ ಯೋಚಿಸಿ ಕೊನೆಗೆ —ಪಿಸ್ತೂಲಿನ ಗುಂ

ಡಿನ ಸದ್ದು ಕೇಳಿಸದಂತೆ ಪಿಸ್ತೂಲಿಗೆ "ಸೈಲೆನ್ಸರ್" (ಶಬ್ದ ನಿರೋಧಕ) ಹಚ್ಚಿರಬೇಕೆಂದು ಅವರು ತರ್ಕಿಸಿದರು. ಆದರೆ ಶತ್ರುವು ಒಳಕ್ಕೆ ಬಂದ ಬಗೆ ಹೇಗೆ?

ಪತ್ತೇದಾರರು ಮನೆಯ ಕೆಲಸದಾಳುಗಳನ್ನೆಲ್ಲಾ ವಿಚಾರಿಸಲಾಗಿ ಅವರಿಗೆ ಯಾವ ವಿಷಯವೂ ತಿಳಿದಿರಲಿಲ್ಲ. ಗಿರಿಧರರಾಯರು ವಿಚಾರಣೆಯನ್ನು ಅಷ್ಟಕ್ಕೇ ನಿಲ್ಲಿಸಿ ಡಾಕ್ಟರರ ದೇಹಪರಿಸ್ಥಿತಿಯನ್ನು ತಿಳಿದುಕೊಳ್ಳುವ ಸಲುವಾಗಿ ಆಸ್ಪತ್ರೆಯ ಕಡೆ ಹೊರಟರು. ಆಸ್ಪತ್ರೆಯನ್ನು ತಲುಪುತ್ತಲೇ ಡಾಕ್ಟರ್ ವಿಶ್ವನಾಥನ್ ಪತ್ತೇದಾರರ ಕೈಗೆ ಮಡಚಿ ಮುದ್ದೆಯಾಗಿದ್ದ ಪತ್ರವೊಂದನ್ನು ಕೊಟ್ಟು, ಅದು ಡಾ। ರಾಯ್‌ರ ಕೈಯ ಮುಷ್ಟಿಯಲ್ಲಿ ಇತ್ತೆಂದು ತಿಳಿಸಿದರು. ಪತ್ತೇದಾರರು ರಕ್ತರಂಜಿತವಾದ ಆ ಪತ್ರವನ್ನು ಒಡೆದು ನೋಡಲಾಗಿ ಅದು ಡಾಕ್ಟರರ ಸಂಬಂಧಿಕರೊಬ್ಬರಿಂದ ಬಂದಿತ್ತು. ಪತ್ರವು ಅದೇ ದಿನ "ಡೆಲಿವರಿ" ಮಾಡಿದುದಾಗಿ ಅದರ ಮೇಲಿದ್ದ ಮೊಹರಿನಿಂದ ತಿಳಿದು ಬಂತು. "ಹಾಗಾದರೆ ಬೆಳಿಗ್ಗೆ ನಾವು ಹೋದ ಮೇಲೆ 'ಪೋಸ್ಟ್‌ಮೇನ್' ಬಂದಿರಬೇಕು. ಹಾಗಾದರೆ ಅವನನ್ನು ಒಳಗೆ ಬಿಟ್ಟದ್ದೇವೆಂಬುದಾಗಿ ಪೋಲೀಸರು ಹೇಳಿಲ್ಲವೇಕೆ?" —ಗಿರಿಧರರಾಯರು ಡಾಕ್ಟರರ ಆರೋಗ್ಯವನ್ನು ಡಾ। ವಿಶ್ವನಾಥನವರಲ್ಲಿ ವಿಚಾರಿಸಿ ಪುನಃ ಡಾ। ರಾಯ್‌ರ ಮನೆಯ ಸಿಪಾಯಿಗಳನ್ನು ವಿಚಾರಿಸಲಿಕ್ಕಾಗಿ ಅಲ್ಲಿಗೆ ಹೊರಟರು. ತಾವು ಪೋಸ್ಟ್‌ಮೇನನನ್ನು ಬಿಟ್ಟುದಾಗಿಯೂ ಮತ್ತು ಅದರಲ್ಲಿ ಹೆಚ್ಚಿನ ಮಹತ್ವವಿಲ್ಲದಿದ್ದುದರಿಂದ ತಾವು ಅವನ್ನು ತಿಳಿಸಿಲ್ಲವೆಂಬುದಾಗಿಯೂ ಸಿಪಾಯಿಗಳು ಹೇಳಿದರು.

"ಪೋಸ್ಟ್‌ಮೇನ್!" —ಪತ್ತೇದಾರರು ತಲೆ ಕೆರೆದುಕೊಳ್ಳುತ್ತಾ ಯೋಚಿಸಲು ಮೊದಲುಮಾಡಿ, ನಡೆದ ಒಂದೊಂದೇ ಘಟನೆಗಳನ್ನು ತಿರುವಿಹಾಕತೊಡಗಿದರು. ಡಾಕ್ಟರರ ಕಾರಿನ ಅಪಘಡವಾದುದು ಬೆಳಿಗ್ಗೆ 'ಪೋಸ್ಟ್‌ಮೇನ್' ಕಾಗದ ಕೊಡಲು ಬಂದಿದ್ದನೆಂಬುದಾಗಿ ಅವರೇ ಹೇಳಿದ್ದರು. ಎರಡು ದಿನಗಳಿಗೆ ಮೊದಲು ರೀಟಾ ಮಾರ್ಗದಲ್ಲಿ ನಡೆಯುತ್ತಿರುವಾಗ ಡಾಕ್ಟರರನ್ನು ಕೊಲ್ಲುವ ಬೆದರಿಕೆಯ ಮಾತುಗಳು ಕೇಳಿಬಂದ ಸಮಯದಲ್ಲಿ ದೂರದಲ್ಲಿ 'ಪೋಸ್ಟ್‌ಮೇನ್'ನನ್ನು ನೋಡಿದೆನೆಂಬುದಾಗಿ ಅವಳು ಹೇಳಿದ್ದನ್ನೂ ಜ್ಞಾಪಿಸಿಕೊಂಡರು. ಇಂದು ಸಹ ಡಾಕ್ಟರರಿಗೆ ಗುಂಡಿನೇಟು ಬಿದ್ದ ಸಂದರ್ಭದಲ್ಲಿ 'ಪೋಸ್ಟ್‌ಮೇನ್' ಬಂದುದಕ್ಕೂ, ಈ ಘಟನೆಗಳಿಗೂ ಸಂಬಂಧ ಕಲ್ಪಿಸಿ

ಕೊಂಡರು. ನಡೆದ ಎಲ್ಲಾ ಘಟನೆಗಳಿಗೂ ಈ 'ಪೋಸ್ಟ್‌ಮೇನ್' ಕಾರಣ ನಾಗಿರಬಾರದೇಕೆ? ಹೌದು. ಅದನ್ನು ಪತ್ತೆ ಹಚ್ಚಲೇಬೇಕು- ಕೂಡಲೇ ಗಿರಿಧರರಾಯರು ಹೆಡ್ ಪೋಸ್ಟಾಫಿಸಿಗೆ 'ಫೋನ್' ಮಾಡಿ ಡಾ। ರಾಯ್ ಇರುವ ವಾರ್ಡಿನ ಪೋಸ್ಟ್‌ಮೇನ್ ಯಾರೆಂದು ಕೇಳಲಾಗಿ, ಅವನ ಹೆಸರು ವೆಂಕಟಾಚಲಂ ಎಂಬುದಾಗಿ ತಿಳಿದು ಬಂದಿತು. ಪತ್ತೇದಾರರು ಅವನ ಮನೆಯ ವಿಳಾಸವನ್ನು ವಿಚಾರಿಸಿ ತನ್ನ ಡೈರಿಯಲ್ಲಿ ಬರೆದುಕೊಂಡರು.

* * * * * * * *

ಸಂಜೆಯ ಹೊತ್ತಿಗೆ ಡಾ। ರಾಯ್ ಅವರಿಗೆ ಸ್ಮೃತಿ ಬಂದಿದೆಯಾಗಿಯೂ, ಆದರೆ ಮಾತನಾಡಲು ಶಕ್ತಿ ಇಲ್ಲವೆಂದೂ ಡಾ। ವಿಶ್ವನಾಥನ್, ಪತ್ತೇದಾರ ಗಿರಿಧರರಾಯರಿಗೆ 'ಫೋನ್'ನಲ್ಲಿ ತಿಳಿಸಿದರು.

* * * * * * * *

ಗಿರಿಧರರಾಯರು ಸಂಜೆ "ವಾಕಿಂಗ್" ಹೋದವರು ಮನೆಗೆ ಹಿಂದಿರುಗುವಾಗ ಬಾಗಿಲಿನಲ್ಲಿ ಒಂದು ಪತ್ರವು ಅವರನ್ನು ಇದಿರುಗೊಂಡಿತು. ಬಾಗಿಲಿನ ಬೀಗಕ್ಕೆ ಅದನ್ನು ಕಟ್ಟಲಾಗಿತ್ತು. ಪತ್ತೇದಾರರು ಕ್ಷಿಪ್ರದಲ್ಲಿಯೇ ಅದನ್ನು ಒಡೆದು ಓದತೊಡಗಿದರು—

ಎಲೈ, ಪತ್ತೇದಾರ ಕೀಟವೇ,

ತನ್ನಿಂದಾಗದ ಕೆಲಸಕ್ಕೆ ಕೈಹಾಕಿ ಕೈಸುಟ್ಟುಕೊಳ್ಳದಿರು. ನೀನು ಡಾಕ್ಟರರಲ್ಲಿ ನಡೆದ ಘಟನೆಗಳನ್ನು ಕೆದಕಿ ಹಾಕುತ್ತಿದ್ದಿಯೇ? ಅದು ಪತ್ತೆ ಮಾಡುವುದು ಅಸಾಧ್ಯವೆಂದು ತಿಳಿದಿರಲಿ. ನಿನ್ನ ಪ್ರಯತ್ನಗಳನ್ನು ಮುಂದರಿಸಿದಲ್ಲಿ ಅವರಿಗೆ ಬಂದ ಗತಿಯೇ ನಿನಗೆ. ಜಾಗ್ರತೆ! ನೆನಪಿರಲಿ.

—ನಿನ್ನ ಹಿಂಬಾಲಕ.

ಪತ್ರವನ್ನು 'ಇಂಗ್ಲಿಷಿ'ನಲ್ಲಿ 'ಟೈಪ್' ಮಾಡಲಾಗಿತ್ತು. ಅದಕ್ಕೆ ಹೆಚ್ಚಿನ ಯಾವ ಗಮನವನ್ನೂ ಕೊಡದೆ ಪತ್ತೇದಾರರು ಎಂದಿನಂತೆ ತನ್ನ ಕಾರ್ಯದಲ್ಲಿ ನಿರತರಾದರು.

* * * * * * * *

ಮರುದಿನ ಬೆಳಗ್ಗಿನ ಜಾವ ಸುಮಾರು ನಾಲ್ಕು ಗಂಟೆಯ ಹೊತ್ತಿಗೆ ಎಚ್ಚರವಾದ ಗಿರಿಧರರಾಯರಿಗೆ ಅನಂತರ ನಿದ್ರೆ ಬೀಳಲೇ ಇಲ್ಲ. ಸಂದರ್ಭ ಸಿಕ್ಕಿದರೆ ವೆಂಕಟಾಚಲಂನ ಮನೆಯ ಶೋಧ ನಡೆಸುವುದೆಂದುಕೊಂಡು ಕಿಸೆ

ಯಲ್ಲಿ ಗುಂಡುಗಳಿಂದ ತುಂಬಿದ ಪಿಸ್ತೂಲನ್ನು ಇಟ್ಟುಕೊಂಡು ಮನೆಯಿಂದ ಹೊರಟರು. ವೆಂಕಟಾಚಲಂನ ಮನೆಯ ಹತ್ತಿರ ತಲ್ಪಿದಾಗ ಇನ್ನೂ ಕತ್ತಲು. ಮನೆಯೊಳಗೆ ಯಾರಾದರೂ ಇದ್ದಾರೆನೋ ಎಂದುಕೊಂಡು ಪತ್ತೇದಾರರು ಮನೆಯ ಸುತ್ತಲೂ ಮೆಲ್ಲನೆ ನಡೆಯುತ್ತಾ ಸೂಕ್ಷ್ಮವಾಗಿ ನಿರೀಕ್ಷಿಸಹತ್ತಿದರು. ಪತ್ತೇದಾರರ ನಿರೀಕ್ಷಣೆ ನಿಜವಾಯಿತು. ಮನೆಯ ಹಿಂದೆ 'ಕಿರ್ರ್ರಂ'ದು ಬಾಗಿಲಿನ ಸದ್ದಾಗಲು ಪತ್ತೇದಾರರು ಕೂಡಲೇ ಹತ್ತಿರದ ಮರದ ಹಿಂದೆ ಮರೆಯಾದರು.

ಹಿಂಬಾಗಿಲು ಮೆಲ್ಲನೆ ತೆರೆಯಿತು. ಯಾವನೋ ಓರ್ವ ವ್ಯಕ್ತಿಯು ಅತ್ತಿತ್ತ ನೋಡುತ್ತಾ ಸಟಸಟನೆ ರೈಲ್ವೇ ನಿಲ್ದಾಣದ ಕಡೆಗೆ ನಡೆಯತೊಡಗಿದನು. ಪತ್ತೇದಾರರು ಅವನ ದೃಷ್ಟಿಗೆ ಬೀಳದಂತೆ ದೂರದಿಂದ ಅವನನ್ನು ಹಿಂಬಾಲಿಸತೊಡಗಿದರು. ಸ್ವಲ್ಪ ಮುಂದಕ್ಕೆ ಹೋಗುತ್ತಲೇ ಮುಂದಿನ ವ್ಯಕ್ತಿ ಅಕಸ್ಮಾತ್ ಹಿಂದಿರುಗಿ ನೋಡಲು, ಅಡಗುತ್ತಿದ್ದ ಪತ್ತೇದಾರರು ಅವನ ದೃಷ್ಟಿಗೆ ಬಿದ್ದರು. ಆದರೆ ಪತ್ತೇದಾರರು ಏನೂ ತಿಳಿಯದವರಂತೆ ದಾರಿ ಸಾಗಹತ್ತಿದರು. ಸ್ವಲ್ಪ ಮುಂದಕ್ಕೆ ನಡೆದು ಮುಖವೆತ್ತಿ ಮುಂದಿನ ವ್ಯಕ್ತಿಯನ್ನು ನೋಡಲು ಅವನು ಅಲ್ಲಿರಲಿಲ್ಲ. ಪತ್ತೇದಾರರಿಗೆ ತುಂಬಾ ಪಶ್ಚಾತ್ತಾಪವಾಯಿತು. ಅತ್ತಿತ್ತ ನೋಡುತ್ತಾ ಸಾಧಾರಣ ಹತ್ತು ಹೆಜ್ಜೆ ನಡೆಯುವಷ್ಟರಲ್ಲಿ ಅವರ ತಲೆಯ ಮೇಲಿನ 'ಹ್ಯಾಟ್'ಗೆ ಯಾವುದೊ ಭಾರವಾದ ವಸ್ತು ತಾಗಿದಂತಾಗಿ ಅದು 'ಠಪ್ಪೆಂ'ದು ಹಾರಿ ದೂರ ಬಿತ್ತು. ಪತ್ತೇದಾರರು ಕೂಡಲೇ ಹತ್ತಿರದ ಗೋಡೆಯ ಅಡ್ಡಕ್ಕೆ ನಿಂತುಕೊಂಡು ತಮ್ಮ ಪಿಸ್ತೂಲನ್ನು ಕೈಗೆ ತೆಗೆದುಕೊಂಡರು. ಹೃದಯ ಒಂದೇ ಸಮನೆ ಡಡವಡಿಸುತ್ತಿತ್ತು.

ಸಾಧಾರಣ ಅರ್ಧ ಗಂಟೆಯ ಹೊತ್ತು ಅವರು ಹಾಗೆಯೇ ನಿಂತಿದ್ದರು. ಆದರೆ ಅದರ ನಂತರ ಯಾವ ತರದ ದುರ್ಘಟನೆಯೂ ನಡೆಯಲಿಲ್ಲ. ಅಷ್ಟರಲ್ಲಿ ಬೆಳ್ಳಗೆ ಬೆಳಗಾಯಿತು. ಅಲ್ಲೊಬ್ಬ ಇಲ್ಲೊಬ್ಬ ಮಾರ್ಗದಲ್ಲಿ ಕಾಣಹತ್ತಿದರು. ಪತ್ತೇದಾರರು ತಾವು ನಿಂತಲ್ಲಿಂದ ಈಚೇಗೆ ಬಂದು ನೆಲದಲ್ಲಿ ಬಿದ್ದಿದ್ದ ತಮ್ಮ ಹೇಟನ್ನು ಎತ್ತಿ ನೋಡಲಾಗಿ 'ಪಿಸ್ತೂಲಿ'ನ ಗುಂಡೊಂದು ಅದನ್ನು ಹೊಕ್ಕು ಪಾರಾಗಿತ್ತು. ಶತ್ರುವು 'ಸೈಲೆನ್ಸರ್' ಹಚ್ಚಿದ್ದ ಪಿಸ್ತೂಲಿನಿಂದ ಅವರನ್ನು ನಾಶಮಾಡಲು ಯತ್ನಿಸಿದ್ದನ್ನು ತಿಳಿದು ಪತ್ತೇದಾರರು ತುಸು ಗಾಬರಿಗೊಂಡರು.

*    *    *    *    *    *    *    *

ಆ ದಿನವಿಡೀ ಪತ್ತೇದಾರರು ತಾನು ಪತ್ತೆಮಾಡಿದ ವಿಷಯಗಳಿಗೆ ತಕ್ಕ ಪುರಾವೆಗಳನ್ನು ಹುಡುಕಿ, ಸಾಕ್ಷ್ಯಗಳನ್ನು ಸಿದ್ಧಪಡಿಸಿಕೊಂಡು ಆ ದಿನ ರಾತ್ರಿ ಶತ್ರುಗಳನ್ನು ಬಂಧಿಸುವುದೆಂದು ನಿಶ್ಚೈಸಿದರು.

*    *    *    *    *    *    *    *

ಆ ದಿನ ರಾತ್ರೆ ಸಾಧಾರಣ ೧೨॥ ಗಂಟೆ ಮಾರಿಹೋಗಿತ್ತು. ಪತ್ತೇದಾರ ಗಿರಿಧರರಾಯರು ಮತ್ತು ಇನ್‌ಸ್ಪೆಕ್ಟರ್ ರಮಾನಂದರಾಯರು ಮಾರುವೇಷದಲ್ಲಿ ವೆಂಕಟಾಚಲಂನ ಮನೆಯ ಬಳಿಯಲ್ಲಿ ಸಾಧಾರಣ 2 ಗಂಟೆಗಳಿಂದ ಕಾಯುತ್ತ ಕುಳಿತುಕೊಂಡಿದ್ದರು. ಸಾಧಾರಣ ಅರ್ಧ ಗಂಟೆಯ ನಂತರ ಮನೆಯ ಮುಂಭಾಗದಿಂದ ಸೂಟುಧಾರಿ ಯುವಕನೊಬ್ಬನು ಲಗುಬಗೆಯಿಂದ ಹೊರಹೊರಟನು. ಪತ್ತೇದಾರರು ಅವನ ನಡಿಗೆಯಲ್ಲಿ ಏನೋ ಕೃತ್ರಿಮವನ್ನು ಕಂಡುಕೊಂಡರು. ಕೂಡಲೇ ಈರ್ವರೂ ಅವನನ್ನು ಹಿಂಬಾಲಿಸತೊಡಗಿದರು. ಕತ್ತಲಲ್ಲಿ ಒಬ್ಬರು ಇನ್ನೊಬ್ಬರಿಗೆ ಸರಿಯಾಗಿ ಕಾಣುತ್ತಿರಲಿಲ್ಲ. ಮುಂದಿನ ವ್ಯಕ್ತಿ ನಡೆಯುತ್ತಾ ಬೀದಿಯ ಕೊನೆಯಲ್ಲಿರುವ ವಿಜ್ಞಾನಿ(Scientist) ವಿಲಾಸಚಂದ್ರ ಬಾಬುವಿನ ಮನೆಯನ್ನು ಪ್ರವೇಶಿಸಿದನು.

ಪತ್ತೇದಾರರು ಅವನು ಒಳಕ್ಕೆ ಹೋದುದನ್ನು ದೃಢಪಡಿಸಿಕೊಂಡು ಮೆಲ್ಲಡಿಯಿಡುತ್ತಾ ವಿಲಾಸಚಂದ್ರ ಬಾಬುವಿನ ಮನೆಯ ಹೊರಗಿನಿಂದ ಒಳಗೇನಾದರೂ ಮಾತುಕತೆ ನಡೆಯುವುದೋ ಎಂದು ಕಿವಿಗೊಟ್ಟು ಆಲಿಸತೊಡಗಿದರು. ಒಳಗಡೆ ಅಸ್ಪಷ್ಟವಾದ ಮಾತುಕತೆ ನಡೆಯುತ್ತಿದ್ದುದು ಕೇಳಿಸುತ್ತಿತ್ತು. "---- --ಡಾಕ್ಟರ್ ರಾಯ್-------ಟೈಂಬಾಂಬ್------ಟೆಲಿಗ್ರಾಮ್ -------ಆಸ್ಪತ್ರೆ------ಗಿರಿಧರರಾಯ-----ಪತ್ತೇದಾರ----ಕಾಗದ------" ಮುಂತಾದ ಕೆಲವು ಮಾತುಗಳು ಗಿರಿಧರರಾಯರ ಸಂಶಯವನ್ನು ದೃಢೀಕರಿಸಿದುವು. ಒಳಗಿರುವ ಎರಡು ವ್ಯಕ್ತಿಗಳೇ ನಡೆದ ಘಟನೆಗಳಿಗೆ ಕಾರಣರಾಗಿದ್ದರು. ಬದ್ಮಾಶರಿಬ್ಬರನ್ನೂ ಹೆಚ್ಚಿನ ಹಾನಿಯಾಗದಂತೆ ಸುಲಭ ಉಪಾಯಗಳಿಂದಲೇ ಹಿಡಿಯಬೇಕೆಂದಾಲೋಚಿಸಿ ಗಿರಿಧರರಾಯರು ತನ್ನ ಯುಕ್ತಿಯನ್ನು ರಮಾನಂದರಾಯರ ಕಿವಿಯಲ್ಲಿ ಉಸುರಲು, ಅವರು 'ಸರಿ'ಯೆಂದು ತಲೆಯಲ್ಲಾಡಿಸಿ ತನ್ನ ಸಮ್ಮತಿಯಿತ್ತರು.

ಪತ್ತೇದಾರ ಗಿರಿಧರರಾಯರು ಕೂಡಲೇ ವಿಲಾಸಚಂದ್ರಬಾಬುವಿನ

ಮನೆಯ ಬಾಗಿಲನ್ನು 'ಡಭ ಡಭ'ನೆ ಬಡಿಯುತ್ತಾ ಅವರ ಹೆಸರು ಹಿಡಿದು ಕರೆಯುಹತ್ತಿದರು. ಅಂತಹ ಅವೇಳೆಯಲ್ಲಿ ಬಾಗಿಲನ್ನು ಬಡಿಯುವವರು ಯಾರೆಂಬುದಾಗಿ ಯೋಚಿಸುತ್ತಾ ಕಾರಸ್ಥಾನಿಗಳಿಬ್ಬರೂ ಒಬ್ಬರನ್ನೊಬ್ಬರು ನೋಡಹತ್ತಿದರು. ಪೋಲೀಸರಾಗಿದ್ದರೆ! —ಹೆದರಿಕೆಯಿಂದ ಅವರಿಬ್ಬರೂ ಬೆವರಿದರು. ಕೊನೆಗೆ ಸೂಟುಧಾರಿ ಯುವಕನನ್ನು ಅಡಗಿಕೊಳ್ಳುವಂತೆ ಸೂಚಿಸಿ, ವಿಲಾಸಬಾಬು ನಿದ್ದೆಯಿಂದೆಚ್ಚತ್ತವರಂತೆ ಕಣ್ಣುಜ್ಜಿಕೊಳ್ಳುತ್ತಾ ಬಾಗಿಲನ್ನು ತೆರೆದರು. ಅವರ ಮುಖದಲ್ಲಿ ಭಯದ ಭೂತವು ತಾಂಡವವಾಡುತಿತ್ತು. ಆದರೆ ಬಂದ ವ್ಯಕ್ತಿಯನ್ನು ನೋಡಿ ಅವರು ಸಮಾಧಾನದ ನಿಟ್ಟುಸಿರು ಬಿಟ್ಟರು. ಏಕೆಂದರೆ ಪತ್ತೇದಾರರು ಮುಸಲ್ಮಾನ್ ಗ್ರಹಸ್ಥನಂತೆ ವೇಷ ಧರಿಸಿಕೊಂಡಿದ್ದರು. ಅವರ ಮುಖ ಗಾಬರಿಗೊಂಡವರಂತೆ ಇತ್ತು. ಅವರು ವಿಲಾಸಚಂದ್ರಬಾಬುವನ್ನು ಕಾಣುತ್ತಲೇ 'ಸಲಾಂ'ಮಾಡಿ, ಹರಕು ಮುರುಕು ಮಲೆಯಾಳಿ ಮಿಶ್ರಿತ ಕನ್ನಡದಲ್ಲಿ ತನ್ನ ಹೆಂಡತಿ ಪ್ರಾಣಾಪತ್ತಿನಲ್ಲಿ ಇರುವಳೆಂದೂ, ತಾನು ಬಡವನಾದುದರಿಂದ ಡಾಕ್ಟರರನ್ನು ಕರೆತರುವಷ್ಟು ಯೋಗ್ಯತೆ ತನ್ನಲ್ಲಿಲ್ಲವೆಂದೂ, ಮನೆಯ ತನಕ ಬಂದು ಅವರಿಂದಾಗುವ ಚಿಕಿತ್ಸೆಮಾಡಬೇಕೆಂದೂ- ದೈನ್ಯತೆಯಿಂದ ಕೇಳಿಕೊಂಡರು.

ವಿಲಾಸಚಂದ್ರಬಾಬುವಿಗೆ ಇದು ನುಂಗಲಾರದ ಗುಟುಕಾಯಿತು-ಅವರು ಆಗಾಗ ಆ ಕೇರಿಯ ಚಿಕ್ಕ ಪುಟ್ಟ ಕಾಯಿಲೆಗಳನ್ನು ತನ್ನಲ್ಲಿರುವ ಚಿಲ್ಲರೆ ಮದ್ದುಗಳಿಂದ ಗುಣಪಡಿಸಿ ಬಡಜನರ ವಿಶ್ವಾಸಕ್ಕೆ ಪಾತ್ರರಾಗಿದ್ದರು. —ಈಗ ಆ ಬಡ ಮುಸಲ್ಮಾನ ಗ್ರಹಸ್ಥನ ಮನೆಗೆ ಹೋಗೋಣವೇ? ಬೇಡವೇ? ಎಂಬುದಾಗಿ ಕ್ಷಣಹೊತ್ತು ಯೋಚಿಸಿದರು. ಕೊನೆಗೆ ಮನೆಗೆ ಬೀಗವನ್ನು ಹಾಕಿ ಅವನೊಂದಿಗೆ ಹೊರಟರು. ಮನೆಯೊಳಗೆ ಕುಳಿತುಕೊಂಡ ಸೂಟುಧಾರಿ ಯುವಕನಿಗೆ ಅದೊಂದು ರೀತಿಯ ಬಂಧೀಖಾನೆಯಾಗಿಯೇ ಭಾಸವಾಯಿತು. ಮುಸಲ್ಮಾನ್ ವೇಷಧಾರಿ ಪತ್ತೇದಾರರು ವಿಲಾಸಚಂದ್ರಬಾಬುವನ್ನು ಪೇಟೆಯೆಲ್ಲಾ ಸುತ್ತಾಡಿಸಿ ಕೊನೆಗೆ ಪೋಲೀಸ್ ಠಾಣೆಗೆ ಕರೆತರಲು, ವಿಲಾಸಚಂದ್ರಬಾಬು ದಿಗ್ಭ್ರಾಂತರಾದರು. ಪೋಲೀಸರು ಅವರ ಕೈಗೆ ಕೋಳವನ್ನು ತೊಡಿಸುವಾಗ ಅವರಿಗೆ ಎಲ್ಲಾ ವಿಶದವಾಯಿತು. ಮರುದಿನ ಆಗತಕ್ಕ ಅವಮಾನವನ್ನು ನೆನೆದು ಅವರು ದುಃಖಿಸತೊಡಗಿದರು.

ಇತ್ತ ಬಾಗಿಲನ್ನು ಹಾಕಿಕೊಂಡು ಹೋದ ವಿಜ್ಞಾನಿ ವಿಲಾಸಚಂದ್ರ

ಬಾಬು ತುಂಬಾ ಸಮಯವಾದರೂ ಬಾರದಿರಲು ಅವರ ಮನೆಯೊಳಗೆ ಅಡಗಿದ್ದ ಸೂಟುಧಾರಿ ಯುವಕನಿಗೆ ತುಂಬಾ ಕೋಪ ಬಂದಿತು. ತನ್ನನ್ನೀ ರೀತಿಯ ಚಿತ್ರಹಿಂಸೆಗೆ ಗುರಿಪಡಿಸಿದುದಕ್ಕಾಗಿ ಅವನು ವಿಲಾಸಬಾಬುವನ್ನು ಶಪಿಸತೊಡಗಿದನು. ಅಷ್ಟರಲ್ಲಿ ಬಾಗಿಲು ತೆರೆಯಲು ಸೂಟುಧಾರಿಯು ವಿಲಾಸಬಾಬು ಬಂದರೆಂದುಕೊಂಡು ಮೇಲಕ್ಕೇಳಲು, ಅವನ ಕೈಗೆ ಭಾರವಾದ ಕಬ್ಬಿಣದ ಕೋಳಗಳು ಅಲಂಕರಿಸಲ್ಪಟ್ಟವು. ಇದನ್ನು ಕಂಡು ಅವನು ಹುಚ್ಚನಂತಾದನು. ಅವನು ಕನಸ್ಸಿನಲ್ಲೂ ನೆನೆಯದ ಘಟನೆಯೊಂದು ನಡೆದುಹೋಗಿತ್ತು. ಪೋಲೀಸ್ ಠಾಣೆಯಲ್ಲಿ ತನ್ನ ಕೋಣೆಯ ಹತ್ತಿರದ ಕೋಣೆಯಲ್ಲೇ ಬಂಧಿಸಲ್ಪಟ್ಟ ವಿಲಾಸಬಾಬುವನ್ನು ಕಂಡಾಗ ಅವನಿಗೆ ತುಂಬಾ ಪಶ್ಚಾತ್ತಾಪವಾಯಿತು.

ಮರುದಿನ ಬಂಧಿಗಳಿಬ್ಬರ ನಿಜವೇಷ ಬಯಲಾಯಿತು. ವಿಜ್ಞಾನಿ ವಿಲಾಸಚಂದ್ರ ಬಾಬುವೆಂಬ ಹೆಸರಿನಿಂದ ಪ್ರಸಿದ್ಧರಾಗಿದ್ದವರೇ ಡಾ। ರಾಯ್‌ರ ದ್ವೇಷಿಯಾದ ಪ್ರೊ। ಅರ್ಮುಗಂ ಎಂಬುದಾಗಿಯೂ, ಸೂಟುಧಾರಿ ಯುವಕನೇ 'ಪೋಸ್ಟ್‌ಮೇನ್' ವೆಂಕಟಾಚಲಂ ಎಂಬುದಾಗಿ ತಿಳಿಯಿತು.

* * * * * * * *

ಬಳಿಕ ಒಂದು ದಿನ ಕೋರ್ಟಿನಲ್ಲಿ ವಿಚಾರಣೆ ನಡೆದು ಪ್ರೊ। ಅರ್ಮುಗಂಯಾನೆ ವಿಜ್ಞಾನಿ ವಿಲಾಸಚಂದ್ರ ಬಾಬುವಿನ ಸಲಹೆಯಂತೆ ಡಾ। ರಾಯ್‌ರನ್ನು ಮೂರು ಬಾರಿ ಕೊಲೆಗೈಯುವ ಪ್ರಯತ್ನವಾಡಿದ್ದನೆಂಬುದು ರುಜುವಾತಾಗಿ ಪೋಸ್ಟ್‌ಮೇನ್ ವೆಂಕಟಾಚಲಂನಿಗೆ ೭ ವರ್ಷಗಳ ಸಶ್ರಮ ಶಿಕ್ಷೆಯೂ, ಇವಕ್ಕೆಲ್ಲಾ ಕಾರಣರಾದ ಪ್ರೊ। ಅರ್ಮುಗಂರಿಗೆ ೩ ವರ್ಷಗಳ ಕಠಿಣ ಸಜೆಯೂ ವಿಧಿಸಲ್ಪಟ್ಟಿತು. ಪತ್ತೇದಾರ ಗಿರಿಧರರಾಯರನ್ನು ಅವರ ಕಾರ್ಯ ತತ್ಪರತೆಗಾಗಿ ಕೋರ್ಟು ಗೌರವಿಸಿತು. ಡಾ। ರಾಯ್ ಪತ್ತೇದಾರ ಗಿರಿಧರರಾಯರನ್ನು ತಕ್ಕ ಸನ್ಮಾನಗಳಿಂದ ಗೌರವಿಸಿದರು.

* * * * * * * *

ಭಗ್ನಪ್ರೇಮಿ ಪ್ರೊ। ಅರ್ಮುಗಂ ತನಗಾದ ಪರಾಭವಕ್ಕೂ, ಅವಮಾನಕ್ಕೂ ಬೇಸತ್ತು ಜೈಲಿನಲ್ಲಿ ಆತ್ಮಹತ್ಯೆ ಮಾಡಿಕೊಂಡರು.....

⁂ "ಕನ್ನಡ ಚೆಲ್ನುಡಿ ಉನ್ನತಿಗೇರಲಿ" ⁂

4

# ಸದ್ರಿ ಸುಬ್ಬ

(ಏಕಾಂಕ ಪ್ರಹಸನ)

ಪ್ರಹಸನ ರಚಯಿತರು:

ಎಮ್. ಎಸ್. ಕಾಮತ್

ಮಂಗಳೂರು

1954




ಒಂದಾಣೆ ಮಾಲೆ

# 'ಒಂದಾಣೆ ಮಾಲೆ'ಯಲ್ಲಿ ಪ್ರಕಟವಾಗುವ ಕೆಲವು ವಿಷಯಗಳು

ಸಣ್ಣ ಕತೆಗಳು — ಪ್ರಹಸನಗಳು
ನೀಳ್ಗತೆಗಳು — ಏಕಾಂಕ ನಾಟಕಗಳು
ವ್ಯಕ್ತಿ ಚಿತ್ರ — ದೇಶ-ವಿದೇಶ ಚರಿತ್ರೆ
ವಿಜ್ಞಾನ — ಚಿಕ್ಕ ನಿಘಂಟುಗಳು
ಶಿಲ್ಪ — ಜಗತ್ತಿನ ಶ್ರೇಷ್ಠ ತತ್ವಜ್ಞಾನಿಗಳ ಉಪದೇಶ
ಲಲಿತಕಲೆ — ಸೃಷ್ಟಿಯ ವೈಚಿತ್ರ್ಯಗಳು
ಗೃಹವೈದ್ಯ — ಶೈಕ್ಷಣಿಕ ವಿಚಾರಗಳು
ಗೃಹಿಣಿಯರಿಗೆ — ಕ್ಷೇತ್ರಗಳ ವಿವರ
ಉಪಯುಕ್ತಸಲಹೆಗಳು
ಸುಭಾಷಿತ — ವಾಙ್ಮಯ ವಿಚಾರ
ಪ್ರಯಾಣ ಕತೆಗಳು — ಸತ್ಯ ಕಥಾನಕಗಳು

ಶ್ರೀ। ಕೋ. ಶ. ಕಾರಂತ, ಬಿ.ಎ., ಬಿ.ಎಲ್., ಶ್ರೀ। ಡಿ. ಪುಟ್ಟಸ್ವಾಮಿ, ಬಿ. ಎ., ಬಿ. ಎಲ್., ಎಡ್ವೊಕೇಟ್, ವೈದ್ಯಗುರು ಎಂ. ಆರ್. ಭಟ್, ದಿ। ಎಮ್. ಎನ್. ಕಾಮತ್, ಶ್ರೀ। ಪಿ. ಎಸ್. ವೆಂಕಟಕೃಷ್ಣ ರಾವ್, ಎಂ.ಎ., ಬಿ.ಟಿ., ಶ್ರೀ। ಎಮ್. ಸುಬ್ರಾಯನ್, ವಿದ್ವಾನ್, ಶ್ರೀ। ಕುಡ್ಪಿ ವಾಸುದೇವ ಶೆಣೈ, ಶ್ರೀ। ಎಲ್. ಎಸ್. ನಾಯಕ, ಡಾ। ಎಸ್. ಪಿ. ಭಟ್—ಮೊದಲಾದವರ ಲೇಖನಗಳು 'ಒಂದಾಣೆ ಮಾಲೆ'ಯಲ್ಲಿ ಪ್ರಕಟವಾಗುವುವು.

ಕೆಲವು ಪ್ರಕಟಣೆಗಳು 32, 40, 48 ಅಥವಾ ಹೆಚ್ಚು ಪುಟಗಳಿರುವುವು. ಆದರೆ, ಯಾವ ಪ್ರಕಟಣೆಯೂ ಹದಿನಾರು ಪುಟಗಳಿಗಿಂತ ಕಡಿಮೆ ಇರುವುದಿಲ್ಲ.

## ಒಂದಾಣೆ ಮಾಲೆ,
## ಪ್ರಭಾತ ಆಫೀಸು, ರಥಬೀದಿ, ಮಂಗಳೂರು—೧.

‘ಒಂದಾಣೆ ಮಾಲೆ’ಯ 4ನೇ ಪ್ರಕಟಣೆ

# ‘ಸದ್ರಿ ಸುಬ್ಬ’

## ಏಕಾಂಕ ಪ್ರಹಸನ

ಪ್ರಹಸನ ರಚಯಿತರು:

**ಎಮ್. ಎನ್. ಕಾಮತರವರು**

ಪಾತ್ರವರ್ಗ:

ಸಿದ್ದಯ್ಯ .... .... .... ಹಳ್ಳಿಯ ಒಬ್ಬ ಜವುಳಿ ವ್ಯಾಪಾರಸ್ತ.

ಸುಬ್ಬಯ್ಯ .... .... .... ಹಳ್ಳಿಯ ಒಬ್ಬ ಕಳ್ಳ.

ಗಂಗಯ್ಯ .... .... .... ವಕೀಲ.

ಗುಮಾಸ್ತ .... .... .... (ನ್ಯಾಯಾಲಯದ ಗುಮಾಸ್ತ.)

ನ್ಯಾಯಾಧೀಶ .... .... ....

(ಕೋರ್ಟಿನ ಪೇದೆಗಳು; ಒಬ್ಬಿಬ್ಬರು ವಕೀಲರು; ಮೊಕದ್ದಮೆಗಾಗಿ ಬಂದ ಕಕ್ಷಿಗಾರರು; ಒಬ್ಬಿಬ್ಬರು ಪ್ರೇಕ್ಷಕರು.)

**1954**

ಒಂದಾಣೆ ಮಾಲೆ,

ಪ್ರಭಾತ ಆಫೀಸು, ರಥಬೀದಿ, ಮಂಗಳೂರು 1.

# ಸದ್ರಿ ಸುಬ್ಬ

## (ಏಕಾಂಕ ಪ್ರಹಸನ)

(ಇಂಗ್ಲಿಷಿನಲ್ಲಿ John Brandane ಎಂಬ ಲೇಖಕನು ಬರೆದ Rory Aforesaid ಎಂಬ ಒಂದಂಕದ ಪ್ರಹಸನವನ್ನು ಅನುಸರಿಸಿ ಬರೆದುದು. ಆ ಮೂಲ ಪ್ರಹಸನವು ೧೫ನೇ ಶತಮಾನದ ಒಂದು ಫ್ರೆಂಚ್ ನಾಟಕವನ್ನು ಅನುಕರಿಸಿ ಬರೆದುದು; "La Farce de Maitre Patelin." ಇದರಲ್ಲಿ ಬರುವ ಹೆಸರುಗಳೆಲ್ಲ ಕಲ್ಪಿತ. ಸನ್ನಿವೇಶವೂ ಹಾಗೆಯೆ. ಎಂದಿನದೋ ಒಂದು ಚಿತ್ರ ಎಂದೇ ಓದತಕ್ಕುದು.)

[ಹಳೆಯದೊಂದು ಕಚೇರಿ. ಅದರಲ್ಲಿ ಆಸನ. ಆಸನಕ್ಕೆ ಮುಂದೆ ಮೇಜು; ಬದಿಗೆ ಗುಮಾಸ್ತನ ಕುರ್ಚಿ. ಬಲಕ್ಕೆ ಸಾಕ್ಷಿಗಾರರಿಗೊಂದು ಪಂಜರ. ವಕೀಲರು ಕಕ್ಷಿಗಾರರಿಗೆ ಅತ್ತೊಂದು ಇತ್ತೊಂದು ಕಾಲುಮಣೆಗಳು. ಬೆಳಗ್ಗೆ ಹತ್ತು ಗಳಿಗೆ ಹೊತ್ತು ಏರಿದೆ. ಒಂದಾನೊಂದು ವ್ಯಾಜ್ಯದಲ್ಲಿ- ವಾದಿಯಾಗಿರುವ ವ್ಯಾಪಾರಿ ಸಿದ್ಧಯ್ಯ ಅತ್ತ ಬಂದು, ತನ್ನ ಸಮನ್ಸು ಓದುತ್ತಾ ಅತ್ತಿತ್ತ ಅಡ್ಡಾಡುತ್ತಾನೆ; ದೃಶ್ಯಾರಂಭದಲ್ಲಿ ಅವನು ಹೀಗೆ ಅಡ್ಡಾಡುತ್ತಿರುವಾಗ ಗುಮಾಸ್ತರು ಬರುವರು. ಪರಸ್ಪರ ನಮಸ್ಕಾರಗಳಾದ ತರುವಾಯ, ಗುಮಾಸ್ತರು ಕುರ್ಚಿಯ ಮೇಲೆ ಕುಳಿತು—]

ಗುಮಾಸ್ತ: ಅತ್ತಿತ್ತ ಅಡ್ಡಾಡುವುದಕ್ಕೆ ಇದೇನು ಛತ್ರದ ಜಗಲಿಯೋ? ಇದು ಕಛೇರಿ! ಇಲ್ಲಿ ಮೌನವಾಗಿ ಒಂದು ಕಡೆ ಸುಮ್ಮನೆ ಕೂತಿರಬೇಕು. ಹಾಗೇ ರೂಲ್ಸು; ಅದೇ ಮರ್ಯಾದೆ.

ಸಿದ್ದಯ್ಯ: ಇದೇ ಕಛೇರಿಯೊ? ಇದೆಷ್ಟು ಹಾಳುಬಿದ್ದದೆ! ಹೊರಗಣಿಂದ ಬಂದರೆ, ಹಾಳುಬಿದ್ದ ಛತ್ರದ ಹಾಗೇ ಕಾಣುತ್ತದಲ್ಲ! ಇಲ್ಯಾರು ಇಲ್ವಲ್ಲ ಸ್ವಾಮಿ! ಇನ್ನಷ್ಟು ಅಡ್ಡಾಡುತ್ತೇನೆ. ಇಲ್ಲಿನ ಅಭ್ಯಾಸವಾಗಲೀ ಅಂತ.

ಗುಮಾಸ್ತ: ಅಭ್ಯಾಸ ಗಿಭ್ಯಾಸ ಏನೂ ಬೇಡಾ. ಸುಮ್ಮನೆ ಕೂತಿರ ಬೇಕು. ಹಾಗೆಲ್ಲ ಬೆದರಲಿಕ್ಕೆ ನಿಮ್ಮದೇನು ಸುಳ್ಳು ವ್ಯಾಜ್ಯವೋ?

(ಸಿದ್ದಯ್ಯ ಕಾಲ್ಮಣೆ ಮೇಲೆ ಕೂತು ಸಮನ್ಸು ಓದುತ್ತಾನೆ) ಛೇ! ಗುಲ್ಲು ಮಾಡಬಾರದು. ಖಾಮೂಷ್!

ಸಿದ್ದಯ್ಯ: ಅಲ್ಲಾ, ಎಷ್ಟು ನಮೂನೆ ಒಕ್ಕಣೆ ಎಂತ. ಇದರಲ್ಲಿ ತುಂಬ ಸದ್ರಿಗಳೇ. ಸದ್ರಿ ವಾದಿ, ಸದ್ರಿ ಪ್ರತಿವಾದಿ, ಸದ್ರಿ ಜವುಳಿ, ಸದ್ರಿ ಅಂಗಡಿ, ಸದ್ರಿ ತಾರೀಕು; ಎಲ್ಲಾನೂ ಸದ್ರೀನೇ? ಅದೇನ್ರಿ? (ಸ್ವಲ್ಪ ಆಲೋಚಿಸಿದಂತೆ ನಟಿಸಿ, ನಕ್ಕು) ಇದು ಸದ್ರಿ ಮೂನರ ಕಚೇರಿ ಅಂತಾ ಅಷ್ಟು ಸದ್ರಿನೋ?

ಗುಮಾಸ್ತ: ಕಾನೂನೇ ಹಾಗೆ. ವಾಜ್ಯವಾಗುವ ಮೊದಲು ಎಲ್ಲಾ ಸಾದಾ ಸೀದಾ ಮಾತು; ವ್ಯಾಜ್ಯವಾಯ್ತೋ, ಕಾನೂನಿನ ಮಾತೇ ಬೇರೆ. ವಕೀಲರು ವ್ಯವಹರಿಸುವಾಗ ನೋಡಿ; ಅಲ್ಲಲ್ಲಿ ಆಗಾಗ ಈ 'ಸದ್ರಿ' ಬಂದರೆ, ಎಷ್ಟು ಲಕ್ಷಣ ಕಾಣಿಸುತ್ತದೆ!

ಸಿದ್ದಯ್ಯ: ಹಾಗೆಯೋ ಇದು? ಸರಿ. (ಸಮನ್ಸು ಓದಿ ಆಲೋಚಿಸುತ್ತಾನೆ.)................'ಸದ್ರಿ ಪ್ರತಿವಾದಿ' ಅಂದ್ರೆ ಎಲ್ಲಾ ಪ್ರತಿವಾದಿಗಳ ಹಾಗಲ್ಲ—ಇವ ಕಳ್ಳ ಸುಬ್ಬಯ್ಯ ಅಂತ. ಅಲ್ವೆ? 'ಸದ್ರಿ ಜವ್ಳಿ' ಅಂದ್ರೆ— ಸುಮ್ನೆ ಜವ್ಳಿಯಲ್ಲ, ನಮ್ಮ ಪಟ್ಟೇಶಾಲು ಎಂತ. ಸರಿ, ಲಾಯಕ್ಕಾಗಿದೆ ಸ್ವಾಮಿ 'ಸದ್ರಿ' ಒಕ್ಣೆ. ಮಾತಿಗೊಂದು 'ಸದ್ರಿ' ಕೂಡ್ಸಿದ್ರೆ, ಕದ್ರಿ ಬೇತಾಳನ ಹಾಗೆ ತೂಗ್ಬೇಕು ಎದ್ರಿ-ಪ್ರತಿವಾದಿರು.

ಗುಮಾಸ್ತ: ಏನಯ್ಯಾ, ಹಾಗೆಲ್ಲ ಕಛೇರಿಗೆ ತಮಾಸೆನೇ? 'ಕೋರ್ಟ್ ಬೇದಪ್ಪ' ಎಂತಾ ಒಂದು ತಕ್ಕೀರಿದೆ ಗೊತ್ತುಂಟೇ? ಸುಮ್ಮನಿರಿ. (ಸಿಟ್ಟಾಗಿ, ತಲೆಬಾಗಿಸಿ, ರಿಕಾರ್ಡ್ ತೆರೆದು ಬರೆಯುತ್ತಾನೆ.)

ಸಿದ್ದಯ್ಯ: ಕ್ಷಮಿಸಬೇಕು, ಪರಾಕೆ! ಆದ್ರೂ, (ಒಂದು ವೀಳೆಯ ದೆಲೆ ಬೀಡಾ ಅರ್ಪಿಸಿ) ನಾನು ನನ್ನ ವಾಜ್ಮೂಲ ಹೇಳುವಾಗ ಹ್ಯಾಗೆಲ್ಲ ಹೇಳಿದ್ರೆ ನಾಜೋಕಾದೀತೋ ಅದನ್ನು ಕಛೇರಿ ಭಾಷೇಲಿ ಹೇಳೋಣ ಅಂತ. ಅದ್ರ ಅಭ್ಯಾಸವಾಗ್ಬೇಡ್ವೆ ನನಗೆ? ಸ್ವಾಮಿ, ಇದು ಸಾಕ್ಷಿಗಾರರ ಬಗ್ಗೆ ಚೌಕವೋ?

ಗುಮಾಸ್ತ: (ತಲೆಯೆತ್ತದೆ ತನ್ನ ಕೆಲಸಮಾಡುತ್ತಾ ಇರುವಾಗ ಅಸಡ್ಡೆಯಿಂದ) ಹೂಂ.

ಸಿದ್ದಯ್ಯ: ಈಗ್ಯಾರೂ ಇಲ್ವಲ್ಲ. ನಾನಿದ್ರಲ್ಲಿ ನಿಂತ್ಕೊಂಡು ನನ್ನ ಸಾಕ್ಷಿಹೇಳುವ ಹಾಗೆ ಅಭ್ಯಾಸಮಾಡಲೋ, ಸ್ವಾಮಿ? ನನಗಿದೆಲ್ಲ ಹೊಸ ದಾಗಿದೆ ನೋಡಿ, ದಮ್ಮಯ್ಯ—

ಗುಮಾಸ್ತ: ಹೂಂ. (ಅಸಡ್ಡೆಯಿಂದ)

o o o o

(ಸಿದ್ದಯ್ಯನು ಪಂಜರದಲ್ಲಿ ನಿಂತು, ತನ್ನ ಕಥೆಯನ್ನೆಲ್ಲಾ ಮೌನ ವಾಗಿ ಹಾವಭಾವಗಳಿಂದಲೇ ಹೇಳಿಕೊಂಡಂತೆ ನಟಿಸಿ, ನ್ಯಾಯಾಧೀಶರ ಕುರ್ಚಿಗೆ ನಮಸ್ಕಾರಮಾಡಿ ಹೊರಗೆ ಬರುವನು.)

o o o o

ಸಿದ್ದಯ್ಯ: ಸ್ವಾಮಿ, ವಕೀಲ್ರು ಕಕ್ಷಿಗಾರ್ರನ್ನ ಚೆನ್ನಾಗಿ ತರ್ಬೇತು ಮಾಡಿ ತರೋದು ಇದ್ಯಾಗಿಯೇ. ಇದ್ನೋಡಿ, ಪಂಜರದ್ಹಾಗೆ ಇದೆ; ಇದ್ರಲ್ಲಿ ಗಿಳೀಮಾತಿನಂತೆ ವಕೀಲ್ರು ಕಲ್ಸಿಕೊಟ್ಟುದನ್ನು ಬಾಯಿಪಾಠ ಹೇಳ್ಬೇಕೂ ಅಂತ. ಅಲ್ವೆ? ನನಗಂತೂ ವಕೀಲ್ರು ಮಾತ್ರ............!

ಗುಮಾಸ್ತ: ಏನಪ್ಪಾ, ಕಿರಿಂ ಕಿರಿಂ ಎನ್ತಿದ್ದಿ?

ಸಿದ್ದಯ್ಯ: ಅಲ್ಲಾ; ವಕೀಲ್ರಿದ್ದಿದ್ರೆ ಚೆನ್ನಾಗಿತ್ತು ಅಲ್ವೆ? ನನ್ನ ಮಾತನ್ನೆಲ್ಲ ಅವ್ರೇ ಸರಿಮಾಡ್ತಿದ್ರು.

ಗುಮಾಸ್ತ: ವಕೀಲರಿಲ್ಲದೆ ವ್ಯಾಜ್ಯ ಉಳಿದೀತೋ? ಅವರ ಕಸಬೇ ಅದಕ್ಕಾಗಿ. ನಿಮ್ಮ ವಕೀಲರು ಯಾರು? ಎಲ್ಲಿದ್ದಾರೆ?

ಸಿದ್ದಯ್ಯ: ಅವ್ರೋ, ಇಲ್ಲಿಗೆ ಬರಬೇಕೂಂತ ನಿನ್ನೆ ರಾತ್ರೆ ಹೊರ್ಟ ವರು, ಮಳೆ, ಗುಡುಗು, ಮಿಂಚು ಎಲ್ಲಾ ನೋಡಿ ಮನೆಗೇ ನಡೆದ್ರು ಅಂತ ಹೇಳಿ ಕಳ್ಸಿದ್ದಾರೆ. ದೋಣಿಗೋ ಗಾಡಿಗೋ ಹಣಾ ಕೊಟ್ಟು ಬಂದಿದ್ದೆ; ಆದ್ರೆ ಮಳೆ ಗುಡುಗು ಆಗದ ಹಾಗೆ ಮಾಡಬೇಕೂ ಅಂದ್ರೆ ಅದು ಹಣಾ ಕೊಟ್ಟಾಗ್ತದೆಯೇ?

ಗುಮಾಸ್ತ: ವಕೀಲರಿಗೇನು ಮಹಾ ಗುಡುಗಿನ ಭಯ ಎಂತ! ಇಲ್ಲಿ ಕಛೇರಿಯಲ್ಲಿ ನಿಂತು ಮಾತಾಡಿ ಗುಡುಗಿಸಿದ್ರೆ, ನಡುಗಿಸಿಬಿಡುತ್ತಾರೆ. ಪಾಪ, ನಿಮಗೆ ಮಾತ್ರ ಅವರು ಬಾರದೆ ಮೋಸವಾಯ್ತು.

ಸಿದ್ದ: ಸ್ವಾಮಿ, ಹಾಗೆ ಹೇಳುವಷ್ಟು ಮೋಸವೇನೂ ಆಗ್ಲಿಲ್ಲ; ಕಾಸು ಉಳೀತು ಅಂದೆ. ಅದಲ್ಲದೆ ನಾನು ಅಭ್ಯಾಸಮಾಡ್ತೇನಲ್ವೆ? 'ಸದ್ರೀ' ರಾತ್ರಿ, 'ಸದ್ರೀ' ಅಂಗ್ಡೀಂದ, 'ಸದ್ರೀ' ಪ್ರತಿವಾದಿ, 'ಸದ್ರೀ' ಜವ್ವೀನ, ಕದೀವಾಗ ನೋಡಿದ 'ಸದ್ರೀ' ನಾನೇ ಇಲ್ಲಿರುವಾಗ, ಸದ್ರೀ ವಕೀಲ್ರು ಬಂದು ಏನು ಮಹಾ ಮಾಡೋದ್ಕಿದೆ ಸ್ವಾಮಿ? ನೀವೇ ಹೇಳಿರಿ.

ಗುಮಾಸ್ತ: ಇರಬಹುದು ಎನ್ನುವ. ಆದರೆ, ನಮ್ಗೇನು ಗೊತ್ತು?

(ಸುಬ್ಬಯ್ಯ ಬರುವನು—ಸಿದ್ದಯ್ಯ ಮುಖ ನೋಡಲಾರ.)

ಸುಬ್ಬಯ್ಯ: ನಮಸ್ಕಾರಾ, ಇದೇ ನಮ್ಮ ಕಛೇರಿ ಅಲ್ವೆ ಸ್ವಾಮಿ? ಅತ್ನೋಡಿ (ಬೆಂಚಿನ ಮೇಲೆ ಕೂತ ಸಿದ್ದಯ್ಯನನ್ನು ನೋಡಿ) ನಮ್ಮೂರ ಭೂತದ ಗುಡಿಯಲ್ಲಿ ಮಂಚ ಹಾಕಿಟ್ಟಂತಿದೆ.

ಗುಮಾಸ್ತ. ಹ್ಯಂ? ನಿಮ್ಗೇನಿದೆ ಇಲ್ಲಿ? । ವ್ಯಾಜ್ಯವುಂಟೋ ಕೂಡಿರಿ; ಇಲ್ಲವೊ ನಡೀರಿ.

ಸುಬ್ಬಯ್ಯ: ಸಮನ್ಸು ಇದೆ ಅಲ್ಲಾ ಮತ್ತೆ? ಹನ್ನೊಂದು ಗಂಟೆಗೇ ಹಾಜರ್ರಾಗ್ಬೇಕು ಅಂತ.

ಗುಮಾಸ್ತ: ಹಾಗಿದ್ರೆ ಅದೇ ಗಂಟೆಗೇ ಬನ್ನಿ.

ಸುಬ್ಬಯ್ಯ: ರಾಯ್ರು ಎಷ್ಟು ಗಂಟೆಗೆ ಬರ್ತಾರೋ? ವಕೀಲ್ರು ಹೇಳ್ತಿದ್ರು, ಸಮನ್ಸ್‌ದಲ್ಲಿ ಛಾಪೆಯಾಗ್ಯೇ ಇದೆ, 'ಹನ್ನೊಂದು ಗಂಟೆಗೇ' ಅಂತ; ಆದ್ರೆ ರಾಯ್ರು ಕಛೇರಿಗೆ ಬಂದಾಗಲೇ ಹನ್ನೊಂದು ಗಂಟೆ ಹೊಡೀತದೆ ಎಂದು.

ಗುಮಾಸ್ತ: ಹಾಗಿದ್ದರೆ, ಇನ್ನೆರಡು ತಾಸಿನಲ್ಲಿ ರಾಯರು ಬರುತ್ತಾರೆ. ಅಲ್ಲೇ ಕೂತ್ಕೊಳ್ಳಿ.

ಸುಬ್ಬಯ್ಯ: ಇಲ್ಲಿ ಕೂತ್ಕೊಳ್ಳೋದ್ಕಿಂತ ಹೋಟ್ಲಲ್ಲಿ ಕೂತ್ರೆ, ಫಲಾರ ವಾದ್ರೂ ಮುಗಿಸ್ಬಹುದು. ಇಲ್ಲಿ ಈ ಭೂತದ ಮಂಚದ್ಮೇಲೆ ಕೂತ್ಕೊಳ್ಳೋದೆಂದ್ರೆ, ತಗಣೀ ಹಿಂಡು ನಮ್ಮನ್ನೇ ಫಲಾರಾ ಮಾಡ್ತದೆ.

ಗುಮಾಸ್ತ: ಗೊತ್ತಿದೆ—ಅಯ್ಯಾ! ನಿಮ್ಮ ಹೋಟ್ಲು! ದುಡ್ಕೊಟ್ಟು ಊಟಕ್ಕೆ ಕೂತರೆ, ಇಲ್ಲಿ ವ್ಯಾಜ್ಯ ಕರಿಯುವಾಗ ಬಳಸ್ತಾರೆ. ದುಡ್ಡು ಅವರಿಗೆ; ಊಟ ಹೋಯಿತು; ನಂಬ್ರ ಅವಗುಣಾ. ಎಲ್ಲಾ ನಷ್ಟ, ಭ್ರಷ್ಟ, ಕಷ್ಟ—ಮೂರೂ ಒಂದೇ ಸಲ.

ಸುಬ್ಬಣ್ಣ: ಅದೆಲ್ಲ ಕಛೇರಿಗೆ ಬರುವಾಗ್ಲೇ ಗೊತ್ತು. ಸಿವಿಲ್ ವ್ಯಾಜ್ಯ ಅಂದ್ರೆ ಗೊತ್ತಿಲ್ವೆ? ಉಪ್ವಾಸವೂ ಬೇರೆ ಇರ್ಬೇಕೆ? ಈಗ್ಲೆ ಬಂದೆ.

(ಹೋಗುವಾಗ ಸಿದ್ದಯ್ಯನಿಗೂ ಒಂದು ನಮಸ್ಕಾರ.)

ಸಿದ್ದಯ್ಯ: ಇವ್ನೆ ಸದ್ರಿ ಪ್ರತಿವಾದಿ, ಸ್ವಾಮಿ. ಸದ್ರೀ ಜವ್ನೀ ಕದ್ದವಾ! ಅಲ್ಲಾ—ಕಛೇರಿಗೆ ಬಂದಿದ್ದಾನೆ. ನಿಮ್ಮ ಮಾತಿಗೇನೆನ್ತಾನೆ ನೋಡಿ. ಹೋಗ್ವಾಗ, ನನ್ಗೂ ನಮಸ್ಕಾರಾ ಅಂತೆ, ಬದ್ಮಾಷಿ.

ಗುಮಾಸ್ತೆ: ಇವ ಕದ್ದವನಾದ್ರೆ ಕ್ರಿಮಿನಲ್ ವ್ಯಾಜ್ಯಮಾಡಿ ಗ್ರಾಮದಲ್ಲೇ ಉಗ್ರಾಣೀ ವಶಾ ಕೊಟ್ಬಿಲ್ಲವ್ಯಾಕೆ? ಬೇಡೀ ಹಾಕ್ತಿದ್ದನಲ್ಲ!

ಸಿದ್ದಯ್ಯ; ನಮ್ಮ ಉಗ್ರಾಣೀನೇ? ಅವ ಇವನ ದೋಸ್ತಿ! ಹೇಳಿದ್ರೆ, ಇದು ಸಿವಿಲ್ ಬಾಬು ಎಂದಾ ನಮ್ಮ ಸದ್ರಿ ಉಗ್ರಾಣಿ ಬಾಬು! ಹೀಗಾಗಿ ಇವನ ಬಾಯೀಲಿ ಬಿದ್ದೆ.

ಗುಮಾಸ್ತೆ: ನಿಜವೂ ಜೋರಾಗಿದ್ದಾನೆ. ಬಾಯಿ ಮಹಾ ತೆರೆಯುತ್ತಾನೆ.

ಸಿದ್ದಯ್ಯ: ಬಾಯಿ! ಬಾಯಿ ತೆರೆದಾ ಅಂದ್ರೆ ಸುಳ್ಳಿನ ಗೇರ್ಸೊಪ್ಪೆ ಜೋಗೇ ಹರೀತಿದೆ. ದೇವ್ರಿದ್ದಾನೆ, ಅವ್ನೇ ಕಾಪಾಡ್ಬೇಕು. ಇವ್ನ ಸುಳ್ಳು ಎಷ್ಟೆಂದ್ರೆ,—ಇವ ಮಾತಾಡುವಾಗ ಸಿಡ್ಲು ಬಡೀದಿದ್ರೆ ಸಾಕು, ಈ ಕಛೇರಿಗೆ!

ಗುಮಾಸ್ತೆ: ಸುಳ್ಳಿಗೊಂದು ಸಿಡಿಲ್ಬಡ್ಯೋವಂತಿದ್ರೆ, ಈ ಕಛೇರಿಯೆಲ್ಲಾ ಎಂದೋ ಪುಡೀಕಲ್ಲಿನ ರಾಶಿಯಾಗ್ತಿತ್ತು. ಆದ್ರೂ ಕಾನೂನು ಸರೀ ಉಂಟೂ ಎಂತಾ ನ್ಯಾಯ ನಡೀತಾ ಇದೆ.

(ವಕೀಲ ಗಂಗಯ್ಯ ಬರುವನು.)

ಗಂಗಯ್ಯ: ನಮಸ್ಕಾರ ಗುಮಾಸ್ತ್ರೆ. ಹೋದ ಸಲ ಇಲ್ಲಿಗ್ಬಂದಾಗ ನನ್ನ ಹೊಸ ಕೊಡೇನ ಯಾರೋ ಎತ್ಕೊಂಡ್ರು. ಬರೇ ಹಳ್ತೊಂದು ನನಗಿಟ್ಬಿಟ್ಟಿದ್ದಾರೆ. ಈ ಸಲವಾದ್ರೂ ಎತ್ಕೊಂಡಾರು ಎಂತ, ನಮ್ಮ ಕೊಡೇನ ನಿಮ್ಮ ಕುರ್ಚೀ ಬೆನ್ನಿಗೆ ಸಿಕ್ಕಿಸಿಡ್ತೇನೆ. ಆಗ್ದೆ?

ಗುಮಾಸ್ತೆ: ಅದೂ ಹೌದು, ಯಾರ್ಯಾರ ಮೆಟ್ಟು, ಕೊಡೆ ಎಲ್ಲಾ ಹಳ್ತಾಗಿದೆಯೋ ಅವ್ರು ಇಲ್ಲಿಗ್ಬಂದು ನಿಮ್ಮ ಅಡ್ಡಸವಾಲು, ಸೇರಿಂಗು ಎಲ್ಲಾ ಕೇಳ್ತಾರೆಂಬಂತೆ ನಿಂತ್ಕೊಂಡು, ಮೆಲ್ಲಗೆ ಹೊಸ್ತನ್ನೆತ್ತಿ ಹಳ್ತನ್ನಿಟ್ಟು

ಜಾರ್ತಾರೆ. ಇದು ಕಛೇರಿ ಎಂತಾ ಏನೋ ಹಳ್ತನ್ನಾದ್ರೂ ಹಿಂದೆ ಬಿಡ್ತಾರೆ; ಇಲ್ದಿದ್ರೆ ಅದನ್ನೂ ಬಿಡ್ತಿದ್ದಿಲ್ಲ; ಕಿಸೇಲಿಟ್ಟುಕೊಂಡು ಜಾರ್ತಿದ್ರು!

ಗಂಗಯ್ಯ: ಕೆಲವರಿಗೆ ಇದೇ ಒಂದು ಕಸಬು. ಇರ್ಲಿ. ಇನ್ನೂ ಸಮಯವಿದೆಯಲ್ಲ, ಇಷ್ಟ್ರಲ್ಲೆ ಬಂದೆ. (ಹೋಗುವಾಗ—)

ಸಿದ್ದಯ್ಯ: ಸ್ವಾಮಿ, ಮಹಾಲಿಂಗಯ್ಯನವ್ರೆ, ನಮಸ್ಕಾರ.

ಗಂಗಯ್ಯ: ನಮಸ್ಕಾರ. ನೀವ್ಯಾರೋ ಗುರ್ತಾಗಲಿಲ್ಲ. ನಾನು ಗಂಗಯ್ಯ, ಈ ಕಛೇರಿಯ ವಕೀಲ.

ಗುಮಾಸ್ತ: ಸುಬ್ಬಯ್ಯನ ವ್ಯಾಜ್ಯದ ವಾದಿ ಸಿದ್ದಯ್ಯ ಅಂದ್ರೆ ಇವರು.

ಸಿದ್ದಯ್ಯ: ಫಜೀತಿ ಆಯ್ತು! ನಮ್ಮೂರ್ರು ಕಳ್ಳಂಗಡಿಗೆ ಜಾತ್ರೆ ಸಮಯ ಬಂದವ್ರು, ನೀವು ಮಹಾಲಿಂಗಯ್ಯ ಎಂತಾ ನನ್ಗೊತ್ತಿಲ್ವೆ? ದೇವ್ರಿಗೆ ಹೂಪೂಜೆಯಾಗ್ತದೆಂತಾ, ಬ್ರಾಹ್ಮಣರಿಗೆ ವಸ್ತ್ರದಾನ ಮಾಡೋದ್ಕೆಂದು ಜರೀದುಪ್ಪಟಿ ಎತ್ಕೊಂಡಿದ್ರಿ. ಅದೀಗ ನಿಮ್ಮ ಕೊರಳು ಸುತ್ತಿದೆ. ಕಳವು ಅಲ್ಲ, ದುಡ್ಡು ಬಾಕಿ ಅಷ್ಟೆ. ಅದ್ರ ಕ್ರಯಾನ ಈಗ ಕೊಟ್ರೆ ಉಪ್ಕಾರ ಅಥ್ವಾ ನಮ್ಕಡೆ ವಕೀಲ್ರು ಬಂದಿಲ್ಲಾ ನೋಡಿ, ನೀವೇ ನನ್ನ ವಕಾಲತ್ತು ನೋಡಿದ್ರೂ ಸಾಕು.

ಗಂಗಯ್ಯ: ನಾನು ಮಹಾಲಿಂಗಯ್ಯನೂ ಅಲ್ಲ; ಇವ್ನನ್ನು ಕಂಡದ್ದೂ ಇಲ್ಲ; ಕಳ್ಳಂಗಡೀ ಜಾತ್ರೆಗೆ ಹೋದದ್ದೂ ಇಲ್ಲ; ದುಪ್ಪಟಿ ಮಾತು ಬಿಡಿ. ಇದಿಷ್ಟ್ರಲ್ಲೆ ಇಷ್ಟು ಸುಳ್ಳಾದ್ರೆ, ನಿಮ್ಮ ವ್ಯಾಜ್ಯ ವ್ಯವಹರಿಸ್ಲಿಕ್ಕೆ ಯಾವ ವಕೀಲ್ರು ಬಂದಾರು?

ಸಿದ್ಧಯ್ಯ: ಸುಳ್ಳು? ನಿಮ್ಮ ಕೊಡೇನ ಕಛೇರೀಲೇ ಯಾರೋ ಕದ್ರು ಎನ್ತೀರಲ್ಲ! ನಮ್ಮಲ್ಲಿಂದ ಜರೀದುಪ್ಪಟಿ ತಂದವ್ರು ಸದ್ರಿ ಜರೀದುಪ್ಪಟಿ ತಂದಾಗ ಅದನ್ನು ನಿಮಗೆ ಕೊಟ್ಟ ಸದ್ರಿ ಸಿದ್ದಯ್ಯನೇ ನಾನು—ಪ್ರತ್ಯಕ್ಷ ಸುಳ್ಳಾಡ್ತಿರಲ್ಲಾ!!

ಗಂಗಯ್ಯ: ಏನಯ್ಯ, ನನ್ನನ್ನು ದುಡ್ಡು ಕೊಡದ ಘಟಿಂಗನೆಂದು ಮಾಡಿ ಬೈತೀರಿ? ಗುಮಾಸ್ತರೇ, ನಿಮ್ಮೆದ್ರಲ್ಲೆ ನನ್ನ ಅವಮಾನಮಾಡಿದ್ರು, ಸುಳ್ಳಾಡಿ! ನೀವು ಸಾಕ್ಷಿ. ಅವ್ರ ಮಾತು ಬರೆದ್ಕೊಳ್ಳಿ—ಈಗಲೇ ಈ ಕಛೇರೀಲೇ ಮಾನನಷ್ಟದ ವ್ಯಾಜ್ಯ ದಾಕಲುಮಾಡ್ತೇನೆ ನೋಡಿ!

ಸಿದ್ದ: ಮತ್ತೆ ನಾನೇನ್ಬಿಡೋನ್ನೇ ಅಂತಾ. ಈ ಕಛೇರೀಲೇ ರಾಯ್ರು ಮುಂದೆ ನಾನು ಹೇಳ್ಕೊಳ್ತೀನೆ. ಗುಮಾಸ್ತ್ರೇ, ನನ್ನ ಮಾತನ್ನೆಲ್ಲ ನೆನ ಪಿರುವ ಹಾಗೆ ಬರ್ದಿಟ್ಕೊಳ್ಳಿ ಅಂದೆ. ನೀವು ಸಾಕ್ಷಿ.

ಗುಮಾಸ್ತ: ಇಡೀ ಜನ್ಮ ಬರ್ದುರ್ ಬರ್ದುರ್ ಬೆನ್ನು ಮುರೀತು, ತಲೆ ಕರಡಾಯ್ತು. ಇನ್ನಿದನ್ನೂ ಬರ್ಯ್ಯೋದೆಂದ್ರೆ? ಬಂದೆ........(ಹೋಗ್ತಾನೆ.)

ಗಂಗ: ನಾನು ದುಡ್ಕೊಡದೆ ದುಪ್ಪಟಿ ತಂದವ್ನಂತೆ! ಮತ್ತೆ ನೆವ ಹೇಳಿ ವಕಾಲತ್ತು ಧರ್ಮಕ್ಕೆ ಮಾಡಿಸ್ತಾನೆ! ಸುಬ್ಬಯ್ಯನ ವಕಾಲತ್ತೇ ಸಾಕು ನನಗೆ.

ಸಿದ್ದಯ್ಯ: ಹೌದು, ಅಷ್ಟೆ ಸಾಕು. 'ಕಳ್ಳ ಕಳ್ಳಗೆ ನಂಟು' ಎನ್ತಾ ರಲ್ಲ, ಅದರ ಹಾಗೆ. ಆದ್ರೆ ನಾನು ಸದ್ರಿ ದುಪ್ಪಟಿಯ ಹಣಕ್ಕಾಗಿ ವ್ಯಾಜ್ಯ ಖಂಡಿತ ದಾಖಲ್ಮಾಡೋದೇ ನೋಡಿ........ಬಂದೆ........(ಹೋಗ್ತಾನೆ.)

ಗಂಗ: ಏನು ಗಂಡಾಂತರ! ಸುಬ್ಬಯ್ಯನಂತೂ ಕಾಸೂ ರುಸುಂ ಕೊಡೋ ಹಾಗಿಲ್ಲ. ಅವ್ನ ವಕಾಲತು ಇರುವಾಗ ಇವ್ನ ವಕಾಲತ್ತು ಪಡಿಯಲಿಕ್ಕೂ ಇಲ್ಲ. ಇನ್ನು ದಿನಹರ್ಣೆ ಮಾಡೋದ್ಕಾಗಿ ಇವ್ನ ಮೇಲೆ ಹೂಡೋದೇ ಮಾನನಷ್ಟದ ವ್ಯಾಜ್ಯ.

(ಸುಬ್ಬಯ್ಯ ಬರುವನು.)

ಸುಬ್ಬ: ಯಾವ ವ್ಯಾಜ್ಯ ಸ್ವಾಮಿ? ನನ್ತಾಗ್ಲಿ ಮೊದ್ಲು. ರಾಯ್ರು ಬರೋ ಮೊದ್ಲು ನನ್ನನ್ನು ತಬೇಶತು ಮಾಡ್ತೇನೆ ಎಂದಿರಿ. ನಾನು ಎತ್ಕೊಂಡ ಶಾಲಿನ ವಿಷಯ ನಾನೇನೆನ್ಬೇಕೋ ಹೇಳಿ.

ಗಂಗ: ಈ ಪಂಜರದಲ್ಲಿ ನಿಂತ್ಕೊಂಡು ಹೀಗೇ ಹೇಳ್ತೀರೋ ಅಂತ. (ಸ್ವಗತ) ಸ್ವಲ್ಪ ಬೆದರಿಸಿ ನಿರಾಶೆ ಹುಟ್ಸಿಸಿದ್ರೆ, ರುಸುಂ ಏರೋದು.

ಸುಬ್ಬ: ರಾಮ! ಅಲ್ಲಿ ಹಾಗ್ಹೇಳ್ತೀನೆಯೆ? ಇಲ್ಲಿ ನೀವು ಕಲಿಸಿಕೊಟ್ಟು ದನ್ನೆ ಅಲ್ಲಿ ನಿಂತು ಬಾಯಿಪಾಠ ಹೇಳೋದು ತಬೇಶತ್ಮಾಡಿ.

ಗಂಗ: ಅದೆಲ್ಲ ಮಾತ್ಬಿಡಿ. ಇಲ್ಲಿ ದೇವ್ರ ಮುಂದೆ ನಿಂತ್ಕೊಂಡು ಪ್ರಮಾಣಮಾಡಿ ಹೇಳೋದು. ಸುಳ್ಳು ಹೇಳಬಾರ್ದು. ದೇವ್ರ ಮುಂದೆ ಹೇಳೋದು, ಹಂ!

ಸುಬ್ಬ: ಕಳವುಮಾಡಿ ಇಲ್ಲಾ ಎನ್ನೋದೋ? ಕಳವುಮಾಡಿಲ್ಲ ಎನ್ನೋದೋ? ದೇವ್ರ ಮುಂದೆ ಪ್ರಮಾಣ ಏನೆನ್ನೋದು?

ಗಂಗ. ಹಾಗೆಂದ್ರೆ ಎಲ್ಲಾ ಮುಗೀತು.

ಸುಬ್ಬ: ಮತ್ತೇನೆನ್ಬೇಕು? ನಾನು ಕದ್ದಾಗ ಅವ ಕಂಡಿಲ್ಲ ಎನ್ತೇನೆ. ಆಗ ಅವ್ನ ಸಾಕ್ಷಿನೇ ಸುಳ್ಳಾಗ್ತದೆ. ಬೇರೆ ಸಾಕ್ಷಿ ಇಲ್ಲ. ಗೆದ್ದೆ!

ಗಂಗ: ಸರಿ! ನಿಮ್ಮ ವಕಾಲತ್ತೇ ನನಗೆ ಬೇಡ.

ಸುಬ್ಬ: ಸಿಟ್ಟಾಗೋದೇ ವಕೀಲ್ರೆ? ನೀವೇ ಹೇಳಿ. "ಸತ್ಯ ಹೇಳಿದ್ರೆ ಎಲ್ಲಾ ಮುಗೀತೆ"ನ್ತೀರಿ: ಸುಳ್ಳು ಹೇಳ್ಲಿಕ್ಕೆ ಪ್ರಮಾಣಮಾಡಿದ ಮೇಲೆ ಆಗ್ತದೆಯೋ? ರುಸುಂಮಿನ ಕಡೆಗೆ ನೋಡಿ! ನನಗೆ ಗುಣವಾದ್ರೆ ಇದೆಲ್ಲಾ ಹಣ ನಿಮ್ಗೇನೆ; ಅವ್ನ ಆ ಜಮ್ಗೀ ಗಂಟು ಮಾರಿ ಕಟ್ಟಿದ ಹಣದ ಈ ಗಂಟು ನಿಮ್ಗೇನೆ.

ಗಂಗ: ಗುಣವಾದ್ರೂ ಅವ್ಗುಣವಾದ್ರೂ ರುಸುಂ ಕೊಡ್ಲೇ ಬೇಕು. ತಿಳೀತೋ? ರು-ಸುಂ ಎಂದ್ರೆ ಅದೇ ಅರ್ಥ. ರುಜುವಾಗಲಿ, ಸುಳ್ಳಾಗಲಿ, ರು-ಸುಂ.

ಸುಬ್ಬ: ಅವ್ಗುಣವಾದ್ರೆ,—ಹಣನಷ್ಟ ಬೇರೆ, ಮಾನನಷ್ಟ ಬೇರೆ. ಪುನಹ ರುಸುಂ ಅಂದ್ರೆ?

ಗಂಗ: ಹಾಗೋ, ತೀರ್ಪು ಹೇಳಿದ ಕೂಡ್ಲೆ ನನ್ನ ರುಸುಂ ಕೊಡಬೇಕು. ಒಲ್ಲದಿದ್ರೆ ಈಗ್ಲೆ ಹೊರಟೆ.

ಸುಬ್ಬ: ಹೂಂ, ತಡೀರಿ. ಪ್ರಮಾಣ ಮಾಡ್ಸುವಾಗ, ಸುಮ್ಮನಿರ್ತೇನೆ. ಗಂಟಲ್ನೋವು ಎನ್ತೇನೆ. ಹ್ಯಾಗೆ? ಉಬ್ಬಸ, ಕ್ಷಯ, ಕೆಮ್ಮು ಆಗ್ತದೆ ಎನ್ತೇನೆ. ಯಾವುದಾದೀತು ಹೇಳಿ? ಯಾವುದನ್ನು ನಂಬ್ಯಾರು?

ಗಂಗ: ಮಹಾರಾಯ, ಪ್ರಮಾಣ ಮಾಡಿಸುವಾಗ ತಲೆ ಬಾಗಿಸಿ ಹೂಂ ಎಂದ್ರೂ ಸಾಕು. ಮುಂದೆ ಪ್ರಶ್ನೆಗೆಲ್ಲ ಏನಾದ್ರೂ ಉತ್ತರ ಹೇಳಬೇಕು.

ಸುಬ್ಬ: ಏನಾದ್ರೂ ಅಂದ್ರೆ, ಕಲ್ಸಿ ಕೊಡಬೇಡ್ವೆ? ತರ್ಬೇತು ಮಾಡಿರಿ. ಒಟ್ಟಾರೆ, ಈ ವ್ಯಾಜ್ಯದಿಂದ ನನ್ನ ತಲೆಯೋ ಹಾಳಾಗಿದೆ.

ಗಂಗ: ಇದ್ನೆಲ್ಲಾ ನೋಡಿ ನನ್ನ ತಲೆಯೂ ಹಾಳಾಗಿದೆ. ಮನುಷ್ಯನಂತೆ ಇರಬೇಡ್ವೆ? ಕಲ್ಸಿಕೊಡು, ಎಂದ್ರೆ ನೀನೇನು ಮಾತಾಡಬಾರದವನೋ? ಮೂಗನೋ? ಮೂಗನಾದ್ರೂ ಬಾಯಿಯಿಂದ ಧ್ವನಿ ಹೊರಡಿಸುತ್ತಾನೆ!

ಸುಬ್ಬ: (ಈ ಮಾತನ್ನು ಚೆನ್ನಾಗಿ ಗ್ರಹಿಸಿಕೊಂಡು ನಕ್ಕು)—ಹಾಗೆ ಯೇ ನಾನು ಮಾಡ್ತೇನೆ ಸ್ವಾಮಿ. ಇದೇ ತಬೇ೯ತು, ಸಾಕು. ಇನ್ನಾಗ್ಲಿ ವಿಚಾರ್ಣೆ. ನಾನು ಮೂಗನೆ!

ಗಂಗ: ಹಾಗೆ ಮಾಡಿದ್ರೆ, ನಮ್ಮಿಂದೇನೂ ರುಜುವಾತು ಸಿಗುವ ಹಾಗಿಲ್ಲ; ಅವ್ನ ಹೇಳಿಕೆಯೆಲ್ಲ ತಪ್ಪಾಗುವ ಹಾಗೆ ನಾನು ನೋಡ್ತೇನೆ. ಕದ್ದದ್ದೆಂಬುದು ಅಮಾಸೇ ನಡುರಾತ್ರೆ ಮಳೇಲಿ; ಸಾಕ್ಷಿಗಾರರೇ ಇರ ಲಾರರು.

ಸುಬ್ಬ: ಬ....ಬ....ಬ....ಬ....ಬ....(ಎಂದು ಧ್ವನಿ ಹೊರಡಿಸುವನು. ವಕೀಲನು ನಕ್ಕು ಸಂತೋಷಿಸುತ್ತಾನೆ.)

[ರಾಯರು, ಸಿದ್ದಯ್ಯ, ಗುಮಾಸ್ತ ಎಲ್ಲಾ ಬರುವರು. ವಂದನೆಗ ಳಾದ ಬಳಿಕ ಅವರವರ ಸ್ಥಳದಲ್ಲಿ ಕುಳಿತುಕೊಳ್ಳುವರು.]

ನ್ಯಾಯಾಧೀಶ: ಸಿದ್ದಯ್ಯ—ನಿಮ್ಮ ವಕೀಲರು ಮಳೆ ಅಂತ ಬರ್ಲಿ ಲ್ವಂತೆ,—ನನಗೆ ತಿಳ್ಸಿದ್ದಾರೆ. ನಿಮಗೆ ಸಾಕ್ಷಿಗಾರರೂ ಇಲ್ಲ; ವಕೀಲ್ರೂ ಇಲ್ಲಾ. ನೀವೇ ನಿಮ್ಮ ವಾಜ್ಯ ವ್ಯವಹರಿಸುತ್ತಿರೋ ಇನ್ನಾರ್‍ರೂ ಇದ್ದಾರೋ?

ಸಿದ್ದಯ್ಯ: ಇನ್ನೇನ್ಮಾಡಲಿ ಬುದ್ಧಿ? ಹಾಗೇ ಮಾಡ್ಬೇಕಾಯ್ತು. ಆದ್ರೆ ಸದ್ರಿ ಅಂಗ್ಡಿಯಿಂದ ಸದ್ರಿ ಜವ್ಳಿ ಕದ್ದದ್ದನ್ನು........?

ನ್ಯಾಯಾಧೀಶ: ಛೇ! ಹಾಗೆಲ್ಲ ಆಡಬಾರದು. ಪ್ರಮಾಣವಾಗ್ಲಿ·

(ಗುಮಾಸ್ತನು ಸಿದ್ದಯ್ಯನನ್ನು ಪಂಜರದೊಳಗೆ ನಿಲ್ಲಿಸಿ ಪ್ರಮಾಣ ಮಾಡಿಸುವನು. ಅವನ ಹೇಳಿಕೆಗೆ ಆರಂಭ.)

ಸಿದ್ದಯ್ಯ: ನಾನು ಇಪ್ಪತ್ತು ವರ್ಷಗಳಿಂದ ಕಳ್ಳಂಗಡಿಯ ದೇವಸ್ಥಾ ನದ ಹತ್ತಿರ ಜವ್ಳಿ ವ್ಯಾಪಾರ ಮಾಡಿ ಜೀವನ ಮಾಡ್ತೇನೆ. ಸದ್ರಿ ಜವ್ಳೀ ವ್ಯಾಪಾರದಲ್ಲಿ ಸದ್ರಿ ಕಳವಾದ ದಿನದ ಹಿಂದೆ ಒಂದು ತಿಂಗಳಿಂದ್ಲೂ ಚಿಲ್ಲರೆ ಕಳವುಗಳು ಆಗುತ್ತಿದ್ದುದನ್ನು ನೋಡಿ, ಕಳ್ಳನನ್ನು ಹಿಡಿಯ ಬೇಕೆಂದಿದ್ದೆ; ಅದ್ರಲ್ಲೂ ಸದ್ರಿ ಅಂಗಡಿಯಲ್ಲಿ ಸದ್ರಿ ಕಳವಾದ ಜವ್ಳಿಯು ಊರಲ್ಲಿ ಕೆಲವರ ಮೈ ಮೇಲೂ ಇದ್ದುದನ್ನು ಕಂಡಿದ್ದೆ. ಸದ್ರಿ ವಿಷಯ ಹೀಗೆ ಸಂಶಯವಾಯ್ತು. ಸದ್ರಿ ಜವ್ಳಿಯಲ್ಲಿ ಕೆಲವು ಸದ್ರಿ ಸುಬ್ಬಯ್ಯನ ಮೈ ಮೇಲೂ ಕಂಡು ಬಂತು. ಸದ್ರಿ........

(ವಕೀಲ 'ಸದ್ರಿ–ಸದ್ರಿ' ಕೇಳಿ ನಗುವನು.)—ನೆಗಾಡ್ರಿ, ನಾನೇನೂ ಈ ಬೇರೆ ಹೆಸ್ರು ಕೊಟ್ಟು ಎತ್ತಿದ ಸದ್ರಿ ದುಪ್ಪಟ್ಟೇನ ಮರ್ತಿದ್ದಿಲ್ಲ—

ನ್ಯಾಯಾ: ಈ ದುಪ್ಪಟಿ ಎಲ್ಲಿಂದ ಬಂತು? ಸದ್ರಿ ಶ್ಯಾಲಿನ ವಿಷಯ ವ್ಯಾಜ್ಯ; ಅನಾವಶ್ಯಕ ಮಾತೆತ್ತೇಡಿ.

ಸಿದ್ದ: ಇಲ್ಲ ಬುದ್ಧಿ. ಸದ್ರಿ ಜಪ್ಪಿ ಸದ್ರಿ ಸುಬ್ಬಯ್ಯನ ಮೇಲೆ ಕಂಡೆ.

ನ್ಯಾಯಾ: ಅಂದ್ರೆ, ದುಪ್ಪಟೀನೋ ಕಳವಾದ್ದು? ಬೇರೆ ಹೆಸ್ರು ಕೊಟ್ಟಿದ್ದೆಂದ್ರೆ ಶಾಲಿಗೋ?

ಸಿದ್ದ: ಹೌದು ಬುದ್ಧಿ. ಈಗ ಸದ್ರಿ ಕಳವಿನ ವ್ಯಾಜ್ಯ ದಾಖಲ್ಮಾಡಿದ್ದುಂಟಲ್ಲಾ, ಅದು ಸದ್ರಿ ಶಾಲಿನ ವಿಷಯ........

[ವಕೀಲ ನೆಗಾಡುವನು.]

—ನಕ್ಕರೇನಾಯ್ತು? ಸದ್ರಿ ಸುಬ್ಬಯ್ಯನನ್ನು ಹಿಡೀಬೇಕೂಂತ ರಾತ್ರಿಯಲ್ಲಿ ಹೊಸ ಜಪ್ಪೀನೆಲ್ಲ ಸದ್ರಿ ಅಂಗ್ಡಿಯೊದ್ರು ತೂಗ ಹಾಕಿ, ಜಾತ್ರೇ ವೇಳೆ ಮಿಣಿ ಮಿಣಿ ದೀಪವುರಿಸಿ ಗಿರಾಕಿಗಳನ್ನು ಕಾದುಕೂತಂತೆ ಇದ್ದೆ. ಅಂಗ್ಡೀ ಜಗ್ಲೀ ಮೇಲೆ ಒರಗಿದೆ. ಅಮಾವಾಸೆ ದೀಪೋತ್ಸವ. ಜನಗಳು ಬರ್ತಾ ಹೋಗ್ತಾ ಇದ್ದಾಗ, ಸದ್ರಿ ಸುಬ್ಬಯ್ಯನೂ ಅತ್ತ ಜನರ ಹಿಂಡಿನೊಳಗೆ ಸುಳಿದುದ್ದನ್ನು ಕಂಡೆ. ಇನ್ನು ಈಗಾಗ್ಲೆ ಬಂದಾನು ಎಂದು ಮತ್ತೂ ನಿದ್ದೆಯಿಂದ ಕಣ್ಮುಚ್ಚಿದಂತೆ ಒರಗಿದೆ.

ನ್ಯಾಯಾ: ಬಹಳ ಉದ್ದಕ್ಕೆ ಹೇಳಬಾರದು. ಕಳವೆಲ್ಲಿಯಾಯಿತು?

[ವಕೀಲ ನಗುವನು.]

ಸಿದ್ದ: ಹಾಗೆ ಮಲಗಿದ್ದಂತೆ,—ನೆಗಾಡಿ, ನೆಗಾಡಿ!—ಜರೀ ದುಪ್ಪಟಿ ಮಯ್ಮೇಲಿದ್ದಿಲ್ಲ ನೋಡಿ—

ನ್ಯಾಯಾ: ಪುನಃ ಈ ಜರೀ ದುಪ್ಪಟಿ ಎಲ್ಲಿಂದ? ಕಳವಾದ್ದೆಂಬುದು ಶ್ಯಾಲೋ? ದುಪ್ಪಟಿಯೋ? ಜರೀ ದುಪ್ಪಟಿಯೋ? ಅಥವಾ ಎಲ್ಲ ಅದು ಒಂದೆಯೋ? ಬೇರೆ ಬೇರೆಯೋ?

ಸಿದ್ದ: ಬೇರೆ ಬೇರೆ ಬುದ್ಧಿ—! ಜರೀ ದುಪ್ಪಟ ಬೇರೆ, ಶ್ಯಾಲು ಬೇರೆ.

ನ್ಯಾಯಾ: ಶ್ಯಾಲಿನ ಸುದ್ದಿ ಹೇಳ್ಬೇಕು ಮತ್ತೆ; ಆ ದುಪ್ಪಟಿ ಯಾಕೆ? (ವಕೀಲ ನಗುವನು.)

ಸಿದ್ದ: ಅಂದ್ರೆ, ಹಾಗೆ ಅರ್ಜಿ ಮಾಡ್ಕೊಳ್ತೀನೆ ಬುದ್ಧಿ. ಇನ್ನು ನಕ್ರೆ ನಾನು ಮರೀತ್ತೇನೆಯೆ? ಹಾಗೆ ಸದ್ರಿ ರಾತ್ರಿ ನಾನು ಸುಮ್ಮನೆ ಕಣ್ಮುಚ್ಚಿ ಒರಗಿ ಕೊಂಡಾಗ, ಭಾರೀ ಮಳೆ, ತುಂಬಾ ಗಾಳಿ. ಹಾಗೆ ನಡು ರಾತ್ರಿ ಯಾಗಿತ್ತು; ಜೋರು ಗಾಳಿ ಬೀಸಿದಾಗ ದೀಪ ನಂದಿ ಹೋಯ್ತು. ಕತ್ತ ಲಾಯ್ತು. ಬೇಗ್ಬೇಗ ಎದ್ಕೊಂಡು ದೀಪಪುರಿಸಿ ನೋಡ್ತೇನೆ, ಕೆಲವು ಜನಗೇ ಇದ್ದಿಲ್ಲ. ನಾಲ್ಕಾರು ಜನ ದೂರ ಹೋಗುತ್ತಾ ಇದ್ದರು. ಇವ್ರಲ್ಲಿ ಸದ್ರಿ ಸುಬ್ಬಯ್ಯ ಇದ್ದಾನೆ ಎಂದು ಹಿಂದಿನಿಂದ ನೋಡ್ಕೊಂಡೆ.

ನ್ಯಾಯಾ: ಹಿಂದಿನಿಂದ, ದೂರದಲ್ಲಿ! ಅಮಾಸೇ ನಡು ರಾತ್ರಿ. ಸರಿ, ಹೂಂ! ಮತ್ತೆ........(ವಕೀಲ ನಗುವನು.)

ಸಿದ್ದ: (ವಕೀಲನಿಗೆ) ಖಾವಂದರು ಬರೆದ್ಕೊಂಡಾಯ್ತು. ಸನ್ನಿಧಾ ನಕ್ಕೆ ತಿಳಿದೇ ಇದೆ. ಇನ್ನು ನೀವು ನಕ್ಕರೇನು, ಸುಳ್ಳಾಗ್ತದೆಯೆ? ದುಪ್ಪ ಟಿಯ ಕ್ರಯಕ್ಕೆ ಮಾತ್ರ ವ್ಯಾಜ್ಯ ಮಾಡ್ಬೇಕೂಂದಿದ್ದೆ. ಹೀಗೆಲ್ಲ ಉಪದ್ರ ಕೊಟ್ಟರೆ ಇನ್ನು ಬಡ್ಡಿಯನ್ನೂ ಕೂಡ್ಸಿ ವ್ಯಾಜ್ಯ ಮಾಡ್ತೇನೆ.

ನ್ಯಾಯಾ: (ಇಷ್ಟನ್ನೂ ಬರೆದುಕೊಳ್ಳುತ್ತಾ ಇದ್ದು, ತಪ್ಪಿತೆಂದು ತಿಳಿದು) ವಾಜ್ಯಾಲದಲ್ಲಿ ಎಲ್ಲಾ ಕಲಸಿ ಹೋಯ್ತಲ್ಲಾ! ಇದು ರುಜು ವಾತಲ್ಲ.

ಸಿದ್ದ: ರುಜುವಾತು ಕೊಡ್ತೇನೆ ಖಾವಂದರೆ,—ಸದ್ರಿ ಸುಬ್ಬಯ್ಯನ ಮೈ ಮೇಲೆ ಸದ್ರಿ ಶಾಲನ್ನು ಕಂಡ ಬಳಿಕ, ಅದೆಲ್ಲಿಂದ ಬಂತು? ಯಾವಾಗ ಕೊಂಡದ್ದು? ಎಷ್ಟು ಕ್ರಯ? ಎಂದು ಕೇಳ್ಸಿದೆ. ಅದ್ರೆ ಒಬ್ಬೊಬ್ಬರಿಗೆ ಒಂದೊಂದುತ್ತರ. ಅದ್ರಿಂದ ಸದ್ರಿ ರಾತ್ರಿ, ಸದ್ರಿ ಸುಬ್ಬಯ್ಯ, ಸದ್ರಿ ಶಾಲನ್ನು ಸದ್ರಿ ರೀತೀಲಿ ಕಳವುಮಾಡಿದ್ದು ಎಂತಾ ನನ್ನ ವ್ಯಾಜ್ಯಾ— ಪುಣ್ಯವುಳ್ಳ ಖಾವಂದರು ದೈನ್ಯವುಳ್ಳ ನನ್ನ ಹೇಳಿಕೆ ಲಾಲಿಸಿ, ನ್ಯಾಯ ಕಾಪಾಡಬೇಕೂ ಅಂತ!

[ವಕೀಲ ನಗುವನು.]

ನ್ಯಾಯಾ: ಸರಿ. ಇನ್ನು ಪ್ರತಿವಾದೀರ ಕಡೆ ವಕೀಲರ ಅಡ್ಡ ಸವಾಲು ಇದೆಯೋ?

ಗಂಗ: ಇಲ್ಲ, ಸ್ವಾಮಿ.

ನ್ಯಾಯಾ: ಪ್ರತಿವಾದಿಯು ಸದ್ರಿ ಕಳವು ಮಾಡುವಾಗ ನೋಡಿ ದ್ದಾದೋ,—ವಾದಿಯಾಗ್ಲೀ ವಾದಿಯು ಕಡೆಯುವರಾಗ್ಲೀ?

[ವಕೀಲ ನಗುವನು.]

ಸಿದ್ದ: ಆಗಾಗ ನಗ್ತಾರೆ. ನನಗೆ ವಕೀಲ್ರು, ಸಾಕ್ಷಿಗಾರ್ರು ಯಾರೂ ಇಲ್ಲಾ ಅಂತ. ಕಳ್ಳನನ್ನು ನಾನೇ ನೋಡಿದ ಮೇಲೆ, ಈ ಕಣ್ಣಿಗಿಂತ ಸಾಕ್ಷಿ ಬೇರೆ ಬೇಕೇ, ಖಾವಂದರೆ? ದುಪ್ಪಟೀನ ದುಡ್ಡು ಕೊಡದೆ ಎತ್ಕೊಂಡೂ ಈಗ ನಕ್ಕರೆ ಸಂದಾಯವ್ಯಾತೋ? ಬಡ್ಡೀ ಸಮೇತ ವಸೂಲ್ಮಾಡ್ತೇನೋ ಇಲ್ವೊ ನೋಡಿ. ಈ ಕಳ್ಳರನ್ನು........?

ನ್ಯಾಯಾ: ಹಾಗೆಲ್ಲ ಹೇಳಬಾರದು. ಕಛೇರಿಯಲ್ಲಿ 'ಈ ಅಸಾಮಿ ಕಳ್ಳಾ'ಯೆಂದು ತೀರ್ಮಾನವಾಗುವ ಮೊದ್ಲು ಕಳ್ಳನನ್ನೆ ಆದ್ರೂ ಕಳ್ಳಾ ಎಂದು ಕರೆದರೆ ಅದೇ ಮಾನನಷ್ಟ ಆಗ್ತೀತೋ?

ಸಿದ್ದ: ಅಯ್ಯೋ ಖಾವಂದರೆ, ಕದ್ಯೋದು ಬೇರೆ; ನಗೋದು ಬೇರೆ. ಆದ್ರೂ ನಾನು ಗೊತ್ತಿದ್ದೂ ಕಳ್ಳಾ ಎಂದ್ರೆ ತಪ್ಪಾಗ್ತದೆಯೋ?

ನ್ಯಾಯಾ: ಅನರ್ಥ! ಕದ್ದದ್ದೆಂಬುದು ಪ್ರತಿವಾದಿ; ನಗೋದೆಂಬುದು ವಕೀಲ್ರು, ಸಾಕು. ಪ್ರತಿವಾದಿ ಬರ್ಲಿ.

[ಸುಬ್ಬಯ್ಯ ಪಂಜರ ಸೇರುವನು. ಪ್ರಮಾಣವಾಗುವಾಗ ಗಂಟ ಲೊಳಗೇ ಬ....ಬ....ಎನ್ನುತ್ತಾನೆ.]

ಗಂಗಯ್ಯ: ಸ್ವಾಮಿ, ಪ್ರತಿವಾದಿ ಸ್ವಲ್ಪ ಸಾಧು. ಇವನ ಮಾತು ಸ್ವಲ್ಪ ತಡೀತದೆ. ಇಷ್ಟು ವರೆಗೆ ಕಛೇರಿಗೆ ಬಂದವ್ನಲ್ಲ; ಬೆದ್ರಿದ್ದಾನೆ. ಸ್ವಲ್ಪ ನಿಧಾನ ವಿಚಾರ್ಣೆಯಾಗ್ಬೇಕೂಂತ ಅರಿಕೆ.

ನ್ಯಾಯಾ: ಆದ್ರೂ ಪ್ರಮಾಣ ಮಾಡ್ತಾನೆ. ಬಾಯಿ ಬರೋದಿಲ್ವೆ?

ಸಿದ್ದ: ಬಾಯಿ ಬಾರದೆ ಏನು........?

ಗುಮಾಸ್ತ: ಸುಮ್ಮನಿರಿ. 'ಜೇದಪ್ಪ' ಮಾಡ್ಬಾರದು.

ಸುಬ್ಬ: ಬ....ಬ....ಬ....ಬ....

ನ್ಯಾಯಾ: ಹೆಸರು ಸುಬ್ಬಯ್ಯ ಅಲ್ವೆ?

ಸುಬ್ಬ: ಬ....ಬ....ಬ....ಬ....

ಸಿದ್ದ: ಸದ್ರಿ ಸುಬ್ಬಯ್ಯ ಇವ್ನೇ ಖಾವಂದರೇ! ಏನು? ಆ ಸುಳ್ಳಿನ ಕಾರ್ಖಾನೆ ತೆರ್ಯೋದಿಲ್ಲ; ಸಿಡಿಲ್ಬಡ್ದೀತೂ ಎಂತಲೋ?

ಗುಮಾಸ್ತೆ: ನಿಮ್ಮಸ್ಯಾಕ್ಯರು ಕೇಳಿದ್ರಯ್ಯಾ, ಸುಮ್ಮಗಾಗಿ.

ಸಿದ್ದ: ನನಗೆ ವಕೀಲ್ರಿಲ್ಲ. ನಾನೇ ನನ್ನ ವಕೀಲನಾಗ್ಬೇಕೂ ಅಂತಂದ್ರು ರಾಯರು.

ನ್ಯಾಯಾ: ಸರಿ. ಈ ವಿಷಯ ಪ್ರತಿವಾದಿ ಏನೆನ್ತಾನೆ?

ಸುಬ್ಬ: ಬ....ಬ....ಬ....ಬ....

(ಏನೇನೋ ವಿಕಟವಾಗಿ ಅಭಿನಯಿಸುತ್ತಾನೆ.)

ನ್ಯಾಯಾ: ಅಯ್ಯಯ್ಯ—ಛೆ!--ಇವ್ನ ತಲೆ ಹಾಳಾಗಿದೆಯೋ?

ಗಂಗ: ಬಹಳ ಸಾಧು. ಮೊದ್ಲೇ ಮಾತು ತಡೀತಿದೆ. ಕಛೇರಿ ಬಾಗ್ಲು ನೋಡಿದವ್ನಲ್ಲ. ಈ ಸುಳ್ಳು ವ್ಯಾಜ್ಯ ಉಂಟಾದ್ರಿಂದ ಮನಸ್ಸು ವಿಕಾರವಾಗಿದೆ. ಈಗಂತೂ ಬೆದರಿದ್ದಾನೆ. ಇಷ್ಟು ದಿನ ಚಿಂತೆಯೇ ಚಿಂತೆ. ನನಗೂ ಪೂರ್ತಿ ಹೇಳಲಾರ. ಅಷ್ಟು ತಲೆ ಕೆರಡಾಗಿದೆ.—ಈ ವ್ಯಾಜ್ಯದಿಂದ.

ನ್ಯಾಯಾ: ಈ ವಾದಿ ಪ್ರತಿವಾದಿಗಳಂಥಾ ಆಸಾಮಿಗಳಿಬ್ಬರೂ ಒಂದೇ ಕಡೆ ಸೇರಿದ್ರೆ, ಯಾರ ತಲೆಯೂ, ನನ್ನ ತಲೆ ಸಹಾ ಕರಡಾದೀತು. ಇರ್ಲಿ, ನಾನು ವಿಚಾರಿಸುತ್ತೇನೆ.

ನ್ಯಾಯಾ: ಎಂದಾದ್ರೂ ಶಾಲು, ದುಪ್ಪಟಿ ಕದ್ದದ್ದುಂಟೆ ಹಿಂದೆ, ಈ ಪಿರ್ಯಾದಿನಲ್ಲಿದ್ದಾಗೆ?

ಸುಬ್ಬ: ಬ....ಬ....ಬ....ಬ....

ನ್ಯಾಯಾ: ಥೂ! ವ್ನೆ ಮೇಲೆ ಇತ್ತೆಂಬ ಆ ಶಾಲು, ಅಥವಾ ದುಪ್ಪಟಿ ಎಲ್ಲಿಂದ? ಯಾವಾಗ? ಯಾರಿಂದ ಎಷ್ಟಕ್ಕೆ ತಂದದ್ದು?

ಸುಬ್ಬ: ಬ....ಬ....ಬ....ಬ....

ಸಿದ್ದ: ದುಪ್ಪಟಿ ಎಲ್ಲಿಂದ ಬಂತು, ಈ ಪ್ರತಿವಾದಿಯ ಮೇಲೆ?

ನ್ಯಾಯಾ: ಬಾಯ್ಮುಚ್ಚು!

ಸುಬ್ಬ: ಬ....ಬ....ಬ....ಬ....

ನ್ಯಾಯಾ: ತಡೀರಿ. ಒಂದೊಂದಾಗಿ ಸವಾಲು ಕೇಳ್ತೇನೆ. ನನ್ನ ಮಾತಿನ ಅರ್ಥವಾಗ್ತದೇ?

ಸುಬ್ಬ: ಬ....ಬ....ಬ....ಬ....

ನ್ಯಾಯಾ: ಸಾಯಲಿ! ಒಂದೇ ಬ—ಬ್ಬ—ಬ್ಬ! ಬ! ಸಾಕು. (ಸುಬ್ಬಯ್ಯ ಪಂಜರದಿಂದ ಇಳಿಯುವನು.)

—ವಕೀಲರೆ! ಇನ್ನು ಸುಮ್ಮನೆ ಸಮಯ ಹಾಳ್ಮಾಡೋದೇಕೆ? ತಲೆ ಹಾಳಾಗಿದ್ದರೂ ಇರಬಹುದು. ಅಪರಾಧ ಮಾಡಿ ತಪ್ಪಿಸಿಕೊಳ್ಳುವುದಕ್ಕೂ ಈ ರೀತಿ ಬಾಯಿ ಮುಚ್ಚಲೂ ಬಹುದು. ಆದ್ರೆ, ವಾದಿಯೇ ಈ ಕಳವು ಮಾಡುವಾಗ ಕಂಡದ್ದಿಲ್ಲ, ಕಂಡಿರಲಾರ. ಶಾಲನ್ನು ಹೊದ್ದುಕೊಂಡವರೆಲ್ಲ ಅವನ ಅಂಗಡಿಯಿಂದ ಕಳವು ಮಾಡಿ ಎತ್ತಿದವ್ರೆಂದ್ರೂ ಅರ್ಥವಿಲ್ಲ. ಅನುಮಾನದ ಮೇಲೆ ಮುಂದರಿಸುವಾ ಅಂದ್ರೆ, ಕದ್ದದ್ದು ದುಪ್ಪಟ್ಟೆನೋ ಶಾಲೋ ತಿಳಿಯದು; ಅಷ್ಟು ಬೆರಸಿ ಹೇಳಿ ವಾಜ್ಯೂಲವಾಗಿದೆ. ಇದಕ್ಕೇನೂ ರುಜುವಾತೂ ಇಲ್ಲ; ಸಂಬಂಧವೂ ಇಲ್ಲ. ವಾದೀಕಡೆ ವಕೀಲರಿದ್ರೆ ಸರಿಯಾಗಿ ವಿಚಾರ್ಣೆಯಾಗ್ತಿತ್ತೋ ಏನೋ! ಅವರೂ ಇಲ್ಲ. ಹಾಗೆಂದು ವಾದಿಯು ತಾನೇ ವಕೀಲನಾಗ್ಬಿಟ್ಟಿದ್ದಾನೆ. ಅಂತೂ,—ಇದು ಸಿವಿಲ್ ಬಾಬೇ ಅಲ್ಲ. ವ್ಯಾಜ್ಯಕ್ಕೇನೂ ಆಧಾರವಿಲ್ಲ. ಪ್ರತಿವಾದಿಯ ಖರ್ಚು ವಾದೀ ತಲೇ ಮೇಲೆ. ವಿಚಾರಣೆ ಮುಗಿಯಿತು.

[ಎದ್ದು ಹೋಗುವರು.]

ಸಿದ್ದ: ಇದೊಂದು ಹೋದ್ರೆ ಹೋಗಲಿ. ಇದ್ರ ಹಣಾನೂ ಕೂಡ್ಸಿ ಆ ದುಪ್ಪಟೀ ಹಣ ಬಡ್ಡಿ ಸಮೇತ ವಸೂಲ್ಮಾಡ್ತೇನೋ ಇಲ್ವೋ ನೋಡಿ.

ಗಂಗ: ನೋಡ್ಕೊಳ್ಳಿ. ನನ್ನ ಸಾಕ್ಷಿಗಾರರು ಇಲ್ಲೇ ಇದ್ದಾರೆ. ಮಾನನಷ್ಟಕ್ಕೆ ವ್ಯಾಜ್ಯ ಮಾಡ್ತೆನೋ ಇಲ್ವೋ ನೋಡಿ.

ಗುಮಾಸ್ತ: (ಅವಸರವಾಗಿ ಹೊರಟು) ನಾನಿಲ್ಲ, ಹ್ಯೇಂ! ನನಗೊಂದೂ ಗೊತ್ತಿಲ್ಲ. ಸುಮ್ನೆ ಸಾಕ್ಷಿಗೀಕ್ಷಿಗೆ ಕರೆಯ ಬೇಡಿ. (ಹೋಗುವನು.)

ಸಿದ್ದ: ಆಯ್ತೋ ನಿಮ್ದೊಂದು ಸಾಕ್ಷಿ? ಇನ್ನೊಬ್ಬ ಇವ ಬ--ಬ್ಬ--ಬ್ಬ-- ಬೊಬ್ಬರಿಯ. ಇವ್ನನ್ನು ಇನ್ನು ಬಾಯಿ ಬಿಡಿಸುವವರ್ಯಾರು ಕೋರ್ಟಿನಲ್ಲಿ? ಬಾಯ್ತೆರೆದಾ ಅಂದ್ರೆ ಟಾಪು! ಈಗಲೇ ನನ್ನ ದುಪ್ಪಟಿ ಕ್ರಯಕ್ಕಾಗಿ ಫಿರ್ಯಾದು ಬರಿಸುತ್ತೇನೆ (ಹೋಗುವನು.)

ಗಂಗ: ಸುಬ್ಬಯ್ಯಾ, ಅಪರಂಜಿಯಯ್ಯಾ ನೀನು! ಗುಣವಾಯ್ತು ಮಾತ್ರವೇ? ನನಗೆ ಕೊಡುವ ರುಸುಂ ಸಹಾ ನಿನಗೇ ಕೂಡಿ ಬಂತು. ನೀನೆ ನನ್ನ ರುಸ್ತುಂ ಪ್ರತಿವಾದಿ! ಅವ್ಗುಣವಾದ್ರೂ ಕೊಡಬೇಕಾಗಿತ್ತು, ಈಗ ಗುಣವಾಗಿದೆ. ಹಣ ಬರ್ಲಿ—! ಕೊಡಪ್ಪಾ ನನ್ನ ರುಸುಂ!

**ಸುಬ್ಬ: ಬ....ಬ....ಬ....ಬ....**

ಗಂಗ: ಬೇಷ್! ಹಾಗೆಯೆ ಇನ್ನೂ ಕೆಲವು ದಿನ, ಅಪ್ಪೀಲಿನ ವಾಯಿದೆ ದಾಟುವ ವರೆಗೆ ಬ—ಬ್ಬ—ಬ್ಬ—ಬ್ಬ ಅಭ್ಯಾಸ ಮಾಡೋದೊಳ್ಳೇದು. ಹೂಂ! ಆದ್ರೆ, ವಾಯಿದೆ ದಾಟಿದ ಮೇಲೆ ಬ—ಬ್ಬ—ಬ್ಬ—ಬ್ಬಾ ಬೇಡಾ! ಹುಚ್ಚ ಎಂದಾರು!

ಸುಬ್ಬ: ಬ....ಬ....ಬ....ಬ....

ಗಂಗ: ಇಕ್ಕೋ—ರಶೀದಿ ಕೊಡ್ತೇನೆ. 'ಇಪ್ಪತ್ತು ರೂಪಾಯಿ ಬಂತು.' ಕೊಡು ನೋಡುವ. ನಷ್ಟವೇನೂ ಇಲ್ಲ. ಅವನ ಜಪ್ತಿ ಕದ್ದು ಗಂಟು ಮಾಡಿದ ದುಡ್ಡಿನ ಗಂಟು; ಬೇಗ, ಹೂಂ!

ಸುಬ್ಬ: ಬ--ಬ--ಬ--ಬ (ರಶೀದಿಯನ್ನು ಕಿಸೆಯಲ್ಲಿ ಬಚ್ಚಿಡುತ್ತಾನೆ.)

ಗಂಗ: ಸರಿ. ಹಾಗೇ ಇರಬೇಕು. ಪಂಡಿತಾ! ಗೃಹಸ್ಥನ ಹಾಗೆ ರುಸುಂ ಕೊಟ್ಬಿಡು ಎಂದ್ರೆ, ಇನ್ಯಾರು ಕಳ್ಳಾ ಎಂದಾರು ಮತ್ತೆ?

ಸುಬ್ಬ: ಬ....ಬ....ಬ....ಬ. (ಹೊರಡುತ್ತಾ) ಬ....ಬ.....ಬ.....ಬ. (ಹೊರಗೆ ನಡೆದು ಬಾಗಿಲಲ್ಲಿ ನಿಂತು) ನಿಮ್ಮಂಥವರು ತರ್ಬೇತು ಮಾಡಿದ್ದನ್ನು ಖಾವಂದರೂ ಒಪ್ಪಿಕೊಂಡುದನ್ನು ಇನ್ನು ಮುರಿಯೋದೆ?

ಗಂಗ: (ಕೂಗುತ್ತಾ ಹೊರಟು) ಸದ್ರಿ ರುಸುಂ ಕೊಡಪ್ಪಾ! ಅಥ್ವಾ ಸದ್ರಿ ರಶೀದಿನ ಹಿಂದಕ್ಕೆ ಕೊಡು.

ಸುಬ್ಬ: (ದೂರ ಹೋಗುತ್ತಾ) ಬ....ಬ....ಬ....ಬ.

ಗಂಗ: ಇನ್ನೇನು ಮಾಡೋದು? ಬ—ಬ—ಬ—ಬ ಎಂದೇ ನಾಮ ಹಾಕಿದನಲ್ಲ! ಅಬ್ಬಬ್ಬ!

[ತೆರೆ ಇಳಿಯುವುದು.]

\- - - - - - - -

ದಿ| ಎಮ್. ಎನ್. ಕಾಮತರವರ 'ಮುಪ್ಪು' ಎಂಬ ಪ್ರಬಂಧವನ್ನು, ಪ್ರಬಂಧಗಳ ಸಂಕಲನದಲ್ಲೇ ಸೇರಿಸಬೇಕೆಂಬ ಉದ್ದೇಶದಿಂದ ಈ ಪಹಿಯಲ್ಲಿ ಪ್ರಕಟಿಸಿಲ್ಲ. ಸಂಪಾದಕ.

# 15

# ಬಾಬಿಗೆ ಬಾಸಿಂಗ

## ಏಕಾಂಕ ಪ್ರಹಸನ


ಪ್ರಹಸನ ರಚಯಿತರು:

ಕುಡ್ಪಿ ವಾಸುದೇವ ಶೆಣೈ

ಮಂಗಳೂರು.



1954.






ಒಂದಾಣೆ ಮಾಲೆ

# ಬಾಬಿಗೆ ಬಾಸಿಂಗ

(ಏಕಾಂಕ ಪ್ರಹಸನ)

---

## ಪಾತ್ರ ವಿವರ.

ಬಾಬಿ .... .... ಸುಮಾರು ಮೂವತ್ತು ವರ್ಷದ ತರುಣ.
ಸಿಂಗ .... .... ಬಾಬಿಯ ಗೆಳೆಯ.
ವಿಶ್ವಾಸರಾಯ .... ಬಾಬಿಯ ಚಿಕ್ಕಪ್ಪ.
ಹಯವದನ .... ನಗರದ ಒಬ್ಬ ವ್ಯಾಪಾರಸ್ಥ.
ಸಂಪತ್ಕುಮಾರ .... ಪೋಲೀಸ್ ಇನ್ಸ್‌ಪೆಕ್ಟರ್.
ಶ್ಯಾಮಸ್ವಾಮಿ .... ಇಬ್ಬರು ಹೆಂಡಿರ ಕಾಟಕ್ಕೆ ಸಿಲುಕಿದವ.
(ಹಯವದನರಾಯರ ಮಗಳು ಲಜ್ಜಾವತಿ; ಇನ್ಸ್‌ಪೆಕ್ಟರರ ಇಬ್ಬರು ಹೆಂಡಿರು.)

## ದೃಶ್ಯ ೧.

(ವಿಶ್ವಾಸರಾಯರ ಮನೆಯ ಕೊಠಡಿ. ಹಯವದನರಾಯರನ್ನು ವಿಶ್ವಾಸ ರಾಯರು ಬೀಳ್ಕೊಡುತ್ತ—)

**ವಿಶ್ವಾಸ:** ಆಗಬಹುದು.

**ಹಯವದನ:** ಆಗಬಹುದು, ವಿಶ್ವಾಸವಿರಲಿ.

**ವಿಶ್ವಾಸ:** ನನ್ನ ಹೆಸರೇ ವಿಶ್ವಾಸ ಎಂದ ಮೇಲೆ ತಿರುಗಿ ಅದನ್ನು ನೆನಪರಿಕೆ ಮಾಡಿಕೊಡಬೇಕೇ?

**ಹಯ:** (ನಗುತ್ತ) ಚೆನ್ನಾಗಿ ಹೇಳಿದಿರಿ. ನನ್ನ ಹೆಸರು ಹಯ ವದನ ಎಂದ ಮೇಲೆ ಕುದುರೆಯ ಓಟದಿಂದಲೇ ಮುಂದರಿದು ಈ ಕಾರ್ಯ ಸಾಧಿಸದೆ ಬಿಡುವೆನೇ?

**ವಿಶ್ವಾಸ:** ಹಾಗೇ ಮಾಡಿ ಸ್ವಾಮಿ! ಮೊದಲೇ ಹೇಳಿದ್ದೇನೆ—ನಮ್ಮ ಹುಡುಗನ ದೋಷಗಳೆಂದರೆ ಮುಖ್ಯವಾಗಿ ಮೂರೇ: ಇಡೀ ದಿನ ತಿನ್ನುತ್ತಾ ಇರೋದು—ಘಸ್ಮರ ಅನ್ನುತ್ತಾರಲ್ಲ, ಹಾಗೆ! ಯಾವ ಕೆಲಸದಲ್ಲೂ ಗಡಿ

ಬಿಡಿ ಜಾಸ್ತಿ–ಎಲ್ಲಾ ಕೆಲಸ ಅರ್ಧಮರ್ಧ! ಎರಡು ತಿಂಗಳಿಗೊಮ್ಮೆ ಒಂದು ಹೊಸ ವೃತ್ತಿ—ಜನಾಂಗವನ್ನು ಧ್ವಂಸಮಾಡುವ ರಾಮಬಾಣ ವಸ್ತುಗಳನ್ನು ತಯಾರಿಸೋದು!...................ಪ್ರಪಂಚವೆಂದರೇನೆಂದು ಇನ್ನು ಕಲಿಯಬೇಕು.

**ಹಯ:** ತಾವು ಯೋಚನೆ ಮಾಡಬೇಡಿ ವಿಶ್ವಾಸರಾಯರೇ. ಪ್ರಪಂಚವನ್ನು ನಾನೇ ತೋರಿಸುತ್ತೇನೆ. ಅಂತೂ, ತಮ್ಮ ಅನುಮತಿ ಬೇಕಿತ್ತು—ಅದೀಗ ಸಿಕ್ಕಿತಲ್ಲ! ಬರಲೇ?

**ವಿಶ್ವಾಸ:** ಹೋಗಿ ಬನ್ನಿ ಸ್ವಾಮಿ. ತಾವು ಏನು ಮಾಡುವುದಕ್ಕೂ ನನ್ನ ಒಪ್ಪಿಗೆಯಿದೆ.

**ಹಯ:** ಸೈ, ಬಿಡಿ!...................ಸ್ವಾಮಿ, ನಾನು ಅವನನ್ನು ಒಂದು ವರ್ಷದಿಂದ ಬಲ್ಲೆ. ತಮ್ಮ ಅಣ್ಣನ ಮಗ ಅಂತ ಮಾತ್ರ ತಿಳಿದಿರಲಿಲ್ಲ. ಒಂದು ವರ್ಷದಿಂದಲೂ ಹೀಗೆ ನಿರೀಕ್ಷಿಸುತ್ತಾ ಇದ್ದೆ. ಇನ್ನು ಬಿಡಿ.

**ವಿಶ್ವಾಸ:** ಆಕಸ್ಮಿಕವಾಗಿ ತಪ್ಪಿಹೋಗುತ್ತಾನೆ ಹಯವದನರಾಯರೇ! ನುಣುಚು ಜಾಸ್ತಿ.

**ಹಯ:** ಸ್ವಾಮಿ, ಈ ಹಯವದನನ ಕೈಗೆ ಒಮ್ಮೆ ಸಿಕ್ಕಿದ ಮೇಲೆ ಜಾರಿಹೋಗುವ ಮಾತೇ ಇಲ್ಲ. ನೀವು ಆ ಯೋಚನೆ ಬಿಟ್ಟುಬಿಡಬೇಕು.

**ವಿಶ್ವಾಸ:** ಬಿಟ್ಟೆ, ನಿಮ್ಮಾಣೆ ಬಿಟ್ಟೆ, ಬಿಡದಿದ್ದರೆ ಉಪಾಯವೂ ಇಲ್ಲ. ಬೇಕಾದಂತೆ ಅವನನ್ನು ನೀವೇ ಹದಕ್ಕೆ ತರಬೇಕು. ನಾನು ಮೂರು ಬಾರಿ ಯತ್ನಿಸಿದ್ದೇನೆ ಹಯವದನ ರಾಯರೇ, ಮೂರು ಬಾರಿಯೂ ಸೋತಿದ್ದೇನೆ. ಈಗ ನಿಮ್ಮ ಮಡಿಲಿಗೇ ಹಾಕುತ್ತೇನೆ.

**ಹಯ:** ಅದಿನ್ನು ನನ್ನ ಜವಾಬ್ದಾರಿ. ಸಂತೋಷದಿಂದ ಒಪ್ಪಿದೆ. ನಾನು ಹದಕ್ಕೆ ತರುತ್ತೇನೆ. ಬರಲೇ? ನಮಸ್ಕಾರ.

**ವಿಶ್ವಾಸ:** ನಮಸ್ಕಾರ!

(ಪರದೆ.)

▪▪▪▪▪▪▪▪▪

# ದೃಶ್ಯ ೨.

(ರಸ್ತೆ. ಬಾಬಿ ಮತ್ತು ಸಿಂಗ ಬರುತ್ತಿರುವರು. ಸಿಂಗನ ಬಲಗೈ ತೋರ್ಬೆರಳಿಗೆ ಸುಣ್ಣವಿದೆ. ಎಡಗೈಯಲ್ಲಿ ವೀಳ್ಯದೆಲೆ. ಸಿಂಗನು ಎಲೆಗೆ ಸುಣ್ಣ ಹಚ್ಚಲು ಆತಂಕವಾಗುವಂತೆ ಬಾಬಿ ಅವನ ಬಲಗೈ ಹಿಡಿದು ತೀವ್ರತೆಯಿಂದ ಮಾತಾಡುತಿದ್ದಾನೆ.)

ಬಾಬಿ: ಸಿಂಗಾ, ಇನ್ನೂ ಹೇಳುತ್ತೇನೆ. ಈ ವರದಕ್ಷಿಣೆ ಪದ್ಧತಿಯು ಘೋರ ಅನ್ಯಾಯ! ಇದರಿಂದ ನಿತ್ಯವೂ ನಮ್ಮ ಮುಂದೆ ನಡೆಯುವ ಅನಾಹುತಗಳು ಎಷ್ಟಿಲ್ಲ? ಸಾಲಮಾಡಿ ವರನನ್ನು ಹುಡುಕಿ—ಸಾಲಮಾಡಿ ವರದಕ್ಷಿಣೆ ಕೊಟ್ಟು—ಸಾಲದಿಂದ ಮದುವೆಮಾಡಿ—ದಿಬ್ಬಣ ಹೊರಟು ಹೋದ ದಿನವೇ ಸಾಲಮಾಡಿ ಹಗ್ಗತಂದು ನೇಣುಹಾಕಿಕೊಂಡ ಉದಾಗಳು ಎಷ್ಟಿಲ್ಲ!

ಸಿಂಗ: (ಸುಣ್ಣದ ಕೈಬೆರಳನ್ನು ಎಲೆಬಳಿಗೆ ತರಲು ಯತ್ನಿಸಿ) ಬಾಬೀ, ನೀನು ಸಾಲಮಾಡಿ ತಂದ ಶಬ್ದಗಳನ್ನು ಸಾಲವಿಲ್ಲದ ನನ್ನ ಮೇಲೆ ಸಾಲಾಗಿ ನಿಲ್ಲಿಸಿ ಸೋಲಿಸಬೇಡ! ನೀನು ಅಷ್ಟು ಬಿರುಸಾಗಿ ಹೇಳದಿದ್ದರೂ ಆ ದುರಂತದ ಕರಾಳತೆ ಏನೂ ಕಡಿಮೆಯಾಗುವುದಿಲ್ಲ. ಒಮ್ಮೆ ಈ ಎಲೆಗೆ ಸುಣ್ಣ ಹಚ್ಚಲು ಬಿಡು ಮಾರಾಯಾ!

ಬಾಬಿ: ಸುಣ್ಣ! ಸುಣ್ಣ!! ಸಿಂಗಾ, ಸರಿಯಾಗಿಯೇ ಹೇಳಿದೆ! ತಮ್ಮ ತಂದೆ ತಾಯ್ಗಳ ಸಂಕಷ್ಟಗಳನ್ನು ನೋಡಿ ಸಹಿಸಲಾರದೆ ಎಷ್ಟೊಂದು ಹೆಣ್ಣುಗಳು ಬೆಂದು ಸುಣ್ಣವಾಗಿಲ್ಲ? ಈ ಭಯಂಕರ ದೃಶ್ಯವನ್ನು ರಚಿಸುವ ಸಮಾಜವು ನಿರ್ದಯವಾಗಿಯೇ ಇರುವುದನ್ನು ನೋಡಿ ನಾನೂ ನೀನೂ ಸಹಿಸಬೇಕೆ? ಸಿಂಗಾ, ವರದಕ್ಷಿಣೆ ಬೇಡುವ ವರನಿಗೆ ಧಿಕ್ಕಾರವಿರಲಿ! ಆ ವರನ ಮಾತಾಪಿತೃರಿಗೆ ಧಿಕ್ಕಾರವಿರಲಿ!

ಸಿಂಗ: ಆ ಇಡೀ ಕುಟುಂಬಕ್ಕೇ ಧಿಕ್ಕಾರವಿರಲಿ ಬಾಬೀ! ಒಮ್ಮೆ ನನಗೆ ವೀಳ್ಯ ಹಾಕಲು ಬಿಡು! ಈ ಒಂದು ನಾಲಿಗೆ ತುರಿಸುತ್ತಿದೆ!

ಬಾಬಿ: ಒಂದು ನಾಲಗೆ! ಸಿಂಗಾ, ಸರಿಯಾದುದನ್ನೆ ಹೇಳಿದೆ. ಮನುಷ್ಯನಿಗೆ ಒಂದೇ ನಾಲಿಗೆ ಇರಬೇಕು.

ಸಿಂಗ: ಒಂದೇ ಇದೆಯಲ್ಲ ಮಾರಾಯ! ನಿನಗೇಕೆ ಗಾಬರಿ? ಎರಡೆರಡಿದ್ದರೆ ಅವುಗಳ ಅಗ್ನಿ ಸಹಿಸುವುದು ಯಾರು?

ಬಾಬಿ: ಏನು ಅನ್ಯಾಯ ಸಿಂಗಾ! ತನ್ನ ಹುಡುಗಿಗೆ ವರದಕ್ಷಿಣೆ ಕೊಡ ಬೇಕಲ್ಲ ಎಂದು ಚಿಂತಿಸುವ ತಂದೆಯು ತನ್ನ ಹುಡುಗನಿಗೆ ವರದಕ್ಷಿಣೆ ಬರಬೇಕೆಂದು ಇಚ್ಛಿಸುತ್ತಾನಲ್ಲ—ಎಂಥ ವಿಪರ್ಯಾಸ!

ಸಿಂಗ: ನನಗೆ ಗೊತ್ತಿದೆ. ದಮ್ಮಯ್ಯ ಬಿಡು, ನಾನೊಂದು ತಾಂಬೂಲ ಹಾಕಿಕೊಳ್ಳುತ್ತೇನೆ.

ಬಾಬಿ: ತಾಂಬೂಲ, ತಾಂಬೂಲ! ಹೇಗೆ ಹೇಳಿದೆ! "ತಾಂಬೂಲಾದ್ಯು ಪಚಾರಗಳನ್ನು ಸ್ವೀಕರಿಸಿ ವಧೂವರರನ್ನಾಶೀರ್ವದಿಸಿ ನಮ್ಮನ್ನು ಹರ್ಷ ಗೊಳಿಸಬೇಕಾಗಿ" ಸವಿನಯ ಆಮಂತ್ರಣ ಕೊಡುವ ಮಾತಾಪಿತೃರ ಹೊಟ್ಟೆ ಉರಿಯನ್ನು ಜಗತ್ತು ಬಲ್ಲುದೇ ಸಿಂಗಾ?

ಸಿಂಗ: ಇಕೋ ಬಾಬೀ, ನಿನಗೆ ಕೊನೆಯ ಬಾರಿ ಹೇಳುತ್ತೇನೆ. ಅಪವಿತ್ರವಾದ ಬೀಡಿ-ಸಿಗರೇಟು ಬಿಟ್ಟು ಪವಿತ್ರವಾದ ಎರಡು ಎಲೆ ತಿನ್ನುವ ಕಷ್ಟದಲ್ಲಿರುವ ನನ್ನನ್ನು ಪೀಡಿಸಬೇಡ. ನಾನು ವರದಕ್ಷಿಣೆ ಕೇಳೋದಿಲ್ಲ-ಕೊಡೋದಿಲ್ಲ. ತಾಂಬೂಲ ಹಾಕಿಕೊಳ್ಳುವಾಗ ತಡೆದರೆ ನಿನ್ನ ನಿಶ್ಚಯ ತಾಂಬೂಲಕ್ಕೆ ಅಡ್ಡಿಬಂದೀತು. ಬಿಡು—ಸುಣ್ಣ ಹಚ್ಚುತ್ತೇನೆ.

ಬಾಬಿ: (ಸಿಂಗನ ಸುಣ್ಣದ ಕೈಯನ್ನೆತ್ತಿ) ಪುನಃ ಸುಣ್ಣ! ಸರಿಯಾ ಮಾತನ್ನೇ ಹೇಳಿದೆ! ಸಿಂಗಾ, ಸಮಾಜವು ಒಂದು ಕಣ್ಣಿಗೆ ಬೆಣ್ಣೆ ಇನ್ನೊಂದು ಕಣ್ಣಿಗೆ ಸುಣ್ಣ....................(ಸಿಂಗನ ಸುಣ್ಣದ ಬೆರಳಿಗೆ ಸುಣ್ಣ ನೋಡಿ ತಡೆದು) ಸುಣ್ಣ, ಸುಣ್ಣ................

(ಸಿಂಗನ ಹಿಂದಿನಿಂದ ಹಯವದನರಾಯರು ಬರುತ್ತಿದ್ದುದನ್ನು ನೋಡಿ, ಬೆದರಿ, ಸ್ವರಬಿದ್ದು, ಬಾಯಿ ಮಾತ್ರ ಅಲ್ಲಾಡಿಸುತ್ತ ಬಾಬಿ, ಸಿಂಗನ ಕೈಬಿಟ್ಟು, ಕಣ್ಣು ಮುಚ್ಚಿ ಓಡುವನು.)

ಸಿಂಗ: ಬಾಬೀಽ!

ಹಯವದನ: (ಹಿಂದಿನಿಂದ) ನಮಸ್ಕಾರ!

ಸಿಂಗ: (ನ್ಯೆದೆಗೆದು, ಹಿಂದಿರುಗಿ ನೋಡಿ) ನಮಸ್ಕಾರ.

ಹಯ: ಈಗ ಓಡಿದರಲ್ಲ ಅವರು, "ಸುಣ್ಣ ಸುಣ್ಣ" ಎಂದು?

ಸಿಂಗ: ('ಅಹುದೆ'ಂಬರ್ಥದಲ್ಲಿ ತಲೆಯಲ್ಲಾಡಿಸುವನು.)

ಹಯ: ಅವರಿಗೇನು ಮಾಡಿದಿರಿ ನೀವು? ಅವರ ಕಣ್ಣಿಗೆ ನಿಮ್ಮ ಸುಣ್ಣದ ಬೆರಳು ಹಾಕಿದಿರೇನು?

ಸಿಂಗ: ಇಲ್ಲ. ನನ್ನ ಸುಣ್ಣದ ಬೆರಳಿಗೆ ಅವರು ಕಣ್ಣು ಹಾಕಿದರು.

ಹಯ: ಹಂ! ಅವರಿಗೂ ನಿಮಗೂ ತುಂಬಾ ಸ್ನೇಹವೇ?

ಸಿಂಗ: ತಾವೇ ನೋಡಿದಿರಲ್ಲ! ಎಲೆಗೆ ಸುಣ್ಣ ಹಚ್ಚಲು ಕೂಡಾ ಬಿಡದೆ ಪ್ರೀತಿಮಾಡುತ್ತಾರೆ.

ಹಯ: ಅವರನ್ನು ಎಷ್ಟು ಸಮಯದಿಂದ ಬಲ್ಲಿರಿ?

ಸಿಂಗ: ಅವರನ್ನು ಬಲ್ಲವರೇ ಇಲ್ಲ. ಆದರೆ, ನಮ್ಮನ್ನೆಲ್ಲ ಅವರು ಬಲ್ಲರು.

ಹಯ: ಮನುಷ್ಯ ಹೇಗೆ?

ಸಿಂಗ: ಈಗ ಇದ್ದರಲ್ಲ,—ಹಾಗೇ!

ಹಯ: ಅವರ ಗುಣ—ನಡತೆ?

ಸಿಂಗ: ಗುಣ—ಒಂದು ಮಣ! ನಡತೆ—ಈಗ ಹೋದರಲ್ಲ, ಹಾಗೇ! ಏಕೆ ಸಾರ್, ತಮ್ಮ ಪಾಕೇಟ್‌ಗಿಕೇಟ್ ಕಳೆದು ಹೋಗಿದೆಯೋ?

ಹಯ: ಹಾಗೆ ಕೇಳದಿರೇಕೆ? ಅವರು ಪಾಕೇಟ್ 'ಪಿಕ್' ಮಾಡುವ ಜಾತಿಯೋ?

ಸಿಂಗ: ಸರ್ವಥಾ ಇಲ್ಲ. ಸತ್ಯವಂತ ಬಾಬೀ ಅಂತ ಅವರ ಹೆಸರು. ತಮ್ಮ ಪ್ರಶ್ನೆಗಳಿಂದ, ತಾವೊಬ್ಬ ಸಿ. ಐ. ಡಿ. ಅಂತ ಸಂಶಯ ಬಂತು, ಅಷ್ಟೆ.

ಹಯ: ಒಳ್ಳೇ ಪ್ರಾಮಾಣಿಕನೇ?

ಸಿಂಗ: ಮಾಣಿಗಳಲ್ಲಿ ಅಷ್ಟು ಪ್ರಾಮಾಣಿಕನನ್ನು ನಾನು ಈ ಜನ್ಮದಲ್ಲಿ ನೋಡಿಲ್ಲ ಸಾರ್! ಪ್ರಾಣಹೋದರೂ ಪ್ರಾಮಾಣಿಕತನ ಬಿಡಲಾರದ ಪ್ರಾಣಿಯೆಂದು ಪ್ರಮಾಣಮಾಡಿ ಹೇಳಬಲ್ಲೆ.

ಹಯ: ವಂದನೆಗಳು.

ಸಿಂಗ: ಬೇಡ ಸಾರ್!

ಹಯ: ಏಕಂದಿರಿ?

ಸಿಂಗ: ಅಲ್ಲ. ನಾನು ಹೆಚ್ಚಿಗೇನನ್ನೂ ಹೇಳಿಲ್ಲ.

ಹಯ: (ವಿನೋದದಿಂದ) ಬೇಡವೇ?

ಸಿಂಗ: ಬೇಡವೆಂದೇ ಹೇಳಿದೆನಲ್ಲ. ನಾನು ಬೇಕೆಂದರೆ ನೀವು "ಥೇಂಕ್ಸ್' ಅನ್ನೋದು, ನೀವಂದುದಕ್ಕೆ ನಾನೂ 'ಥೇಂಕ್ಸ್' ಅನ್ನೋದು,- ಹೀಗೇ ಡಾಮರು ಹೋದ ರಸ್ತೆಯಲ್ಲಿ ಥೇಂಕ್ಸ್ ಥೇಂಕ್ಸ್ ಅನ್ನುತ್ತ ಕಾಲು

ಗೀರಿಗೀರಿ ರಸ್ತೆ ಹಾಳು ಮಾಡುವುದಕ್ಕಿಂತ "ನಮಸ್ಕಾರ" ಅಂತ ಏಕ ಕಂಠ ದಲ್ಲಿ ಇಬ್ಬರೂ ಹೇಳಿ, (ಹಿಂದೆ ಸರಿದು) ಹೀಗೆ ನಡೆದು ಹೋಗೋದೇ ಕ್ಷೇಮಕರವಲ್ಲವೇ?

—(ಎನ್ನುತ್ತ, ಹೋಗುವುದನ್ನು ನಟಿಸಿ, ಹೋಗಿ ಬಿಡುವನು. ಹಯ ವದನರಾಯರು ವಿನೋದ ದೃಷ್ಟಿಯಿಂದ ಅವನು ಹೋದ ದಿಕ್ಕಿಗೇ ಕ್ಷಣ ಕಾಲ ನೋಡಿ, ಮತ್ತೆ ಬಾಬಿ ಹೋದ ಕಡೆಗೆ ಮುಂದುವರಿಯುವರು.)

■■■■■■■■

## ದೃಶ್ಯ ೩.

[ವಿಶ್ವಾಸರಾಯರ ಮನೆ. ಒಂದು ಮೇಜು; ೨-೩ ಕುರ್ಚಿಗಳು. ಮೇಜಿನ ಬಳಿಯ ಕುರ್ಚಿಯಲ್ಲಿ ಬಾಬಿ, ಎರಡು ಮೊಣಕಾಲುಗಳಿಗೂ ಕೈಗಳನ್ನು ಕೊಟ್ಟು, ಅವನತಶಿರನಾಗಿ ಕುಳಿತಿರುವನು. 'ಬಾಬೀ' ಎಂದು ಕೂಗುತ್ತ ಸಿಂಗನು ಪ್ರವೇಶಿಸಲು, ಬಾಬಿಯು ಹೌಹಾರಿ ಅವನ ಕಡೆಗೆ ನೋಡಿ, ಮತ್ತೆ ಪುನಃ ತಲೆ ಕೆಳಗೆ ಹಾಕುವನು.]

ಸಿಂಗ: ಏ ಬಾಬಿ, ಸುಣ್ಣ ಸುಣ್ಣ ಎಂದು ಕೂಗಿ ಓಡಿದಿಯಲ್ಲಾ ಮಾರಾಯಾ! ಕ್ರೂರ ಸಮಾಜದ ಕರಾಳದೃಷ್ಟಿಯಿಂದ ತಪ್ಪಿಸಿಕೊಂಡು ಪ್ರಾಣತ್ಯಾಗ ಮಾಡಲು ಓಡಿದಿಯೋ ಅಂತ ಹೆದರಿದೆ!

ಬಾಬಿ: (ತನ್ನ ಎದೆಗೆ ಬೆರಳಿಟ್ಟು) ಒಂದು ಕ್ಷಣ ಸುಮ್ಮನಿರು. ಉಸಿರು ಸರಿಪಡಿಸಿಕೊಳ್ಳುತ್ತೇನೆ.

ಸಿಂಗ: ನೀನು ಹೋಗುತ್ತಲೇ, ಈಸೀಸು ಉದ್ದ ಮೀಸೆಯ ಒಂದು ನೀರ್ಕುದುರೆ ಬಂತಲ್ಲ!

ಬಾಬಿ: ಆ ನೀರ್ಕುದುರೆ ನೋಡಿಯೇ ನಾನೋಡಿದೆ.

ಸಿಂಗ: ಏಕೆ?

ಬಾಬಿ: (ಅಳು ಮೋರೆಯಿಂದ) ಮಿತ್ರಾ, ನಿನ್ನ ಪ್ರಾಣಸ್ನೇಹಿತನ ಒಂದು ವಿಷಾದದ ಕಥೆ ಕೇಳು. ಈ ಬಾಬಿ ಎಂಬ ನಿರಪರಾಧಿಯು ಒಮ್ಮೆ "ಬುಲ್ ಬುಲ್ ಎ ಬಸಂತ್" ಎಂಬ ಪ್ರಖ್ಯಾತ ತೈಲವನ್ನು ತಯಾರಿಸಿ ಲೋಕವಿಖ್ಯಾತನಾದುದು ನಿನಗೆ ತಿಳಿದಿರಬಹುದು. ಆ ರಾಜ ತೈಲಕ್ಕೆ ಬೆರಕೆ ಮಾಡಲು ನಾನು ಒಬ್ಬ ಅಂಗಡಿಯವನಿಂದ ಹದಿನೈದು ರೂಪಾ

ಯಿಯ ಕೆಂಪು ರಂಗುಹುಡಿಯನ್ನು ಕೊಂಡುಕೊಂಡಿದ್ದೆ. ಆ ಅಂಗಡಿಗಾರನೇ ನೀನೀಗ ಹೇಳಿದ ನೀರ್ಕುದುರೆ.

ಸಿಂಗ: ವ್ಹಾ ವ್ಹಾ!

ಬಾಬಿ: ಮತ್ತೆ ಅವನ ಹೆಸರು ಹಸ್ತವಿಭೂಷಣ ಹಯವದನರಾಯರು ಅಂತ.

ಸಿಂಗ: ಆ ಮೀಸೆಯಿಟ್ಟೇ ಹಾಗೆ ಹೆಸರು ಬಂತೇ?

ಬಾಬಿ: ಅಲ್ಲ. ಹೆಸರಿಟ್ಟನಂತರ ಮೀಸೆ ಬೆಳೆಯಿತು.

ಸಿಂಗ: "ಹಸ್ತ ವಿಭೂಷಣ" ಎಂದರೆ ಬಿರುದೇ?

ಬಾಬಿ: ಅಹುದು. ಅವರ ಕೈಬೆರಳುಗಳಿಗೆ ಉಂಗುರಗಳನ್ನೂ ದೊಡ್ಡ ರಿಸ್ಟ್‌ವಾಚನ್ನೂ ನೋಡಿ, ನಾಗರಿಕರು ತಾವಾಗಿ ಕೊಟ್ಟ ಬಿರುದು.

ಸಿಂಗ: ಸರಿ. ಆ ಮೇಲೆ?

ಬಾಬಿ: ಆ ಮೇಲೆ, ನನ್ನಿಂದ ಆ ಹದಿನೈದು ರೂಪಾಯಿಗಳ ಋಣವನ್ನು ತೀರಿಸಲಾಗಲಿಲ್ಲ. 'ಬುಲ್ ಬುಲ್' ಎಣ್ಣೆಯು ಜಾಗತಿಕ ವ್ಯಾಪಾರ ಮುಗ್ಗಟ್ಟಿನಲ್ಲಿ ಸಿಲುಕಿತು. ಕಳೆದ ಒಂದು ವರ್ಷದಿಂದ ನಾನು ಆ ಋಣವನ್ನು ತೀರಿಸಲು ಒದ್ದಾಡಿದೆ. ಆದರೆ,ಸಾಧ್ಯವಾಗಲಿಲ್ಲ. ಈಗ,ಆ ಮನುಷ್ಯ, ಆ ಹದಿನೈದು ರೂಪಾಯಿಗಳಿಗಾಗಿ ನನ್ನ ಬೇಟೆಗೆ ಹೊರಟಿದ್ದಾನೆ ಮಾರಾಯಾ! ಕಡ ಎಂಬುದು ವಾಣಿಜ್ಯದ ಜೀವಾಳ ಎಂದರಿಯದ ಈ ದೇಶವನ್ನು ಕಾಪಾಡುವವರು ಯಾರೂ ಅಂತ!

ಸಿಂಗ: ಕೋರ್ಟುಗಳು ಮತ್ತು ಪೋಲೀಸರು,—ಮತ್ತಾರು?

ಬಾಬಿ: ಸಿಂಗಾ, ಹದಿನೈದು ರೂಪಾಯಿಗಳಿಗಾಗಿ ನಾನು ಆ ಹಯವದನರಾಯರ ಹರದಾರಿ ಉದ್ದದ ಮೀಸೆ ನೋಡಿ ಸಹಿಸಬೇಕೆ? ಮಿತ್ರಾ, ಸತ್ಯ ಹೇಳುತ್ತೇನೆ: ಎಷ್ಟೋ ಸಲ ಆ ಕರಾಳ ಮನುಷ್ಯನು ಸ್ವಪ್ನದಲ್ಲಿ ಬಂದು ನನ್ನನ್ನು ಪ್ರತ್ಯೇಕವಾಗಿ ಗದರಿಸಿದ್ದಾನೆ........(ಬಾಗಿಲ ಕಡೆ ನೋಡಿ) ........ಅಕೋ ಸಿಂಗಾ, ಬಂದಾ! ನಾನು ಅಡಗಿರುತ್ತೇನೆ—ಅವನು ಕೇಳಿದರೆ ನಾನು ಬೊಂಬಾಯಿಗೆ ಹೋಗಿದ್ದೇನೆಂದು ಹೇಳು.

(ಎನ್ನುತ್ತ, ಮೇಜಿನ ಮೇಲಿಂದ ಹಾರಿ ಮರೆಯಾಗುವನು.)

ಹಯವದನ: (ಪ್ರವೇಶಿಸಿ) ನಮಸ್ಕಾರ!

ಸಿಂಗ: ನಮಸ್ಕಾರ ಸಾರ್!

ಹೆಯ: ಕ್ಷೇಮವೇ?

ಸಿಂಗ: ಸಾಂಪ್ರತ. ಅವರು ಇಲ್ಲಿಲ್ಲ ಸಾರ್. ಬೊಂಬಾಯಿಗೆ ಹೋದರು.

ಹೆಯ: (ತಲೆದೂಗಿ) ಅಹುದು. ಅವರು ಹೋಗುವಾಗ ನೋಡಿದೆ. ಆದರೆ, ಈ ರೀತಿ ಬೊಂಬಾಯಿಗೆ ಹೋಗುವುದು ಅಪಾಯಕರವಲ್ಲವೇ? ಬಿದ್ದು ಕಾಲುಗೀಲು ಮುರಿದುಕೊಂಡರೆ?

ಸಿಂಗ: ಇಲ್ಲ ಸಾರ್. ಅವರಿಗೆ ಅಭ್ಯಾಸವಿದೆ.

ಹೆಯ: ನೋಡಿ ಮಿಸ್ಟರ್, ಅವರ ಯೋಗಕ್ಷೇಮದ ವಿಷಯ ನಾನು ಬಹಳ ಚಿಂತಿತನಾಗಿದ್ದೇನೆ.

ಸಿಂಗ: ಏಕೆ ಸಾರ್ ಹಾಗೆ?

ಹೆಯ: ಅದಕ್ಕೆ ವಿಶೇಷ ಕಾರಣಗಳಿವೆ. ಅವರನ್ನೊಮ್ಮೆ ಇತ್ತ ಕರೆಯಿರಿ.

ಸಿಂಗ: ಬೊಂಬಾಯಿಗೆ ಹೋದರಲ್ಲ ಸಾರ್!

ಹೆಯ: ಬಲ್ಲೆ, ಬಲ್ಲೆ. ಒಳಗೆ ಹೋಗಿ ಅವರಿಗೊಂದು ಟೆಲಿಗ್ರಾಂ ಕೊಟ್ಟು ಬಿಡಿ. ಒಮ್ಮೆ ಕರೆಯಿರಿ.

ಸಿಂಗ: ಅದು ಬಹಳ ಕಷ್ಟದ ಕೆಲಸ ಸಾರ್.

ಹೆಯ: ನೋಡಿ, ಅವರಿಗೊಂದು ಬಹುಮಾನ ಕೊಡಲಿಕ್ಕುಂಟು.

ಸಿಂಗ: ಬಹುಶಃ ಅವರಿಗೆ ಅದು ತಿಳಿದಿದೆ ಸಾರ್! ಆ ಬಹುಮಾನಕ್ಕೆ ತಾನು ಯೋಗ್ಯನಿಲ್ಲವೆಂದು ತೀರ್ಮಾನಿಸಿಕೊಂಡು ಕಾಣೆಯಾದರೋ ಏನೋ!

ಹೆಯ: (ಸಮಿಸಾಪಕ್ಕೆ ಬಂದು, ಸಿಂಗನ ಹೆಗಲ ಮೇಲೆ ಕೈಯಿರಿಸಿ, ಬುಲ್ಲವಿಸುತ್ತ) ನೋಡಿ ಮಿಸ್ಟರ್! ಅವರಿಗೆ ಅದರಿಂದ ಲಾಭವಿದೆ—ಸತ್ಯ!

ಸಿಂಗ: ಅದು ಸರಿ ಸಾರ್! ಆದರೆ, ಏನು ಮಾಡಲಿ? ಅವರ ಜೀವನ ಚರಿತ್ರೆ ಮಗುಚಿ ನೋಡಿದರೆ ಅವರು ಲಾಭಕ್ಕಾಗಿ ಜನಿಸಿದ್ದೆ ಅಲ್ಲವೆಂದು ಸ್ಪಷ್ಟ ಕಾಣುತ್ತಿದೆ.

ಹೆಯ: ಒಳ್ಳೇದು, ಈಗಲ್ಲದಿದ್ದರೆ ಇನ್ನೊಮ್ಮೆ ನೋಡುವೆನಂತೆ.

ಸಿಂಗ: ತಮ್ಮ ಸಂತೋಷ ಸಾರ್!

(ಹಯವದನರಾಯರು ಒಮ್ಮೆ ಸುತ್ತಮುತ್ತಲೂ ನೋಡಿ, ಉತ್ತರ ಕೊಡದೆ ಹೊರಟು ಹೋಗುವರು.)

ಸಿಂಗ: ಬಾಬೀಸ!

ಬಾಬಿ: (ಹೊರಗೆ ಮೆಲ್ಲನೆ ಬಂದು) ಸಿಂಗಾ, ಹೋದನೇ?

ಸಿಂಗ: ಅಹುದು.

ಬಾಬಿ: (ಕಳವಳದಿಂದ) ಸಿಂಗಾ, ಇನ್ನು ನನಗೆ ಈ ಊರಿನಲ್ಲಿ ಕೆಲಸವಿಲ್ಲ. ನಾನಿಲ್ಲಿ ನಿಲ್ಲೋದಿಲ್ಲ.

ಸಿಂಗ: ಏಕಯ್ಯಾ ಹಾಗೆ?

ಬಾಬಿ: (ಅಳು ಮೋರೆಯಿಂದ) ಹದಿನೈದು ರೂಪಾಯಿಗಳಿಗಾಗಿ ಆ ನಕ್ಷತ್ರಕನು ಈ ಹರಿಶ್ಚಂದ್ರನ ಬೆನ್ನು ಹತ್ತಿರುವನಲ್ಲಾ ಸಿಂಗಾ! ನಾನೀಗ ಏನು ಮಾಡಲಿ ಮಿತ್ರಾ?

ಸಿಂಗ: ಹದಿನೈದು ರೂಪಾಯಿ ಕೊಟ್ಟು ಬಿಡಯ್ಯ, ಮುಗಿಯಿತಲ್ಲ.

ಬಾಬಿ: ಹಣ ಇಲ್ಲವಲ್ಲ! ನಾನು ಅಕಾಲನಿಧನ ಹೊಂದಿದೆನೆಂದು ಅವರಿಗೆ ಪತ್ರ ಬರೆದರೆ ಹೇಗೆ?

ಸಿಂಗ: ನೀನು ಅಕಾಲನಿಧನ ಹೊಂದಬೇಕಲ್ಲ ಮಾರಾಯಾ!

ಬಾಬಿ: (ಕೈಯುಗುರು ಕಚ್ಚುತ್ತ, ತುಸು ಆಲೋಚಿಸಿ) ಸಿಂಗಾ, ನನಗೊಂದು ಉಪಾಯ ಹೊಳೆಯುತ್ತಿದೆ!

ಸಿಂಗ: ಯಾವುದು?

ಬಾಬಿ: ಪೋಲೀಸ್ ಇನ್ಸ್‌ಪೆಕ್ಟರರು ನನ್ನ ಶಾಲಾ ಸ್ನೇಹಿತರಾಗಿದ್ದವರು—ಸಂಪತ್ಕುಮಾರ. ಮೋಸೆಯುವನೊಬ್ಬನು ನನ್ನ ಬೆನ್ನಟ್ಟುತಿದ್ದಾನೆ ಎಂದು ತಿಳಿಸಿ, ಅವನನ್ನು ಗದರಿಸುವಂತೆ ಮಾಡಿದರೆ ಹೇಗೆ?

ಸಿಂಗ: (ತಲೆದೂಗಿ) ಅದೊಂದು ಯತ್ನಮಾಡಿ ನೋಡಬಹುದು.

ಬಾಬಿ: ಹಾಗಾದರೆ, ನೀನೂ ಬಾ. ಹೊರಡು! (ಹೊರಡುವರು.)

[ತೆರೆ.]

\-\-\-\-\-\-\-\-

# ದೃಶ್ಯ ೪.

(ಇನ್‌ಸ್ಪೆಕ್ಟರ್ ಸಂಪತ್ಕುಮಾರರ ಮನೆ. ಸಂಪತ್ಕುಮಾರ ಕುಳಿತಿರುವರು. ಎದುರಿಗೆ ಒಬ್ಬನು ಕೈಜೋಡಿಸಿ, ಆತುರದಿಂದ ನೋಡುತ್ತಿರುವನು.)

ಸಂಪತ್ಕುಮಾರ: ಹೆಂಡತಿಗೆ ಹೆದರುವುದೆಂದರೆ ಏನಯ್ಯಾ ಇದು?

ಆಗಂತುಕ: (ಹೆದರಿ) ನನಗೆ ಇಬ್ಬರು ಹೆಂಡಿರು ಸಾರ್!

ಸಂಪತ್ಕುಮಾರ: (ಗಟ್ಟಿಯಾಗಿ) ಇಬ್ಬರು? ನಿನಗೆ ನಾಚಿಕೆಯಾಗುವುದಿಲ್ಲವೆ?

ಆಗಂ: ಇಲ್ಲ ಸಾರ್.

ಸಂಪ: ಇಲ್ಲ? ಏಕೆ ಇಲ್ಲ?

ಆಗಂ: ಅವರು ನನ್ನ ಕೈಹಿಡಿದ ಹೆಂಡಿರು, ನಾನು ಅವರಿಗೆ ಕೈಕೊಟ್ಟ ಗಂಡ.

ಸಂಪ: (ತಿರಸ್ಕಾರದಿಂದ) ಗಂಡ! ಲಜ್ಜೆಯಿಲ್ಲದ ಭಂಡ! ಬುದ್ಧಿಯಿಲ್ಲದ ಬಾತುಕೋಳಿ! ಒಂದು ಮೊಳ ಎತ್ತರದ ಎರಡು ಹೆಣ್ಣುಗಳಿಗೆ ಹೆದರುವ ಕೋಳಿ ಮರಿ! ಆ ಮೇಲೆ ತಾನು ಗಂಡನಂತೆ!

ಆಗಂ: (ಕಂಗಾಲಾಗಿ) ಅವರು ಒಂದು ಮೊಳಕ್ಕಿಂತ ದೊಡ್ಡವರು ಸಾರ್.

ಸಂಪ: ಎಷ್ಟು ದೊಡ್ಡವರು?

ಆಗಂ: ನನಗಿಂತ ಎತ್ತರ, ನನಗಿಂತ ದಪ್ಪ, ನನಗಿಂತ ಗಟ್ಟಿ........

ಸಂಪ: ಹಾಗಾದರೆ, ನೀನು ಕೆಟ್ಟೆ! ನಿನಗಿಂತ ದಪ್ಪ ಬೆಳೆದ ಹೆಣ್ಣುಗಳನ್ನೇಕೆ ಮದುವೆಯಾದಿಯೋ ಮುಠ್ಠಾಳ?

ಆಗಂ: ಮದುವೆ ಆಗಿ ಹೋದ ಮೇಲೆ ಅವರು ಹಾಗೆ ಬೆಳೆದುಬಿಟ್ಟರು ಸಾರ್!

ಸಂಪ: ನಿನಗೆ ಯಾರನ್ನು ಮದುವೆಯಾಗಬೇಕೆಂದು ಸಹ ತಿಳಿದಿಲ್ಲ! ನೀನು ನಾಡಿನಲ್ಲಿ ನರನಾಗಿ ಹುಟ್ಟುವ ಬದಲು ಕಾಡಿನಲ್ಲಿ ಕೋಳಿಯಾಗಿ ಹುಟ್ಟಿದರೆ ಕ್ಷೇಮವಿತ್ತು. ಒಂದೋ —ನೀನು ಗೋಧಿ ರೊಟ್ಟಿ ತಿಂದು ಜಟ್ಟಿ ಕಾಳಗ ಕಲಿಯಬೇಕು. ಅದು ಸಾಧ್ಯವಿಲ್ಲದಿದ್ದರೆ ಪೂರ್ಣ ಅಹಿಂಸಾವ್ರತವನ್ನಾಚರಿಸಿ ಶೇಷಾಯುಷ್ಯವನ್ನು ರಾಮಧ್ಯಾನದಲ್ಲಿ ಕಳೆಯಬೇಕು.

ಆಗಂ: ಇನ್ನು ಮದುವೆಯಾಗೋದಿಲ್ಲ ಸಾರ್!

ಸಂಪ: ಇನ್ನು? ಇನ್ನು ಮದುವೆ ಮಾಡಲು ಯತ್ನಪಟ್ಟರೆ ನಿನ್ನ ಸೊಂಟ ಮುರಿದು ಎರೆಸ್ಟ್ ಮಾಡಿ, ಪ್ರಾಣ ಹೋಗುವ ತನಕ ಜೈಲಿನಲ್ಲಿ ಇಟ್ಟೇನು! ಜೋಕೆ! ನಿನ್ನಂಥ ಮೂರ್ಖರು ರಂಭಾರೂಟಿ ಮಾಡುತ್ತಿರುವುದನ್ನು ನೋಡಿಯೇ ಹಿಂದೂ ಕೋಡ್-ಮೊನೊಗೊಮಿ ಎಕ್ಟ್ ಮೊದಲಾದುವು ಬರುತ್ತಿವೆ. ಒಬ್ಬಳನ್ನು ಆಳಲು ಇಲ್ಲ ತ್ರಾಣ—ಇನ್ನೊಬ್ಬಳಿಗಾಗಿ ಎಳೆಯಿತು ಪ್ರಾಣ!........ಅವರೇನು ಮಾಡುತಿದ್ದಾರೆ ನಿನಗೆ?

ಆಗಂ: ಅವರವರೊಳಗೆ ಜಗಳ ಮಾಡಿಕೊಂಡು ಮತ್ತೆ ನನ್ನನ್ನೂ ಎಳೆಯುತ್ತಾರೆ ಸಾರ್!

ಸಂಪ: (ತಿರಸ್ಕಾರದಿಂದ) ಶಾರ್! ಅವರಿಗೆ ಗದರಿಸು! ನಿನಗೆ ನಾಲಿಗೆಯಿಲ್ಲವೇ?

ಆಗಂ: ಇದೆ ಸಾರ್! ಆದರೆ, ಅವರನ್ನು ಕಂಡಕೂಡಲೇ ನಾಲಿಗೆ ಹೊರಳೋದಿಲ್ಲ—ನನ್ನ ಸ್ವರ ಬಿದ್ದು ಹೋಗುತ್ತೆ ಸಾರ್!

ಸಂಪ: ಸ್ವರ ಬಿದ್ದು ಹೋದರೆ ನಿನಗೆ ಚಿಕಿತ್ಸೆ ಹೇಳುತ್ತೇನೆ: ಬಾವಿಯ ಒಂದು ದಂಡೆಯಿಂದ ಇನ್ನೊಂದಕ್ಕೆ ಹಾರು—ರೈಲು ಬರುವಾಗ ಎದುರಿಂದ ಹೋಗಿ ಆ ಮೀಸೆಗಳಿಂದ ಇಂಜಿನ್ ಎತ್ತಲಿಕ್ಕೆ ನೋಡು—! ಮೋಟಾರ್ ಬರುವಾಗ ಅಂಜಿಗಾಲಿಕ್ಕಿ ರಸ್ತೆ ದಾಟು! .......ಡೆಮ್‌ಫೂಲ್! ನಾಲಗೆ ಹೊರಳೋದಿಲ್ಲವಂತೆ!............ನೆಟ್ಟಗೆ ನಿಲ್ಲಯ್ಯ! ಈಗ ಹೇಳು, ನಿನಗೆ ನನ್ನಿಂದೇನಾಗಬೇಕು?

ಆಗಂ: (ದೈನ್ಯದಿಂದ) ಒಮ್ಮೆ ಬಂದು ಅವರನ್ನು ಸ್ವಲ್ಪ ಗದರಿಸಬೇಕೂ ಅಂತ........!

ಸಂಪ: ಶಟಪ್! ಇಲ್ಲಿ ಮೂವತ್ತಾರು ಕೊಲೆಗಳಾಗಿವೆ—೩೬೦ ಮಾರಾಮಾರಿಗಳಾಗಿವೆ-೩೬೦೦ ಫೋರ್ಜರಿ ಕೇಸುಗಳು ಬಿದ್ದಿವೆ-೩೬,೦೦೦ ಕಳವುಗಳಾಗಿವೆ! ನಿನ್ನ ಹೆಂಡಿರು ನಿನ್ನನ್ನ ಸೀಳಿ ಬಿಟ್ಟರೆ ಮಾತ್ರ ಫಿರ್ಯಾದು ತಕ್ಕೊಂಡು ಬಾ. ಅನಂತರವೇ ನಾನು ತನಖಿಗೆ ಬರೋದು. ಒಟ್ಟಾರೆ ನಿನ್ನಂಥವನ ಹೆಣ ಬೀಳಬೇಕು—ಆ ಮೇಲೆ ತನಖಿ. ಅದಕ್ಕೆ ಮೊದಲು ಯಾರನ್ನು ಗದರಿಸಲಿಕ್ಕೂ ಸಾಧ್ಯವಿಲ್ಲ. ಹೊರಡು ಇಲ್ಲಿಂದ 'ಸ್ಟುಪಿಡ್ ಫೆಲ್ಲೋ!' ಹೊರಡು!! (ಗದರಿಸುವಾಗ ಇನ್ಸ್‌ಪೆಕ್ಟರರ ಇಬ್ಬರು

ಹೆಂಡಿರು ಎರಡು ದಿಕ್ಕುಗಳಿಂದ ಪ್ರವೇಶಿಸುವರು. ಇನ್ಸ್‌ಪೆಕ್ಟರರು ಮಾತು ನಿಲ್ಲಿಸಿ, ಎತ್ತಿದ ಕೈಯನ್ನು ಕೆಳಗಿಳಿಸಿ, ನರಗಳನ್ನು ಸಡಲಿಸುವರು. ಆಗಂತುಕನು ಈ ಆಕಸ್ಮಿಕ ಪರಿವರ್ತನೆಯಿಂದ ಅವಾಕ್ಕಾಗಿ ನೋಡುವನು.)

ಬಲದಿಂದ ಒಬ್ಬಳು: ಗದ್ದಲವೇನು?

ಸಂಪ: ('ಏನೂ ಇಲ್ಲ' ಎಂಬರ್ಥದಲ್ಲಿ ಬಲಗೈ ತಿರುಗಿಸುವರು.)

ಎಡದಿಂದ ಇನ್ನೊಬ್ಬಳು: ಎಷ್ಟು ಗಟ್ಟಿಯಾಗಿ ಮಾತಾಡೋದು! ಮಗುವಿಗೆ ಎಚ್ಚರವಾಗಿ ಕಿರಚುತ್ತಾ ಇದೆ!

ಸಂಪ: (ಎಡಗೈಯಿಂದ 'ಸಾವಧಾನ' ಎಂಬರ್ಥದಲ್ಲಿ ಸಂಜ್ಞೆ ಮಾಡುವರು.)

೧ನೆಯವಳು: (ಆಗಂತುಕನಿಗೆ) ಯಾರಯ್ಯಾ ನೀನು?

ಆಗಂ: ರಾಮಸ್ವಾಮಿ.

೨ನೆಯವಳು: ಯಾವ ರಾಮಸ್ವಾಮಿ?

ಆಗಂ: ಕುಪ್ಪೆತಪ್ಪಲು ಈರಯ್ಯನ ತಿಮ್ಮಕ್ಕನ ಮಗ.

೧ನೆಯವಳು: ನಿನಗೇನಾಗಿದೆ?

ಆಗಂ: ಎಲ್ಡು ಮದುವೆ.

೨ನೆಯವಳು: ಎರಡೇ? ಸರಿ. ನಿನ್ನ ಮನೆಯಲ್ಲಿ ಗದ್ದಲ ಮಾಡಲು ಧಾರಾಳ ಅವಕಾಶವಿರುವಾಗ ಇಲ್ಲೇಕೆ ಬಂದೆ?—(ಗಂಡನಿಗೆ) ಹೊರಡಿಸಿರಿ ಇವನನ್ನು!

(—ಎನ್ನುತ್ತ ಒಳಗೆ ಹೋಗುವಳು.)

೧ನೆಯವಳು: ಸ್ವರ ಸ್ವಲ್ಪ ತಗ್ಗಿಸಿ ಮಾತಾಡಿರಿ. ನರಗಳೆಲ್ಲ ಹುಡಿಯಾದುವು. (ಎನ್ನುತ್ತ ಹೋಗುವಳು; ಸಂಪತ್ಕುಮಾರರು 'ಆಗಬಹುದೆ'ಂದು ತಲೆಯಲ್ಲಾಡಿಸುವರು.)

ಸಂಪ: (ಆಗಂತುಕನನ್ನೆ ಕರುಣಾರ್ದ್ರದೃಷ್ಟಿಯಿಂದ ನೋಡಿ, ಆಕಸ್ಮಿಕ ಪ್ರೇಮದಿಂದ) ರಾಮಸ್ವಾಮಿ ಯಾನೆ ಕುಪ್ಪೆತಪ್ಪಲು ಈರಯ್ಯನ ತಿಮ್ಮಕ್ಕನ ತಿರ್ಯಕ್ ಪ್ರಸವದ ಫಲವೇ! ನಿನ್ನ ಮನೆ ಹಾಳಾದುದು ಸಾಲದೆ ಇಲ್ಲಿಗೆ ಬಂದು ಶಾಂತಿಭಂಗ ಮಾಡಬೇಡ. ಹೋಗು ನೆಟ್ಟಗೆ!

ಆಗಂ: ಸಾರ್— ಕ್ಷಮಿಸಿರಿ! ತಮಗೂ ಎಲ್ಡು ಮದುವೆ ಅಂತ ನನಗೆ

ತಿಳಿದಿರಲಿಲ್ಲ. ತಮ್ಮ ಕಷ್ಟವೇ ಅಲ್ಲಿರುವಾಗ ತಾವು ನನಗೇನು ಸಹಾಯ ಮಾಡಬಲ್ಲಿರಿ?

ಸಂಪ: (ಮುಖ ತಿರುಗಿಸಿ ಗಂಭೀರವಾಗಿ ನಿಲ್ಲುವನು.)

ಆಗಂ: ನಮ್ಮಂಥವರಿಗೆ ಇಬ್ಬರು ಹೆಂಡಿರ ಕಾಟವಿದ್ದರೆ ತಮ್ಮಂಥವರ ಬಳಿಗೆ ಹೋಗಬಹುದೆಂಬ ಆಸೆಯಾದರೂ ಇದೆ. ತಮ್ಮಂಥವರಿಗೇ ಈ ಕಷ್ಟ ಬಂದರೆ ತಾವು ಹೋಗೋದೆಲ್ಲಿಗೆ ಸಾರ್? ಆದ್ದರಿಂದಲೇ ಸರ್ಕಾರ ಏಕಪತ್ನಿ ಕಾನೂನು ಮಾಡುತ್ತಿದೆ—ತಮ್ಮಂಥವರನ್ನು ಕಾಪಾಡಲಿಕ್ಕೆ. ಅಲ್ಲವೇ ಸಾರ್?

ಸಂಪ: (ಇನ್ನಿಷ್ಟು ವಿಮುಖನಾಗಿ ನಿಲ್ಲುವನು.)

ಆಗಂ: ಸಾವಿರ ಕುದುರೆಗಳ ಸರದಾರನಾದರೂ ಮನೆ ಹೆಂಡ್ತಿ ಕಾಸ್ತ್ರಾರ ಅಂತ ಗಾದೆಯಿದೆ ಸಾರ್—ಅದು ನಿಜಾ ಅಂತ ಈಗ ಕಂಡೆ.

ಸಂಪ: (ಸಿಡಿದು) ಗೆಟ್ ಔಟ್!

ಆಗಂ: ಬರುತ್ತೇನೆ ಸಾರ್! ತಮ್ಮ ಪರಾಕ್ರಮವೆಲ್ಲ ನನ್ನ ಮೇಲೇ! ಇರಲಿ. ಹೆಂಡಿರೊಡನೆ ಹೇಗೆ ನಡಕೊಳ್ಳಬೇಕೆಂದು ಇಲ್ಲಿ ನೋಡಿ ತಿಳಕೊಂಡೆ. ಉಪಕಾರವಾಯಿತು ಸಾರ್!

(ಹೋಗುವನು.)

(ತೆರೆ)

▪▪▪▪▪▪▪▪▪

## ದೃಶ್ಯ ೫.

(ರಸ್ತೆ. ಬಾಬಿ ಮತ್ತು ಸಿಂಗ ಬರುತ್ತಿರುವರು.)

ಬಾಬಿ: ಸಿಂಗಾ, ಪೋಲೀಸರೆಂಬ ಜೀವಿಗಳನ್ನು ಸೃಷ್ಟಿಸದಿದ್ದರೆ ಊರಿನ ಶಾಂತ ಪ್ರಜೆಗಳ ಅವಸ್ಥೆ ಏನಾಗುತಿತ್ತೋ ಪರಮಾತ್ಮನೇ ಬಲ್ಲ!

ಸಿಂಗ: ಹಾಗಲ್ಲ. ನಿನ್ನಂಥವರಿಲ್ಲದಿದ್ದರೆ ಪೋಲೀಸರ ಗತಿ ಏನಾಗುತಿತ್ತೊ ಅಂತ!

ಬಾಬಿ: ಸಿಂಗಾ, ದೇವರಲ್ಲಿ ನನ್ನದೊಂದೇ ಪ್ರಾರ್ಥನೆ! ಈ ನಾಡು ಹಯವದನರಂಥವರಿಂದ ಸುರಕ್ಷಿತವಾಗಿರುವಂತೆ ಭಾರತಾಂಬೆಯು ಇನ್ನು

ಕೆಲವು ವರ್ಷಗಳ ವರೆಗೆ ಸಿವಿಲ್ ಪ್ರಜೆಗಳ ಬದಲಾಗಿ ಇನ್ಸ್‌ಪೆಕ್ಟರರನ್ನೆ ಪ್ರಸವಿಸಲಿ ಅಂತ!

(ಸಿಂಗನ ಹಿಂದಿನಿಂದ ರಾಮಸ್ವಾಮಿಯ ಪ್ರವೇಶ.)

ಬಾಬಿ: (ರಾಮಸ್ವಾಮಿಯನ್ನು ನೋಡಿ ಹಯವದನನೆಂದು ಭ್ರಮಿಸಿ.) ನೋಡಯ್ಯಾ ಅಲ್ಲಿ.... ...............ಆದರೆ, ಅವನಲ್ಲ! (ರಾಮಸ್ವಾಮಿಗೆ) —ಯಾರಯ್ಯ ನೀವು?

ರಾಮಸ್ವಾಮಿ: ಕುಪ್ಪೆ ತಪ್ಪಲು ಈರಯ್ಯನ ತಿಮ್ಮಕ್ಕನ ಮಗ ರಾಮಸ್ವಾಮಿ.

ಬಾಬಿ: (ರಾಮಸ್ವಾಮಿಯ ಮೀಸೆಯನ್ನು ಮೃದುವಾಗಿ ಹಿಡಿದು, ಕಂಪಿಸಿ) ಹೇ ಕಪ್ಪಲುತಿಪ್ಪೆ ರಾಮಯ್ಯನ ಮಗ ತಿಮ್ಮಕ್ಕ ಸ್ವಾಮೀ.

ರಾಮ: ಏನ್ಸಾರ್?

ಬಾಬಿ: ನಾನು ನಿನಗೊಂದು ಅರ್ಜಿ ಮಾಡಬೇಕೆಂದಿದ್ದೇನೆ.

ಸಿಂಗ: ಪಾಪರಿ ಅರ್ಜಿ.

ಬಾಬಿ: ಮನುಷ್ಯನಿಗೆ ಈ ಕಲಿಯುಗದಲ್ಲಿ ಭಯದಿಂದ ಕಂಪನಗೊಳ್ಳಲು ಸಾವಿರ ವಿಷಯಗಳಿವೆ. ಆದಕ್ಕೆ ನಿನ್ನ ಮೀಸೆಗಳನ್ನೂ ಸೇರಿಸ ಬೇಡಪ್ಪ.

ರಾಮ: ಮೀಸೆ ಗಂಡಸ್ತನದ ಲಕ್ಷಣ ಸ್ವಾಮಿ.

ಬಾಬಿ: ಹುಚ್ಚು! ಇಷ್ಟುದ್ದ ಮೀಸೆಗಳಿಂದ ನಿನಗೇನೂ ಉಪಕಾರವಿಲ್ಲ—ನನ್ನಂಥವರಿಗೆ ಅಪಕಾರ. ಅರ್ಧ ಶತಮಾನದ ಹಿಂದೆ ಮಾತ್ರ ಇದನ್ನು ಬೆಳೆಸುತ್ತಿದ್ದರು. ಈಗಿನ ಕಾಲಡಲ್ಲಿದು ಚಂದವಲ್ಲ ರಾಮಸ್ವಾಮಿ. ಮನಸ್ಸು ಗಟ್ಟಿಮಾಡಿ ಕೊಯ್ದುಬಿಡು. ಹೋಗಪ್ಪ.

ಸಿಂಗ: ಇದು ಎಟಂ ಯುಗ—ಅದರಲ್ಲಿ ಮೀಸೆಗೆ ಸ್ಥಾನವಿಲ್ಲ.

ರಾಮಸ್ವಾಮಿ: (ಹೋಗುತ್ತ, ಸ್ವಗತ) ಮನೆಯಲ್ಲಿ ಇಬ್ಬರು ಸಚಿತ್ರ ಹೆಂಡಿರ ಕಾಟ—ಹೊರಗೆ ಈ ವಿಚಿತ್ರ ಗಂಡರ ಕಾಟ! ಇನ್ನು ಲೋಕಕ್ಷೇಮ ಅಂತ ಜನ ಏಕೆ ಆಶಿಸಬೇಕೋ ನನಗೆ ತಿಳಿಯದು. (ಹೋಗುವನು)

(ಸಿಂಗನ ಹಿಂದಿನಿಂದ ಹಯವದನರಾಯರು ಬರುವರು.)

ಬಾಬಿ: (ಹಯವದನನನ್ನು ರಾಮಸ್ವಾಮಿಯೆಂದು ಭ್ರಮಿಸಿ) ಏನಯ್ಯಾ ತಿರುಗಿ ಬಂದೆ ತಿಪ್ಪೆಕಪ್ಪಲು ರಾಮಸ್ವಾಮಿ?

ಹಯವದನ: ರಾಮಸ್ವಾಮಿ? ಯಾವ ರಾಮಸ್ವಾಮಿ? ನಾನಲ್ಲವೇ?, ಹಯವದನ?

(ಬಾಬಿ ದಿಗಿಲುಗೊಂಡು ವಿಕಾರವಾಗಿ ಕೂಗಿ ಓಡುವನು.)

ಹಯ: (ಸಿಂಗನೊಡನೆ) ಅವರು ಬೊಂಬಾಯಿಯಿಂದ ಯಾವಾಗ ಬಂದರು ಸ್ವಾಮಿ?

ಸಿಂಗ: ನಿಲ್ಲಿ, ಕೇಳಿ ಬರುತ್ತೇನೆ. (ಎನ್ನುತ್ತ, ಬಾಬಿ ಓಡಿದ ಕಡೆಗೇ ಓಡುವನು. ಹಯವದನರಾಯರು ಮುಗುಳ್ನಗುತ್ತ ಹೋಗುವರು.)

■■■■■■■■■

## ದೃಶ್ಯ ೩.

[ಇನ್ಸ್‌ಪೆಕ್ಟರರ ಮನೆ. ಸಂಪತಕುಮಾರ ಕುಳಿತಿರುವರು. ಬಾಬಿ ಮತ್ತು ಸಿಂಗನ ಪ್ರವೇಶ.]

ಸಂಪ: ಯಾರು, ಬಾಬಿ? ಏನಪ್ಪಾ ಅಪರೂಪ?

ಬಾಬಿ: (ಆನಂದದಿಂದ) ಮಿತ್ರಾ, ಹೇಗಿರುವೆ! ವ್ಹಾವ್ಹಾ! ನೀನು ನಿಜವಾಗಿಯೂ ಇನ್ಸ್‌ಪೆಕ್ಟರನೇ? (ಅವನ ಎರಡೂ ಭುಜಗಳನ್ನು ಹಿಡಿದು ಪ್ರೀತಿ-ಗೌರವಗಳಿಂದ ನೋಡುವನು.)

ಸಂಪ: ದೇವರ ದಯೆಯಿಂದ ಇಷ್ಟರ ವರೆಗೆ ಇನ್ಸ್‌ಪೆಕ್ಟರ್. ಇನ್ನು ಮುಂದೆ ಯಾವ 'ಸ್ಪೆಕ್ಟರ್' ಆಗುವೆನೋ ದೇವರೇ ಬಲ್ಲ. ಕುಳಿತುಕೋ! (ಸಿಂಗನನ್ನು ನೋಡಿ) ಇವರಾರು?

ಬಾಬಿ: ನನ್ನ ಸ್ನೇಹಿತ—ಸಿಂಗ.

ಸಂಪ: ಸಂತೋಷ, ಕುಳಿತುಕೊಳ್ಳಿ....ಬಾಬಿ, ಈಗ ಹೇಳು, ಏನು ಬಂದೆ?

ಬಾಬಿ: (ಜೋಲುಮೋರೆಯಿಂದ) ಸಂಪತ್! ನಾನೊಂದು ಸಂಕಷ್ಟದಲ್ಲಿ ಸಿಲುಕಿದ್ದೇನೆ. ಜೀವಿಸುವ ಹಾಗಿಲ್ಲ—ಸಾಯುವ ಹಾಗಿಲ್ಲ.

ಸಂಪ: ಹೇಳಪ್ಪಾ, ಏನಾಗಿದೆ?

ಬಾಬಿ: ಸಂಪೂ, ನನ್ನನ್ನು ರಿಬ್ಬನ್ ಮೀಸೆಯ ಮಾಯಾವಿ ರಾಕ್ಷಸ ನೊಬ್ಬನು ಹಗಲು ರಾತ್ರಿ—ಆಕಾಶದಲ್ಲಿ ನೆಲದಲ್ಲಿ—ಮನೆ ಒಳಗೆ ಹೊರಗೆ ಕಾಡುತ್ತಿರುವನು.

ಸಂಪ: ಅದೇನು, ರಿಬ್ಬನ್ ಮೀಸೆಯೆಂದರೆ?

ಸಿಂಗ: ಅವನ ಮೀಸೆಗಳು ಎರಡೂ ಕಡೆ ಹೀಗೆ ಜೋಲು ಬಿದ್ದಿವೆ ಸಾರ್!

ಸಂಪ: (ಆಲೋಚಿಸುತ್ತ) ಹ್ಞಾ ಹ್ಞಾ? ತಲೆಗೆ ಕ್ರೊಪ್ ಇದೆಯೋ?

ಬಾಬಿ: ಇಲ್ಲ,—ಮುಂಡಾಸಿದೆ—ಅಕ್ಕಿ ಮುಡಿ ಸೈಜು. ನಾನೊಮ್ಮೆ ಅವನನ್ನು ತೋರಿಸುತ್ತೇನೆ. ಅವನನ್ನು ಹಿಡಿದು ಗದರಿಸಬೇಕು ಸಂಪತ್!

ಸಂಪ: (ನಗುತ್ತ) ವಿಚಿತ್ರ! ಈ ದಿನ ನನಗೆ ಬರುವ ಅರ್ಜಿಗಳೆಲ್ಲ ಗದರಿಸಿರಿ ಅಂತ!

(ಹೊರಗಿಂದ 'ಸಂಪತ್' ಎಂದು ಯಾರೋ ಕೂಗುವರು.)

ಸಂಪ: ಬನ್ನಿ.

(ಹಯವದನರಾಯರ ಪ್ರವೇಶ. ಬಾಬಿ ಕಂಪಿಸಿ, ಸಂಪತ್ಕುಮಾರರ ಬಳಿಗೋಡುವನು.)

ಬಾಬಿ: (ಕಂಪಿಸುತ್ತ) ಸ ಸ ಸ ಸ್ಸಂಪೂ, ಇವರೇ-ರಿ ರಿ ರಿ ರಿ ರಿ....

ಸಿಂಗ: ರಿಬ್ಬನ್

ಬಾಬಿ: (ತಲೆಯಲ್ಲಾಡಿಸಿ) ಮೀ ಮೀ ಮೀ ಮೀ ಮೀ........

ಸಿಂಗ: ಮೀಸೆ.

ಬಾಬಿ: (ಅಹುದೆಂದು ತಲೆಯಲ್ಲಾಡಿಸುವನು.)

ಸಂಪ: (ನಗುತ್ತ) ಇವರೇ ಏನು ಕಾಡುವವರು?

ಬಾಬಿ: ಅಹುದು—ಇವರೇ! ಇಲ್ಲಿಗೂ ಬಂದಿದ್ದಾರೆ. ವ್ಹಾ! ಏನು ಧೈರ್ಯ!

ಸಂಪ: ಮಾಯಾವಿಯೆಂದರೆ ಇವರೇ?

ಬಾಬಿ: ಅಹುದು—ಸರ್ವಾಂತರ್ಯಾಮಿ. ಹೋದಲ್ಲಿ ಹಾಜರ್!

ಸಂಪ: ಏ ಮಂಕು ಬಾಬೀ! ಇವರು ನನ್ನ ಚಿಕ್ಕಪ್ಪನಲ್ಲವೆ?

ಬಾಬಿ: (ನಿರಾಶೆಯಿಂದ) ನಿನ್ನ ಚಿಕ್ಕಪ್ಪ? ಹಾಗಾದರೆ ನನ್ನ ಗತಿ?

ಹಯವದನ: (ನಗುತ್ತ) ನಿನ್ನ ಗತಿ—ಸದ್ಗತಿ!

ಸಂಪ: ಬಾಬೀ, ನಿನಗೆ ನಿಜಕ್ಕೂ ತಿಳಿದಿಲ್ಲವೆ? ನನ್ನ ಚಿಕ್ಕಪ್ಪನ ಮಗಳು ಲಜ್ಜಾವತಿಯನ್ನು ನಿನಗೆ ಲಗ್ನ ಮಾಡಿಕೊಡಬೇಕೆಂದು ಮಾತಾಗಿದೆ—ತಿಳಿದಿಲ್ಲವೆ? ವಿಚಿತ್ರ!

ಬಾಬಿ: ಲಗ್ನ? ನನಗೆ? ಇವರ ಮಗಳು?

ಹಯ: ಅಹುದು. ನಿನಗೇ! ನನ್ನ ಮಗಳೇ! ಅದಕ್ಕಾಗಿ ನಿನ್ನನ್ನು ಮಾತಾಡಿಸಿ ಕರೆದೊಯ್ಯೋಣವೆಂದು ಅನೇಕ ಸಲ ಬಂದರೆ—ನನ್ನನ್ನು ನೋಡಿದೊಡನೆ ನೀನು ಬಾಣ ಬಿಟ್ಟಂತೆ ಓಡಿದೆ. ಈ ದಿನ ನಿಮ್ಮ ಮನೆಗೆ ಬಂದಾಗ,ನೀನು ಮೋಜು ಹಾರಿ ಬೊಂಬಾಯಿಗೂ ಹೋಗಿಬಿಟ್ಟೆ. ಆದರೆ, ನನ್ನ ಪುಣ್ಯದಿಂದ ಕೂಡಲೇ ವಾಪಾಸು ಬಂದಿರುತ್ತಿ!

ಸಿಂಗ: ಏನು ವಿಚಿತ್ರ, ಉಲ್ಲಾಸಕರ ಸನ್ನಿವೇಶವಿದು! ಬಾಬಿಗೆ ಮದುವೆ? ಹಯವದನಸುತೆ?

ಬಾಬಿ: ಸಂಪೂ, ಇದು ಸ್ವಪ್ನವೆ? ಈ ಕೈ ಚಿವುಟು! (ಚಿವುಟುತ್ತಲೇ) ಹಾಯ್! ಎಚ್ಚರವಾಗಿದ್ದೇನೆ!

ಸಂಪ: ಅದೆಲ್ಲ ನಮಗೆ ಚೆನ್ನಾಗಿ ಗೊತ್ತು.

ಬಾಬಿ: ಆದರೆ ಸಂಪೂ, ನನ್ನ ಭಾವೀ ಶ್ವಶುರನೊಡನೆ ಹದಿನೈದು ರೂಪಾಯಿ ಸಾಲ ಮಾಡಿ, ಒಂದು ವರ್ಷ ಕಾಲ ತಪ್ಪಿಸಿಕೊಂಡ ನನ್ನ ಮೇಲೆ ಇಷ್ಟೇಕೆ ವಿಶ್ವಾಸ?

ಹಯ: ನೀನು ಯೋಚನೆಮಾಡಬೇಡ. ನಾನೊಬ್ಬ ವ್ಯಾಪಾರಿ. ನಿನ್ನ ಖರೇ ಗುಣಗಳನ್ನು ಪರೀಕ್ಷಿಸಿದೆ. ನಿನ್ನಲ್ಲಿ ವಣಿಕ್‌ನೃಪತಿಯಾಗುವ ಲಕ್ಷಣವಿದೆ.

ಬಾಬಿ: ಹೇಗೆ?

ಹಯ: ಕೇಳು. ನೀನೊಮ್ಮೆ ಒಬ್ಬನಿಂದ ನಿನಗೆ ಬರಬೇಕಾದ ಐದು ರೂಪಾಯಿ ವಸೂಲು ಮಾಡುವುದನ್ನು ನಾನು ಕಂಡಿದ್ದೆ. ಅದನ್ನು ಕಂಡ ನಂತರ ನಿನ್ನಲ್ಲಿ ವಿಶ್ವಾಸ ತೋರಿತು. ಆ ವಿಶ್ವಾಸದಿಂದಲೇ ನಿನಗೆ ಹದಿನೈದು ರೂಪಾಯಿಗಳಷ್ಟು ಸಾಲ ಕೊಟ್ಟುಬಿಟ್ಟೆ.

ಬಾಬಿ: ನಾನು ನಿಮ್ಮ ಸಾಲವನ್ನು ಹಿಂದಿರುಗಿ ಕೊಡದಿದ್ದರೂ ನಿಮ್ಮ ವಿಶ್ವಾಸ ಕೆಡಲಿಲ್ಲವೇ?

ಹಯ: ಇಲ್ಲ. ನೀನು ಚಿಂತಿಸಬೇಡ. ವ್ಯಾಪಾರಿಗೆ ಒಳ ವಸೂಲಿ ಕಲೆ ಚೆನ್ನಾಗಿ ತಿಳಿದಿರಬೇಕು—ಹೊರ ಜಾವತಿ ವಿಷಯವು ಗೌಣ. ನನ್ನಂಥವನನ್ನು ಒಂದು ವರ್ಷದ ವರೆಗೆ ದಣಿಸಿದ ನಿನ್ನ ಸಾಮರ್ಥ್ಯವನ್ನು ಕಂಡು ನಾನು ತಲೆದೂಗಿದೆ. ನೀನೇ ನನ್ನ ಜಾಮಾತನಾಗಲು ಯೋಗ್ಯನು ಎಂದು ನಿರ್ಧರಿಸಿ, ನಿನ್ನ ಚಿಕ್ಕಪ್ಪನ ಬಳಿಗೆ ಹೋದಾಗ, ಅವನು ನಿನ್ನನ್ನು ನನಗೇ ಒಪ್ಪಿಸಿಬಿಟ್ಟನು. ಅಂದಿನಿಂದ ನಿನ್ನ ಬೇಟೆ ಆರಂಭವಾಯಿತು. ಇದನ್ನರಿಯದೆ ನೀನು ಬೊಂಬಾಯಿಗೂ ಹೋದಿಯಲ್ಲ!

ಸಿಂಗ: ಕುಡಿಕರಿಗೆ, ಜೂಜುಕೋರರಿಗೆ, ವ್ಯಭಿಚಾರಿಗಳಿಗೆ --ಅವರ ಗುಣ ನಡತೆ ತಿಳಿದೂ ಹೆಣ್ಣು ಕೊಡುವವರಿದ್ದಾರೆ. ಕೇವಲ ಹದಿನೈದು ರೂಪಾಯಿ ಬಾಕಿ ಮಾಡಿದ ನಮ್ಮ ಬಾಬಿಗೇಕೆ ಕೊಡದು?

ಹಯ: ನಿಜ, ನಿಜ.

ಬಾಬಿ: ನಿಮ್ಮ ಸಾಲವನ್ನು ನಾನು ಇನ್ನೂ ತೀರಿಸಿಲ್ಲ.

ಹಯ: ಅಷ್ಟೆಯೇನು? ಹಾಗಾದರೆ ಯೋಚನೆ ಬೇಡ. ಅದನ್ನು ನಿನಗೆ ನಾನು ಕೊಡುವ ವರದಕ್ಷಿಣೆ ಯಿಂದ ಕಡಿದರಾಯಿತು.

ಬಾಬಿ: (ಉಗುರು ಕಚ್ಚಿ ಆಲೋಚಿಸಿ) ಹಾಗೆ, ಅಲ್ಲವೆ? ಎಷ್ಟು ವರದಕ್ಷಿಣೆ ಕೊಡುವಿರೆಂದು ಚಿಕ್ಕಪ್ಪನೊಡನೆ ಮಾತು?

ಹಯ: ಮೂರು ಸಾವಿರ.

ಬಾಬಿ: ಹಾಗಾದರೆ, ಅದನ್ನು ಮೂರು ಸಾವಿರದ ಹದಿನೈದು ಎಂದು ಮಾಡಿಬಿಡಿರಿ ಮತ್ತು ಅದರಿಂದ ಹದಿನೈದನ್ನು ಕಳೆದು ಬಿಡಿರಿ.

ಸಂಪ: ಭೇಷ್ ಬಾಬಿ!

ಹಯ: ಜಾಮಾತನೇ, ಮೆಚ್ಚಿದೆ! ನೀನು ಖರೇ ವ್ಯಾಪಾರಿ ಎಂಬುದಕ್ಕೆ ಇನ್ನೊಂದು ಪುರಾವೆ ಇದು. ಇನ್ನು ನಿನ್ನ ನಂಟಸ್ತಿಕೆಯನ್ನು ಯಾರು ಬಂದು ತಡೆದರೂ ಬಿಡಲೊಲ್ಲೆ!

ಸಿಂಗ: (ಬಾಬಿಯನ್ನು ಒತ್ತಟ್ಟಿಗೆ ಕರೆದು) ಬಾಬೀ, ಏನಿದು! ಈ ದಿನವೇ ವರದಕ್ಷಿಣೆಯ ವಿಷಯ ಆವೇಶದ ಭಾಷಣ ಕೊಟ್ಟು ಈ ದಿನವೇ ವರದಕ್ಷಿಣೆಗೆ ಕೈಒಡ್ಡುವಿ ಏನಯ್ಯಾ?

ಬಾಬಿ: ಸಿಂಗಾ, ನೀನು ಸುಮ್ಮನಿರು. ನಾನು ಗಳಿಗೆ ಗಳಿಗೆಗೆ ವರ

ದಕ್ಷಿಣೆ ತೆಗೆದುಕೊಳ್ಳುವವನಲ್ಲ. ಈಗೊಂದು ಉಪಾಯವಿಲ್ಲ-ಸಾಲ ತೀರಿಸ ಬೇಕಾಗಿದೆ.

ಸಿಂಗ: ಕನ್ಯೆಯ ಮಾತಾಪಿತೃಗಳು ಸೇಣು ಹಾಕಿಕೊಳ್ಳುವರೆಂದು ಹೇಳುತಿದ್ದಿಯಲ್ಲಾ!

ಬಾಬಿ: ಶ್! ಇವರಲ್ಲಯ್ಯಾ! ಸೇಣಿನ ಜಾತಿಯೇ ಜೇರೆ. ಇದು ಗೇಣಿ ವಸೂಲು ಮಾಡುವ ಜಾತಿ.

ಸಿಂಗ: ಆಡುವುದೊಂದು, ಮಾಡುವುದೊಂದು! ನಿನ್ನಂಥ ಘಟಿಂಗ ರಿಂದಲೇ ಸಮಾಜ ಕೆಟ್ಟಿದೆ!

ಬಾಬಿ: ಬಾಯಿ ಮುಚ್ಚು! ನನ್ನಂಥವನನ್ನು ಬೆನ್ನಟ್ಟಿ ಹಿಡಿದು, ನನಗೆ ತಿಳಿಸುವ ಮೊದಲೇ ಹೆಣ್ಣು ನಿಶ್ಚಯಮಾಡಿ, ವರದಕ್ಷಿಣೆಯನ್ನು ಗೊತ್ತುಮಾಡಿ, ಮದುವೆಗೆ ಸಿಂಗರಿಸುವವರೇ ಸಮಾಜದ್ರೋಹಿಗಳು.

ಹಯ: ಏನು ಮಂತ್ರಾಲೋಚನೆ?.....ಏನೂ ಇಲ್ಲವೆ? ಹುಡುಗಿ ಯನ್ನು ನೋಡುವಿರಾ?

ಸಂಪ: ಸ್ವಲ್ಪ ಕಪ್ಪಗಾದರೂ—ಲಕ್ಷಣವಂತಳು.

ಬಾಬಿ: (ಗಾಬರಿಯಿಂದ ಹೌಹಾರಿ) ಕಪ್ಪು? ಕಪ್ಪು? ಕಪ್ಪು? ಕಪ್ಪೇ?

ಸಂಪ: ಮತ್ತೆ ನೀನೇನು ಚಂದ್ರಕಾಂತ ಶಿಲೆಯ ಬಣ್ಣದವನೇ ಮುತ್ತಾಳ? ಗುಣಗಳು ಬಿಳಿದಾಗಿರಬೇಕು.

ಸಿಂಗ: "ಕಪ್ಪು ಹಿಡಿದ ಅಕಲಂಕ ಕಾಂಚನದ ಒಪ್ಪದಂದದಿ" ಎನ್ನು ತ್ತಾನೆ ಕವಿ. ಕಪ್ಪು ಎಂದರೆ ತಾಜಾ ಸ್ವದೇಶಿ. ನಾನು ಲಗ್ನವಾಗುವುದಾ ದರೆ ಅಚ್ಚ ಕಪ್ಪು ಹುಡುಗಿಯನ್ನೆ!

(ಆಗಾಗ್ಗೆ ಬಾಗಿಲಿಗೆ ಬಂದು ಇಣಿಕಿ ಹೋಗುತಿದ್ದ ಸಂಪತ್ಕುಮಾರರ ಒಬ್ಬಳು ಹೆಂಡತಿ, ಕಾಫಿಯನ್ನು ಹೊರಗೆ ತಂದಿರಿಸುವಳು. ಹುಡುಗಿಯನ್ನು ಮತ್ತೊಬ್ಬಳು ಕರತರುವಳು.)

ಬಾಬಿ: (ಕಪ್ಪಗಿನ ಹುಡುಗಿಯನ್ನು ನೋಡಿ ಮೊದಲು ಸಪ್ಪಗಾಗಿ, ಬಾಯಿಗೆ ಹಾಕಿದ ಲಾಡುವನ್ನು ಕಚ್ಚದೆ, ಮತ್ತೆ ಕೆಲಕ್ಷಣಗಳಲ್ಲಿ ಮುಗು ಳ್ನಗುವನು.)

ಸಂಪ: ಬಾಬೀ, ಪಸಂದಾಯಿತಲ್ಲ?

ಬಾಬಿ: ಆಯಿತು.

ಹಯ: "ಶುಭಸ್ಯ ಶೀಘ್ರಂ". ಆದರೂ ದಶಂಬರ 31ಕ್ಕೆ ಲಗ್ನವೆಂದು ನಿಶ್ಚಯಿಸಬೇಕಾಯಿತು—ನಿನ್ನ ಚಿಕ್ಕಪ್ಪನ ಅಪೇಕ್ಷೆಯೇ ಹಾಗೆ!

ಬಾಬಿ: (ಆಶ್ಚರ್ಯದಿಂದ) ದಶಂಬರ 31? ಈ ದಿನವೇ ಲಗ್ನವೇ?

ಸಂಪ: ಏ ಮಂಕೇ, ಈ ಪುಷ್ಯ ಮಾಸದಲ್ಲಿ ಲಗ್ನ ಮಾಡುತ್ತಾರೆಯು?

ಹಯ: 1955ನೇ ದಶಂಬರ 31 ಅಂತ! ಇಂದಿನಿಂದ ಸರಿಯಾಗಿ ಒಂದು ವರ್ಷವಿದೆ. ನೆನಪಿರಲಿ.

ಬಾಬಿ: (ಕಾಫಿ ಕುಡಿದೆದ್ದು, ನಮಸ್ಕರಿಸಿ) ಬಾ ಸಿಂಗ!

ಸಿಂಗ: ಪುನಃ ಬಾಸಿಂಗವೇ?

ಬಾಬಿ: ಹಾಗಲ್ಲ ಸಿಂಗಾ, ಬಾ—ಸಿಂಗಾ, ಸಿಂಗಾ—ಬಾ ಅಂದೆ!

(ತೆರೆ)

**ಸಂಪೂರ್ಣ.**

(**ವಿ. ಸೂ:** "ಬಾಬಿ"ಯೇ ಪ್ರಧಾನ ಪಾತ್ರವಾಗಿರುವ "ಸತ್ಯವಂತ ಬಾಬಿ"—"ಬಾಬಿ ಮತ್ತು ಬೇಬಿ" ಮೊದಲಾದ ಏಕಾಂಕ ಪ್ರಹಸನಗಳು 'ಒಂದಾಣೆ ಮಾಲೆ'ಯಲ್ಲಿ ಮುಂದೆ ಪ್ರಕಟವಾಗುವುವು.)

೨೦-೨-೫೫

# 22

# ಕುರಾಲ್

ತಿರುವಳ್ಳುವಾರ್ ಮಹಾಕವಿ ವಿರಚಿತ

## ಸುಭಾಷಿತ.


ಸಂಗ್ರಾಹಕರು:

**ಶ್ರೀ। ಡಿ. ಪುಟ್ಟಸ್ವಾಮಿ**

ಬಿ. ಎ., ಬಿ. ಎಲ್., ಎಡ್ವೋಕೇಟ್,

ಸಂಪಾದಕ: "ವಿವೇಕಾಭ್ಯುದಯ" ಮಂಗಳೂರು.



**1955.**


ಒಂದಾಣೆ



ಮಾಲೆ

# ತಿರುಕ್ಕುರಲ್

........

ಯಾವುದೇ ಜೀವಿಯನ್ನು ಕಾಯಾ, ವಾಚಾ, ಮನಸಾ ಹಿಂಸಿಸದಿರುವುದು ಮತ್ತು ಕೊಲ್ಲದಿರುವುದು ದಕ್ಷಿಣ ಭಾರತದ ತಮಿಳುನಾಡಿನ ಪ್ರಾಚೀನ ಸಾಹಿತ್ಯದಲ್ಲಿ, ಪ್ರಮುಖ ಉಪದೇಶವಾಗಿ ಅಡಕವಾಗಿದೆ. ಈ ಪ್ರಾಚೀನ ತಮಿಳು ಸಾಹಿತ್ಯವನ್ನು ಸಮಾನ ರೀತಿಯ ಧ್ಯೇಯ ಮತ್ತು ಗುಣವೈಶಿಷ್ಟ್ಯಗಳಿಂದೊಡಗೂಡಿದ ಮೂರು ಮುಖ್ಯ ವಿಭಾಗಗಳನ್ನಾಗಿ ವಿಂಗಡಿಸಬಹುದಾಗಿದೆ. ಈ ಮೂರು ಮುಖ್ಯ ವಿಭಾಗಗಳೆಂದರೆ ಜೈನ, ಬೌದ್ಧ ಮತ್ತು ಶೈವಮತೀಯ ಹಿಂದೂಧರ್ಮಗಳಿಗೆ ಸಂಬಂಧಿಸಿದವುಗಳಾಗಿವೆ. ಈ ಮೂರು ಪ್ರಮುಖ ವಿಭಾಗಗಳಲ್ಲದೆ, "ಅಹಿಂಸಾ ಪರಮೋ ಧರ್ಮ" ಎಂದು ಸಾರುವ, ವೈದಿಕ ಸಾಹಿತ್ಯವಾದ ಉಪನಿಷತ್ತುಗಳು ಬೇರೆ ಇವೆ. ಇವುಗಳಲ್ಲಿಯೂ ಪರಸ್ಪರ ಪ್ರೀತಿಯ ಮತ್ತು ಅಹಿಂಸೆಯ ಉಪದೇಶವು ಸಾರವತ್ತಾಗಿ ಮತ್ತು ಪ್ರಧಾನವಾಗಿ ವರ್ಣಿಸಲ್ಪಟ್ಟಿದೆ.

ಅಹಿಂಸೆಯ ಪರಮತತ್ತ್ವಗಳನ್ನು ಸಾರುವ ಅನೇಕ ಪ್ರಾಚೀನ ಕೃತಿಗಳು ತಮಿಳು ಸಾಹಿತ್ಯದಲ್ಲಿ ಅಡಕವಾಗಿವೆ. ಈ ಸಾಹಿತ್ಯದಲ್ಲಿ ವಿಶಾಲವಾದ ಸಾಹಿತ್ಯದಿಂದೊಡಗೂಡಿದ ಎರಡು ಪ್ರಮುಖ ಗ್ರಂಥಗಳು ಎಲ್ಲರ ವಿಶೇಷ ಮನ್ನಣೆಗೆ ಮತ್ತು ಪ್ರಶಂಸೆಗೆ ಪಾತ್ರವಾಗಿವೆ. ಈ ಎರಡು ಗ್ರಂಥಗಳು ತಮಿಳು ಜನರ ಜೀವನ ಮತ್ತು ಧಾರ್ಮಿಕ ಭಾವನೆಗಳ ಮೇಲೆ ವಿಶೇಷ ಪರಿಣಾಮವನ್ನು ತಂದೊಡ್ಡಿವೆ ಎನ್ನುವುದಕ್ಕೆ ಅನುಮಾನವಿಲ್ಲ. ಇತರ ಎಲ್ಲ ತಮಿಳು ಗ್ರಂಥಗಳಿಗಿಂತ ಈ ಎರಡು ಗ್ರಂಥಗಳು ವಿಶೇಷ ಪ್ರಭಾವವನ್ನು ತಮಿಳರ ಮೇಲೆ ಬೀರಿವೆ ಎಂದರೂ ಅತಿಶಯೋಕ್ತಿಯಾಗಲಾರದು. ಆ ಎರಡು ಗ್ರಂಥಗಳೆಂದರೆ "**ತಿರುಕ್ಕುರಲ್**" ಮತ್ತು "**ನಾಲದಿಯಾರ್**." ಇವೆರಡೂ ಕ್ರಿಸ್ತ ಶಕದ ಅತ್ಯಂತ ಆದಿಯ ಗ್ರಂಥಗಳೆಂದು ಎಲ್ಲರಿಂದ ಸ್ವೀಕೃತವಾಗಿವೆ. "**ತಿರುಕ್ಕುರಲ್**" ಗ್ರಂಥವು ಜೈನರ ಸಾಹಿತ್ಯ ಕೃತಿಯೆಂದೂ ''**ನಾಲದಿಯಾರ್**'' ದಿಗಂಬರ ಪಂಥದ

ಜೈನಗುರುಗಳ ಸಾಹಿತ್ಯಕೃತಿಯೆಂದೂ ಸ್ವೀಕರಿಸಲ್ಪಟ್ಟವೆ. ಮಹಾವೀರರು ಸಾರಿದ ಜೈನಧರ್ಮವು ಕ್ರಿಸ್ತ ಪೂರ್ವ ನಾಲ್ಕನೇ ಶತಮಾನದಷ್ಟು ಹಿಂದೆಯೇ ತಮಿಳು ಜನರ ಧಾರ್ಮಿಕಭಾವನೆಯ ಮೇಲೆ ತುಂಬ ಪ್ರಭಾವ ಬೀರಿತ್ತೆಂಬುದು ಎಲ್ಲರೂ ಒಪ್ಪಿದ ವಿಷಯವಾಗಿರುತ್ತದೆ.

ಪವಿತ್ರ ಕುರಲ್ ಗ್ರಂಥವನ್ನು ಬರೆದ ತಿರುವಲ್ಲೂರ್ ಇಂದಿನ ಮದ್ರಾಸಿನ ಮೈಲಾಪುರದಲ್ಲಿ ವಾಸವಾಗಿದ್ದನೆಂದೂ, ಕ್ರಿ. ಶ. ಎರಡನೇ ಶತಮಾನದವನೆಂದೂ (ಮೊದಲನೇ ಶತಮಾನವೆಂದು ಕೆಲವರನ್ನುತ್ತಾರೆ). ವೃತ್ತಿಯಲ್ಲಿ ನೆಯ್ಗೆಯವನಾಗಿದ್ದನೆಂದೂ ಕೇಳಬರುತ್ತದೆ ವಲ್ಲೂವರರೆಂದರೆ ನೀಚ ಜಾತಿಯವರು; ತಮಿಳುನಾಡಿನ ಅಸ್ಪೃಶ್ಯರ ಪುರೋಹಿತ ವರ್ಗಕ್ಕೆ ಸೇರಿದವರು. ಇದು ಒಂದು ಮತ.

ಕುರಲ್ ಗ್ರಂಥದಲ್ಲಿ ಸಮಾಜದ ಬೇರೆ ಬೇರೆ ಪಂಥಗಳ ಗುಣ ಮತ್ತು ನಡತೆಗಳ ವಿವರಣೆಯೇ ಪ್ರಧಾನವಾಗಿದೆ. ಗುಣ, ಸಂಪತ್ತು ಮತ್ತು ಪ್ರೇಮ (ಸಂಸ್ಕೃತದಲ್ಲಿ ಇವುಗಳನ್ನೇ ಧರ್ಮ, ಅರ್ಥ ಮತ್ತು ಕಾಮ ಎಂದು ಸಂಬೋಧಿಸಿರುತ್ತಾರೆ ಮತ್ತು ತಮಿಳು ಭಾಷೆಯಲ್ಲಿ ಅರಾಮ್, ಪೊರಲ್ ಮತ್ತು ಇಂಬಮ್ ಎಂದು ಕರೆಯುವರು) ಎಂಬ ಮೂರು ಮುಖ್ಯ ವಿಭಾಗಗಳೊಂಡೊಡಗೂಡಿ ಸುಮಾರು ೧೩೩೦ ವಚನಗಳನ್ನಾವರಿಸಿಕೊಂಡಿದೆ. ಇಂದು ಕುರಲ್ ಎಂಬುದು ಒಂದು ಧರ್ಮಭಂಡಾರವಾಗಿಯೇ ಲೋಕಮಾನ್ಯವಾಗಿದೆ. ಅದರಲ್ಲಿ ಅರ್ವಾಚೀನ ಹಾಗೂ ಪ್ರಾಚೀನ ತಮಿಳು ಸಾಹಿತ್ಯದ ವಿಪುಲ ಜ್ಞಾನಸಂಗ್ರಹವು ಅಡಕವಾಗಿದೆ. ಹಲವು ಮಂದಿ ಇಂಗ್ಲಿಷ್ ಸಾಹಿತಿಗಳು ಅದನ್ನು ಆಂಗ್ಲಭಾಷೆಗೆ ಪರಿವರ್ತಿಸಿದ್ದಾರೆ. ಅವುಗಳಲ್ಲಿ ವಿಶೇಷ ಆದರಕ್ಕೆ ಪಾತ್ರವಾದ ಆಂಗ್ಲ ತರ್ಜುಮೆಗಳೆಂದರೆ ಡಾ| ಜಿ. ಯು. ಪೋಪ್ಲಿ, ಡಾ| ಜೆ. ಲಾಜರಸ್, ವಿ. ವಿ. ಎಸ್. ಅಯ್ಯರ್ ಮತ್ತು ಚಕ್ರವರ್ತಿ ರಾಜಗೋಪಾಲಾಚಾರಿಯವರು ಬರೆದುವುಗಳು.

ಕೆಲವು ತಮಿಳು ಪಂಡಿತರು ವಲ್ಲೂವರನನ್ನು ಜೈನಗುರುವೆಂದು ಸನ್ಮಾನಿಸಿದ್ದಾರೆ.* ದಿವಂಗತ ಪ್ರೊಫೆಸರ್ ಶೇಷಗಿರಿ ಶಾಸ್ತ್ರಿಯವರು ಆ

---

*ತಿರುಕ್ಕುರಲ್ ಗ್ರಂಥವನ್ನು ಶ್ರೀ| ಕುಂದ ಕುಂದಾಚಾರ್ಯರು ರಚಿಸಿದ್ದೆಂದು ಆಧಾರಭೂತವಾಗಿ ಬರೆದು ಒಂದು ಬೃಹದ್ಗ್ರಂಥವನ್ನು ಪ್ರೊಫೆಸರ್ ಎ. ಚಕ್ರವರ್ತಿಗಳು ಪ್ರಕಟಿಸಿರುತ್ತಾರೆ—ಲೇಖಕ.

ಕವಿಯು ಓರ್ವ ಅರ್ಹಂತರ ಅನುಯಾಯಿ ಎಂದಿದ್ದರು. ಕುರಲ್ ಗ್ರಂಥ ದಲ್ಲಿ ಬರುವ "ಮಲರಮಿಸೈ ಯೆಜಿನನ್" ಮತ್ತು "ಯೆಂಗುಣ ನಾಥನ್" ಎಂಬಿತ್ಯಾದಿ ಉಲ್ಲೇಖಗಳಿಂದ ಅದನ್ನು ಬರೆದ ಕವಿಯು ಜೈನಧರ್ಮದ ಅನುಯಾಯಿ ಇರಬೇಕೆಂದು ಸ್ಪಷ್ಟ ತಿಳಿಯಬಹುದಾಗಿದೆ ಎಂಬುದಾಗಿ ಪ್ರೊಫೆಸರ್ ಎಮ್. ಎಸ್. ರಾಮಸ್ವಾಮಿ ಅಯ್ಯಂಗಾರರು ಅಭಿಪ್ರಾಯ ಪಟ್ಟಿರುತ್ತಾರೆ. "ಮಲರ ಮಿಸೈ ಯೆಜಿನನ್" ಎಂದರೆ "ತಾವರೆಯಲ್ಲಿ ನಡೆಯುವವನು" ಎಂಬರ್ಥ. ಈ ಉಲ್ಲೇಖವು ಸಾಮಾನ್ಯವಾಗಿ ಅರ್ಹಂತ ರಿಗೆ ಸಂಬಂಧಿಸಿದುದು. ಇನ್ನು "ಯೆಂಗುಣ ನಾಥನ್" ಎಂದರೆ "ಎಂಟು ಗುಣಗಳಿಂದೊಡಗೂಡಿದವನು" ಎಂಬುದು ವಿಶೇಷವಾಗಿ ಜಿನೇಶ್ವರರಿಗೆ ಸಂಬೋಧಿಸಿದುದು. ಜೈನಧರ್ಮದಲ್ಲಿ ಹೇಳಿರುವಂತೆ ಪರಮಾತ್ಮನು ಈ ಎಂಟು ಗುಣಗಳಿಂದೊಡಗೂಡಿರುತ್ತಾನೆ. ಇನ್ನು ಕುರಲ್ ಜೈನ ಮೂಲ ಗ್ರಂಥವೆಂಬುದಕ್ಕೆ ಮೂರನೇ ಸಾಧಾರಭೂತ ವಿಮರ್ಶೆ "ನೀಲಕೇಶಿ" ಗ್ರಂಥದ ವಿಮರ್ಶಕರಿಂದ ಸಿಗುತ್ತದೆ. ಅವರು "ಕುರಾಲ್ ಎಮ್ಮೊಟ್ಟು" ("ಕುರಾಲ್ ನಮ್ಮ ಸ್ವಂತ ಧರ್ಮ ಗ್ರಂಥ") ಎಂದಿರುವರು. ಜೈನರು ವಲ್ಲೂವರನು ತಮ್ಮ ಪಂಥಕ್ಕೇನೆ ಸೇರಿದವನೆಂಬ ವಿಶ್ವಾಸ ತಾಳಿಕೊಂಡಿದ್ದ ರೆಂಬುದಕ್ಕೆ ಇವು ಪ್ರಬಲ ಸಾಕ್ಷ್ಯವಾಗಿವೆ.

ಜೈನಧರ್ಮದಲ್ಲಿ ಮತ್ತು ಸಂಸ್ಕೃತಿಯಲ್ಲಿ ಅತ್ಯಂತ ಉತ್ಕೃಷ್ಟವಾದು ದನ್ನೆ ಆರಿಸಿ ತನ್ನ ಗ್ರಂಥದಲ್ಲಿ ವಲ್ಲೂವರ್ ಕವಿಯು ವ್ಯಾಖ್ಯಾನಿಸಿದ್ದಾ ನೆಂಬುದು ನಿರ್ವಿವಾದ.



# ಕುರಲ್

## ೧. ಧರ್ಮ

ಧರ್ಮಕ್ಕಿಂತ ಅತಿಶಯವಾದ ಸಂಪತ್ತು ಬೇರೊಂದಿಲ್ಲ; ಅದನ್ನು ಮರೆಯುವದರಷ್ಟು ದುರಾದೃಷ್ಟವೂ ಬೇರೊಂದಿರಲಾರದು

ಧರ್ಮವನ್ನು ಮರೆಯುವುದೆಂದರೆ ಧರ್ಮದಲ್ಲಿ ಹೇಳಿದಂತಹ ಕರ್ತವ್ಯಗಳನ್ನು ಪಾಲಿಸದಿರುವುದಾಗಿದೆ.

ಧರ್ಮಪಥವನ್ನು ಬಿಡದೆ ನಿಮ್ಮ ಶಕ್ತಿ ಮತ್ತು ಸಂಪತ್ತು ಕೊಂಡೊಯ್ಯುವಷ್ಟು ದೂರಕ್ಕೆ ಮುನ್ನಡೆಯಿರಿ.

ಧೈರ್ಯದ ಹಿಡಿತವು ಒಂದಿಷ್ಟು ಸಡಿಲವಾಗದಂತೆ ಪ್ರತಿಯೊಂದು ವಿಷಯವನ್ನು ಪ್ರಯೋಗಕ್ಕೆ ಅನುಕೂಲವಾಗುವ ಮಟ್ಟಕ್ಕೆ ತರುವ ವಿಶಿಷ್ಟ ಮಾರ್ಗವಿದು.

ಮನಸ್ಸನ್ನು ದುರಾಲೋಚನೆಗಳಿಂದ ದೂರವಿರಿಸಿ. ಇದರಲ್ಲೆ ಎಲ್ಲ ಧರ್ಮ ಅಡಕವಾಗಿದೆ. ಉಳಿದುದೆಲ್ಲ ಶಬ್ದ ಮತ್ತು ಪ್ರದರ್ಶನದ ರೂಪದಲ್ಲಿದೆ.

ಕ್ರಿಯೆಯು ಶುದ್ಧವಿರಬೇಕಾದರೆ ಭಾವನೆ ಶುದ್ಧವಿರಬೇಕು. ಮನಸ್ಸನ್ನು ಕೆಟ್ಟ ಆಲೋಚನೆಗಳಿಂದ ದೂರವಿರಿಸಿಕೊಳ್ಳುವುದು ಧಾರ್ಮಿಕ ಜೀವನದ ಉದ್ದೇಶವಾಗಿದೆ. ಮತ್ತು ಇದು ಮೌನದಲ್ಲಿ ನಡೆದುಹೋಗುತ್ತದೆ. ಬಾಹ್ಯ ಪ್ರದರ್ಶನಗಳೆಲ್ಲ ಶಬ್ದಾಡಂಬರ ಮತ್ತು ನಟನೆ ಮಾತ್ರ.

ನಿಜವಾದ ಧಾರ್ಮಿಕ ಜೀವನವು ಈ ನಾಲ್ಕು ವಿಷಯಗಳನ್ನು ತ್ಯಜಿಸುವುದರಿಂದ ಪ್ರಾಪ್ತವಾಗುತ್ತದೆ. ಆ ನಾಲ್ಕು ವಿಷಯ ಯಾನೆ ವ್ಯಸನಗಳೆಂದರೆ ಅಸೂಯೆ, ವಿಲಾಸದ ಆಕಾಂಕ್ಷೆ, ಕೋಪ ಮತ್ತು ಕೆಟ್ಟ ಮಾತುಗಳು.

ಒಳ್ಳೆಯದನ್ನು ಮುಂದೆ ಮಾಡುವೆನೆಂದು ಒತ್ತಟ್ಟಿಗಿಡಬೇಡಿ. ಈಗಲೇ, ದೇಹದಲ್ಲಿ ಚೈತನ್ಯ ಮತ್ತು ಶಕ್ತಿಗಳು ಇರುವಾಗಲೇ ಧಾರ್ಮಿಕ ಜೀವನವನ್ನು ಜೀವಿಸಿರಿ. ಉಳಿದುದೆಲ್ಲ ನಿಷ್ಪ್ರಯೋಜಕ ಮತ್ತು ಕ್ಷಣಿಕವಾದರೆ ಅದೊಂದೇ ಶಾಶ್ವತ ಆಸರೆಯಾಗುವುದು.

ಒಳ್ಳೆಯ ನಡತೆಯಿಂದ ದೊರೆಯುವ ಆನಂದವೇ ನಿಜವಾದ ಸುಖವಾಗಿರುತ್ತದೆ. ಇತರ ವಿಲಾಸಗಳೆಲ್ಲ ನೋವಿಗೆ ಮತ್ತು ನಾಚಿಕೆಗೆ ಕಾರಣವಾಗಿವೆ.

ದುರ್ನಡತೆಯಿಂದ ಲಭ್ಯವಾದ ಸಂತೋಷವು ಮರುಕ್ಷಣದಲ್ಲೇ ದುಃಖವಾಗಿ ಪರಿಣಮಿಸುವುದು. ಆದುದರಿಂದ ಒಳ್ಳೆಯ ನಡತೆಯೇ ಸರಿಯಾದ ಮಾರ್ಗ ಮತ್ತು ವಿವೇಕಪೂರ್ಣವಾಗಿರುತ್ತದೆ.

## ೨. ಒಳ್ಳೆಯ ಗೃಹಸ್ಥ

ನಿಜವಾದ ಗೃಹಸ್ಥನು ಇತರರ ಎಲ್ಲ ಕರ್ತವ್ಯಗಳೂ ಸರಿಯಾಗಿ ಪೂರೈಸುವಂತೆ ನೆರವಾಗುತ್ತಾನೆ.

ವಿವಾಹವಾಗದ ಬ್ರಹ್ಮಚಾರಿ ವಿದ್ಯಾರ್ಥಿಯು ಜೀವನದ ಸುಖ ಸಂತೋಷಗಳನ್ನು ತ್ಯಜಿಸಿ ಕಾಡಿನಕ್ಕೆ ಹೋಗುವುದು, ಸನ್ಯಾಸಿಗಳು ತಮ್ಮ ಸನ್ಯಾಸದೀಕ್ಷೆಯನ್ನು ಅಡ್ಡಿ-ಆತಂಕಗಳಿಲ್ಲದೆ ಸಾಗಿಸುವುದು ಇತರ ಹಲವು ಜನರು ಗೃಹಸ್ಥಾಶ್ರಮಿಗಳಾಗಿ ಜೀವಿಸಿರುವುದರಿಂದಲೇ. ಆದುದರಿಂದ ಗೃಹಸ್ಥಾಶ್ರಮಿಗಳಾಗಿ ಜೀವಿಸುವ ಸಂಸಾರಿಗಳು ವಿಲಾಸವೈಭವಕ್ಕೆ ಶರಣುಹೋದ ಸ್ವಾರ್ಥಿಗಳು, ಇತರ ಸನ್ಯಾಸಿಗಳು ಮಾತ್ರ ನಿಸ್ವಾರ್ಥಿಗಳು, ಎಂದು ತಿಳಿಯಬಾರದು. ಈ ಪ್ರಪಂಚದ ಲೌಕಿಕ ವ್ಯವಹಾರ ತ್ಯಜಿಸಿದವರಿಗಾಗಿ ಗೃಹಸ್ಥಾಶ್ರಮಿಯು ದುಡಿಯುತ್ತಿದ್ದಾನೆಂಬುದಾಗಿ ತಿಳಿಯಬೇಕು.

ಪ್ರೇಮ ಮತ್ತು ಒಳ್ಳೆಯ ನಡತೆ ಅದು ಗೃಹಸ್ಥಾಶ್ರಮಿಯ ಜೀವನಕ್ಕೆ ಮೆರುಗು ಮತ್ತು ಉದ್ದೇಶಪೂರ್ತಿಯ ಹೊಳಪು ಕೊಡುತ್ತವೆ.

ಪ್ರೇಮ ಮತ್ತು ಧರ್ಮಗಳಿಂದ ಕೂಡಿದ್ದರೆ ತಾನೆ ಸಂಸಾರ ಜೀವನವು ಸುಂದರ ಮತ್ತು ಸುಶೋಭಿತವಾಗುವುದು. ಪ್ರೇಮವು ಅದನ್ನು ಸುಂದರವನ್ನಾಗಿ ಮಾಡುವುದಾದರೆ ಧರ್ಮವು ಅದರ ಉದ್ದೇಶ ಪೂರ್ತಿಮಾಡುತ್ತದೆ.

ಧರ್ಮದಲ್ಲಿ ಹೇಳಿದ ಮಾರ್ಗದಲ್ಲಿ ಸಂಸಾರಜೀವನ ಸಾಗಿಸುತ್ತಿರುವವನಿಗೆ ಕಾನನಕ್ಕೆ ಹೋಗಿ ತ್ಯಾಗಜೀವನ ನಡೆಸುವಂಥದ್ದೇನೂ ಉಳಿಯುವುದಿಲ್ಲ.

ಧರ್ಮದ ಮಹತ್ವಾಕಾಂಕ್ಷೆಯುಳ್ಳ ಎಲ್ಲ ತರಗತಿಯವರಲ್ಲಿ ಕ್ರಮಬದ್ಧವಾದ ಸಂಸಾರಜೀವನ ನಡೆಸಿಕೊಂಡಿರುವವನೇ ಅತಿ ಶ್ರೇಷ್ಠನು.

ಮಾಡಬೇಕಾದುದನ್ನು ಚ್ಯುತಿಯಿಲ್ಲದೆ ಮಾಡಿ, ಧರ್ಮಪಂಥದಿಂದ ಬಾಹಿರನಾಗಿ ಜೀವನ ನಡೆಸುವ ಗೃಹಸ್ಥಾಶ್ರಮಿಯ ತಪಸ್ಸು, ಅರಣ್ಯದಲ್ಲಿ ಹಸಿವು ನೀರಡಿಕೆಗಳನ್ನು ತ್ಯಜಿಸಿ ಸಾಧನೆಮಾಡುವ ತಪಕ್ಕಿಂತಲೂ ಶ್ರೇಷ್ಠವಾದುದು.

ಈ ಪ್ರಪಂಚದಲ್ಲಿ ಯಾವ ರೀತಿಯಲ್ಲಿ ಜೀವನ ನಡೆಸಿಕೊಂಡಿರಬೇಕೋ ಆ ರೀತಿಯ ಜೀವನ ಯಾರು ನಡೆಸುತ್ತಾನೋ ಅವನು ಸ್ವರ್ಗದಲ್ಲಿಯು ದೇವತೆಗಳಿಗೆ ಸಮಾನನಾಗುತ್ತಾನೆ.

## ೩. ಜೀವನ ಸಂಗಾತಿ

ಗೃಹಸ್ಥಾಶ್ರಮಿಯ ಜೀವನದಲ್ಲಿ ಸಮಪಾಲಿನ ಕರ್ತವ್ಯ ಭಾಗವಹಿಸು ವವಳು ಮತ್ತು ಅವನ ಸಂಪಾದನೆಯ ಮಟ್ಟಕ್ಕೆ ತನ್ನ ಆವಶ್ಯಕತೆಗಳನ್ನು ನಿಲುಕಿಸಿಕೊಳ್ಳುವಂತಹಳೇ ನಿಜವಾದ ಜೀವನಸಂಗಾತಿಯು.

ಮನೆಗೆ ಬಂದ ಮಡದಿ ಕುಟುಂಬದ ಪಂಕ್ತಿಯಲ್ಲಿ ಸಾಂಸ್ಕೃತಿಕ ದೃಷ್ಟಿ ಹಾಗು ಆರ್ಥಿಕ ದೃಷ್ಟಿ ಹೊಂದಿಕೊಂಡು ಬಾಳಲು ಕಲಿತರೆನೇ ಅಂತಹ ಸಂಸಾರದಲ್ಲಿ ಸುಖಸಂತೋಷಗಳು ಕೂಡಿಬಂದಾವು. ಇಲ್ಲದೆ ಹೋದರೆ ಸಂಸಾರ ನೀರಸವಾಗಬಹುದು.

ಗೃಹಸ್ಥಿತಿಗೆ ತಕ್ಕುದಾದ ಕರ್ತವ್ಯಗಳನ್ನು ಪೂರೈಸುವ ಗುಣಗಳಿಲ್ಲದ ಪತ್ನಿಯಿಂದ ಸಂಸಾರದಲ್ಲಿ ನೆಮ್ಮದಿ ಸಿಗುವಂತಿಲ್ಲ. ಮನೆಯ ಒಡತಿಯಲ್ಲಿ ಮುಖ್ಯವಾಗಿ ಇರಬೇಕಾದ ಈ ಗುಣಗಳೇ ಇಲ್ಲವೆಂದರೆ ಆ ಸಂಸಾರದಲ್ಲಿ ವಿಪುಲ ಐಶ್ವರ್ಯ ಮತ್ತು ಇತರ ಸಾಧನಗಳಿದ್ದು ಪ್ರಯೋಜನ ಸಿಗಲಾರದು.

ಗಂಡನಲ್ಲಿದ್ದ ಗುಣಾತಿಶಯಗಳಿಂದ ಈ ಕೊರತೆ ತುಂಬುವಂತಿಲ್ಲ.

ಜೀವನಸಂಗಾತಿಯಲ್ಲಿರಬೇಕಾದ ಗುಣನಡತೆಗಳು ಮನೆಯ ಒಡತಿ ಯಲ್ಲಿದ್ದುವೆಂದರೆ ಬೇರೆ ಏನೂ ಬೇಕಾಗಿಲ್ಲ. ಅಂತಹ ಗುಣಗಳು ಇಲ್ಲ ವೆಂದಾದರೆ ಬೇರೆ ಯಾವುದರಿಂದಲೂ ಲಾಭವಿಲ್ಲ.

ಜೀವನದ ಸಂಗಾತಿಯು ವಿಧೇಯಳೂ ಪತಿಭಕ್ತಿಪರಾಯಣಳೂ ಆಗಿದ್ದಾಳೆಂದರೆ ಅದಕ್ಕಿಂತ ಅತಿಶಯವಾದ ಬೇರೆ ಭಾಗ್ಯ ಏನು ಬೇಕು?

ನಿಜವಾದ ಪತ್ನಿಯು ಮುಂಜಾನೆ ಎದ್ದೊಡನೆ ದೇವರನ್ನು ಸ್ಮರಿಸುವು ದಿಲ್ಲ. ಅವಳು ತನ್ನ ಭಕ್ತಿಪೂಜಾದಿಗಳನ್ನು ತನ್ನ ಆರಾಧ್ಯದೇವನಾದ

ಪತಿಗೆ ಒಪ್ಪಿಸುತ್ತಾಳೆ. ಅಷ್ಟರಲ್ಲೇ ಸಂತುಷ್ಟಳಾಗುತ್ತಾಳೆ. ಅಂತಹಳ ಆಜ್ಞೆಯಾದರೆ ಮೋಡಗಳು ಕೂಡ ಮಣಿದು ವೃಷ್ಟಿ ಸುರಿಸಬಲ್ಲವು.

ಭಜಕನು ತಾನು ಪ್ರೀತಿಸುವ ಇಲ್ಲವೆ ಮೆಚ್ಚುವ ಯಾವುದೇ ಪೂಜ್ಯ ವಸ್ತುವಿನಲ್ಲಿ ಇಲ್ಲವೆ ವ್ಯಕ್ತಿಯಲ್ಲಿ ಪರಮಾತ್ಮ ಸಾಕ್ಷಾತ್ಕಾರವನ್ನು ಕಾಣ ಬಲ್ಲನು. ಗಂಡನನ್ನು ಪೂಜಿಸುವುದೆಂದರೆ ಪರಮಾತ್ಮನ ಅಲಕ್ಷ್ಯವೆಂದಾ ಗುವುದಿಲ್ಲ.

ಸ್ತ್ರೀಯರ ಮೇಲೆ ಭೌತಿಕ ನಿರ್ಬಂಧಗಳನ್ನಿಟ್ಟು ಸಾಧ್ಯಮಾಡಿ ಕೊಂಡಂತಹ ಶುದ್ಧತೆ ಇಲ್ಲವೆ ಪಾವಿತ್ರ್ಯದಿಂದೇನ ಫಲ? ಅವರ ಸ್ವಂತ ಆತ್ಮಸಾಕ್ಷಿಯೇ ಯೋಗ್ಯ ಕಾವಲುಕಣ್ಣು.

## ೪. ಮಕ್ಕಳು

ಮನುಷ್ಯನಿಗೆ ಲಭ್ಯವಾಗಬಹುದಾದ ಸೌಭಾಗ್ಯಗಳಲ್ಲಿ ಯೋಗ್ಯ ಮಕ್ಕಳನ್ನು ಪಡೆಯುವಂತಹ ಸೌಭಾಗ್ಯ ಸಂತೋಷಾತಿಶಯ ಬೇರೊಂದಿಲ್ಲ.

ಒಬ್ಬನ ಸ್ವಂತ ಮಗುವು ತನ್ನ ಪುಟ್ಟ ಕೈಗಳನ್ನು ಮುಳುಗಿಸಿದ ಪಾಯಸವು ಸ್ವರ್ಗಲಭ್ಯವಾದ ಅಮೃತಕ್ಕಿಂತಲೂ ಮಧುರವಾದುದು.

ವೇಣು ಮತ್ತು ವೀಣಾನಾದಗಳನ್ನು ಮುಕ್ತಕಂಠನಾಗಿ ಹೊಗಳು ವವರು ಇದ್ದಾರೆ. ಮಾತನಾಡಲು ಕಲಿಯುವ ಮುದ್ದು ಮಗುವಿನ ತೊದಲ್ನುಡಿ ಇವೆರಡಕ್ಕಿಂತ ಮಧುರವಾದುದು.

ತಂದೆಯಾದವನೊಬ್ಬನು ತನ್ನ ಮಗುವಿಗಾಗಿ ಕೂಡಿಸಿಡಬಹುದಾದ ಅತ್ಯಮೂಲ್ಯ ಪಿತ್ರಾರ್ಜಿತ ಸೊತ್ತೆಂದರೆ ಯೋಗ್ಯ ಸಾಹಿತಿಗಳಲ್ಲಿ ಗೌರವ ಪೂರ್ಣವಾದ ಸ್ಥಾನಹೊಂದುವಂತೆ ಯೋಗ್ಯ ಶಿಕ್ಷಣವನ್ನು ಆ ಮಗುವಿಗೆ ಒದಗಿಸುವುದಾಗಿದೆ.

ಮಕ್ಕಳನ್ನು ಸಾಕಿಸಲಹುವ ಮಾತಾಪಿತರು, ಅವರ ಸುಖಸಂತೋಷ ಗಳಿಗೆ ಸಂಪತ್ತಿಗಿಂತ ಶಿಕ್ಷಣವು ಹೆಚ್ಚಿನ ಆಶಯ ಒದಗಿಸುವುದೆಂಬುದನ್ನು ಸ್ಮರಣೆಯಲ್ಲಿಟ್ಟುಕೊಳ್ಳಬೇಕು.

ತನ್ನ ಮಗನ ಕುರಿತು ಇತರರು ಪ್ರಶಂಸಿಸಿದ ಮಾತುಗಳನ್ನು ಕೇಳುವಾಗ, ಆ ಮಗುವನ್ನು ಹೆತ್ತ ತಾಯಿಗೆ ಅವನು ಹುಟ್ಟಿದ ದಿನ ಆದ ಆನಂದಕ್ಕಿಂತ ಹೆಚ್ಚಿನ ಸಂತೋಷವಾಗುವುದು.

ಮಗನು ತನ್ನ ಮಾತಾಪಿತರಿಗೆ ಯೋಗ್ಯ ರೀತಿಯಲ್ಲಿ ಋಣ ತೀರಿಸಲು ಬಯಸುವುದಿದ್ದರೆ, "ಅಂತಹ ಗುಣಶೀಲನಾದ ಮಗನನ್ನು ಹೊಂದಬೇಕಾದರೆ ಆ ತಂದೆಯ ಸುಕೃತ ಅಮೋಘವಿರಬೇಕು" ಎಂದು ಇತರರು ಆಡಿಕೊಳ್ಳುವಂತೆ ತನ್ನ ಗುಣನಡತೆಗಳಿಂದ ಸಾಧಿಸಬೇಕು.

## ೫. ಮಮತೆ

ಮಮತೆಯ ಭಾವನೆಯಿಲ್ಲದವರು ತಮಗೇನೆ ತಾವು ಹೆಚ್ಚಿನ ಮಹತ್ವ ಕೊಟ್ಟಂತೆ ತೋರುತ್ತದೆ. ವಾತ್ಸಲ್ಯದಿಂದ ತುಂಬಿದ ಕರುಣಾಹೃದಯರು ತಮ್ಮ ಆಸ್ತಿಗಳಲ್ಲಿ ಕೂಡ ಇತರರಿಗೇನೆ ಸೇರಿದವರಿರುತ್ತಾರೆ.

ಪ್ರೀತಿಯು ಅವರನ್ನು ಬಾಹ್ಯ ಸಜೀವ ಜಗತ್ತಿನ ಹೆಮ್ಮೆಯ ಆಸ್ತಿಯನ್ನಾಗಿ ಮಾಡುತ್ತದೆ.

ದೇಹವೆಂಬ ಹೊರೆಯನ್ನು ಹೊತ್ತ ಆತ್ಮವು ಉಳಿಸಿಕೊಂಡ ಸಂತೋಷವೆಂದರೆ ಮಾನವ ಪ್ರೇಮದ ಅನುಭವವಾಗಿರುತ್ತದೆ, ಎಂಬುದಾಗಿ ಬಲ್ಲವರು ಹೇಳುತಿದ್ದಾರೆ.

ಆತ್ಮವು ಮಾಂಸ ಮತ್ತು ರಕ್ತದಿಂದೊಡಗೂಡಿದ್ದರೆ ಮಾತ್ರ ಮಾನವ ಪ್ರೇಮದ ಭಾವನೆಯನ್ನು ಅನುಭವಿಸುವುದು ಸಾಧ್ಯ ಎಂದ ಮೇಲೆ, ಮಮತೆಯ ಆ ಅನುಪಮ ಅನುಭವ ಪಡೆಯುವುದರ ಸಲುವಾಗಿಯಾದರೂ ಪ್ರಾಪಂಚಿಕ ಕಷ್ಟಪರಂಪರೆಗಳನ್ನು ಅನುಭವಿಸಲು ಸಿದ್ಧರಾಗಬೇಕು.

ಪ್ರಾಪಂಚಿಕ ಜೀವನದಲ್ಲಿ ಈ ಒಂದು ಅನುಭವದ ಸುಖ ಪಡೆಯಲಿಕ್ಕಾಗಿಯೇ ಆತ್ಮವು ಮಾಂಸ ಮತ್ತು ರಕ್ತಗಳ ಆವರಣ ಹೊದ್ದುಕೊಂಡು ಪ್ರಪಂಚದಲ್ಲಿ ಜನ್ಮವೆತ್ತಲು ಬಯಸುತ್ತದೆ.

ಮಮತೆ ಎಂಬುದು ಭಕ್ತಿಗೆ ತರಬೇತಿ. ಭಕ್ತಿಯಿಂದ ದಿವ್ಯಜ್ಞಾನವು, ನಮ್ಮೆಲ್ಲರ ಪ್ರಯತ್ನಗಳ ಮುಖ್ಯ ಗುರಿಯಾಗಿರುವ ಮೋಕ್ಷವು ತಾನಾಗಿ ಲಭ್ಯವಾಗುತ್ತದೆ.

ಸ್ವರ್ಗಪಥವು ಸುಖಸಂಪತ್ತುಗಳಿಂದ ಅತಿಶಯವಾದ ಆನಂದದಿಂದ ತುಂಬಿಕೊಂಡಿರುವುದು. ಕ್ರಮಬದ್ಧವಾದ ಸಂಸಾರಿಕ ಜೀವನ ನಡೆಸಿಯೇ ಅದನ್ನು ಹೊಂದಬಹುದಾಗಿದೆ.

ಬ್ರಹ್ಮಚರ್ಯ, ತಪಸ್ಸು ಇವೇ ಮೊದಲಾದ ಕಠಿಣ ಸಿದ್ಧಿಗಳಿಗಿಂತ ಇದು ಅತಿ ಸುಲಭ.

ಮಮತಾಪೂರ್ಣ ಹೃದಯವು ಧರ್ಮಪಥದಲ್ಲಿ ಮಾತ್ರ ಆಗತ್ಯ ಎಂಬ ತಪ್ಪು ತಿಳುವಳಿಕೆಯು ಅಪೂರ್ಣ ಜ್ಞಾನಹೊಂದಿದವರಲ್ಲಿರುತ್ತದೆ. ಇಲ್ಲ, ಪ್ರೀತಿಯು ಯೋಧನೊಬ್ಬನ ಸಾಹಸಪೂರ್ಣ ಕೃತ್ಯಗಳನ್ನು ಹುರಿದುಂಬಿಸಬಲ್ಲುದು.

ಅತ್ಯಂತ ಧೈರ್ಯಶಾಲಿಯಾದ ಯೋಧನು ಅತೀವ ಕರುಣಾಹೃದಯ ನಿರುತ್ತಾನೆಂಬುದನ್ನು ಮರೆಯಬಾರದು. ಕೋಪ, ವೈರತ್ವಗಳನ್ನು ಗೆದ್ದು, ತಾನು ಸತ್ಕರ್ಮಗಳನ್ನು ಆಚರಿಸುವುದು ಮಾತ್ರವಲ್ಲ, ಇತರರು ಮಾಡಿದ ತಪ್ಪುಗಳನ್ನು ಗೆಲ್ಲಲು ಪ್ರೀತಿಯು ನೆರವಾಗುತ್ತದೆ.

ಪ್ರೀತಿಯ ಒಸರುಹರಿಯದ ಹೃದಯ ಅದೊಂದು ಶುಷ್ಕಹೃದಯವೆನಿಸುತ್ತದೆ. ಪ್ರೀತಿಯಿಲ್ಲದಿದ್ದರೆ ಆತ್ಮಕ್ಕೆ ಆಧಾರ ಇಲ್ಲದಂತಾಗಿ ಅದು ಮುದುಡಿಕೊಳ್ಳುವುದು.

ಮಮತಾಪೂರ್ಣ ಹೃದಯವಿಲ್ಲದಲ್ಲಿ ಜೀವನವು ನೀರಸ. ಮರುಭೂಮಿಯಲ್ಲಿ ಸೂರ್ಯನ ಕಠಿನವಾದ ಬಿಸಿಲಿಗೆ ಕಮರಿಹೋದ ವೃಕ್ಷದಲ್ಲಿ ಹೊಸ ಎಲೆಗಳು ಹುಟ್ಟುವುದು ಸಾಧ್ಯವಿದೆಯೇ?

ಹೃದಯದಲ್ಲಿ ಮಮತೆ ಇಲ್ಲವೆ ಕೌಟುಂಬಿಕ ಬಾಹ್ಯಾಡಂಬರಗಳಿಂದ ಫಲವೇನು? ಬಾಹ್ಯದೃಷ್ಟಿಗೆ ಗೋಚರವಾಗುವ ಕಣ್ಣುಗಳು ಕುರುಡನಲ್ಲಿ, ಕಿವಿಗಳು ಕಿವುಡನಲ್ಲಿ ಇರುವಂತೆ. ಸಂಸಾರ ಜೀವನದಲ್ಲಿ ಕರುಣಾರಹಿತ ಹೃದಯವು ಜೀವನದ ಯಾವುದೇ ಉದ್ದೇಶವನ್ನು ಸಾಧಿಸಲಾರದು.

ಕರುಣಾಪೂರ್ಣ ಹೃದಯವಿಲ್ಲದ ಶರೀರವು ಚರ್ಮದಿಂದ ಸುತ್ತಿದ ಎಲುಬಿನ ರಾಶಿಗೆ ಸಮಾನ. ಪ್ರೀತಿಯಲ್ಲೇ ಜೀವನದ ರಹಸ್ಯವು ಅಡಕವಾಗಿದೆ.

ಜೀವನವು ನಡೆಯುತ್ತಿರುವುದು ಮಮತೆಯಲ್ಲಿ; ದೇಹದ ಶಾರೀರಿಕ ಚಟುವಟಿಕೆಗಳಿಂದಲ್ಲ.

## ೬. ಸಾರಳ್ಯ

ಸರಳ ಜೀವನ ನಡೆಸುವವನು ಸಂಪಾದಿಸಿದುದೆಲ್ಲ ಒಂದಿಷ್ಟು ಕಡಿಮೆಯಾಗದೆ ಅವನ ಮಕ್ಕಳಿಗೆ ದೊರೆಯುವುದು. ಅವರಿಗೆ ಯಾವೊಂದು ರೀತಿಯ ಅನಿಷ್ಟ ಇಲ್ಲವೆ ವಿಪತ್ತು ಬಾರದಂತೆ ಅದು ರಕ್ಷಿಸುವುದು.

ಸರಳವಾದ ರೀತಿಯಲ್ಲಿ ಸತ್ಪಥದಲ್ಲಿ ಆಚರಿಸಿದುದು ಯಾವಾಗಲೂ ನಷ್ಟವಾಗದು; ಸತ್ಪಥವನ್ನು ಬಿಟ್ಟು ಮೋಸ, ವಂಚನೆಗಳಿಂದ ಗಳಿಸಿದುದು ಗಳಿಸಿದಂತೆಯೇ ಹೋಗಬಹುದು. ಯಾವುದೇ ಗೃಹಸ್ಥದಲ್ಲಿ ತನ್ನ ನಂತರ ತನ್ನ ಮಕ್ಕಳಿಗೆ ಸುಖಸಂತೋಷಗಳು ಲಭಿಸಬೇಕೆಂಬ ಉನ್ನತ ಆಕಾಂಕ್ಷೆ ಇದ್ದೇ ಇರುತ್ತದೆ. ಸರಿಯಾದ ನಡತೆಯು ಇದನ್ನು ನಿಶ್ಚಯವಾಗಿಯೂ ಒದಗಿಸಲಾರದು. ಸಮಾಜವು ದೂಷಿಸುತ್ತಿರುವ ಅಕ್ರಮ ಯತ್ನಗಳಿಂದ ಗಳಿಸಿದ ಸಂಪತ್ತು ಅದು ಎಷ್ಟೇ ಅಪಾರವಿರಲಿ, ಶಾಶ್ವತವಲ್ಲ.

ಸತ್ಪಥವನ್ನು ಬಿಟ್ಟು ಗಳಿಸಿದುದರಲ್ಲಿ ದೋಷವೇನಿದೆ ಎಂದು ಹಲವು ಬಾರಿ ತೋಚುವುದುಂಟು. ಆದರೆ, ಈ ದುರಾಶೆಗೆ ಬಲಿಬೀಳಬೇಡಿ. ಅಂತಹ ಯೋಚನೆ ಮನಸ್ಸಿನಲ್ಲಿ ಮೂಡಿತೆನ್ನುವುದರೊಳಗೆ ಬಿಟ್ಟುಬಿಡಿ.

ಸರಳವಾದ ಜೀವನ ಯಾರು ನಡೆಸಿರುತ್ತಾರೆ,ಯಾರು ನಡೆಸಿಲ್ಲ ಎಂಬುದು ಅವರು ಬಿಟ್ಟುಹೋದ ಪೀಳಿಗೆಯ ವರ್ತನೆಯಿಂದ ತಿಳಿಯಬಹುದಾಗಿದೆ.

ನಿಮ್ಮ ಜೀವನವೇ ನಿಮ್ಮ ಮಕ್ಕಳಿಗೆ ಕನ್ನಡಿಯಂತಿದೆ. ಆದುದರಿಂದ ಮಕ್ಕಳು ಯೋಗ್ಯ ಗುಣವಂತರಾಗಿ ಬಾಳಬೇಕೆಂಬ ಇಚ್ಛೆಯಿದ್ದರೆ ಸತ್ಪಥದಲ್ಲಿ ನಡೆಯಲು ಮರೆಯಬೇಡಿ.

ನಿಮ್ಮ ಮನಸ್ಸಿನಲ್ಲಿ ಮೂಡುವ ಭಾವನೆಗಳು ಸತ್ಪಥವನ್ನು ಬಿಟ್ಟು ನಡೆಯುವ ಲಕ್ಷಣಗಳು ತೋರಿದೊಡನೆ ದೌರ್ಭಾಗ್ಯ ನಿಮ್ಮನ್ನು ಕಾಯುವುದೆಂದು ತಿಳಿಯತಕ್ಕುದು.

ಮನಸ್ಸಿನಲ್ಲಿ ಈ ರೀತಿಯ ಬದಲಾವಣೆಗಳುಂಟಾಗುವುದು, ಇತರರಿಗೆ ತಿಳಿಯುವ ಮೊದಲೇ ನಿಮಗೆ ತಿಳಿಯುವುವು. ಅದೊಂದು ಅಶುಭ ಸೂಚನೆಯೆಂದು ತಿಳಿದು ಎಚ್ಚರದಲ್ಲಿರಿ.

ಸತ್ಪಥದಲ್ಲಿ ಭದ್ರವಾಗಿ ನಡೆಯುವವನು ಕ್ರಮೇಣ ತನ್ನ ಪ್ರಾಪಂಚಿಕ ಭೋಗಭಾಗ್ಯಗಳನ್ನು ಕಳೆದುಕೊಳ್ಳಬಹುದಾದರೂ, ಅವನ ದಾರಿದ್ರ್ಯ ಜಗತ್ತಿನ ದೃಷ್ಟಿಯಲ್ಲಿ ಅವನ ಗೌರವಕ್ಕೆ ಒಂದಿಷ್ಟು ಕುಂದು ತಾರದು. ಸಮಾಜದಲ್ಲಿ ಅವನ ಸ್ಥಾನವು ಭದ್ರವಾಗಿರುವುದು.

ತಮ್ಮ ಹಿತಗಳನ್ನು ರಕ್ಷಿಸುವಂತೆ ಇತರರ ಹಿತಗಳನ್ನೂ ರಕ್ಷಿಸುವ ಧ್ಯೇಯವಿಟ್ಟುಕೊಂಡು ವ್ಯಾಪಾರಿಗಳು ಕಾರ್ಯತತ್ಪರರಾಗಬೇಕು. ಪ್ರಾಮಾಣಿಕತೆಯೇ ಅತ್ಯುತ್ತಮ ಧೋರಣೆ.

## ೭. ಆತ್ಮಸಂಯಮನ

ಸಂಸಾರವನ್ನು ತ್ಯಜಿಸಿದ ತ್ಯಾಗಿಯಂತೆ ಗೃಹಸ್ಥಾಶ್ರಮಿಗೂ ಆತ್ಮ ಸಂಯಮವು ಅತ್ಯವಶ್ಯವಿದೆ. ಕಾಮುಕತೆ, ಗರ್ವ ಮತ್ತು ಕ್ರೋಧಗಳಿಂದ ಹೇಗೆ ಪಾರಾಗಬಹುದೆಂಬುದನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಆತ್ಮಸಂಯಮವು ಮನುಷ್ಯನನ್ನು ಪರಮಾತ್ಮನ ಬಳಿ ಕೊಂಡೊಯ್ಯು ವುದು. ಅದರ ಅಭಾವವು ಅಜ್ಞಾನದ ಅಂಧಕಾರಕೂಪಕ್ಕೊಯ್ಯುವುದು.

ಆತ್ಮ ಸಂಯಮದಷ್ಟು ಅಮೂಲ್ಯ ಸೊತ್ತು ಬೇರೊಂದಿಲ್ಲ. ಆದುದರಿಂದ ಸಂಪತ್ತು ಕಾಯುವಷ್ಟೇ ದಕ್ಷತೆಯಿಂದ ಅದನ್ನು ಕಾಯಲು ಮರೆಯಬೇಡಿ.

ನಮ್ರವಾಗಿರುವುದು ಪ್ರತಿಯೊಬ್ಬರಿಗೆ ಶೋಭಿಸುವುದು. ಆದರೆ, ಅಧಿಕ ಸಂಪತ್ತುಳ್ಳವರಿಗೆ ಅದು ಅತ್ಯಧಿಕ ಶೋಭೆಕೊಡುವುದು.

ವಿದ್ಯೆ, ಕುಲೀನತೆ ಮತ್ತು ಐಶ್ವರ್ಯ ಇವು ನಮ್ರತೆಯಿಂದ ಹೆಚ್ಚು ವವೇ ಹೊರತು ಯಾವ ಕಾಲಕ್ಕೂ ಕಡಿಮೆಯಾಗಲಾರವು.

ಎಂದು ಮನುಷ್ಯನು ಆತ್ಮಸಂಯಮದ ಜೀವನ ನಡೆಸಿ, ಆಮೆಯು ಹೊರಗಿನಿಂದ ಅಪಾಯದ ಸುಳಿವು ಅರಿತೊಡನೆ ತನ್ನ ಕಾಲುಗಳನ್ನು ಚಿಪ್ಪಿನೊಳಗೆ ಎಳೆಯುವಂತೆ ಪಂಚೇಂದ್ರಿಯಗಳನ್ನು ಅಂಕೆಯಲ್ಲಿಟ್ಟುಕೊಳ್ಳು ತ್ತಾನೋ ಅಂತಹವನು ಮುಂದೆ ಏಳು ಜನ್ಮಗಳಲ್ಲಿ ಪಾಪಕರ್ಮಗಳ ಕುರಿತು ನಿಶ್ಚಿಂತನಾಗುತ್ತಾನೆ.

ಬೇರೆ ಯಾವುದನ್ನು ಅಲಕ್ಷಿಸಿದರೂ ನಿಮ್ಮ ನಾಲಿಗೆಯನ್ನು ಅಂಕೆ ಯಲ್ಲಿಟ್ಟುಕೊಳ್ಳಲು ಮಾತ್ರ ಮರೆಯಬೇಡಿ. ಹಾಗೆ ತಪ್ಪಿದವರು ಮುಂದೆ ಅಪಾರ ಸಂಕಷ್ಟಕ್ಕೊಳಗಾಗುವರು.

ಎಂದರೆ ಜನರ ವಿಷಯಗಳಲ್ಲಿ ಸಂಯಮವನ್ನು ಸಡಿಲುಗೊಳಿಸ ಬೇಕೆಂಬ ಅರ್ಥವಲ್ಲ; ಆದರೆ ಅಜಾಗ್ರತೆಯ, ಅವಿವೇಕತನದ ಮಾತುಗಾರಿ ಕೆಯ ಅಪಾಯ ಆಗಾಗ್ಗೆ ಇದ್ದೇ ಇರುವದರಿಂದ ಆ ಕುರಿತು ವಿಶೇಷ ಜಾಗ್ರತೆ ಅತ್ಯಗತ್ಯ.

ಸುಟ್ಟಗಾಯದ ನೋವು ಇಲ್ಲವೆ ವ್ರಣವು ವಾಸಿಯಾಗಬಹುದು— ಆದರೆ ನಾಲಿಗೆಯು ಎಚ್ಚರದಪ್ಪಿ ಮಾತನಾಡಿದುದರಿಂದ ಉಂಟಾದ ನೋವು ಯಾವತ್ಕಾಲವೂ ಮರೆಯುವಂತಹದಲ್ಲ. ಒಂದು ವಿಕಾರ ಮಚ್ಚೆಯಂತೆ ಅದು ಮನಸ್ಸಿನಲ್ಲಿ ಇದ್ದೇ ಇರುವದು.

ಹಲವು ಅನ್ಯಾಯಗಳನ್ನು ಮನುಷ್ಯರು ಮರೆಯಬಲ್ಲರು; ಆದರೆ ಅವಮಾನವನ್ನು ಮರೆಯುವುದು ಅಪರೂಪ.

ಮನಸ್ಸಿನಲ್ಲಿ ಉಕ್ಕುತ್ತಿರುವ ಕ್ರೋಧವನ್ನು ತಡೆಯುವ ಶಕ್ತಿ ಇರುವವನಲ್ಲಿ ಇತರ ಎಲ್ಲ ಗುಣಗಳು ತಾವೇ ತಾವಾಗಿ ಸೇರಿಕೊಳ್ಳುವುವು.

ಅಜಾಗ್ರತೆಯ ಮಾತು ಮತ್ತು ಅನಾವಶ್ಯಕ ಕ್ರೋಧಗಳಿಂದ ದೂರವಿರಲು ಗೃಹಸ್ಥಾಶ್ರಮಿಯು ಪ್ರಯತ್ನಿಸಲಿ. ಮತ್ತುಳಿದುದು ಅತ್ಯಂತ ಸುಲಭ.

## ೮. ಸಹನೆ

ತನ್ನನ್ನೆ ಗುದ್ದಲಿಯಿಂದ ಅಗೆಯುತ್ತಿರುವ ಮನುಷ್ಯನನ್ನು ಭೂಮಿಯು ಆದರಿಸುವುದಿಲ್ಲವೆ? ಆದುದರಿಂದ ನಮಗೆ ತಪ್ಪು ಮಾಡುವವರ ಕಡೆಗೆ ನಾವೂ ಸಹನೆ ಪ್ರದರ್ಶಿಸಲು ಕಲಿಯಬೇಡವೆ?

ಯಾರಾದರೂ ನಿಮಗೆ ತಪ್ಪು ಮಾಡಿದುದಿದ್ದರೆ ಅಲ್ಲಿಯೇ ಅದನ್ನು ತೀರಿಸಿಬಿಡಿ. ಆದರೆ, ಅದನ್ನು ಮರೆತಿರೆಂದರೆ ಇನ್ನೂ ಒಳ್ಳೆಯದು.

ತಪ್ಪುಮಾಡಿದವನ ಮೇಲೆ ಸೇಡು ತೀರಿಸಿಕೊಳ್ಳುವುದು ದೊಡ್ಡ ಸಾಹಸವಲ್ಲ. ಆದರೆ, ತಪ್ಪು ಮಾಡಿದರೂ ಅದನ್ನು ಸಹಿಸಿಕೊಂಡಿರುವುದು ಆಚಂದ್ರಾರ್ಕ ಕೀರ್ತಿಯನ್ನು ತರುವುದು.

ಸೇಡಿನಿಂದ ಒಂದು ದಿನದ ಮಟ್ಟಿನ ಆನಂದ ಒದಗಬಹುದು. ಆದರೆ, ಸಹನೆಯು ಅಮರಸುಖವನ್ನು ತರಬಲ್ಲುದು.

ನೋವಿಗೆ ನೋವುಂಟುಮಾಡುವುದರಿಂದ ತಾತ್ಕಾಲಿಕವಾದ ತೃಪ್ತಿಯೊದಗಬಹುದು. ಆದರೆ, ಸಹನಾಶಕ್ತಿಯ ಫಲವು ಶಾಶ್ವತವಾಗಿಯೂ ಒಳ್ಳೆಯವರಿಂದ ಅಭಿನಂದನೆ ಪಡೆಯದಿರಲಾರದು. ಆದುದರಿಂದ ಕೇವಲ ಕ್ಷಣಿಕ ಸುಖದ ಆನಂದಕ್ಕಾಗಿ ಶಾಶ್ವತವಾದ ಸಂತೋಷವನ್ನು ತುಚ್ಛೀಕರಿಸುವುದು ಕೇವಲ ಮೂರ್ಖತನ.

ಸಹನೆಯಿಂದ ನಿಮ್ಮ ಬೆಲೆ ಹೆಚ್ಚುವುದು ಮಾತ್ರವಲ್ಲ, ದುರಹಂಕಾರವು ನಶಿಸಿಹೋಗುವುದು. ಸಹನೆಯು ಅಭಾವಸೂಚಕವಲ್ಲ. ತಪ್ಪು ಮಾಡಿದವನ ದುರಭಿಮಾನಕ್ಕೆ ಅದು ಪ್ರಬಲವಾದ ಆಘಾತ.

ಅವಮಾನದೆದುರು ಸಹನೆ ಪ್ರದರ್ಶಿಸುವವನು, ಆತನು ಗೃಹಸ್ಥಾಶ್ರಮಿಯಾಗಿದ್ದರೂ ಸನ್ಯಾಸಿಯಷ್ಟೆ ಶ್ರೇಷ್ಠನು.

ವಿರಕ್ತರು ಆಹಾರ ತ್ಯಜಿಸಿ ಕಠಿಣ ತಪಸ್ಸುಮಾಡುವರು. ಆದರೆ, ಅವಿವೇಕಿಗಳ ಹುಚ್ಚು ಅಭಿಯೋಗಗಳ ಮುಂದೆ ಸಹನಾಶಕ್ತಿ ಪ್ರದರ್ಶಿಸುವವನು ಆ ನಿರಶನವ್ರತಧಾರಿ ಮತ್ತು ತಪಸ್ವಿಗಳಿಗಿಂತಲೂ ಶಕ್ತಿವಂತನು.

## ೯. ಅನಸೂಯೆ

ಅಸೂಯೆಯಿಲ್ಲದ ಮನಸ್ಸಿನಷ್ಟು ಅಮೂಲ್ಯ ಸಂಪತ್ತು ಬೇರೊಂದಿರದು.

ಇತರರ ಸಂಪತ್ತಿನ ಕುರಿತು ಅಸೂಯೆ ಪಡುವುದು ದಾರಿದ್ರ್ಯಕ್ಕೆ ಸಮಾನ. ಕಾರಣ, ಎಷ್ಟೇ ಐಶ್ವರ್ಯವಂತನಿರಲಿ, ಇತರರ ಸಂಪತ್ತಿನ ಕುರಿತು ಅಸೂಯೆಪಡುವುದರಿಂದ ತುಂಬ ಸಂಕಷ್ಟಕ್ಕೀಡಾಗುತ್ತಾನೆ. ಈ ಸಂಕಟವನ್ನು ಹೆಚ್ಚಿನ ದ್ರವ್ಯಪ್ರಾಪ್ತಿಯಿಂದ ಇಲ್ಲವೆ ಇತರರ ವಿಲಾಸ-ವೈಭವಗಳಿಂದ ನಿವಾರಿಸುವುದು ಸಾಧ್ಯವಿಲ್ಲ. ಕಾರಣ, ಈ ಸಂಕಟವು ಹೊರಗಿನಿಂದ ಬಂದೊದಗಿದುದಲ್ಲ—ತನ್ನಲ್ಲಿಯ ಅಸೂಯೆಯಿಂದಲೇ ಉಂಟಾದುದು. ಆದುದರಿಂದ ಅಸೂಯೆಯಿಲ್ಲದಿರುವ ಗುಣಹೊಂದಿದವನು ನಿಜಕ್ಕೂ ಪುಣ್ಯಾತ್ಮನೆಂದೇ ಹೇಳಬೇಕಾಗುತ್ತದೆ.

ತನ್ನ ಸ್ವಂತ ಮಾನಸಿಕ ಹಾಗೂ ಅಧ್ಯಾತ್ಮಿಕ ಒಳಿತಿನ ಕಡೆಗೆ ಅಲಕ್ಷಿಸುವಾತನೇ ಅಸೂಯಾಪರ ವಿಚಾರಗಳಿಗೆ ತನ್ನಲ್ಲಿ ಎಡೆಕೊಡುತ್ತಾನೆ. ಹೊರಗಿನ ಪ್ರಪಂಚದಲ್ಲಿ ಒಬ್ಬನೇ ಒಬ್ಬನು ಶತ್ರುವು ಇಲ್ಲದಾಗ್ಯೂ ಸುಖ ಲಭಿಸದಿರುವುದೆಂದರೆ ಅದು ಅಸೂಯೆಯಿಂದಾಗಿ; ಕಾರಣ, ಎಲ್ಲ ಸುಖ ಶಾಂತಿಗಳನ್ನು ಕೆಡಿಸಲು ಈ ಅಸೂಯೆಯೊಂದೇ ಸಾಕಾಗುತ್ತದೆ.

ನಿಮ್ಮ ಸ್ವಂತ ಮನಸ್ಸು ನಿಮ್ಮ ಕಡು ಶತ್ರುವಾಗಬಹುದು. ಸಂಪತ್ತಿದ್ದೂ ದಾರಿದ್ರ್ಯವಂತನಂತೆ ದುಃಖದ ಬಾಳು ಅನುಭವಿಸುವುದೆಂದರೆ, ಸಂತೋಷದ ನಡುವೆಯೂ ದುಃಖಿತನಾಗಿರುವುದೆಂದರೆ, ಇದಕ್ಕೆ ಕಾರಣ ಅಸೂಯೆ ಇರಬೇಕೆಂದೂ ಪ್ರತ್ಯೇಕ ಹೇಳಬೇಕಾಗಿಲ್ಲ. ನಿಮ್ಮ ಐಶ್ವರ್ಯವನ್ನು ಸೂರೆಗೊಳ್ಳಲು ಬೇರೆ ಕಳ್ಳಕಾಕರು ಬೇಕಾಗಿಲ್ಲ. ಅಸೂಯೆಯೊಂದೇ ಸಾಕಾಗುತ್ತದೆ.

ಇತರರು ಸುಖಸಂತೋಷದಲ್ಲಿರುವುದನ್ನು ಕಾಣಲಾಗದವರನ್ನು ಅದೃಷ್ಟದೇವತೆಯು ತಿರಸ್ಕರಿಸುವಳು. ಆಕೆ ಅಂತಹರನ್ನು ಕೂಡಲೇ ತನ್ನ ಅಕ್ಕ 'ದುರಾದೃಷ್ಟ'ದೇವತೆಯ ಪಾಡಿಗೆ ಬಿಟ್ಟು ತಾನು ದೂರವಾಗುವಳು.

(ಅದೃಷ್ಟದೇವತೆಯ ಹಿರಿಯ ಸಹೋದರಿ ದುರಾದೃಷ್ಟದೇವತೆ. 'ದುರಾದೃಷ್ಟ' ಪ್ರಾಪ್ತಿಗೆ ಕಾರಣಳು ಅಕ್ಕ. 'ಅದೃಷ್ಟ' ಪ್ರಾಪ್ತಿಗೆ ಕಾರಣಳು ತಂಗಿ.)

ಎಲ್ಲ ಸೌಭಾಗ್ಯಗಳು ನಿಮ್ಮಲ್ಲಿ ಸಮೃದ್ಧಿಯಾಗಿರಬಹುದು; ಅಂತೆಯೇ, ಎಲ್ಲ ಸದ್ಗುಣಗಳಿಂದ ನೀವು ಭರಿತರಾಗಿರಬಹುದು, ಆದರೆ, ಅಸೂಯೆಯ ಒಂದು ಕಪ್ಪು ಚುಕ್ಕಿ ಕಂಡುಬಂತೆಂದರೆ ನಿಮಗೆ ನರಕದ ಬೆಂಕಿಯ ಜ್ವಾಲೆಗಳನ್ನು ಕಾಣಿಸಲು ಅಷ್ಟೇ ಸಾಕಾಗುತ್ತದೆ.

ಅಸೂಯೆಯು ಇಹ ಹಾಗೂ ಪರ ಎರಡರಲ್ಲಿಯೂ ಮನುಷ್ಯನಿಗೆ ನರಕಪ್ರಾಪ್ತಿಯನ್ನುಂಟುಮಾಡುವುದು.

ಅಸೂಯೆಯಿಂದ ಯಾರೂ ಸಿರಿವಂತರಾದುದಿಲ್ಲ. ಅಸೂಯೆಪಡದೆ ಇರುವುದರಿಂದ ಯಾರೂ ಏನನ್ನೂ ಕಳಕೊಂಡುದಿಲ್ಲ.

## ೧೦. ನಿಯಮಬದ್ಧವಾದ ಜೀವನ

ಜೀವನಕ್ಕಿಂತ, ಜೀವನದಲ್ಲಿ ಅನುಸರಿಸಬೇಕಾದ ಶಿಸ್ತು ಅತ್ಯಮೂಲ್ಯವಾದುದು.

ಒಬ್ಬನು ಹಲವು ತತ್ತ್ವಶಾಸ್ತ್ರಗಳನ್ನು ಅಭ್ಯಸಿಸಿ ಸಂದೇಹಗಳನ್ನು ನಿವಾರಿಸಿಕೊಳ್ಳಬಹುದು. ಆದರೆ, ಕೊನೆಯಲ್ಲಿ ಪ್ರಯೋಜನಕ್ಕೆ ಬರುವಂತಹುದೆಂದರೆ ನಿಯಮಬದ್ಧವಾದ ಜೀವನವೊಂದೇ ಹೊರತು ಬೇರೆಯಲ್ಲ. ಆದುದರಿಂದ ಎಷ್ಟೇ ಎಡರುತೊಡರುಗಳೂ ಬರಲಿ, ಜೀವನವು ನಿಯಮಬದ್ಧವಾಗಿರುವಂತೆ ಕಾಪಾಡುವುದು ಅತ್ಯವಶ್ಯ.

ನಿಯಮಬದ್ಧವಾದ ಜೀವನವು,–ಮನುಷ್ಯನು ಯಾವ ವರ್ಗಕ್ಕೆ ಸೇರಿದವನೂ ಇರಲಿ,—ಆತನಿಗೆ ಗೌರವವನ್ನು ಸಂಪಾದಿಸುತ್ತದೆ. ಇದು ಎಲ್ಲಿ ಕಂಡುಬರುವುದಿಲ್ಲವೋ ಅಲ್ಲಿ ಅವನು ಎಷ್ಟೇ ಕುಲೀನ ಇಲ್ಲವೇ ಪ್ರಸಿದ್ಧ ಕುಟುಂಬಕ್ಕೆ ಸೇರಿದವನೂ ಇರಲಿ—ಅವನನ್ನು ಅದು ಉಳಿಸದು.

ಧರ್ಮಶಾಸ್ತ್ರಗಳನ್ನು ಮರೆತಿದ್ದಿದ್ದರೆ ಪಂಡಿತನು ತಿರುಗೊಮ್ಮೆ ಓದಿ ಆ ಕೊರತೆಯನ್ನು ನೀಗಾಡಿಸಬಹುದು, ಆದರೆ ಅವನು ಜೀವನದಲ್ಲಿ ನಿಯಮವನ್ನು ಮರೆತನೆಂದರೆ, ಅತ್ಯಂತ ಉಚ್ಚಜನ್ಮವನ್ನು ಕಳೆದು ಅದರ ಸಾರ್ಥಕತೆ ಹೊಂದದಂತಾಗುವುದು.

ವಿದ್ಯೆಯಲ್ಲಿ ಕಳಕೊಂಡದ್ದನ್ನು ನಂತರ ಪೂರ್ತಿಮಾಡಲು ಬರುತ್ತದೆ. ಆದರೆ, ಜೀವನದಲ್ಲಿ ಕಳೆದುಕೊಂಡುದು ಸುತರಾಂ ನಷ್ಟವಾದಂತೆಯೆ ಸರಿ.

ಕಲಿತ ಮಂದಿ, ತಾವು ಕಲಿತವರಿದ್ದೂ ಜೀವನದ ತತ್ವಗಳಲ್ಲೊಂದಾದ ಸಾಮಾಜಿಕ ಸಹಕಾರವನ್ನು ಮರೆತರೆಂದರೆ ಅಜ್ಞಾನವನ್ನು ವ್ಯಕ್ತಪಡಿಸಿದಂತಾಗುತ್ತದೆ.

ನಡತೆ ಮತ್ತು ಗುಣದಲ್ಲಿ ಆತ್ಮಸಂಯಮನ ಸಾಧ್ಯವಾಗದ ನರನು ವಿಶೇಷ ಪಾಂಡಿತ್ಯಹೊಂದಿದ್ದರೂ ಕೇವಲ ನಿರರ್ಥಕ. ಧಾರ್ಮಿಕ ಇಲ್ಲವೆ ತಾತ್ವಿಕಜ್ಞಾನಕ್ಕಿಂತ ನಿಯಮಬದ್ಧವಾದ ಜೀವನ ಮತ್ತು ಸಮಾಜದಲ್ಲಿ ಸಹಕಾರಗಳು ಅತಿ ಮುಖ್ಯ.

## ೧೧. ದುಷ್ಟಪ್ರೇಮ

ಬೇರೊಬ್ಬನಿಗೆ ಸೇರಿದ ವ್ಯಕ್ತಿಯ ಕುರಿತು ಕೆಟ್ಟ ಭಾವನೆಗಳನ್ನು ಮನಸ್ಸಿನಲ್ಲಿ ಎಣಿಸುವುದು ಮೂರ್ಖತನವೆನಿಸುವುದು. ಧರ್ಮ ಇಲ್ಲವೇ ಪ್ರಾಪಂಚಿಕ ಜ್ಞಾನ ತಿಳಿದ ಮಂದಿ ಯಾವ ಕಾಲಕ್ಕೂ ಅಂತಹ ಅವಿವೇಕಕ್ಕೆ ಅಸ್ಪದ ಕೊಡಲಾರರು.

ನಿಜವಾದ ನಡತೆಯಿಂದ ಹಾದಿ ತಪ್ಪಿ ನಡೆಯುವವರಲ್ಲಿ ಮತ್ತೊಬ್ಬನ ಮನೆಯ ಹೊಸ್ತಿಲೊಳಗೆ ಕಾಲಿಟ್ಟು ಅವನ ಸಂಸಾರದಲ್ಲಿ ಕೈಹಾಕುವವನು ಅತಿ ಮೂರ್ಖನು.

ಕಾರಣ, ಅಂತಹ ಅಪರಾಧದಲ್ಲಿ ಅವನು ಎಣಿಸಿದಷ್ಟು ಸುಖೋಪಭೋಗಗಳು ಅವನಿಗೆ ದೊರಕಲಾರವು, ಮಾತ್ರವಲ್ಲ, ಅಪರಾಧಗೈದ ಮಾತ್ರಕ್ಕೆ ಮತ್ತೆ ನಿಂದೆ ಮತ್ತು ಶಿಕ್ಷೆಗಳ ಭಯಕ್ಕೊಳಪಟ್ಟೇ ಅವನ ಶೇಷ ಜೀವನವನ್ನು ಸವೆಯಬೇಕಾಗುವುದು.

ವಿಶ್ವಾಸವೆಣಿಸಿದವನಿಗೆ ದ್ರೋಹ ಬಗೆವ ದುಷ್ಟಭಾವನೆಗಳಿಗೆ ಮನಸ್ಸಿನಲ್ಲಿ ಆಸ್ಪದಕೊಡುವುದಕ್ಕಿಂತ ಸಾಯುವುದು ಲೇಸು.

ಎಷ್ಟೇ ಘನಸ್ಥಿಕೆಯ ಪೀಠವನ್ನೇರಿದ ಮನುಷ್ಯನಿರಲಿ, ಮತ್ತೊಬ್ಬನ ಸಂಸಾರವನ್ನು ಕಲುಷಿತವನ್ನಾಗಿ ಮಾಡುವ ದುಷ್ಟ ಪ್ರೇರಣೆಗೆ ಅಧೀನನಾದನೆಂದರೆ ಅವನ ಮಹತ್ವಿಕೆಗೆ ಮೌಲ್ಯವೇ ಇಲ್ಲ. ತನ್ನ ಮಹತ್ವವೆಲ್ಲ

ವನ್ನೂ ಕಳಕೊಂಡು, ಮುಂದೆ ಮರಣಪರ್ಯಂತ ಅವನು ಅವಮಾನ ಹೊಂದಿಕೊಂಡಿರಬೇಕಾಗುತ್ತದೆ.

ಮತ್ತೊಬ್ಬನ ಪತ್ನಿಯ ಮೇಲೆ ಕಾಮುಕದೃಷ್ಟಿ ಇಲ್ಲವೆ ದುಷ್ಟಪ್ರೇಮ ದೃಷ್ಟಿ ಬೀರುವುದು ಸುಲಭವಿದೆಯಾದರೂ ಅದರಿಂದೊದಗುವ ಕಳಂಕ ಮತ್ತು ಅವಮಾನವು ಆಜೀವ ತೊಲಗದು.

ಅದರಿಂದೊದಗುವ ಸುಖವು ಕ್ಷಣಿಕ. ಆ ಪಾಪದ ಹೊರೆಯು ಮಾತ್ರ ಜೀವನದಲ್ಲಿ ಎಂದೂ ತೊಲಗುವಂತಿಲ್ಲ. ಅದರ ಪರಿಣಾಮ ಗಳಿಂದ ತಪ್ಪಿಸಿಕೊಳ್ಳುವುದು ಆ ಪಾಪಗೈದಷ್ಟು ಸುಲಭವಲ್ಲ.

ಮತ್ತೊಬ್ಬನ ಮನೆಯ ಪಾವಿತ್ರ್ಯ ಕೆಡಿಸಿದವನ ಬಾಳ್ವೆಯಲ್ಲಿ ಶತ್ರುತ್ವ, ಪಾಪ, ಅಂಜಿಕೆ ಮತ್ತು ಅವಮಾನಗಳು ಮುಂದೆ ಎಂದೆಂದಿಗೂ ಶಾಶ್ವತ ವಾಗಿ ನೆಲಸುವುವು.

ಇಂತಹ ಪಾಪದ ವೈಯಕ್ತಿಕ ಅನುಭವವುಳ್ಳವರಿಗೆ ಈ ಅಧ್ಯಾಯ ದಲ್ಲಿ ಬರೆದಿರುವುದೆಲ್ಲ ವಿಚಾರಾತ್ಮಕವೆಂದು ಹೊಳೆಯದಿರದು. ಕವಿಯ ಅಂತರಾಳದ ಭಾವನೆಯನ್ನು ಅವರು ಮಾತ್ರ ಚೆನ್ನಾಗಿ ತಿಳಿಯಬಲ್ಲರು.

ಇತರರ ಸೊತ್ತಿನ ಮೇಲೆ ದುಷ್ಟಪ್ರೇಮದೃಷ್ಟಿ ಇಡುವವನು ನಿಜವಾದ ಗೃಹಸ್ಥನಲ್ಲ. ಅವನು ಗುಣನಡತೆಯಲ್ಲಿ ಒಳ್ಳೆಯವನಿರಬಹುದು, ಅನು ಕೂಲ ಪತಿಯೂ ಪಿತನೂ ಇರಬಹುದು, ಆದರೆ ಅವನಲ್ಲಿ ಅಂತಹ ಪಾಪೀ ಭಾವನೆಗೆ ಸ್ಥಾನವಿದ್ದರೆ ಮಲಿನನೆಂದೇ ಜಗವು ತಿಳಿಯುವುದು.

ಮನಸ್ಸನ್ನು ಅಂಕೆಯಲ್ಲಿಟ್ಟುಕೊಳ್ಳುವುದರಲ್ಲಿ ಮತ್ತು ಮನಸ್ಸಿನಲ್ಲಿ ದುಷ್ಟವಿಚಾರಗಳು ಉತ್ಪನ್ನವಾಗದಂತೆ ತಡೆಯುವುದರಲ್ಲಿ ಮನುಷ್ಯನ ಮನುಷ್ಯತ್ವ ಪ್ರದರ್ಶನವಾಗಬೇಕು. ಅದೇ ಉತ್ತಮ ಧರ್ಮ ಮತ್ತು ಸಮಾಜತತ್ವವೆನಿಸುವುದು.

ಆತ್ಮಸಂಯಮನವಿಲ್ಲದವನು, ಅಶ್ಲೀಲಭಾವನೆಗಳ ಕಡೆಗೆ ಸುಲಭ ವಾಗಿ ಆಕರ್ಷಿತನಾಗುವವನು ಷಂಡನೆಂಬ ಹೆಸರಿಗೆ ತಕ್ಕವನಿರುತ್ತಾನೆ.

## ೧೨. ಬಡವರ ಉದ್ಧಾರ

ಅವಶ್ಯವಿದ್ದವರಿಗೆ ಕೊಡಲ್ಪಟ್ಟುದೇ ದಾನವೆನಿಸುವುದು. ಇತರರಿಗೆ ಕೊಡುವುದೆಲ್ಲ ವ್ಯಾಪಾರ ವಹಿವಾಟು ನಡೆಸಿದಂತೆ. ಕಾರಣ, ಅಲ್ಲಿ ಕೊಟ್ಟು ದನ್ನು ಮರುಪಾವತಿ ಮಾಡಬೇಕೆಂಬ ನಿರೀಕ್ಷೆಯಿದೆ.

ದಾರಿದ್ರ್ಯಾವಸ್ಥೆಯಿಂದ ದಾನಕೊಳ್ಳುವುದು ಅನಿವಾರ್ಯವಾಗಿ ಕಂಡುಬಂದರೂ ಅದರಿಂದ ಮನಸ್ಸಿಗೆ ನೋವು ಇದ್ದೇ ಇದೆ. ಬಡವರಿಗೆ ದಾನ ಮಾಡುವುದರಲ್ಲಿ ಒಳ್ಳೆಯದಿದೆ. ಹಾಗೆ ದಾನ ಮಾಡಿದುದನ್ನು ಪುರಸ್ಕರಿಸುವ ಬೇರೊಂದು ಪ್ರಪಂಚವಿಲ್ಲದಿದ್ದರೂ ಆ ದಾನವು ಶ್ರೇಷ್ಠ ದಾನವಾಗಿದೆ.

ಕೊಡುವವನಿಗೆ ದಾನವು ಹರ್ಷವನ್ನುಂಟುಮಾಡುವುದಾದರೂ ಕೊಳ್ಳುವವನಿಗೆ ಅದು ಮನಸ್ಸಿಗೆ ನೋವನ್ನುಂಟುಮಾಡುತ್ತದೆ. ಇದು ಮಾನವ ಪ್ರಕೃತಿ.

ಮತ್ತೊಬ್ಬನು ದಾನಕ್ಕಾಗಿ ತಮ್ಮಲ್ಲಿಗೆ ಬರುವುದು ಕೆಲವರಿಗೆ ಅಪ್ರಿಯವಾಗಿ ತೋರಬಹುದು. ಆದರೆ, ಈ ಅಪ್ರಸನ್ನತೆ ಎಲ್ಲಿಯ ವರೆಗೆ? ಕಂಗೆಟ್ಟ ಪರಿಸ್ಥಿತಿಯಲ್ಲಿದ್ದವನ ಹರ್ಷವದನವನ್ನು ನೀವು ಕಾಣುವ ವರೆಗೆ ಮಾತ್ರ.

ಆ ಹರ್ಷವದನವನ್ನು ಕಂಡೊಡನೆ, ಆ ಹರ್ಷವನ್ನು ಒದಗಿಸಿದ ಭಾಗ್ಯದಾತರು ನೀವಾಗಿರುವಿರಿ ಎಂಬ ಆತ್ಮಾನಂದವು ತನ್ನಿಂದತಾನೇ ಉಂಟಾಗುವುದು. ಸಂಸಾರದಲ್ಲಿ ಹಲವು ಬನ್ನಬವಣೆಗಳನ್ನು ಅನುಭವಿಸುತ್ತಿರುವಾಗಲೇ ಈ ಒಂದು ಸತ್ಕೃತಿ ನಮ್ಮ ಕೈಯಿಂದ ಒದಗಿದ ಬಗ್ಗೆ ನೈಜವಾದ ಆನಂದವು ಪ್ರತಿಯೋರ್ವ ದಾನಿಯಲ್ಲುಂಟಾಗುವುದು.

ಸರ್ವತ್ಯಾಗಿಯಾದ ಸನ್ಯಾಸಿಯು ಹಸಿವೆಯನ್ನು ಸಹಿಸಬಲ್ಲನು. ಆ ಸಹನೆಯೇ ಅವನಲ್ಲಿ ಒಂದು ಅದ್ಭುತ ಶಕ್ತಿಯನ್ನು ಉತ್ಪಾದಿಸುವುದು. ಆದರೆ, ಮತ್ತೊಬ್ಬನ ಹಸಿವೆಯನ್ನು ಹೋಗಲಾಡಿಸುವುದು ಹಸಿವೆ ಸಹಿಸುವುದಕ್ಕಿಂತಲೂ ಅತಿಶಯವಾದ ಪುಣ್ಯಕಾರ್ಯ ಎನ್ನುವುದರಲ್ಲಿ ಅನುಮಾನವಿಲ್ಲ.

ದಾರುಣ ಕಷ್ಟ ಹಾಗು ಸತ್ವಪರೀಕ್ಷೆಗಳನ್ನು ಎದುರಿಸುವುದು ಧಾರ್ಢ್ಯವಹುದು. ಆದರೆ, ಇತರ ಕಷ್ಟಗಳಲ್ಲಿ ಅನುತಾಪಪಟ್ಟು ಅದನ್ನು ನಿವಾರಿಸುವ ಬಗ್ಗೆ ಕೈಲಾದ ಯತ್ನ ನಡೆಸುವುದು ಅದಕ್ಕಿಂತಲೂ ಅತಿಶಯವಾದ ಧೈರ್ಯವಾಗಿರುತ್ತದೆ.

ಹಸಿವೆಯಿಂದ ಜನರನ್ನು ಉದ್ಧರಿಸುವವನನ್ನೇ ಭಾಗ್ಯವಂತನೆನ್ನಬೇಕು; ಕಾರಣ, ಹಾಗೆ ಮಾಡುವುದರಿಂದ ಆತನು ತನ್ನ ಭಾಗ್ಯನಿಧಿಯನ್ನು ಸುಭದ್ರವಾಗಿ ಕಾಪಾಡಿದಂತಾಗುವುದು.

ಕೊಡುವುದರಲ್ಲಿ ಆನಂದಪಡದವನನ್ನು ದೌರ್ಭಾಗಿ ಎನ್ನಬೇಕು.
ಾರಣ, ಇದ್ದಾಗ ಒಳ್ಳೆನೆಂದು ಎದೆ ಕಲ್ಲುಮಾಡಿದವನು ಇಹ ತೊರೆವಾಗ
ಾನು ಗಳಿಸಿದುದನ್ನು ಕೊಂಡುಹೋಗಲಾರನು; ಅದನ್ನು ಇಲ್ಲಿ ಬಿಟ್ಟೇ
ಣ್ಮರೆಯಾಗಬೇಕಾಗುವುದು.

ದಾನದ ಮಹತ್ವ ಎಷ್ಟೆಂದು ತಿಳಿದವನು ಯಾವ ಕಾಲಕ್ಕೂ ದಾನ
ಾಡಲು ಹಿಂಜರಿಯಲಾರನು. ಅದರಿಂದ ಉಂಟಾಗುವ ಅಮಿತಾನಂದದ
ನುಭವವು ಒಮ್ಮೆಯಾಯಿತೆಂದರೆ ಮತ್ತೆ ಅದನ್ನು ಅವನು ಎಂದೂ
ುರೆಯಲಾರನು. ದಾರಿದ್ರ್ಯದ ದೆಸೆಯಿಂದ ಭಿಕ್ಷೆ ಬೇಡಬೇಕಾಗಿ ಬಂದವ
ನ್ನು ನಿರ್ಭಾಗಿಯೆನ್ನಬೇಕಾಗುವುದು. ಆದರೆ, ಸಂಕುಚಿತ ಮನೋವೃತ್ತಿ
ುಂದ ಹಸಿದು ಮನೆಬಾಗಿಲಿಗೆ ಬಂದವನನ್ನು ತಿರಸ್ಕರಿಸುವವನು ಕಡು
ುರ್ಭಾಗಿ.

ಮರಣವೆಂದರೆ ಅದರಷ್ಟು ದುಃಖದಾಯಕ ವಿಷಯ ಬೇರೊಂದಿಲ್ಲ.
ದರೆ, ಒಳ್ಳೆಯವನಿಗೆ ಕಂಗೆಟ್ಟವರನ್ನು ಉದ್ಧರಿಸುವರೆ ನಿಸ್ಸಹಾಯತೆ
ೊದಗಿದಾಗ, ಅದು ಆಹ್ಲಾದಕರವಾಗಿ ತೋರುವುದು.

## ೧೪. ಸಾರ್ವಜನಿಕ ಪ್ರಿಯತೆ

ಜಗತ್ತಿನ ದೃಷ್ಟಿಯಲ್ಲಿ ಮನುಷ್ಯನನ್ನು ಅತ್ಯುಚ್ಚ ಗೌರವಸ್ಥಾನಕ್ಕೆ
ರಿಸಲು ದಾರಿದ್ರ್ಯವು ಸಹಾಯವಾಗುವುದಾದರೆ, ಅದನ್ನೆ ಐಶ್ವರ್ಯ
ಂದು ಕರೆದರೆ ತಪ್ಪೇನಂತೆ? ಕೆಲವು ಸಂದರ್ಭಗಳಲ್ಲಿ ಮರಣವೆಂದರೆ
ಮರಜೀವನವೆನಿಸಲ್ಪಡುವುದು.

ಒಳ್ಳೆಯವರ ಪ್ರೀತಿಗೆ ಪಾತ್ರವಾಗುವ ಸಂದರ್ಭ ಕಳಕೊಂಡಾಗ,
ಮ್ಮ ದೋಷವನ್ನೇ ನಾವು ಹಳಿದುಕೊಳ್ಳಬೇಕಲ್ಲದೆ ಜಗತ್ತನ್ನು ಹಳಿಯು
ುದರಲ್ಲಿ ಅರ್ಥವಿಲ್ಲ.

## ೧೫. ಕರುಣೆ

ಈ ಜಗತ್ತಿನಲ್ಲಿ ಬೇರೆ ಬೇರೆ ಧರ್ಮಗಳು ಬೇರೆ ಬೇರೆ ವಿಷಯಗಳನ್ನು
ೋಧಿಸುತ್ತವೆ. ಆದರೆ, ಮನುಷ್ಯನಿಗೆ ಆಧ್ಯಾತ್ಮಿಕ ಬಂಧವಿಮೋಚನೆ
ರುಣಿಸುವ ವಿಷಯವನ್ನೆ ಪ್ರತಿಯೊಂದು ಧರ್ಮದಲ್ಲಿ ಕರುಣೆಯೆಂದು
ರಿಯಲಾಗಿದೆ.

ಎಲ್ಲರನ್ನು ಪ್ರೀತಿಯಿಂದ ಕಾಣುವವನಿಂದ ಆತ್ಮಕ್ಕೆ ಅಪಾಯಕಾರಿಯಾದ ಪಾಪವೂ ದೂರವಾಗುತ್ತದೆ.

ಭೌತಿಕ ಪ್ರಪಂಚದಲ್ಲಿ ವಾಸ್ತವಿಕ ಸಂಪತ್ತಿನ ಮೇಲೆ ನಮ್ಮ ಸುಖ ಸಂತೋಷಗಳು ಅವಲಂಬಿಸಿಕೊಂಡಿವೆಯಾದರೆ, ಪರದಲ್ಲಿ ಕರುಣೆಯೇ ಸುಖಸಂತೋಷಗಳ ಆಧಾರವಾಗಿದೆ.

ಮನೆಮಾರು, ಆಸ್ತಿಪಾಸ್ತಿ, ಸರ್ವಸ್ವವನ್ನೂ ಕಳಕೊಂಡವರು ಪುನರಪಿ ಅದನ್ನು ಹೊಂದಿ ಮೆರೆಯುವುದು ಶಕ್ಯವಿದೆ. ಆದರೆ, ಕರುಣೆಯ ಕರ್ತವ್ಯ ಮರೆತವರು ಅದನ್ನು ತಿರಿಗಿ ಹೊಂದುವ ಆಸೆಯಿಲ್ಲ.

ಸಂಪತ್ತು ಕಳೆದುಹೋದುದು ತಿರಿಗಿ ಲಭಿಸಬಹುದು. ಆದರೆ, ಒಳ್ಳೆಯತನ ಒಮ್ಮೆ ಕಳಕೊಂಡರೆ ಮುಂದೆ ಎಂದೆಂದೂ ಕಳಕೊಂಡಂತೆಯೆ.

ಹೃದಯದಲ್ಲಿ ಕರುಣಾಮೃತ ಇಲ್ಲದವನು ಇತರ ಗುಣಗಳ ಸಹಾಯದಿಂದ ಧರ್ಮ ಅಭ್ಯಾಸಿಸುವುದೆಂದರೆ ನಿರಕ್ಷರಕುಕ್ಷಿಯು ಬರಹ ಕಲಿಸಲು ಹೊರಟಂತೆ.

ಕರುಣೆಯಿಲ್ಲದೆ ಒಳ್ಳೆಯತನ ಜಯಿಸುವುದು ಅಸಾಧ್ಯ.

ತನ್ನ ಅಧೀನದಲ್ಲಿದ್ದವರ ಮೇಲೆ ಕ್ರೌರ್ಯ ಪ್ರದರ್ಶಿಸುವ ಪ್ರೇರಣೆಯುಂಟಾದಾಗ ತನಗಿಂತ ಬಲವಾದವರ ಮುಂದೆ ತಾನು ಕೈಕಾಲು ನಡುಗಿಸಿಂತ ದೃಶ್ಯ ಕಲ್ಪಿಸಿಕೊಳ್ಳಬೇಕು.

ನಾವು ಇತರರಿಗೆ ನೋವುಂಟುಮಾಡಿದುದರ ಅನುಭವ ಎಂಥದ್ದೆಂದು ತಿಳಿಯಬೇಕಾದರೆ ಇತರರಿಂದ ನಮಗೆ ನೋವುಂಟಾದುದನ್ನು ಸ್ಮರಿಸಿಕೊಳ್ಳಬೇಕು.



Edited, Printed and Published by K. V. Shenoy
at The Prabhat Printers, Ltd., Mangalore-1.

# 36

# ಗುಮಾನಿಕವಿಯ ಉಪದೇಶ ಶತಕ



ಅನುವಾದಕರು:

ಶ್ರೀ। ಅಮ್ಮೆಂಬಳ ಅನಂತಯ್ಯ ನಾವಡ,
ವಿದ್ವಾನ್.

ಮಂಗಳೂರು.

1955.

ಒಂದಾಣೆ




ಮಾಲೆ

## ಒಂದಾಣೆ ಮಾಲೆಯಲ್ಲಿ ಈ ವರೆಗೆ ಪ್ರಕಟವಾದ ಪುಸ್ತಕಗಳು

೧. *ಕೆಪ್ಪಟಿರಾಯ (ವಿನೋದ ಕಥೆ) ಲೇ: ದಿ| ಎಮ್. ಎನ್ ಕಾಮತ್.
೨. ನಾರೀಶ್ವರರು (ಏಕಾಂಕ ಪ್ರಹಸನ)
೩. *ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು.
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ) ಲೇ: ದಿ| ಎಮ್. ಎಸ್. ಕಾಮತ್.
೫. *ಅದ್ಭುತ ತ್ಯಾಗ ಮತ್ತು ಇತರ ಕಥೆಗಳು (ವೈದ್ಯಗುರು ಎಮ್. ಆರ್. ಭಟ್.)
೬. ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ)
೭. *'ಬೀಡಿ ಸೇದಬೇಡಿ' ಮತ್ತು 'ಆ ಮಗು' (ವಿನೋದ ಕಥೆಗಳು)
೮. ಇಂಗ್ಲಿಷ್-ಕನ್ನಡ ಅರ್ಥಕೋಶ (ಭಾರತ ಸಂವಿಧಾನದಿಂದ)
೯. *ಲಂಚಕ್ಕೆ ಸಂಚಕಾರ (ಡಾ| ಎಸ್. ಪಿ. ಭಟ್.)
೧೦. ಟಿಶ್ಯೂ ಔಷಧಿಗಳ ಕೈಪಿಡಿ. (ಶ್ರೀ| ಪಿ. ಎಸ್. ವೆಂಕಟಕೃಷ್ಣರಾವ್.)
೧೧. ಶ್ರೀಕ್ಷೇತ್ರ ಧರ್ಮಸ್ಥಳ (ದ್ವಿತೀಯ ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು. (ಎಲ್. ಎಸ್. ನಾಯಕ.)
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು. (ಡಾ| ವಿ. ಆರ್. ಭಟ್.)
೧೪. "ವೆಂಕಟನ ಸಂಕಟ" (ಏಕಾಂಕ ಪ್ರಹಸನ) ಮತ್ತು ಎರಡು ಕಥೆಗಳು.
೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ).
೧೬. ವೇಣೂರಿನ ಗತವೈಭವ. (ಲೇ: ದಿ| ಪಂಡಿತ ಲೋಕನಾಥ ಶಾಸ್ತ್ರಿಗಳು.)
೧೭. ಒಗಟುಗಳು. [ಲೇ: ಶ್ರೀ ಟಿ. ಚಂದ್ರರಾಜ ಸೆಟ್ಟಿ.]
೧೮. ಜಗಳಗಂಟಿ ಮತ್ತು ಇತರ ಕಥೆಗಳು. [ಲೇ: ವೈದ್ಯಗುರು ಎಮ್. ಆರ್. ಭಟ್.]
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಷ್ಪ (ಲೇ: ದಿ| ಎಮ್. ಎನ್. ಕಾಮತ್)
೨೧. ಭಾರತದ ಮಹಾನಗರಗಳು (ಪ್ರಥಮ ಭಾಗ)
೨೨. ತಿರುಕ್ಕುರಲ್ (ಶ್ರೀ| ಡಿ. ಪುಟ್ಟಸ್ವಾಮಿ.)
೨೩. ಸೂರ್ಯನ ಸಂಸಾರ ಮತ್ತು ಇತರ ಕಥೆಗಳು. (ಲೇ: ಶ್ರೀ| ಬಿ. ಶಂಕರ ಭಟ್.)
೨೪. ಭಾರತದ ಮಹಾನಗರಗಳು (ದ್ವಿತೀಯ ಭಾಗ)
೨೫. ಧೈರ್ಯ ಮತ್ತು ಇತರ ಸತ್ಯಕಥಾನಕಗಳು. (ಶ್ರೀ ಎಲ್. ಎಸ್. ನಾಯಕ.)
೨೬. ಮಾರಾವತಾರ (ಏಕಪಾತ್ರ ಯಕ್ಷಗಾನ ಪ್ರಬಂಧ) (ಲೇ: ಶ್ರೀ| ಜಿ. ಆರ್. ಪಾಂಡೇಶ್ವರ)
೨೭. ಹಾಸವಿಲಾಸ (ಆರಿಸಿ ತೆಗೆದ ನಗೆಹನಿಗಳು)
೨೮. ಸತ್ಯವಂತ ಬಾಬಿ (ಏಕಾಂಕ ಪ್ರಹಸನ)
೨೯. ಜಾಣ್ಮೆಯ ಒಗಟುಗಳು (ಸಂಗ್ರಾಹಕರು: ಡಾ| ಎಸ್. ಪಿ. ಭಟ್, ಮಂಗಳೂರು)
೩೦. ಜಾತಕ ಕಥೆಗಳು (ಸಂಗ್ರಾಹಕರು: ಎಮ್. ಸುಬ್ರಾಯನ್, ವಿದ್ವಾನ್.)
೩೧ ಕಾರ್ಕಳದ ಚರಿತ್ರೆ (ಲೇ: ಶ್ರೀ| ಡಿ. ಪುಟ್ಟಸ್ವಾಮಿ, ಬಿ. ಎ, ಬಿ. ಎಲ್., ಎಡ್ವೊಕೇಟ್)
೩೨. ಮರ್ಜಿ (ಏಕಾಂಕ ಪ್ರಹಸನ) ರಚಯಿತರು: ದಿ| ಎಮ್. ಎನ್. ಕಾಮತ್.
೩೩. ದರ್ಶನದ ಕಥೆಗಳು (ಲೇ: ಬಿ. ಶಂಕರ ಭಟ್ಟ ಮತ್ತು ಬಿ. ಎಮ್. ಶರ್ಮಾ)
೩೪. ಆಳುವಿನ ಹೊಳೆ ಮತ್ತು ಕೇಶವಭೂಪ (ಮಕ್ಕಳ ಕಥೆಗಳು) ಲೇ: "ನವಗಿರಿನಂದ"
೩೫. ಶರಾಬಿನ ಸಿಪಾಯಿಗಳು [ಲೇ: ಬಳ್ಕೂರು ಸುಬ್ರಾಯ ಅಡಿಗ].
೩೬. ಉಪದೇಶ ಶತಕ (ಅನು: ಶ್ರೀ| ಅಮ್ಮೆಂಬಳ ಅನಂತಯ್ಯ ನಾವಡ, ವಿದ್ವಾನ್.)

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

**ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ, ಮಂಗಳೂರು-1.**

# ಮುನ್ನುಡಿ

ಗುಮಾನಿಯೆಂಬ ಕವಿಯು ಸಂಸ್ಕೃತದಲ್ಲಿ ಉಪದೇಶ ಶತಕವನ್ನು ಬರೆದಿರುವನು. ಮಹಾಭಾರತ, ರಾಮಾಯಣ, ಭಾಗವತಾದಿ ಪುರಾಣಗಳಲ್ಲಿ ಬರುವ ಮಹಾಪುರುಷರ ಸಚ್ಚರಿತೆಗಳಲ್ಲೊಂದೊಂದನ್ನೇ ಉದಾಹರಣೆಯಾಗಿ ಎತ್ತಿತೋರಿಸಿ-ಆ ರೀತಿಯಲ್ಲಿ ನಡೆಯಬೇಕೆಂದೂ, ರಾವಣ ಕಂಸಾದಿ ದುಷ್ಟರ ದುರ್ನಡತೆಗಳನ್ನೂ ಅವುಗಳ ಪರಿಣಾಮಗಳನ್ನೂ ದೃಷ್ಟಾಂತವಾಗಿ ಕೊಟ್ಟು-ಆ ರೀತಿಯಾಗಿ ನಡೆಯಬಾರದೆಂದೂ ಈ ಕವಿಯು ತನ್ನ ಉಪದೇಶ ಶತಕವನ್ನು ನವೀನ ರೀತಿಯಾಗಿ ಹೇಳಿರುವನು. ಪ್ರತಿಯೊಂದು ನೀತಿಯು, ಶ್ಲಾಘನೀಯವೂ ಅನುಸರಣೀಯವೂ ಆಗಿದೆ. 'ದುಷ್ಟಾಚಾರಗಳನ್ನು ದೂರಗೊಳಿಸಬೇಕು; ಶಿಷ್ಟಾಚಾರಗಳನ್ನು ಪರಿಗ್ರಹಿಸಬೇಕು' ಎಂದಿಷ್ಟೇ ಹೇಳಿದರೆ ವಿಶೇಷ ಫಲಕಾರಿಯಾಗಲಿಕ್ಕಿಲ್ಲವೆಂದು ಈ ರೀತಿಯ ದೃಷ್ಟಾಂತೋಪದೇಶಗಳನ್ನು ಹೇಳಿರುವನು. ಉದಾಹರಣೆಯಾಗಿ—(೧) "ತನ್ನ ದುಷ್ಕರ್ಮಗಳಿಂದಾಗಿ ಹಿರಣ್ಯಕಶಿಪುವು ದುರಂತವನ್ನನುಭವಿಸಿದನು. ಆದ್ದರಿಂದ ಪಾಪಕೆಲಸಗಳನ್ನು ಮಾಡಬಾರದು."

(೨) "ಭಗೀರಥನು ಅತಿಪ್ರಯಾಸದಿಂದ ಗಂಗಾನದಿಯನ್ನು ಭೂಲೋಕಕ್ಕೆ ತಂದನು. ಸಾಧಿಸಿದರೆ ಎಂತಹ ಕಾರ್ಯವನ್ನಾದರೂ ಮಾಡಬಹುದು."

ಈ ರೀತಿಯ ನೀತಿಬೋಧೆಯು ಅಶುಭನಿವೃತ್ತಿ-ಶುಭಪ್ರಾಪ್ತಿಗಳಿಗೆ ಸಾಧಕವಾಗಿದೆ. ಈ ವಿಚಾರವನ್ನೇ ಕವಿಯು ತನ್ನ ಕೃತಿಯ ಅಂತ್ಯದಲ್ಲಿ ಹೀಗೆ ಪ್ರಕಟಿಸಿರುವನು:

"ಉಚಿತ ದೃಷ್ಟಾಂತಗಳೊಡನೆ ಪ್ರಮಾಣಪೂರ್ವಕವಾಗಿ ಹೇಳಲ್ಪಟ್ಟ ಈ ಉಪದೇಶ ಶತಕವನ್ನು ಗ್ರಹಿಸಿಕೊಂಡು ಅದರಂತೆ ವರ್ತಿಸುವವನು ಇಷ್ಟಾರ್ಥಸಿದ್ಧಿಯನ್ನು ಪಡೆದು, ಆದರ್ಶಜೀವನವನ್ನು ಸಾಗಿಸುವನು. ವಿದ್ವಾಂಸರು ಕುತೂಹಲಪಡುವಂತೆಯೂ ಮೂಢಮತಿಗಳು ಉಪಕಾರ ಹೊಂದುವಂತೆಯೂ ಈ ಉಪದೇಶ ಶತಕವನ್ನು ನಾನು ರಚಿಸಿರುವೆನು."

ಈ ಉಪದೇಶ ಶತಕದ ಸ್ವಾರಸ್ಯವನ್ನು ಸರ್ವರೂ ತಿಳಿದು ಸದಾಚಾರ ಸಂಪನ್ನರಾಗಲೆಂಬ ಉದ್ದೇಶದಿಂದ ಕನ್ನಡದಲ್ಲಿ ಅನುವಾದಿಸಿರುವೆನು.

ಜೈ ಹಿಂದ್!

ಮಂಗಳೂರು-೩,
ತಾ. ೨೮-೫-೧೯೫೫

ಅಮ್ಮೆಂಬಳ ಅನಂತಯ್ಯ ನಾವಡ,
ವಿದ್ವಾನ್.

▪▪▪▪▪▪▪▪

# ಉಪದೇಶ ಶತಕ

ತ್ರಿಮೂರ್ತಿಗಳಲ್ಲಿ ಶ್ರೇಷ್ಠನಾರೆಂಬುದನ್ನು ಪರೀಕ್ಷಿಸಲು ಹೊರಟ ಭೃಗುಋಷಿಯು ಶ್ರೀ ಮಹಾವಿಷ್ಣುವೇ ಅಧಿಕ ಮಹತ್ವವುಳ್ಳವನೆಂದು ನಿಶ್ಚೈಸಿದನು. ಸರ್ವೋತ್ತಮನಾದ ವಿಷ್ಣುವು ಸೇವ್ಯನಾಗಿರುವನು.

ರುಕ್ಮಾಂಗದನು ಮೋಹಿನಿಯ ಮಾತಿಗನುಸಾರವಾಗಿ ಔರಸಪುತ್ರನನ್ನು ಖಡ್ಗದಿಂದ ತುಂಡರಿಸಿ ತಾನಾಡಿದ ಮಾತಿನ ಸತ್ಯತೆಯನ್ನುಳಿಸಿಕೊಂಡನು. ಎಂತಹ ಸಂಕಷ್ಟ ಬಂದರೂ ಸತ್ಯಮಾರ್ಗದಿಂದ ವಿಚಲಿತನಾಗಬಾರದು.

ಹಿತೋಕ್ತಿಯನ್ನಾಡಿದ ವಿಭೀಷಣನನ್ನು ರಾವಣನು ಲಂಕೆಯಿಂದ ಹೊರಡಿಸಲು, ಮುಂದೆ ತಮ್ಮನೇ ಅಣ್ಣನ ನಾಶಕ್ಕೆ ಕಾರಣನಾದನು. ನಿಜಬಂಧುವಿನೊಡನೆ ನಿಷ್ಠುರವನ್ನು ಕಟ್ಟಿಕೊಳ್ಳಬಾರದು.

ತಮ್ಮ ರಾಜ್ಯವನ್ನು ವಶಮಾಡಿಕೊಂಡ ಕೌರವರನ್ನು ಕೂಡಲೇ ನಿಗ್ರಹಿಸಲು ಶಕ್ತರಾಗಿದ್ದರೂ ಪಾಂಡವರು, ಹನ್ನೆರಡು ವರ್ಷ ವನವಾಸವನ್ನು ಮಾಡಿದರು. ಧೀರರಾದವರು ದುಡುಕದೆ ಅನುಕೂಲ ಸಮಯವನ್ನು ಕಾಯುತ್ತಿರಬೇಕು.

ಸತ್ರಾಜಿತನ ಸ್ಯಮಂತಕಮಣಿಯನ್ನಪಹರಿಸಿದವನೆಂಬ ಅಪವಾದಕ್ಕೊಳಗಾದ ಶ್ರೀಕೃಷ್ಣನು ಕಾಯಕಷ್ಟವನ್ನು ಗಣಿಸದೆ, ಜಾಂಬವನೊಡನೆ ಯುದ್ಧಮಾಡಿ ಅವನ ವಶದಲ್ಲಿದ್ದ ಮಣಿಯನ್ನು ಆ ರಾಜನಿಗೆ ತಂದು ಕೊಟ್ಟನು. ಪ್ರತಿಯೊಬ್ಬನೂ ಜನಾಪವಾದಕ್ಕೆ ಹೆದರಲೇಬೇಕು.

ಸ್ವರ್ಗಲೋಕದಧಿಪತಿಯಾದೆನೆಂಬ ಗರ್ವದಿಂದ ನಹುಷನು ನಿಷ್ಠುರ ವಾಕ್ಯಗಳನ್ನಾಡಿ ಸಪ್ತರ್ಷಿಗಳನ್ನು ಕೆರಳಿಸಲು, ಅವರ ಶಾಪದಿಂದ ಹೆಬ್ಬಾವಾಗಿ ಭೂಮಿಗೆ ಬಿದ್ದನು. ಐಶ್ವರ್ಯ ಬಂತೆಂದು ಯಾರೂ ಗರ್ವಪಡಬಾರದು.

ಶ್ರೀರಾಮನ ಸತಿಯಾದ ಸೀತೆಯನ್ನು ರಾವಣನು ಕದ್ದೊಯ್ಯಲು, ನಿರಪರಾಧಿಯಾದ ಸಮುದ್ರರಾಜನು ಬಂಧಿಸಲ್ಪಟ್ಟನು! ದುರ್ಜನನ ಸಮೀಪದಲ್ಲಿ ವಾಸಿಸುವವನಿಗೆ ಆಪತ್ತು ತಪ್ಪದು.

ದೇವಕಿಯನ್ನು ಕೊಲ್ಲಲುದ್ಯುಕ್ತನಾದ ಕಂಸನನ್ನು ವಸುದೇವನು ಮಧುರೋಕ್ತಿಗಳಿಂದ ಶಾಂತಗೊಳಿಸಿದನು. ಮೂರ್ಖನನ್ನು ಸಮಾಧಾನದಿಂದ ವಶಮಾಡಿಕೊಳ್ಳಬೇಕು.

"ಸಹೋದರನೇ! ಅತ್ಯಾಚಾರವನ್ನು ಮಾಡಬೇಡ" ಎಂದು ಬೋಧಿಸಿದ ಕುಬೇರನನ್ನು ರಾವಣನು ಬಲಾತ್ಕಾರದಿಂದ ಬಂಧಿಸಿದನು. ಮೂರ್ಖನಿಗೆ ಉಪದೇಶಮಾಡಲು ಹೋಗಬಾರದು.

ವಿಶ್ವಾಸಾಧಿಕ್ಯದಿಂದ ಕೈಕೇಯಿಗೆ ವರಗಳನ್ನು ಕೊಟ್ಟ ದಶರಥನು ದುರಂತವನ್ನನುಭವಿಸಿದನು. ಸ್ತ್ರೀಯರಲ್ಲಿ ಹೆಚ್ಚು ವಿಶ್ವಾಸವನ್ನಿಡಬಾರದು.

ತನ್ನೊಡನೆ ಯುದ್ಧಮಾಡತೊಡಗಿದ ಗರ್ವೋದ್ಧತನಾದ ರಾವಣನನ್ನು ಕಾರ್ತವೀರ್ಯನು ಕ್ರೀಡಾಮೃಗವನ್ನು ಬಂಧಿಸುವಂತೆ ಹೆಡಮುರಿಗಟ್ಟಿದನು! ಅಧಿಕಬಲನೊಡನೆ ಯುದ್ಧವು ಸಲ್ಲದು.

ರಾಕ್ಷಸರಿಂದ ಬಂಧಿತನಾಗಿ ಬಾಲಕ್ಕೆ ಉರಿ ತಾಗಿಸಿ ಶಿಕ್ಷಿಸಲ್ಪಟ್ಟರೂ ಹನುಮಂತನು ಲಂಕೆಯನ್ನು ಸುಟ್ಟುಬಿಟ್ಟನು! ಆಪತ್ಕಾಲದಲ್ಲಾದರೂ ಶೌರ್ಯವನ್ನು ಬಿಡಬಾರದು.

ಕಪಟತನದಿಂದ ದ್ಯೂತವನ್ನಾಡಿ ತನ್ನನ್ನು ಜಯಿಸಿದುದಲ್ಲದೆ ಪರಿಹಾಸಮಾಡಿ ಅವಮಾನಿಸಿದ ರುಕ್ಮಿಯನ್ನು ಕುಪಿತನಾದ ಬಲರಾಮನು ಸಭೆಯಲ್ಲಿಯೇ ಕೊಂದುಬಿಟ್ಟನು. ಜೂಜಿನಲ್ಲಿ ಸೋತವನಿಗೆ ಪರಿಹಾಸಮಾಡಬಾರದು.

ಕಪಟಿಗಳಾದ ಶಕುನಿ ಸುಯೋಧನ ಕರ್ಣರಿಂದ ದ್ಯೂತದಲ್ಲಿ ಸೋಲಿಸಲ್ಪಟ್ಟ ಯುಧಿಷ್ಠಿರನು ಸ್ವರಾಜ್ಯದಿಂದಲೂ ಹೊರಡಿಸಲ್ಪಟ್ಟನು. ಧೂರ್ತರೊಡನೆ ಜೂಜಾಡಬಾರದು.

ಯಜ್ಞರಕ್ಷಣೆಗಾಗಿ ಶ್ರೀರಾಮನನ್ನು ಕಳುಹಿಸಿಕೊಡಬೇಕೆಂದು ವಿಶ್ವಾಮಿತ್ರನು ಕೇಳಿಕೊಳ್ಳಲು ದಶರಥನು ಮಗನಮೇಲೆ ಅತಿ ಪ್ರೀತಿಯುಳ್ಳವನಾದರೂ ಬೇಸರಿಸದೆ ಅದಕ್ಕೊಪ್ಪಿದನು. ಕೊಡಲು ಕಷ್ಟಸಾಧ್ಯವಾದುದನ್ನಾದರೂ ಯಾಚಕನಿಗೆ ದಾನಮಾಡಲೇಬೇಕು.

"ಪಾಂಡವರೊಡನೆ ಯುದ್ಧ ಬೇಡ" ಎಂಬ ವಿದುರನ ಮಾತನ್ನು ತಿರಸ್ಕರಿಸಿದ ಕೌರವನು ನಾಶಹೊಂದಿದನು. ಮಿತ್ರರ ಹಿತೋಕ್ತಿಯನ್ನು ಅಲ್ಲಗಳೆಯಬಾರದು!

ರಾಜಸೂಯಯಾಗದ ಕಾಲದಲ್ಲಿ ಪೂಜ್ಯನಾದ ಶ್ರೀಕೃಷ್ಣನನ್ನು ಅನರ್ಹೋಕ್ತಿಗಳಿಂದ ನಿಂದಿಸಿದ ಶಿಶುಪಾಲನು ಕೂಡಲೇ ಪ್ರಾಣವನ್ನು ಕಳೆದುಕೊಂಡನು. ಮಹಾತ್ಮರನ್ನು ನಿಂದಿಸುವುದು ಸ್ವನಾಶಕ್ಕೆ ಹೇತುವಾಗಿದೆ.

ದಾನಶೂರನಾದ ನೃಗಭೂಪಾಲನು ಅಜ್ಞಾನದಿಂದ ದ್ವಿಜನೊಬ್ಬನ ದನವನ್ನು ಇನ್ನೊಬ್ಬ ಬ್ರಾಹ್ಮಣನಿಗೆ ದಾನಮಾಡಿದ ಪರಿಣಾಮವಾಗಿ ಕೂಡಲೇ ಓತಿಯಾದನು. ಬ್ರಾಹ್ಮಣದ್ರವ್ಯವನ್ನು ದೂರದಿಂದಲೇ ಬಿಟ್ಟು ಬಿಡಬೇಕು.

ಪತ್ನೀವಿರಹಿತನಾದ ಸುಗ್ರೀವನು ಅಪಹೃತ ಪತ್ನೀಕನಾದ ಶ್ರೀರಾಮನೊಡನೆ ಸ್ನೇಹವನ್ನು ಬೆಳೆಸಿಕೊಂಡನು. ಸಮಾನಶೀಲ ವ್ಯಸನವುಳ್ಳವನನ್ನು ಸ್ನೇಹಿತನನ್ನಾಗಿ ಮಾಡಿಕೊಳ್ಳಬೇಕು.

ಶೂರನೂ ಸಾಹಸಿಯೂ ಆದ ಅರ್ಜುನನು ವಿರಾಟನ ಅರಮನೆಯಲ್ಲಿ ಕುಮಾರಿಯರಿಗೆ ನೃತ್ಯವನ್ನು ಹೇಳಿಕೊಡುವ ಕೆಲಸವನ್ನು ಕೈಕೊಂಡನು. ಕಾಲೋಚಿತವಾದ ವೃತ್ತಿಯನ್ನು ಅವಲಂಬಿಸಬೇಕು.

ಕಣ್ವ ಮಹರ್ಷಿಯಿಂದ ಪ್ರೇಷಿತಳಾದ ಶಕುಂತಲೆಯು ತನ್ನ ಪತ್ನಿಯಾಗಿದ್ದರೂ ದುಷ್ಯಂತನು ಚೆನ್ನಾಗಿ ಆಲೋಚಿಸಿ, ಆ ಮೇಲೆ ಅವಳನ್ನು

ಹಿಂದಿರುಗಿಸಿದನು. ಯಾವ ಕಾರ್ಯವನ್ನಾದರೂ ವಿಚಾರಿಸಿ ಮಾಡ ತಕ್ಕದ್ದು.

ಜಮದಗ್ನಿಯ ಆಜ್ಞಾನುಸಾರವಾಗಿ ಪರಶುರಾಮನು ತನ್ನ ತಾಯಿಯನ್ನು ವಧಿಸಿದರೂ ಪಾಪರಹಿತನೇ ಆದನು. ಗುರುಜನರ ಆಜ್ಞಾಪಾಲನೆಯಲ್ಲಿ ಹಿಂದೆ ಮುಂದೆ ನೋಡಬಾರದು.

ನೂರು ಯೋಜನ ವಿಸ್ತಾರವಾದ ಸಮುದ್ರವನ್ನತಿಕ್ರಮಿಸಿ ಲಂಕೆಗೆ ಹಾರಿದ ಹನುಮಂತನು ವೀರಾಗ್ರೇಸರನೆಂಬ ಪ್ರಶಂಸೆಗೆ ಪಾತ್ರನಾದನು. ಪ್ರತಿಯೊಬ್ಬನೂ ಏನಾದರೊಂದು ಸಾಹಸಕಾರ್ಯವನ್ನು ಮಾಡಿ ಕೀರ್ತಿಶಾಲಿಯಾಗಬೇಕು.

ಪರಮೇಶ್ವರನನ್ನು ಜಯಿಸಲು ದೇವತೆಗಳಿಂದ ಪ್ರೇರಿತನಾದ ಕಾಮನು ಅವನ ತ್ರಿನೇತ್ರಾಗ್ನಿಯಿಂದ ಭಸ್ಮೀಭೂತನಾದನು. ತನ್ನಿಂದ ಸಾಧ್ಯವಾಗದ ಕೆಲಸಕ್ಕೆ ಕೈಹಾಕಬಾರದು.

ಕಾಳಿಂದಿಯಲ್ಲಿದ್ದ ದುಷ್ಟಚರಿತ್ರನಾದ ಕಾಳಿಂಗನನ್ನು ಮುಕುಂದನು ತನ್ನ ಪಾದಗಳಿಂದ ಘಾತಿಸಿ ದೂರ ಓಡಿಸಿದನು. ದುಷ್ಟನಿಗೆ ದಂಡಪ್ರಯೋಗವೇ ತಕ್ಕ ಮದ್ದು.

ವಜ್ರಾಯುಧದಿಂದ ತಲೆಯು ತುಂಡರಿಸಲ್ಪಟ್ಟರೂ ಜೀವದಿಂದಿದ್ದ ಕಬಂಧನಿಗೆ ದೇವೇಂದ್ರನು ಭೋಜನಕ್ರಿಯೆಗಾಗಿ ವಕ್ಷಸ್ಥಲದಲ್ಲಿ ವದನವನ್ನನುಗ್ರಹಿಸಿದನು. ವಿನೀತನಾದ ಶತ್ರುವು ಅನುಗ್ರಾಹ್ಯನಾಗಿರುವನು.

ರಾವಣನ ಸಂದೇಶವನ್ನು ಸುಗ್ರೀವನಿಗೆ ತಿಳುಹಿಸಲು ಬಂದ ಶುಕನು (ಸಾರಣ ಸಹಚರನು) ಕಪಿಗಳಿಂದ ಬಂಧಿತನಾಗಿ ಶಿಕ್ಷಿಸಲ್ಪಟ್ಟನು. ದುರ್ಜನನ ದೂತಕಾರ್ಯವನ್ನು ವಹಿಸಿಕೊಳ್ಳಬಾರದು.

ಅಶ್ವತ್ಥಾಮನು ಹತನಾದನೆಂಬ ಅಸತ್ಯವಚನವನ್ನಾಡಿದ ಯುಧಿಷ್ಠಿರನು ಮತ್ತೆ ಪಶ್ಚಾತ್ತಾಪಪಟ್ಟನು. ಪಶ್ಚಾತ್ತಾಪದಿಂದ ಪಾಪಕರ್ಮದ ಫಲವು ನಷ್ಟವಾಗುವುದು.

ಮಗನ ಯೌವನವನ್ನು ಪಡೆದು ಚಿರಕಾಲ ಭೋಗಸುಖಗಳನ್ನನುಭವಿಸಿದರೂ ಯಯಾತಿಯು ಅತೃಪ್ತನಾಗಿ ಕೊನೆಗೆ ನಿರ್ವೇದಗೊಂಡನು. ಎಂದೆಂದಿಗೂ ಕಾಮವು ತೃಪ್ತಿಯನ್ನೀಯುವುದಿಲ್ಲವೆಂದರಿತುಕೊಳ್ಳಬೇಕು.

ಇಂದ್ರಾದಿಗಳನ್ನು ಜಯಿಸಿ ತ್ರಿಲೋಕಾಧಿಪತಿಯಾಗಿ ಮೆರೆಯುತ್ತಿದ್ದ ಬಲಿಚಕ್ರವರ್ತಿಯು ಸಂಪತ್ತನ್ನೆಲ್ಲಾ ಕಳೆದುಕೊಂಡು ಪಾತಾಳದಲ್ಲಿ ಬಂಧಿತನಾದನು. ಭೋಜನಸುಖಗಳು ಕ್ಷಣಭಂಗುರಗಳೆಂದು ತಿಳಿದುಕೊಳ್ಳತಕ್ಕದ್ದು.

ಪುತ್ರರ ಮರಣದಿಂದಾಗಿ ಪ್ರಲಾಪಿಸುತಿದ್ದ ಧೃತರಾಷ್ಟ್ರನ ದುಃಖದಲ್ಲಿ ಕರುಣಾಂತರಂಗನಾದ ಶ್ರೀಕೃಷ್ಣನು ಸಹಭಾಗಿಯಾದನು. ದುಃಖಿತನೊಡನೆ ತಾನೂ ದುಃಖಿಸಿ ಆ ಮೇಲೆ ಅವನನ್ನು ಸಮಾಧಾನಪಡಿಸಬೇಕು.

ಭೂಮಿಯು ನಿಕ್ಷತ್ರಿಯವಾಗುವ ವರೆಗೆ ಪರಶುರಾಮನು ಯುದ್ಧದಿಂದ ವಿರಮಿಸಲಿಲ್ಲ. ಪ್ರಾರಂಭಿಸಿದ ಕಾರ್ಯವನ್ನು ಸಮಾಪ್ತಿಗೊಳಿಸದೆ ನಿವೃತ್ತನಾಗಬಾರದು.

ಜನಕಮಹಾರಾಜನ ಪ್ರಿಯಸುತೆಯೂ ದಾಶರಥಿಯ ಪ್ರಿಯಪತ್ನಿಯೂ ಆದ ಸೀತಾದೇವಿಯು ರಾಕ್ಷಸಿಯರ ಕಾವಲಿನಲ್ಲಿರಬೇಕಾಯಿತು. ವಿಧಿವಿಲಾಸವು ವಿಚಿತ್ರವಾಗಿದೆ.

ವೇದಶಾಸ್ತ್ರಜ್ಞನಾದ ದ್ರೋಣಾಚಾರ್ಯನು ತಪೋಧನನಾಗಿದ್ದರೂ ದ್ರವ್ಯಸಂಪಾದನೆಗಾಗಿ ಬಿಲ್ಲೋಜನ ವೃತ್ತಿಯನ್ನು ಕೈಗೊಂಡನು. ಧರ್ಮವನ್ನಾಚರಿಸುವುದು ಮಾತ್ರವಲ್ಲದೆ ಅರ್ಥಸಂಗ್ರಹದಲ್ಲಿಯೂ ತತ್ಪರನಾಗಬೇಕು.

ಪೂರ್ಣಬಿಂಬನಾದಾಗ ಪಡೆಯಲಾಗದ ಪೂಜಾಸತ್ಕಾರಗಳನ್ನು ಚಂದ್ರನು ಏಕಕಲಾತ್ಮಕನಾಗಿ ಮಹೇಶ್ವರನ ಫಾಲತಲವನ್ನಾಶ್ರಯಿಸಿದ ನಂತರ ಪಡೆದುಕೊಂಡನು. ಮಹತ್ವಾಕಾಂಕ್ಷೆಯಿಂದ ಮಹಾತ್ಮನನ್ನಾಶ್ರಯಿಸಬೇಕು.

ಶರಳಮಂಚದಲ್ಲಿ ಮಲಗಿದ್ದ ಭೀಷ್ಮನಿಂದ ಧರ್ಮಜನು ಧರ್ಮೋಪದೇಶಗಳನ್ನು ಪಡೆದು ಅಸಹ್ಯವಾದ ಬಂಧುವಿಯೋಗದುಃಖವನ್ನು ಶಾಂತಪಡಿಸಿಕೊಂಡನು. ಹಿರಿಯರಿಂದ ಸದುಪದೇಶಗಳನ್ನು ಹೊಂದಿದವನು ಉತ್ತಮನಾಗುತ್ತಾನೆ.

ಕರ್ಣನು ಪ್ರಯೋಗಿಸಿದ ಇಂದ್ರದತ್ತವಾದ ಶಕ್ತ್ಯಾಯುಧಕ್ಕೆ ಘಟೋತ್ಕಚನನ್ನು ಎದುರುಮಾಡಿ ಪಾಂಡವರು ತಮ್ಮನ್ನುಳಿಸಿಕೊಂಡರು. ಸರ್ವರೀತಿಯಿಂದಲೂ ತನ್ನನ್ನು ರಕ್ಷಿಸಿಕೊಳ್ಳುವುದು ಆದ್ಯ ಕರ್ತವ್ಯವಾಗಿದೆ.

ಅವಲಕ್ಕಿಯನ್ನು ಕಾಣಿಕೆಯಾಗಿತ್ತು ಬಾಲ್ಯಸ್ನೇಹಿತನಾದ ಶ್ರೀಕೃಷ್ಣನನ್ನು ಸಂದರ್ಶಿಸಿದ ದೀನ ಸುದಾಮನು ಶ್ರೀಮಂತನಾದನು. ಆಪತ್ಕಾಲದಲ್ಲಿ ಸನ್ಮಿತ್ರನನ್ನಾಶ್ರಯಿಸಬೇಕು.

ಯುದ್ಧಶ್ರಾಂತನಾದ ಬಾಣಾಸುರನನ್ನುಳಿಸಬೇಕೆಂಬ ಉದ್ದೇಶದಿಂದ ನಗ್ನಳಾಗಿ ಎದುರು ಬಂದ ಕೋಟವಿಯೆಂಬ ಸ್ತ್ರೀಯನ್ನು ಕಂಡು ಶ್ರೀಕೃಷ್ಣನು ಸಮರದಿಂದ ವಿಮುಖನಾದನು. ವಿವಸ್ತ್ರಳಾದ ಸ್ತ್ರೀಯನ್ನುನೋಡಬಾರದು.

ಮೂರ್ಛೆ ತಾಳಿದ ಲಕ್ಷ್ಮಣನಿಗಾಗಿ ಸಂಜೀವನೌಷಧಿಯನ್ನು ತರಲು ಶ್ರೀರಾಮನಿಂದ ಆಜ್ಞಪ್ತನಾದ ಹನುಮಂತನು ಇಡೀ ಲೋಕವನ್ನುಸುತ್ತಾಡಿ ಹುಡುಕಿ ತಂದನು. ಸಾಹಸಕಾರ್ಯಕ್ಕೆ ಸಮರ್ಥನನ್ನೇ ನಿಯೋಗಿಸಬೇಕು.

ಶಕುನಿಪುತ್ರನಾದ ವೃಕಾಸುರನೆಂಬ ಕಪಟಿಯು ರುದ್ರನನ್ನಾರಾಧಿಸಿ ವರಪಡೆದು ಗೌರೀದೇವಿಯನ್ನೇ ಅಪಹರಿಸಲುದ್ಯುಕ್ತನಾದನು. ಸ್ವಕಾರ್ಯಕ್ಕಾಗಿ ವಿನಯವನ್ನು ತೋರಿಸುವ ಧೂರ್ತನಲ್ಲಿ ವಿಶ್ವಾಸವಿಡಬಾರದು.

ದಶಕಂಠ ರಕ್ಷಿತವಾದ ಲಂಕೆಯಲ್ಲಿ ನೆಲೆಸಿದ್ದ ರಾಕ್ಷಸರು ತಮ್ಮ ಗೃಹ-ವಿತ್ತ-ಬಂಧುಗಳನ್ನು ಕಳೆದುಕೊಂಡರು. ದುಷ್ಟನಾದ ರಾಜನ ರಾಜ್ಯದಲ್ಲಿ ವಾಸಮಾಡಬಾರದು.

ಸುಲಭಕೋಪಿಯಾದ ದುರ್ವಾಸಮುನಿಯು ನಿರಪರಾಧಿಯಾದ ಅಂಬರೀಷನನ್ನು ಶಪಿಸಿ ಸುದರ್ಶನ ಚಕ್ರದಿಂದ ತಪ್ತನಾದನು. ಅಸ್ಥಾನದಲ್ಲಿ ಕೋಪವನ್ನು ತೋರಿಸಿದರೆ ಪರಿಣಾಮವು ಒಳ್ಳೆಯದಾಗುವುದಿಲ್ಲ.

ಜನಮೇಜಯನ ಸರ್ಪಯಾಗದ ಭೀತಿಯಿಂದ ಶರಣಾಗತನಾದ ತಕ್ಷಕನನ್ನು ರಕ್ಷಿಸಲಸಮರ್ಥನಾದರೂ ದೇವೇಂದ್ರನು ಅವನನ್ನು ತಿರಸ್ಕರಿಸಲಿಲ್ಲ. ತನಗೆ ಕಷ್ಟಬಂದೀತೆಂದು ಶರಣಾಗತನನ್ನುಪೇಕ್ಷಿಸಬಾರದು.

ದೇವಕಿಯ ಸದ್ಯೋಜಾತ ಶಿಶುಗಳನ್ನು ತನ್ನ ಖಡ್ಗಕ್ಕಾಹುತಿ ಕೊಟ್ಟ ಕಂಸನು ಕೆಲವೇ ಸಮಯದಲ್ಲಿ ನಾಮಾವಶೇಷನಾದನು. ದುಷ್ಕರ್ಮದ ಫಲವು ಕೂಡಲೇ ಸಿಗುತ್ತದೆ.

ಗರ್ಭಿಣಿಯಾದ ಸೀತೆಯನ್ನು ಕಾಡಿನಲ್ಲಿ ಬಿಟ್ಟ ಶ್ರೀರಾಮನು ಮುನಿ ವ್ರತಧಾರಿಯಾಗಿ ತಾಪಸರನ್ನರ್ಚಿಸುತ್ತಾ ರಾಜ್ಯಪಾಲನೆ ಮಾಡುತ್ತಿದ್ದನು. ದುಃಖದ ಸಂದರ್ಭದಲ್ಲಿ ಸಜ್ಜನರೊಡನೆ ಕಾಲಕ್ಷೇಪವನ್ನು ಮಾಡ ಬೇಕು.

ದ್ವಿಜವೇಷಧಾರಿಗಳಾದ ಕೃಷ್ಣಾರ್ಜುನ ಭೀಮರ ನಿಜಸ್ಥಿತಿಯನ್ನು ಜರಾಸಂಧನು ಅವರ ಕ್ಷಾತ್ರಚಿಹ್ನೆಗಳಿಂದ ತಿಳಿದುಕೊಂಡನು. ಆಕಾರ ದರ್ಶನದಿಂದ ವ್ಯಕ್ತಿಯ ಇಂಗಿತವನ್ನರಿತುಕೊಳ್ಳಬೇಕು.

ಸ್ವೇಚ್ಛಾಚಾರಿಯಾದ ಹಿರಣ್ಯಕಶಿಪುವು ಯಾವ ಯಾವ ದಿಕ್ಕಿನಲ್ಲಿ ಸಂಚರಿಸುತ್ತಿದ್ದನೋ ಆ ದಿಕ್ಕಿಗಭಿಮುಖರಾಗಿ ದೇವತೆಗಳು ನಮಸ್ಕರಿಸು ತ್ತಿದ್ದರು. ದುಷ್ಟನಿಗೆ ದೂರದಿಂದಲೇ ವಂದಿಸಬೇಕು.

ಮುನಿಶಾಪದಿಂದ ಭೀತನಾದ ಪರೀಕ್ಷಿತರಾಜನು ಪ್ರಾಣರಕ್ಷಣೆಗಾಗಿ ಪ್ರಯತ್ನಿಸಿದರೂ ತಕ್ಷಕನಿಂದ ಕಚ್ಚಲ್ಪಟ್ಟನು. ಮರಣವು ನಿವಾರಿಸ ಲಶಕ್ಯವಾಗಿದೆ.

ಸತ್ಯವೆಂದು ತೋರುತ್ತಿರುವ ಜಗತ್ತು ಮಿಥ್ಯವಾದುದೆಂದು ತಿಳಿದ ಜನಕಮಹಾರಾಜನು ಮುಕ್ತಿಯನ್ನೈದಿದನು. ಈ ಜಗತ್ತು ಸ್ವಪ್ನದಂತೆ ಅಸತ್ಯವೆಂದು ತಿಳಿಯಬೇಕು.

ಹಗಲುರಾತ್ರಿಯೆನ್ನದೆ ಅಂತಃಪುರ ಸ್ತ್ರೀಯರೊಡನೆ ವಿಹರಿಸುತ್ತಿದ್ದ ಅತಿಕಾಮಿಯಾದ ಅಗ್ನಿವರ್ಣನು ಕ್ಷಯರೋಗಕ್ಕೆ ತುತ್ತಾದನು. ವಿಷ ಯೋಪಭೋಗಗಳು ವಿಷಭಕ್ಷಣಗಳಾಗಿವೆ.

ವೃಷಲೀಪತಿಯೂ ಅತಿಘಾತುಕನೂ ಆಗಿದ್ದ ಬೇಡನು ಸಪ್ತರ್ಷಿಗ ಳನ್ನು ಪೂಜಿಸಿದ್ದರಿಂದ ವಾಲ್ಮೀಕಿಯೆಂಬ ಮುನಿವರ್ಯನಾದನು. ಮಹಾತ್ಮ ರನ್ನು ಪೂಜಿಸುವುದು ಶ್ರೇಯಸ್ಕರವಾಗಿದೆ.

ದ್ರೌಪದಿಯನ್ನು ಕಾಮಿಸಿದ ದುರಾತ್ಮನಾದ ಕೀಚಕನು ಭೀಮಸೇನ ನಿಂದ ಹತನಾದನು. ಪರಸ್ತ್ರೀಯರನ್ನು ಬಯಸಬಾರದು.

ಚಕ್ರವ್ಯೂಹವನ್ನು ಪ್ರವೇಶಿಸಿದ ವೀರ ಅಭಿಮನ್ಯುವನ್ನು ದುರ್ಯೋ ಧನಾದಿಗಳು ಹಲವರು ಕೂಡಿ ಕೊಂದರು. ಏಕಾಕಿಯಾಗಿ ರಿಪುಮಂಡಲ ವನ್ನು ಪ್ರವೇಶಿಸಬಾರದು.

ಪುಷ್ಕರನಿಂದ ಅಪಹರಿಸಲ್ಪಟ್ಟ ರಾಜ್ಯವುಳ್ಳ ನಳಚಕ್ರವರ್ತಿಯು ಋತುಪರ್ಣನ ಸಾರಥಿಯಾಗಿ ಗುಪ್ತರೀತಿಯಲ್ಲಿದ್ದನು. ದುರವಸ್ಥೆಯನ್ನು ಹೊಂದಿದವನು ಪ್ರಕಾಶವಾಗಿರಬಾರದು.

ಮೊದಲೊಮ್ಮೆ ಬೇಸರಪಟ್ಟರೂ ಮುಂದೆ ಕ್ಷಾತ್ರಧರ್ಮಕ್ಕನುಸಾರ ವಾಗಿ ಅರ್ಜುನನು ಮಾನ್ಯರಾದ ಗುರುದ್ವಿಜರೊಡನೆ ಯುದ್ಧಮಾಡಿದನು. ಭಯಾವಹವಾಗಿದ್ದರೂ ಸ್ವಧರ್ಮವನ್ನು ಬಿಡಬಾರದು.

ಸಮುದ್ರಮಂಥನಕಾಲದಲ್ಲಿ ಉತ್ಪನ್ನವಾದ ಸುಧೆಯನ್ನು ದೇವತೆ ಗಳಿಗೂ ಸುರೆಯನ್ನು ದಾನವರಿಗೂ ಶ್ರೀವಿಷ್ಣುವು ಸಮವಾಗಿ ಹಂಚಿದನು. ಆಯಾಯ ಜನಕ್ಕೆ ಯೋಗ್ಯವಾದುದನ್ನೇ ಕೊಡುವುದೊಳ್ಳೆಯದು.

ಒಕ್ಕಟ್ಟನಲ್ಲಿದ್ದ ಯಾದವರು ಮದ್ಯಪಾನದಿಂದ ಮತ್ತರಾಗಿ ಪರಸ್ಪರ ಹೊಡೆದಾಡಿಕೊಂಡು ನಾಶಹೊಂದಿದರು. ಮದ್ಯವನ್ನು ಸೇವಿಸದಿರುವುದೇ ಬುದ್ಧಿವಂತನ ಲಕ್ಷಣವಾಗಿದೆ.

ಆಮಂತ್ರಣವಿಲ್ಲದಿದ್ದರೂ ದಕ್ಷಯಜ್ಞಕ್ಕೈದಿದ ಸತೀದೇವಿಯು ಅವ ಮಾನಿತಳಾಗಿ ಸ್ವದೇಹವನ್ನುಅಗ್ನಿಗಾಹುತಿಯನ್ನಾಗಿ ಮಾಡಿದಳು. ಆಹ್ವಾನಿ ಸಲ್ಪಡದೆ ಎಲ್ಲಿಗೂ ಹೋಗಬಾರದು.

ಯಾದವರಿಂದ ವಧಿಸಲಸಾಧ್ಯನಾದ ಕಾಲಯವನನನ್ನು ಶ್ರೀಕೃಷ್ಣನು ಮುಚುಕುಂದನ ಮೂಲಕ ಮೋಸದಿಂದ ಅಂತ್ಯಗೊಳಿಸಿದನು. ವಂಚಿಸಿ ಯಾದರೂ ಶತ್ರುವನ್ನು ನಾಶಮಾಡಲೇಬೇಕು.

ಅನೇಕ ಸಾರಿ ತನ್ನೊಡನೆ ಯುದ್ಧಮಾಡಿ ಸೋತುಹೋಗಿದ್ದರೂ ಜೀವಂತನಾಗಿ ಉಳಿದ ಜರಾಸಂಧನಿಗೆ ಹೆದರಿ ಶ್ರೀ ಕೃಷ್ಣನು ಜಲಮಧ್ಯದಲ್ಲಿ ರಚಿಸಲ್ಪಟ್ಟ ದುರ್ಗದಲ್ಲಿ ವಾಸಮಾಡಿದನು. ಶತ್ರುವು ಜಿತನಾಗಿದ್ದರೂ ಸಂದೇಹಕ್ಕಾಸ್ಪದನಾಗಿರುವನು.

ಅಶ್ವಮೇಧ ತುರಗವನ್ನು ಹುಡುಕುತ್ತಾ ಪಾತಾಳಕ್ಕೆ ಹೋದ ಸಗರ ಸುತರು ಕಪಿಲಮುನಿಯನ್ನು ಕೋಪಗೊಳಿಸಿ ನಾಶಹೊಂದಿದರು. ಶಾಂತ ನಾದ ತಪಸ್ವಿಯನ್ನು ಕೆರಳಿಸಬಾರದು.

ವಿಶ್ವಾಮಿತ್ರನು ಮುನಿಯಾಗಿದ್ದರೂ ಮೋಹಗೊಂಡ ಉರ್ವಶಿ ಯನ್ನು ಶ್ವಾನದಂತೆ ಹಿಂಬಾಲಿಸಿದನು. ದುರ್ಜಯನಾದ ಕಾಮನಿಗೆ ಎಲ್ಲರೂ ಹೆದರಲೇಬೇಕು.

"ಮೂರುಲೋಕದಲ್ಲಿದ್ದ ಶೂರರೆಲ್ಲರೂ ತೃಣಸಮಾನರು, ತಾನೊಬ್ಬನೇ ಬಲಿಷ್ಠನು!" ಎಂದು ದುರಹಂಕಾರ ತಾಳಿದ ರಾವಣನು ಕಪಿಗಳಿಂದ ಸೋಲಿಸಲ್ಪಟ್ಟನು. ತನ್ನ ಬಲದಿಂದಾಗಿ ಗರ್ವಪಡದವನೇ ಶೂರನು!

ಮಲತಾಯಿಯ ವಾಗ್ಬಾಣಗಳಿಂದ ಪ್ರಹೃತನಾದ ಬಾಲಕ ಧ್ರುವನು ಕಾಡಿಗೆ ಹೋಗಿ ಕಠಿಣವಾದ ತಪಸ್ಸನ್ನಾಚರಿಸಿ ಉನ್ನತವಾದ ಪದವಿಯನ್ನು ಪಡೆದನು. ಉದ್ಯೋಗಶೀಲನು ಉತ್ತಮಫಲವನ್ನು ಪಡೆಯುವನು.

ಗುಪ್ತವಾಗಿ ಸಖಿಯರಿಂದ ಶ್ರೀ ಕೃಷ್ಣನೊಡನೆ ಸೇರಿಸಲ್ಪಟ್ಟ ಅತ್ಯಂತ ಪ್ರೀತಿಪಾತ್ರಳಾದ 'ಬಲ್ಲವಿ'ಯೆಂಬ ಒಬ್ಬ ಕಾಂತೆಯು ಶ್ರೀ ಕೃಷ್ಣನೊಡನೆ ಏಕಾಂತಭವನಕ್ಕೆ ಹೋಗುವಾಗ ಮಾರ್ಗಮಧ್ಯದಲ್ಲಿ ಬಳಲಿದವಳಾಗಿ "ನನ್ನನ್ನು ಹೊತ್ತುಕೊಂಡು ಹೋಗು!" ಎಂದು ಅವನೊಡನೆ ಹೇಳಿದಳು. ಪ್ರಮದೆಯರನ್ನೆಂದಿಗೂ ಅತಿಯಾಗಿ ಸನ್ಮಾನಿಸಬಾರದು.

ಯುದ್ಧದ ಸಂದರ್ಭದಲ್ಲಿ ತನ್ನ ಚಿಹ್ನೆಗಳನ್ನೇ ಧರಿಸಿಕೊಂಡಿದ್ದ ಶೃಗಾಲನೆಂಬ ರಾಜನ ಪರುಷವಚನಗಳನ್ನು ಕೇಳಿ ಕೃಷ್ಣನು ನಕ್ಕನು. ಧೂರ್ತರೊಡನೆ ವಾಗ್ವಾದವನ್ನು ಮಾಡಬಾರದು.

ತನಗಾವ ಅಹಿತವನ್ನು ಮಾಡದಿದ್ದರೂ ಮಿತ್ರನ ಶತ್ರುವೆಂಬ ಕಾರಣದಿಂದ ಶ್ರೀ ರಾಮನು ವಾಲಿಯನ್ನು ಮರದ ಮರೆಯಲ್ಲಿ ನಿಂತು ಮೋಸದಿಂದ ಕೊಂದನು. ಸ್ನೇಹಿತನ ವೈರಿಯನ್ನು ಶತ್ರುವೆಂದೇ ತಿಳಿಯಬೇಕು.

ಕುಪಿತನಾದ ಬಲರಾಮನು 'ಹಸ್ತಿನಾವತೀ ಪಟ್ಟಣವನ್ನೇ ಕಿತ್ತು ನದಿಗೆ ಬಿಸಾಡುವೆನೆ'ಂದಾಗ ಕೃಷ್ಣನು ಅವನನ್ನು ಸಮಾಧಾನಪಡಿಸಿದನು. ಕ್ರೋಧಾವಿಷ್ಟನನ್ನು ಉಪಾಯದಿಂದ ಶಾಂತಪಡಿಸಬೇಕು.

ಶಿಷ್ಯರಾದ ರಾಜಕುಮಾರರು ಗರ್ವೋದ್ಧತನಾದ ದ್ರುಪದರಾಜನನ್ನು ಬಂಧಿಸಿತರಲು ದ್ರೋಣನವನನ್ನು ಕ್ಷಮಿಸಿ ಬಿಡಿಸಿದನು. ಕ್ಷಮಾಶೀಲನಾದ ಪುರುಷನೇ ಶ್ರೇಷ್ಠನಾಗಿರುವನು.

ತುಂಬಿದ ಸಭೆಯಲ್ಲಿ ದುರುಳ ದುರ್ಯೋಧನನು ಭೀಮನನ್ನು ಪರಿಹಾಸ ಮಾಡಿದುದೇ ಭಾರತ ಯುದ್ಧಕ್ಕೆ ಮೂಲಹೇತುವಾಯಿತು. ಬೇಕೆಂದೇ ಕೆಣಕಿ ವೈರವನ್ನು ಉಂಟುಮಾಡಿಕೊಳ್ಳಬಾರದು.

ತನ್ನ ಪಿತೃಗಳನ್ನುದ್ಧರಿಸಲೆಂದು ಗಂಗಾದೇವಿಯನ್ನು ಭೂಮಿಗಿಳಿಸಿದ ಭಗೀರಥನು ಇತರರನ್ನೂ ಪವಿತ್ರರನ್ನಾಗಿ ಮಾಡಿದನು. ಸರ್ವಜನಹಿತ ಕರ ಕಾರ್ಯವನ್ನು ಮಾಡಬೇಕು.

ತಾರೆಯನ್ನು ಚಂದ್ರನಪಹರಿಸಲು ಸುರರೊಳಗೆ ಪರಸ್ಪರ ಸಮರಕ್ಕಾ ರಂಭವಾಯಿತು. ಸ್ತ್ರೀಯು ಕಲಹಕ್ಕೆ ಮೂಲಕಾರಣಳಾಗಿರುವಳು.

ಬ್ರಹ್ಮದತ್ತರಾಜನ ಅರಮನೆಯಲ್ಲಿದ್ದ 'ಪೂಜನೀಯಾ' ಎಂಬ ದಾಸಿಯು ರಾಜಕುಮಾರನನ್ನು ಅಂಧನನ್ನಾಗಿ ಮಾಡಿದಳು. ಮನೆಯಲ್ಲಿ ನೀಚರಿಗೆ ಎಡೆಕೊಡಬಾರದು.

ವಸಿಷ್ಠಮುನಿಯ ಕಾಮಧೇನುವನ್ನು ಬಲಾತ್ಕಾರದಿಂದ ಸೆಳೆದೊಯ್ಯ ಬೇಕೆಂಬ ವಿಶ್ವಾಮಿತ್ರನ ಪ್ರಯತ್ನವು ನಿಷ್ಫಲವಾಯಿತು. ದುರ್ಲಭವಾದ ವಿಷಯದಲ್ಲಿ ಹಟಮಾಡುವುದು ಯೋಗ್ಯವಲ್ಲ.

ಅರ್ಜುನನೊಡನೆ ವೈರವನ್ನುಕಟ್ಟಿಕೊಂಡ ಕಲಿಕರ್ಣನನ್ನುದುರ್ಯೋಧನನು ಮಿತ್ರನನ್ನಾಗಿ ಮಾಡಿಕೊಂಡನು. ತನ್ನ ಶತ್ರುವನ್ನು ವಿರೋಧಿಸುವವನೊಡನೆ ಮೈತ್ರಿಯನ್ನು ಬೆಳೆಸಿಕೊಳ್ಳಬೇಕು.

ಶತ್ರುಸಂಹಾರ ಕಾರ್ಯದಲ್ಲಿ ತನಗೆ ಸಹಾಯಕನಾದ ಕಾಕುತ್ಥನ ರಾಜನು ವಾಹನರಹಿತನಾಗಲು, ಇಂದ್ರನು ತನ್ನ ಮಹತ್ವವನ್ನು ಗಣಿಸದೆ ವೃಷಭರೂಪವನ್ನು ತಾಳಿ ಅವನನ್ನು ಹೊತ್ತುಕೊಂಡನು. ಕಾರ್ಯಾರ್ಥಿಯು ಮಾನಾವಮಾನಗಳನ್ನು ಲೆಕ್ಕಿಸಬಾರದು.

ಅಹಲ್ಯೆಯನ್ನು ಪ್ರೇಮಿಸಿದ ದೇವೇಂದ್ರನು ಕ್ರುದ್ಧನಾದ ಗೌತಮನ ಶಾಪದಿಂದ ದ್ವಿನೇತ್ರನಾಗಿದ್ದವನು ಸಹಸ್ರನೇತ್ರನಾದನು. ಸಜ್ಜನರ ಶಾಪ ವಾದರೂ ಉಪಕಾರವನ್ನೇ ಮಾಡುತ್ತದೆ.

ಯುದ್ಧಮಾಡಲು ಬಂದ ರಾವಣನಿಗೆ ಪುಷ್ಪಕವಿಮಾನವನ್ನು ಕಾಣಿಕೆ ಯಾಗಿ ಕೊಟ್ಟು, ಕುಬೇರನು ತನ್ನ ಅಲಕಾಪಟ್ಟಣವನ್ನು ರಕ್ಷಿಸಿಕೊಂಡನು. ಅಲ್ಪದಾನದಿಂದ ಸರ್ವಸ್ವವನ್ನು ಉಳಿಸಿಕೊಳ್ಳಲು ಪ್ರಯತ್ನಿಸಬೇಕು.

ಕೌರವರು ಮಗನಾದ ಅಭಿಮನ್ಯುವನ್ನು ಕೊಂದರೂ ಅರ್ಜುನನು ಆ ದುಃಖವನ್ನು ಸಹಿಸಿಕೊಂಡು ಕಲಿತನದಿಂದ ಕಾದಾಡಿದನು. ಮಿಂಚಿ ಹೋದುದಕ್ಕೆ ಚಿಂತಿಸಿ ಪ್ರಯೋಜನವಿಲ್ಲ!

ವ್ಯಾಸಮಹರ್ಷಿಯು ತಿಳುಹಿಸಿದ ತನ್ನ ಭೀಕರ ಭವಿಷ್ಯತ್ತನ್ನು ನಿತ್ಯವೂ ಸ್ಮರಿಸುತ್ತಾ ಜನಮೇಜಯನು ದುಃಖಿಸುತ್ತಿದ್ದನು. ನಾಳೆಯ ವಿಚಾರವನ್ನು ಇಂದು ಚಿಂತಿಸುವ ಅಗತ್ಯವಿಲ್ಲ.

ಸೂರ್ಯ-ಕುಂತಿಯರ ಪುತ್ರನಾದ ಕರ್ಣನು ದುರ್ಯೋಧನನ ಪಕ್ಷವನ್ನವಲಂಬಿಸಿದ್ದರಿಂದ ಲೋಕವು ಅವನನ್ನು ರಾಧೇಯನೆಂದೇ ತಿಳಿದುಕೊಂಡಿತು. ಮನುಷ್ಯನು ತನ್ನ ಜನನಾವಸ್ಥೆಯನ್ನು ತಿಳಿದುಕೊಂಡು ಕಾರ್ಯಪ್ರವೃತ್ತನಾಗಬೇಕು.

ಇತರ ರಾಣಿಯರಿಂದ ಸತ್ಯಭಾಮೆಯೇ ಶ್ರೀ ಕೃಷ್ಣನಿಗೆ ಪ್ರಿಯಳಾದವಳೆಂದು ತಿಳಿದ ನಾರದ ಮುನಿಯು ತಾನು ತಂದ ದಿವ್ಯ ಪುಷ್ಪವನ್ನು ಅವಳಿಗೆ ಕೊಟ್ಟನು. ಪ್ರಭುವಿನ ಚಿತ್ತಕ್ಕೆ ಹಿತವಾದ ಕಾರ್ಯವನ್ನು ಮಾಡಬೇಕಾದುದು ಭೃತ್ಯನ ಧರ್ಮ.

ಇತರ ಪತ್ನಿಯರನ್ನು ಬಿಟ್ಟು ರೋಹಿಣಿಯೊಡನೆ ವಿಹರಿಸುತ್ತಿದ್ದ ಚಂದ್ರನು ದಕ್ಷಶಾಪದಿಂದ ಕ್ಷಯರೋಗಿಯಾದನು. ಬಹುಪತ್ನಿಯರನ್ನು ಮಾಡಿಕೊಂಡವನು ಏಕರತನಾಗಬಾರದು.

ತಪಸ್ಸನ್ನಾಚರಿಸಿ ಪಾಪನಿರ್ಮುಕ್ತನಾದ ಮಾಂಡವ್ಯನೆಂಬವನನ್ನು ದಂಡಿಸಲು ತೊಡಗಿದ ಯಮನು ಹೀನಾವಸ್ಥೆಯನ್ನು ಹೊಂದಿದನು. ಶಿಕ್ಷೆಗೆ ಅನರ್ಹನಾದವನನ್ನು ಶಿಕ್ಷಿಸಬಾರದು.

ರಾತ್ರಿ ಗಾಢನಿದ್ರೆಯಲ್ಲಿದ್ದ ಸತ್ರಾಜಿತನನ್ನು ದೇವೇಂದ್ರನು ಸ್ಯಮಂತಕ ಮಣಿಗಾಗಿ ಕೊಂದನು. ಎಚ್ಚರತಪ್ಪಿದವನಂತೆ ನಿದ್ರೆಮಾಡಬಾರದು.

ತನ್ನ ಪುತ್ರರನ್ನು ನಾಶಮಾಡಿದ ವಿಶ್ವಾಮಿತ್ರನನ್ನು ತಪಸ್ಸಾಮರ್ಥ್ಯದಿಂದ ಕೊಲ್ಲಲು ಸಾಧ್ಯವಿದ್ದರೂ ವಸಿಷ್ಠನು ಸೇಡು ತೀರಿಸಲು ಬಯಸಲಿಲ್ಲ. ಕುಲಕ್ಕನುಗುಣವಾದ ಶೀಲವುಳ್ಳವನಾಗಬೇಕು.

ವಿದ್ಯಾದೇವಿಯನ್ನು ವರಿಸಲಿಚ್ಛಿಸಿದ ಕಚನು ಸುರಪಕ್ಷಪಾತಿಯಾಗಿದ್ದರೂ, ವಿನೀತನಾಗಿ ದೈತ್ಯಗುರುವಾದ ಶುಕ್ರಾಚಾರ್ಯನಿಂದ ಸಂಜೀವಿನೀ ವಿದ್ಯೆಯನ್ನು ಪಡೆದುಕೊಂಡನು. ವಿನಯದಿಂದ ಸ್ವಕಾರ್ಯವನ್ನು ಸಾಧಿಸಿಕೊಳ್ಳಬೇಕು.

"ನಾವಿಬ್ಬರೂ ಬಾಲ್ಯ ಸ್ನೇಹಿತರು" ಎಂದು ದ್ರೋಣನು ದ್ರುಪದ ನೊಡನೆ ಹೇಳಲು—"ರಥಿಕರಿಗೆ ಪಾದಚಾರಿಗಳೊಡನೆ ಸ್ನೇಹವಿರುವುದಿಲ್ಲ!" ಎಂದವನು ತಿರಸ್ಕರಿಸಿಬಿಟ್ಟನು. ರಾಜನನ್ನು ಮಿತ್ರನೆಂದು ತಿಳಿದುಕೊಳ್ಳು ವುದು ಮೂರ್ಖತನ.

ಯದುವಂಶೀಯರು ರಾಜರಾಗಬಾರದೆಂಬ ಯಯಾತಿಯ ಶಾಪ ವನ್ನು ಪರಿಹರಿಸಲು ಸಮರ್ಥನಾಗಿದ್ದರೂ ಶ್ರೀಕೃಷ್ಣನು ಕಂಸನನ್ನು ವಧಿಸಿದ ನಂತರ ಆ ಸಿಂಹಾಸನವನ್ನೇರಲಿಲ್ಲ. ಪುರಾತನ ಸಂಪ್ರದಾಯವನ್ನು ಮೀರ ಬಾರದು.

ಅಸೌಖ್ಯದಿಂದಾಗಿ ರಣದಿಂದ ವಿಮುಖನಾದ ಪ್ರದ್ಯುಮ್ನನು ಶ್ರೀ ಕೃಷ್ಣನಿಂದ ಧಿಕ್ಕಾರವನ್ನು ಹೊಂದಿದುದಲ್ಲದೆ ಅತ್ಯಂತ ಅವಮಾನಿತನಾದನು. ಎಷ್ಟು ಕಷ್ಟಬಂದರೂ ಧೀರನಾದವನು ಸಮರವಿಮುಖನಾಗಬಾರದು.

ತನ್ನ ಕರ್ತವ್ಯದಲ್ಲಿರಿಸಿದ್ದ ಶರಕರ್ತೃವಿನ ಏಕಾಗ್ರತೆಯನ್ನು ಹೊಗಳಿ ದತ್ತಾತ್ರೇಯನು ಅವನಿಗೆ ಆತ್ಮಯೋಗವನ್ನು ಉಪದೇಶಿಸಿದನು. ನೀಚ ನಲ್ಲಿದ್ದ ಸದ್ಗುಣವು ಪ್ರಶಂಸನೀಯವೇ ಆಗಿದೆ.

ಶ್ರೀಕೃಷ್ಣನಿಗರಿಯದಂತೆ ಗೋವುಗಳನ್ನಪಹರಿಸಿದ ಬ್ರಹ್ಮನು ತಾನೇ ವಂಚಿಸಲ್ಪಟ್ಟನು. ಮಾಯಾವಿಗಳಲ್ಲಿ ಮಾಯಾವಿದ್ಯೆಯನ್ನು ಪ್ರಯೋಗಿಸ ಬಾರದು.

ಬೇಟೆಯಲ್ಲಿಯೇ ಆಸಕ್ತನಾಗಿದ್ದ ಪ್ರಸೇನನು ಏಕಾಕಿಯಾಗಿ ಅರಣ್ಯ ದಲ್ಲಿ ತಿರುಗಾಡುತ್ತಿರಲು, ಸಿಂಹದಿಂದ ಕೊಲ್ಲಲ್ಪಟ್ಟನು. ಒಬ್ಬನೇ ಕಾಡಿನಲ್ಲಿ ತಿರುಗಾಡಬಾರದು.

ಶಿವಲಿಂಗದ ಶಿರಸ್ಸನ್ನು ನೋಡಲು ಸಾಧ್ಯವಾಗದಿದ್ದರೂ "ಬ್ರಹ್ಮನು ನೋಡಿರುವನೆ"ಂದು ಸಾಕ್ಷಿಹೇಳಿದ ಕಾಮಧೇನು ಶಾಪವನ್ನು ಪಡೆಯಿತು. ಸುಳ್ಳುಸಾಕ್ಷಿಯನ್ನು ಹೇಳಬಾರದು.

ಅರ್ಜುನನು ಮಗನಾದ ಬಭ್ರುವಾಹನನಿಂದ ಯುದ್ಧದಲ್ಲಿ ಸೋಲಿಸ ಲ್ಪಟ್ಟರೂ ಸಂತುಷ್ಟನಾದನಲ್ಲದೆ ನಾಚಿಕೆಪಡಲಿಲ್ಲ. ತಂದೆಯು ಮಗನಿಂದ ಪರಾಜಯವನ್ನೇ ಬಯಸಬೇಕು.

ಕುರುಕ್ಷೇತ್ರ ಯುದ್ಧದಿಂದಾಗಿ ದುಃಖಗೊಂಡ ಕುಂತಿಯು, ಎಷ್ಟೋ ಸಮಯದಿಂದ ಹಾರೈಸುತ್ತಿದ್ದ ಶ್ರೀಕೃಷ್ಣನ ಅಕಸ್ಮಾತ್ ಸಂದರ್ಶನವಾದಾಗ ತನ್ನ ಮನಸ್ಸಿನ ವ್ಯಸನಗಳನ್ನೆಲ್ಲವನ್ನೂ ಅವನಲ್ಲಿ ಹೇಳಿಕೊಂಡಳು. ಮನಸ್ಸಿನ ದುಃಖವನ್ನು ಮಿತ್ರನಲ್ಲಿ ನಿವೇದಿಸಿಕೊಳ್ಳಬೇಕು.

ದುಶ್ಶಾಸನನಿಂದ ಹಿಡಿಯಲ್ಪಟ್ಟ ದ್ರೌಪದಿಯೂ, ಮೊಸಳೆಯಿಂದ ಸೆಳೆಯಲ್ಪಟ್ಟ ಗಜೇಂದ್ರನೂ, "ಕೃಷ್ಣ! ಕಾಪಾಡು!" ಎಂದು ಮೊರೆಯಿಡಲು ಅವನು ಅವರಿಬ್ಬರನ್ನೂ ಉದ್ಧರಿಸಿದನು. ಭೀತನಾದವನಿಗೆ ಪರಮಾತ್ಮನೇ ಶರಣನಾಗಿರುವನು.

ಅದೃಷ್ಟವಶದಿಂದ ವನದಲ್ಲಿ ಕಾಣಸಿಕ್ಕಿದ ಶುಕ್ರಸುತೆಯನ್ನು ಯಯಾತಿಯು, ತಾನು ಅಸವರ್ಣನಾಗಿದ್ದರೂ ಅಧೀರನಾಗದೆ, ಮದುವೆಯಾದನು. ದೈವವೇ ಒದಗಿಸಿಕೊಟ್ಟ ವಿಷಯದಲ್ಲಿ ಪ್ರವರ್ತಿಸಿದರೆ ಹಾನಿಯಿಲ್ಲ.

ಮಾತೆಯ ಗರ್ಭದಲ್ಲಿರುವಾಗಲೇ ನಾರದನಿಂದ ಹಿತೋಪದೇಶವನ್ನು ಪಡೆದ ಪ್ರಹ್ಲಾದನು ಶ್ರೇಷ್ಠ ತತ್ವಜ್ಞಾನಿಯಾದನು. ಯಾವಾಗಲೂ ಹಿತೋಕ್ತಿಯನ್ನು ಕೇಳುತ್ತಿರಬೇಕು.



# ಕ್ಷೇಮೇಂದ್ರನ ಚಾರುಚರ್ಯೆ

## (ಒಳ್ಳೆಯ ನಡತೆಗಳು)

ಗುಮಾನಿ ಕವಿಯಂತೆ ಕ್ಷೇಮೇಂದ್ರನೆಂಬ ಕವಿಯು ಉಪದೇಶಶತಕವನ್ನು "ಚಾರುಚರ್ಯಾ" ಎಂಬ ಹೆಸರಿನಿಂದ ಬರೆದಿರುವನು. ಗುಮಾನಿ ಕವಿಯು ದೃಷ್ಟಾಂತವನ್ನು ಮೊದಲು ಕೊಟ್ಟು ನೀತಿಯನ್ನು ಆ ಮೇಲೆ ಹೇಳಿದ್ದಾರೆ, ಕ್ಷೇಮೇಂದ್ರನು ನೀತಿಯ ಮಾತನ್ನು ಮೊದಲು ಹೇಳಿ ಆ ಮೇಲೆ ಉಚಿತೋದಾಹರಣೆಯಿಂದ ಅದನ್ನು ಸಮರ್ಥಿಸಿರುವನು. ವಾಚಕರ ಅವಗಾಹನೆಗಾಗಿ ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಡಲಾಗಿದೆ:

ಸ್ವರ್ಗಾಪವರ್ಗಗಳಿಗೆ ಕಾರಣನೂ ಸತ್ಯಭಾಮಾಪ್ರಿಯನೂ ತ್ರಿಲೋಕಪೂಜ್ಯನೂ ಆದ ಶ್ರೀಕಾಂತನು ಸದಾಚಾರದಂತೆ ಜಯಹೊಂದಲಿ.

ಪ್ರತಿಯೊಬ್ಬನೂ ಆಲಸ್ಯರಹಿತನಾಗಿ ಬ್ರಾಹ್ಮೀ ಮುಹೂರ್ತದಲ್ಲಿ ಎದ್ದೇಳಬೇಕು. ಪ್ರಾತಃಕಾಲದಲ್ಲಿ ಅರಳಿದ ಕಮಲವು ಅಲೌಕಿಕ ಕಾಂತಿ ಸುಗಂಧಗಳಿಂದ ಕೂಡಿ ಸನ್ಮಾನವನ್ನು ಪಡೆಯುತ್ತದೆ.

ಬೆಳಗ್ಗೆ ಎದ್ದಕೂಡಲೇ ಪವಿತ್ರ ಜಲದಲ್ಲಿ ಸ್ನಾನಮಾಡಿ ಶರೀರವನ್ನು ನಿರ್ಮಲವಾಗಿರಿಸಿಕೊಳ್ಳಬೇಕು. ವೃತ್ರಾಸುರನ ವಧದಿಂದುಂಟಾದ ಪಾಪವನ್ನು ಪರಿಶುದ್ಧ ತೀರ್ಥದಲ್ಲಿ ಸ್ನಾನಮಾಡಿ ದೇವೇಂದ್ರನು ಪರಿಹರಿಸಿಕೊಂಡನು.

ಪರಮಾತ್ಮನನ್ನು ಪ್ರಾರ್ಥಿಸದೆ ಯಾವ ಕೆಲಸವನ್ನೂ ಮಾಡಬಾರದು. ಪರಮೇಶ್ವರ ಪೂಜೆಯುಲ್ಲಾಸಕ್ತನಾಗಿದ್ದ ಶ್ವೇತನೆಂಬ ಮುನಿಯು ಪ್ರಾಣವನ್ನು ಸೆಳೆದೊಯ್ಯಲು ಯಮನು ಸಮರ್ಥನಾಗಲಿಲ್ಲ

ಕೈಕಾಲುಗಳನ್ನು ಸರಿಯಾಗಿ ತೊಳೆದು ಮನೆಯೊಳಗೆ ಪ್ರವೇಶಿಸಿ ನಿತ್ಯಕರ್ಮಗಳನ್ನು ಮಾಡಲು ತೊಡಗಬೇಕು. ಪಾದಶೌಚವಿಹೀನನಾದ ನಳಚಕ್ರವರ್ತಿಯು ಶನಿಹಿಡಿದವನಾಗಿ ಕಷ್ಟವನ್ನನುಭವಿಸಿದನು.

ರಾತ್ರಿಯ ಹೊತ್ತಿನಲ್ಲಿ ಸಂಚರಿಸುತ್ತಿರಬಾರದು. ಮಾಂಡವ್ಯನೆಂಬ ತಪಸ್ವಿಯೊಬ್ಬನು ಕಾರಣಾಂತರದಿಂದ ರಾತ್ರಿ ತಿರುಗಾಡುತ್ತಿರಲು ಚೋರನೆಂಬ ಶಂಕೆಯಿಂದ ರಾಜಭಟರಿಂದ ಬಂಧಿತನಾಗಿ ಶೂಲಕ್ಕೆ ಹಾಕಿಸಲ್ಪಟ್ಟನು.

ಪರಸ್ತ್ರೀಯನ್ನಾಶಿಸಬಾರದು. ಸ್ತ್ರೀಯರಲ್ಲಿ ಹೆಚ್ಚು ವಿಶ್ವಾಸವನ್ನಿಡಬಾರದು. ಸೀತಾಪಹಾರ ಮಾಡಿದ ರಾವಣನು ಹತನಾದನು. ಪತ್ನಿಯರಲ್ಲಿ ಅತಿ ಪ್ರೀತಿಯನ್ನು ತೋರಿಸುತ್ತಿದ್ದ ವಿದೂರಥನೆಂಬ ಯಾದವ ಅರಸನು ರಾಣಿಯರಲ್ಲೊಬ್ಬಳಿಂದ ಕೊಲ್ಲಲ್ಪಟ್ಟನು.

ಮದ್ಯವನ್ನೆಂದಿಗೂ ಪಾನಮಾಡಬಾರದು. ಮತ್ತರಾದ ಯಾದವರು ಬುದ್ಧಿಭ್ರಷ್ಟರಾಗಿ ಪರಸ್ಪರ ಯುದ್ಧಮಾಡುತ್ತಾ ನಾಶಹೊಂದಿದರು.

ಎಷ್ಟು ಕಷ್ಟಬಂದರೂ ಧರ್ಮಮಾರ್ಗವನ್ನು ಬಿಡಬಾರದು. ಹರಿಶ್ಚಂದ್ರನು ಧರ್ಮರಕ್ಷಣೆಗಾಗಿ ಚಂಡಾಲನ ದಾಸ್ಯವನ್ನು ಸಹಿಸಿಕೊಂಡನು.

ಸ್ವಕಾರ್ಯ ಸಿದ್ಧಿಯ ಉದ್ದೇಶದಿಂದ ಸತ್ಯವನ್ನು ಬಿಡಬಾರದು. ಒನ್ಮೆ ಅಸತ್ಯವನ್ನಾಡಿದ್ದರಿಂದ ಯುಧಿಷ್ಠಿರನು ನರಕಕ್ಲೇಶವನ್ನು ನೋಡ ಬೇಕಾಯಿತು.

ಸಜ್ಜನ ಸಂಗವನ್ನು ಮಾಡಬೇಕಲ್ಲದೆ ಗುಣಹೀನರಾದ ದುರ್ಜನರ ಸಹವಾಸವನ್ನು ಮಾಡಬಾರದು. ರಾಘವನ ಸಂಗವನ್ನು ಮಾಡಿದ ವಿಭೀಷ ಣನು ಲಂಕಾಧಿಪತ್ಯವನ್ನು ಪಡೆದನು.

ತಂದೆತಾಯಿಗಳನ್ನು ಭಕ್ತಿಯಿಂದ ಸೇವಿಸಿ ಸಂತೋಷಪಡಿಸಬೇಕು. ಅವರು ಕೋಪಗೊಳ್ಳುವಂತೆ ಮಾಡಬಾರದು. ಮಾತೃಶಾಪಹೊಂದಿದ ನಾಗಗಳು ಜನಮೇಜಯನ ಸರ್ಪಯಾಗದಲ್ಲಿ ನಾಶಹೊಂದಿದುವು. ತನ್ನ ಯೌವನವನ್ನು ಕೊಟ್ಟು ತಂದೆಯ ಮುದಿತನವನ್ನು ಪಡಕೊಂಡ ಪುರುವು ಸಂತುಷ್ಟನಾದ ಯಯಾತಿಯಿಂದ ಚಕ್ರವರ್ತಿಯಾಗಿ ಮಾಡ ಲ್ಪಟ್ಟನು.

ಪ್ರತ್ಯುಪಕಾರದ ಅಭಿಲಾಷೆಯಿಂದ ದಾನಮಾಡಿದರೆ ಪ್ರಯೋಜನವು ಸಿಗಲಾರದು. ಶತ್ರುಗಳನ್ನು ನಾಶಮಾಡುವ ಶಕ್ತಿಯನ್ನು ದಯಪಾಲಿ ಸೆಂದು ಪ್ರಾರ್ಥಿಸುತ್ತಾ ತನ್ನ ಕರ್ಣಕುಂಡಲಗಳನ್ನು ದೇವೇಂದ್ರನಿಗೊಪ್ಪಿಸಿದ ಕರ್ಣನ ದಾನವು ಸಾರ್ಥಕವಾಗಲಿಲ್ಲ.

ಮನುಷ್ಯನು ಕರುಣಾಮೂರ್ತಿಯೂ ಶರಣಾಗತರಕ್ಷಕನೂ ಆಗಿರ ಬೇಕು. ಕಪೋತದ ರಕ್ಷಣೆಗಾಗಿ ತನ್ನ ದೇಹದ ಮಾಂಸವನ್ನು ಹದ್ದಿ ಗೊಪ್ಪಿಸಿದ ಶಿಬಿಚಕ್ರವರ್ತಿಯು ಮುಕ್ತಿಯನ್ನು ಪಡೆದನು.

ಸ್ತ್ರೀಯರ ಅನುರಾಗ ಮೋಹಗಳಿಂದ ಜಿತನಾದವನು ನಾಶಹೊಂದು ತ್ತಾನೆ. ಪತ್ನೀನಿರ್ಜಿತನಾದ ದಶರಥನು ಪುತ್ರಶೋಕದಿಂದಾಗಿ ಸ್ವರ್ಗಸ್ಥ ನಾದನು.

ಪುರುಷೋಕ್ತಿಗಳು, ತೀಕ್ಷ್ಣ ಬಾಣಪ್ರಹಾರಗಳಿಂದಲೂ ಹೆಚ್ಚು ವೇದನೆ ಯನ್ನುಂಟುಮಾಡುವುದರಿಂದ ಅವುಗಳನ್ನಾಡಬಾರದು. ಕೌರವರ ಕರ್ಕಶ ವಚನಗಳಿಂದ ಕೋಪಿತನಾದ ಭೀಮಸೇನನು ಕುರುಕುಲವನ್ನು ಧ್ವಂಸಮಾಡಿದನು.

ತನ್ನ ಯಜಮಾನನಿಗೆ ಪ್ರಿಯವಾಗಿದ್ದರೂ ಪರರಿಗೆ ಕಷ್ಟವನ್ನುಂಟು ಮಾಡುವ ಚಾಡಿ ಮಾತುಗಳನ್ನು ಹೇಳಬಾರದು. ಚಾಡಿಹೇಳಿದ ಕಾರಣ ದಿಂದ ಸೂರ್ಯಚಂದ್ರರು ಆಗಾಗ್ಗೆ ರಾಹುಗ್ರಹಣ ಕಷ್ಟವನ್ನು ಅನುಭವಿಸು ತ್ತಿರುವರು.

ಬಂಧುಗಳನ್ನು ದೂಷಿಸುವುದೂ, ತ್ಯಜಿಸುವುದೂ ಯೋಗ್ಯವಲ್ಲ. ಈಶ್ವರನನ್ನು ಅವಮಾನಿಸಿದ್ದರಿಂದ ದಕ್ಷನು ನಾಶಹೊಂದಿದನು.

ಮಹಾತ್ಮರನ್ನು ಸ್ತುತಿಮಾಡುವುದು ಉನ್ನತಿಗೆ ಕಾರಣವಾಗಿದೆ. ಶ್ರೀರಾಮನ ಭಜನೆಯನ್ನು ಮಾಡಿದ ಹನುಮಂತನು ಸರ್ವಕಾರ್ಯ ಸಮರ್ಥನಾದನು.

ಲೋಭಿಗಳೂ ಕ್ರೂರರೂ ವಕ್ರಸ್ವಭಾವದವರೂ ಆದ ಜನರನ್ನು ಹತ್ತಿರ ಸೇರಿಸಿಕೊಳ್ಳಬಾರದು. ಪ್ರೀತಿಯಿಂದ ಸತ್ಕಾರಮಾಡಿದ ವಸಿಷ್ಠನ ಧೇನುವನ್ನು ವಿಶ್ವಾಮಿತ್ರನು ಅಪಹರಿಸಲು ಪ್ರಯತ್ನಿಸಿದನು.

ದುಃಖದ ಸಂದರ್ಭದಲ್ಲಿ ಕುಗ್ಗದೆ ಧೈರ್ಯತಾಳಬೇಕು. ಅಶ್ವತ್ಥಾ ಮನು ಹತನಾದನೆಂಬ ಮಾತನ್ನು ಕೇಳಿ ದುಃಖಪರವಶನಾದ ದ್ರೋಣನು ಪ್ರಾಣವನ್ನು ಕಳೆದುಕೊಂಡನು.



## "ಒಂದಾಣೆ ಮಾಲೆ"ಯಲ್ಲಿ, ಈ ವರೆಗೆ-

— ಕಳೆದ ಒಂಭತ್ತು ತಿಂಗಳುಗಳಲ್ಲಿ —

- ಏಳು ಏಕಾಂಕ ಪ್ರಹಸನಗಳು
- ಹದಿನಾಲ್ಕು ಕಥಾಸಂಗ್ರಹಗಳು
- ಎರಡು ನಗರಗಳವಾಹಿತಿಯಪುಸ್ತಕಗಳು
- ಒಂದು ಅರ್ಥಕೋಶ
- ಒಂದು ಔಷಧ ಕೈಪಿಡಿ
- ಒಂದು ಯಕ್ಷಗಾನ ಪ್ರಬಂಧ
- ಎರಡು ನೀತಿಪರ ಪುಸ್ತಕಗಳು
- ಮೂರು ಸ್ಥಳಚರಿತ್ರಗಳು
- ಎರಡು ಒಗಟುಗಳ ಸಂಗ್ರಹಗಳು
- ಒಂದು ಮಹೋತ್ಸವ ವಿವರ
- ಎರಡು ನಗು-ಚುಟಕಗಳು

— ಇಷ್ಟು ಬಗೆಯ ಪುಸ್ತಕಗಳು ಪ್ರಕಟವಾಗಿವೆ. ಇನ್ನೂ ಪ್ರತಿ ಶನಿವಾರ ಒಂದೊಂದು ಹೊಸ ಪುಸ್ತಕ ಪ್ರಕಟವಾಗುತ್ತಿದೆ.

---

ಈ ವರೆಗೆ ಮೂವತ್ತಾರು ಪುಸ್ತಕಗಳಲ್ಲಿ, ಮೂವತ್ತಾರು ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ 808 ಪುಟಗಳನ್ನು ಕೊಟ್ಟಿರುತ್ತದೆ.

---

ಚಂದಾದಾರರಾಗಲು, ಅಥವಾ ಏಜನ್ಸಿ ಪಡೆಯಲು, ಇಲ್ಲವೇ ಜಾಹೀರಾತು ಕೊಡಲು, — ಈ ವಿಳಾಸಕ್ಕೆ ಬರೆಯಿರಿ:

**ಒಂದಾಣೆಮಾಲೆ, ಪ್ರಭಾತ ಆಫೀಸು, ರಥಬೀದಿ, ಮಂಗಳೂರು—1.**

Edited, Printed and Published by K. V. Shenoy
at The Prabhat Printers, Ltd., Mangalore-1.

39

# ಸತೀ ಸಾವಿತ್ರಿ

(ಏಕಾಂಕ ನಾಟಕ)

ನಾಟಕ ರಚಯಿತರು:

ಪಿ. ವೆಂಕಟರಮಣ ಭಟ್ಟ,

ಪೆರಡಾಲ.

1955.

ಒಂದಾಣೆ




ಮಾಲೆ

# ಒಂದಾಣೆ ಮಾಲೆಯಲ್ಲಿ ಈ ವರೆಗೆ ಪ್ರಕಟವಾದ ಪುಸ್ತಕಗಳ

೧. *ಕೆಪ್ಪಟರಾಯ (ವಿನೋದ ಕಥೆ)
೨. *ನಾರೀಶ್ವರರು (ಏಕಾಂಕ ಪ್ರಹಸನ)
೩. *ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು.
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ)
೫. *ಅದ್ಭುತತ್ಯಾಗ ಮತ್ತು ಇತರ ಕಥೆಗಳು
೬. ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ)
೭. *'ಬೀಡಿ ಸೇದಬೇಡಿ' ಮತ್ತು 'ಆ ಮಗು' (ವಿನೋದ ಕಥೆಗಳು)
೮. ಇಂಗ್ಲಿಷ್–ಕನ್ನಡ ಅರ್ಥಕೋಶ
೯. *ಲಂಚಕ್ಕೆ ಸಂಚಕಾರ
೧೦. ಟಿಪ್ಪೂ ಔಷಧಿಗಳ ಕೈಪಿಡಿ.
೧೧. ಶ್ರೀಕ್ಷೇತ್ರ ಧರ್ಮಸ್ಥಳ (ದ್ವಿ. ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು
೧೪. ವೆಂಕಟನ ಸಂಕಟ (ಏಕಾಂಕ ಪ್ರಹಸನ)
೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ)
೧೬. ವೇಣೂರಿನ ಗತವೈಭವ.
೧೭. ಒಗಟುಗಳು
೧೮. ಜಗಳಗಂಟಿ ಮತ್ತು ಇತರ ಕಥೆಗಳು
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಪ್ಪು
೨೧. ಭಾರತದ ಮಹಾನಗರಗಳು (ಭಾಗ
೨೨. ತಿರುಕ್ಕುರಲ್
೨೩. ಸೂರ್ಯನ ಸಂಸಾರ ಮತ್ತು ಇತರ ಕಥೆಗಳ
೨೪. ಭಾರತದ ಮಹಾನಗರಗಳು (ಭಾಗ
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳ
೨೬. ಮಾರಾವತಾರ (ಏಕಪಾತ್ರ ಯಕ್ಷಗಾನ ಪ್ರಬಂಧ
೨೭. ಹಾಸವಿಲಾಸ (ನಗೆಹನಿಗಳು)
೨೮. ಸತ್ಯವಂತ ಬಾಬಿ (ಏಕಾಂಕ ಪ್ರಹಸನ
೨೯. ಜಾಣ್ಮೆಯ ಒಗಟುಗಳು
೩೦. ಜಾತಕ ಕಥೆಗಳು
೩೧. ಕಾರ್ಕಳದ ಚರಿತ್ರೆ
೩೨. ಮರ್ಜಿ (ಏಕಾಂಕ ಪ್ರಹಸನ)
೩೩. ದರ್ಶನದ ಕಥೆಗಳು
೩೪. ಅಳುವಿನ ಹೊಳೆ ಮತ್ತು ಕೇಶವಭೂಪ (ಮಕ್ಕಳ ಕಥೆಗಳ
೩೫. ಶರಾಬಿನ ಶೀಪಾಯಿಗಳು
೩೬. ಉಪದೇಶ ಶತಕ
೩೭. ನಿಮಗೆ ಗೊತ್ತಿದೆಯೇ?
೩೮. ಚತುರ ಚಮತ್ಕಾರ
೩೯. ಸತೀ ಸಾವಿತ್ರಿ

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಈ ವರೆಗೆ ಮೂವತ್ತೊಂಭತ್ತು ಪುಸ್ತಕಗಳಲ್ಲಿ, ಮೂವತ್ತೊಂಭತ್ತು ಆಣೆಗಳಿಗೆ, 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, 868 ಪುಟಗಳನ್ನು ಕೊಟ್ಟಿರುತ್ತದೆ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ, ಮಂಗಳೂರು-

# ಅರಿಕೆ

ಚೆಲುವ ಕನ್ನಡಮ್ಮನ ನಾಟಕ ರಂಗಮಂಟಪದಲ್ಲಿ ಚಿಕ್ಕ ಮಕ್ಕಳ ನಾಟಕಾಭಿನಯವು ಬಲು ಸೊಗಸು. ಆದರೆ ಮಕ್ಕಳಿಗೆ ಅಭಿನಯಿಸಲು ಅನುಕೂಲಿಸುವಂತಹ ಚೊಕ್ಕ ನಾಟಕಗಳ ಅಭಾವವಿಂದು ಬಹಳವಿದೆ.

ಆತ್ಮಧೈರ್ಯ, ಸಚ್ಚಾರಿತ್ರ್ಯಗಳಿಂದ ಮಾಂಗಲ್ಯವನ್ನು ಕಾಯ್ದುಕೊಂಡ ದಿಟ್ಟತನದ ಮಹಾಸತಿ— ಸಾವಿತ್ರಿ.

'ಸತೀ ಸಾವಿತ್ರಿ'ಯನ್ನು ಪೌರಾಣಿಕ ಕಥೆಗೇನೂ ಕುಂದಾಗದಂತೆ, ಕಡಮೆ ಸಮಯದಲ್ಲಿ ಅಭಿನಯಿಸಲು ಆಗುವಂತೆ ರಚಿಸಿದ್ದೇನೆ. ಈ ನಾಟಕವನ್ನು ಓದಿ ಬೆನ್ನುತಟ್ಟಿ ಪ್ರೋತ್ಸಾಹಿಸಿದ ಶ್ರೀ। ವಿದ್ವಾನ್ ಎಸ್. ತಿರುಮಲೇಶ್ವರ ಭಟ್ಟರಿಗೂ, ನನ್ನ ಗೆಳೆಯರೆಲ್ಲರಿಗೂ ಹಾರ್ದಿಕ ವಂದನೆಗಳು. ಮಕ್ಕಳ ಸಾಹಿತ್ಯಾಭಿವೃದ್ಧಿಯನ್ನು ಬಯಸುವವರ ಬೆಂಬಲವನ್ನು ಕೋರುವೆನು.

ಇತಿ,

ಪಿ. ವೆಂಕಟರಮಣ ಭಟ್ಟ.

# ಸತೀ ಸಾವಿತ್ರಿ

## ಪಾತ್ರಗಳು

೧. ಸತ್ಯವಾನ.
೨. ಸಾವಿತ್ರಿ.
೩. ಅಶ್ವಪತಿ.
೪. ನಾರದ.
೫. ಯಮ.
೬. ಗುರು.
೭. ಅರುಣಕುಮಾರ.
೮. ಸ್ವರ್ಣಲತಾ.
೯. ರಾಮಣ್ಣ.
೧೦. ಕೃಷ್ಣಯ್ಯ.

## ದೃಶ್ಯ ೧.

(ಅಶ್ವಪತಿಯ ರಾಜಭವನ. ಅರಸನು ಬೇಸರದಲ್ಲಿರುವನು.)

॥ ಆಕಾಶ ತಾರೆ ಬಾರೇ ॥ ಎಂಬಂತೆ.

ಅಶ್ವಪತಿ: ಶ್ರೀ ಗೌರಿ ಬಾರೋ ಬಾರೋ
ನೀನೆನಗೆ ದಾರಿ ತೋರೋ ॥ ಪಲ್ಲ ॥
ಶ್ರೀ ಗುರುವು ಎಂದ ಮಾತೂ
ಶ್ರೀ ದೇವಿ ಪೊರೆವಳೆಂದೂ
ನಂಬಿಹೆನು ನಿನ್ನನಿಂದೂ
ಬೆಂಬಿಡದೆ ಕಾಯೊ ಎಂದೂ ॥ ೧ ॥

ದೇವಿ, ಸಾವಿತ್ರಿ ನಿನ್ನ ಕೃಪೆಯಿಂದ ಮಕ್ಕಳಿಲ್ಲವೆಂಬ ದುಃಖವೇನೋ ದೂರವಾಯಿತು. ಆದರೆ ಅರಳಿದ ಮಲ್ಲಿಗೆಯಂತೆ ಮಂದಹಾಸದಿಂದ ಕೂಡಿದ ತುಂಬು ಯೌವನದ ಕನ್ಯೆ ಸಾವಿತ್ರಿಯನ್ನು ನೋಡುವಾಗ ಪಿತನಾದ ನನ್ನ ಕರ್ತವ್ಯಲೋಪಕ್ಕಾಗಿ ಮರುಕವಾಗುವುದು. ಆಕೆಗೆ, ನನ್ನ ಮುದ್ದಿನ ಕುವರಿ ಸಾವಿತ್ರಿಗೆ ಅನುರೂಪನಾದ ವರನನ್ನು ಇನ್ನೆಲ್ಲಿ ಹುಡುಕಲಿ! ಅಂತೂ ಕನ್ಯಾಪಿತೃತ್ವವು ಅತಿ ಕಷ್ಟಕರ.

ನಾರದ: (ಪ್ರವೇಶಿಸುತ್ತಾ)

ರಾಗ ॥ ಮಾಂಡ್ ॥ ತ್ರಿತಾಳ ॥

"ನೀಡು ಶುಭವ ದಯಮಾಡು ದೇವಾ ।
ಬೇಡುವೆನಾ ಶುಭ । ಮಂಗಲಕಾರ್ಯಕೆ ॥ ಪ. ॥

ಜಗಕೆ ಸುಬೋಧವ । ಮಾಳ್ಪನು ಜನರ ।
ಜಗದೀಶನೆ ಕೈ ಬಿಡುವುದುಚಿತವೆ" ॥ ೧ ॥

(ಅಶ್ವಪತಿಯೊಡನೆ) ಅಯ್ಯಾ, ಮದ್ರಾಧೀಶ್ವರ, ಏನು ಸಮಾಚಾರ?

ಅಶ್ವಪತಿ: (ಎದ್ದು ಕೈಮುಗಿದು) ದೇವರ್ಷಿಗಳಿಗೆ ನಮೋನಮಃ! ತಾವು ಬಂದುದು ಭಾಗ್ಯದೇವತೆಯೇ ಬಂದ ಹಾಗಾಯಿತು. ಆಸನಗ್ರಹಣ ಮಾಡುವ ದಯೆದೋರಬೇಕು.

ನಾರದ: (ಆಶೀರ್ವದಿಸಿ) ಮಂಗಳವಾಗಲಿ. ಅಶ್ವಪತಿ, ನಿನ್ನ ವಿಶ್ವಾಸಕ್ಕೆ ಮೆಚ್ಚಿದೆನು. ಅರಸನೇ, ನಿನ್ನ ಮುಖವೇಕೆ ಹೀಗೆ ಕಂದಿದೆ? ಶತ್ರುಗಳ ಬಾಧೆಯೇ? ಸೇವಕರ ಅವಿಧೇಯತೆಯೇ?

ಅಶ್ವಪತಿ: ಮಹಾತ್ಮರೇ, ಪರಮಾತ್ಮನ ದಯೆಯಿಂದಲೂ, ನಿಮ್ಮ ಕೃಪೆಯಿಂದಲೂ ಅವೊಂದೂ ಚಿಂತೆಗೆ ಕಾರಣವಲ್ಲ. ಬಳೆದು ನಿಂತ ಹೆಣ್ಣು ಮನೆಯಲ್ಲಿರಲು ತಂದೆಯಾದವನಿಗೆ ಚಿಂತೆಗೆ ಕಾರಣ ಬೇರೆ ಬೇಕೆ?

ನಾರದ: ನಿನ್ನ ಕನ್ಯೆಗೆ ವರನು ಸಿಗಲಿಲ್ಲವೇನು?

ಅಶ್ವಪತಿ: ಹೌದು. ಎಲ್ಲ ಅರಸುಮನೆಗಳಲ್ಲೂ ಅರಸಿದೆವು. ಯೋಗ್ಯ ವರನು ಎಲ್ಲೂ ದೊರಕಲಿಲ್ಲ.

ನಾರದ: ಅಶ್ವಪತಿ, ಅದಕ್ಕೇನಂತೆ; ನಿನ್ನ ಭಂಡಾರದಲ್ಲಿ ಹಣಕ್ಕೇನೂ ಕೊರತೆಯಿಲ್ಲ. ಸಾಮಂತರು ಸಾಕಷ್ಟಿದ್ದಾರೆ. ಸೇವಕರಂತೂ ವಿಧೇಯರು. ಹೀಗಿರಲು ಒಂದು ದೊಡ್ಡ ಸ್ವಯಂವರವನ್ನೆ ಏರ್ಪಡಿಸಿಬಿಡು. ಎಲ್ಲರೂ ಸಹಕರಿಸುವರು. ನಿನ್ನ ಗೌರವಕ್ಕೂ ಉಚಿತ.

ಅಶ್ವಪತಿ: ಮಹರ್ಷಿಗಳೇ, ಹಾಗೇನೇ ಸರಿ. ಸ್ವಯಂವರ ಪದ್ಧತಿಯಿಂದ ವಿವಾಹವೇರ್ಪಟ್ಟರೆ ಕುಲಕ್ಕೂ ಕೀರ್ತಿ! ವಧೂವರರಿಗೂ ಸಂತೋಷ. ಸಚಿವನೊಡನೆ ಏರ್ಪಾಡುಗಳಿಗೆ ಆಜ್ಞೆಮಾಡುತ್ತೇನೆ.

ತೆರೆ.

## ದೃಶ್ಯ ೨.

(ಬೀದಿ. ಬ್ರಾಹ್ಮಣರಿಬ್ಬರ ಪ್ರವೇಶ.)

ರಾಮಣ್ಣ: ಕೃಷ್ಣಯ್ಯನವರೇ, ಇಷ್ಟು ಬೆಳಗ್ಗೆ ಎಲ್ಲಿಗೆ ಹೊರಟಿರಿ?

ಕೃಷ್ಣಯ್ಯ: ನೀವು ಹೊರಟಲ್ಲಿಗೇನೇ; ಸ್ವಯಂವರಕ್ಕೆ, ಸ್ವಯಂವರಕ್ಕೆ.

ರಾಮಣ್ಣ: ಸ್ವಯಂವರ! ಹ್ಞಾಂ!! ಯಾರಿಗೆ? ನನಗೆ ಗೊತ್ತೇ ಇಲ್ಲ ವಲ್ಲಾ!!! ಅದರ ಹುಚ್ಚು ನಿಮಗೂ ಹಿಡಿಯಿತೇನೂ?

ಕೃಷ್ಣಯ್ಯ: ಹುಚ್ಚೋ ಪೆಚ್ಚೋ ರಾಮಣ್ಣನವರೇ, ಯಾರಿಗೆ ಏನೆಂದು ಕೊನೆಗೆ ನೋಡುವಿರಂತೆ. ಅಶ್ವಪತಿ ರಾಜನ ಮಗಳು ಸಾವಿತ್ರಿಯ ಸ್ವಯಂ ವರ. ಭಾಗ್ಯ ಇದ್ದವರನ್ನು ಬಯಸುತ್ತಾಳೆ. ಅದೃಷ್ಟವಿದ್ದರೆ ರಾಜಕುಮಾರಿ ಸಿಗುತ್ತಾಳೆ; ಜೊತೆಗೆ ರಾಜ್ಯವೂ ಬರುತ್ತದೆ. ಮತ್ತೆ ಭೋಜನವಂತೂ ಇದ್ದೇ ಇದೆ.

ರಾಮಣ್ಣ: ಓಹೋ! ಒಂದಲ್ಲ ಮೂರು ಲಾಭ ಏಕಕಾಲಕ್ಕೆ!! ಕೃಷ್ಣಯ್ಯ ಕೊನೆಯದು ಮಾತ್ರ ಧೈರ್ಯದ ಬದುಕು ಈ ಜನ್ಮದಾರ ವಿರುವಲ್ಲಿ ವರೆಗೆ. ರಾಜಕುಮಾರಿಯ ಆಸೆ ನನಗಿಲ್ಲ. ನಿನಗೂ ಬೇಡ. ಹೆಣ್ಣಾನೆಯ ಕೈಹಿಡಿವಾಸೆ ತೋಳನಿಗೇಕೆ? ನಡೆ ಹೋಗೋಣ.

(ಹೋಗುವರು.)

ತೆರೆ.

---

## ದೃಶ್ಯ ೩.

(ಅರಮನೆ)

ಅಶ್ವಪತಿ: ಅಯ್ಯೋ, ಸ್ವಯಂವರದ ಪ್ರಯತ್ನವೂ ಫಲಿಸದಾಯಿ ತಲ್ಲಾ! ಸಾವಿತ್ರಿಗೆ ಅಷ್ಟು ಮಂದಿಯಲ್ಲಿ ಯಾವ ರಾಜಕುಮಾರನೂ ಮೆಚ್ಚುಗೆ ಆಗಲಿಲ್ಲವಲ್ಲಾ! ಎಲ್ಲರಿಗೂ ನಿರಾಶೆ. ಅಸಂತುಷ್ಟಿ!! ಹುಣ್ಣಿನ ಮೇಲೆ ಬೊಕ್ಕೆ.

ಸಾವಿತ್ರಿ: (ಪ್ರವೇಶಿಸುತ್ತ)

ರಾಗ ॥ ನಾಲಕಂಸ ॥ ಝಂಪೆ ತಾಳ ॥

ಮಂಗಲವ ಕರುಣಿಸೆಲೆ ।
ಮಾಂಗಲ್ಯ ಮೂರುತಿಯೆ ॥ ಪಲ್ಲ ॥
ಶುಭಸಂಪದವ ನೀಯೊ ।
ಭಗವಂತ ಶಿವ ದೇವ ॥ ೧ ॥

ಮನವನ್ನು ಬೆಳಗಿಸೈ ।
ಮನಸಿಜಾರಿಯೆ ನೀನು ॥
ಬಾಳುವೆಯ ಬವಣೆಯನು ।
ಪರಿಹರಿಸೊ ಭವನೇ ॥ ೨ ॥

ನನ್ನ ಹಣೆಬರಹವೇ ಹಾಗಾದರೆ ಏನುಮಾಡಲಿ? ಅಪ್ಪಯ್ಯಾ ವೃಥಾ ದುಃಖವೇಕೆ? ಎಲ್ಲವೂ ವಿಧಿವಶ. ತಲೆಯಲ್ಲಿ ಬರೆದುದು ಎಲೆಯಲ್ಲಿ ಪೂಸಲು ಮಾಸುವುದೇ? ಎಲ್ಲಕ್ಕೂ ಅಪ್ಪಾ, ದೈವ ಬಲ ಬೇಕಲ್ಲವೆ?

ಅಶ್ವಪತಿ: ಧೈರ್ಯವಿದ್ದಲ್ಲಿ ಮಾತ್ರ ದೈವ ಬಲ. ನಾನಿನ್ನೂ ಅಧೀರನು. ಮಗಳೇ, ನಾನು ನಿನ್ನ ಅಪ್ಪನಲ್ಲ. ಮಾಡಬೇಕಾದ್ದನ್ನು ನೆರವೇರಿಸದ ಪಾಪಿ. ನೀನಿನ್ನೂ ಅವಿವಾಹಿತೆ.

ಸಾವಿತ್ರಿ: ಅದರಲ್ಲಿ ನಿಮ್ಮದೇನೂ ಕಾರ್ಯಲೋಪವಿಲ್ಲ ಅಪ್ಪಯ್ಯ. ಸ್ವಯಂವರದಲ್ಲಿ ಪತಿಯನ್ನು ಚುನಾಯಿಸುವ ಭಾರ ನನಗೆ ಬಿಟ್ಟಿದ್ದೀರಿ.

ಅಶ್ವಪತಿ: ಆದರೆ ಅದು ನಿಷ್ಪ್ರಯೋಜಕವಾಯಿತಲ್ಲ ಮಗಳೇ.

ಸಾವಿತ್ರಿ: ನನ್ನ ಮನೋವಲ್ಲಭನನ್ನು ಹುಡುಕುವ ಕಾರ್ಯವನ್ನು ನನಗೇನೇ ವಹಿಸಿರಿ. ಇಂದೇ ನಾನು, ಆಕ್ಷೇಪವಿಲ್ಲದಿದ್ದರೆ, ಹೊರಡುವೆನು. ಆಶೀರ್ವದಿಸಿರಿ ತಾತಾ. (ನಮಸ್ಕರಿಸುವಳು.)

ಅಶ್ವಪತಿ: ಆಗಲಿ. ಮಗಳೇ, ಗುರುಗಳ ಅಭಿಮತವೂ ಹಾಗಿದೆ. ನಿನ್ನೊಡನೆ ಚಿಕ್ಕ ಸೇನೆಯನ್ನೂ ಪರಿವಾರವನ್ನೂ ಕಳುಹಿಸುವೆ. ನಿನಗೆ ಮಂಗಳವಾಗಲಿ. (ಆಶೀರ್ವದಿಸುವನು)

ತೆರೆ.

---

## ದೃಶ್ಯ ೪.

[ಕಾಡು. ಸತ್ಯವಾನ ಮತ್ತು ಅರುಣ ಕುಮಾರ ದರ್ಭೆ ಕೊಯ್ಯುವರು.]

ಅರುಣ ಕುಮಾರ: ಅಣ್ಣಾ ಸತ್ಯ, ಹೀಗೆ ಬಾ. ಇದೋ ನೋಡು. ಇಲ್ಲಿ ನಿನ್ನ ಬುದ್ಧಿಯಂತೆ ಚೂಪಾದ ತುದಿಯ ದರ್ಭೆ ಹುಲ್ಲುಗಳು ವಿಪುಲವಾಗಿ ಬೆಳೆದಿವೆ.

ಸತ್ಯವಾನ: (ಸ್ವಲ್ಪ ಗರಿಕೆ ಹಿಡಕೊಂಡು ಪ್ರವೇಶಿಸಿ) ಅರುಣಾ, ನಾನು ಗರಿಕೆಯನ್ನೇ ಸಂಗ್ರಹಿಸುತ್ತೇನೆ. ನೀನು ದರ್ಭೆ ಹುಲ್ಲನ್ನು ಒಟ್ಟು ಮಾಡು.

ಅರುಣ: ಅಣ್ಣಾ, ಆ ಮರವನ್ನು ನೋಡು. ವನವಿದೂಷಕನಾದ ವಾನರನು ಕೊಂಬೆಯನ್ನು ಹಿಡಿದು ಹೇಗೆ ತಿರುಗುತ್ತಾನೆ. ಅವನಿಗೆ ಬೀಳುವ ಭಯವೇ ಇಲ್ಲವಲ್ಲ!

ಸತ್ಯವಾನ: ನಾವು ಮನಸ್ಸಿನಲ್ಲಿ ದೇವರನ್ನು ದೃಢವಾಗಿ ನಂಬಿ ಭಕ್ತಿಯಿಂದ ಕೆಲಸ ಮಾಡಿದರೆ ನಮಗೇನೂ ಭಯವಿಲ್ಲವೆಂದು ಅದು ಸೂಚಿಸುವುದು. ಅರುಣಾ, ಆ ದಾರಿಯಾಗಿ ಈ ಕಡೆಗೆ ತುಂಬಾ ಮಂದಿ ಬರುವಂತೆ ಭಾಸವಾಗುತ್ತದೆ. ಈ ಕಾಡಿನ ಗರ್ಭಕ್ಕೆ ಯಾರು ಬರುತ್ತಿರ ಬಹುದು?

ಅರುಣ: ಯಾರಾದರೂ ಕಳ್ಳರು ಬರುತ್ತಿದ್ದಾರೇನೂ?



ಸತ್ಯವಾನ: ಹಾಗಿರಲಾರದು. ನಮ್ಮ ಗುರುಗಳಿದ್ದಲ್ಲಿಗೆ ಬರುವ ಧೈರ್ಯ ಅವರಿಗೆಲ್ಲಿಂದ ಬರಬೇಕು? ಮಹರ್ಷಿಗಳಾಗಲಿ, ರಾಜರಾಗಲಿ, ಬೇಡರಾಗಲಿ ಬರುತ್ತಿರಬಹುದು.

ಅರುಣ: ದೊಡ್ಡ ಸೇನೆ. ಬಾ, ಆಶ್ರಮಕ್ಕಾದರೂ ಓಡಿ ಹೋಗೋಣ.

ಸತ್ಯವಾನ: ಬೇಡ ವಯಸ್ಯ, ಧೈರ್ಯ ತಂದುಕೊ. ನಮ್ಮ ಕೆಲಸ ದಲ್ಲಿ ನಿರತರಾಗಿದ್ದು ಅನ್ಯಾಯ ಅಧರ್ಮಗಳನ್ನು ಕನಸಿನಲ್ಲೂ ಕಾಣದ ನಾವು ಏಕೆ ಹೆದರಬೇಕು?

ಸತ್ಯವಾನ: (ಕಣ್ಣು ಮುಚ್ಚಿ ನಿಂತ ಅರುಣನ ಬೆನ್ನು ತಟ್ಟಿ) ಮಿತ್ರಾ ಈ ಕಡೆಗೆ ಓರ್ವ ಸ್ತ್ರೀ ತನ್ನ ಸಖಿಯೊಡನೆ ಬರುತ್ತಿದ್ದಾಳೆ. ಆಕೆ ಯಾರೆಂದು ಆಶ್ಚರ್ಯವಾಗುವುದು.

ಸಾವಿತ್ರಿ: (ಪ್ರವೇಶಿಸಿ) (ಸ್ವಗತ) ಬ್ರಹ್ಮ ತೇಜಸ್ಸಿನಿಂದ ಕೂಡಿದ ಇವರಿಗೆ ವಂದಿಸುವೆನು. (ಪ್ರಕಾಶ) ಮುನಿಕುಮಾರರೇ, ವಂದನೆಗಳು. (ನಮಸ್ಕರಿಸುವಳು.)

ಸತ್ಯವಾನ: ದೇವಿ, ಪ್ರತಿನಮಸ್ಕಾರವು. (ವಂದಿಸುವನು.)

ಸಾವಿತ್ರಿ: ಸ್ವಾಮಿ, ನಾನು ಆಶೀರ್ವಾದಕ್ಕೆ ಯೋಗ್ಯಳಲ್ಲವೇ?

ಸತ್ಯವಾನ: ಅರ್ಹಳಲ್ಲವೆಂದಲ್ಲ. ನೀನು ತಿಳಿದಂತೆ ನಾನು ಮುನಿಪುತ್ರನಲ್ಲ. ಕ್ಷತ್ರಿಯ. ಆದ್ದರಿಂದ ಆಶೀರ್ವದಿಸುವ ಯೋಗ್ಯತೆ ನನಗೆಲ್ಲಿ?

ಸಾವಿತ್ರಿ: (ಸಂತೋಷ ಆಶ್ಚರ್ಯಗಳೊಡನೆ) ಓಹೋ, ನೀವು ರಾಜಕುಮಾರರೇನು?

ಸತ್ಯವಾನ: ಹೌದು. ದೇವಿ, ನಿಮ್ಮ ಪರಿಚಯವಾಗಲಿಲ್ಲ.

ಸಾವಿತ್ರಿ: ಮದ್ರದೇಶಕ್ಕೆ ಅಶ್ವಪತಿಯುವರು ದೊರೆಗಳು. ನಾನು ಅವರ ಏಕಮಾತ್ರ ಪುತ್ರಿ ಸಾವಿತ್ರಿ. ಈಕೆ ನನ್ನ ಸಖಿ, ಸ್ವರ್ಣಲತಾ.

ಸತ್ಯವಾನ: ನಮ್ಮದೇನಾದರೂ ಸೇವೆ ಉಪಯೋಗವಾಗಬಹುದಾದರೆ ನಾವು ಧನ್ಯರು.

ಸಾವಿತ್ರಿ: (ಸ್ವಗತ) ಚಂದ್ರನಿಂದ ಅಮೃತವು ಹೊರಸೂಸುವುದರಲ್ಲಿ ಆಶ್ಚರ್ಯವಿಲ್ಲ. (ಪ್ರಕಾಶ) ತಮ್ಮಿಂದ ಮಹತ್ಕಾರ್ಯಗಳಾಗ ತಕ್ಕವಿವೆ. ತಮ್ಮ ವಾಸವೆಲ್ಲಿ?

ಸತ್ಯವಾನ: ಇಲ್ಲೇ ಸಮೀಪದಲ್ಲಿ ನಮ್ಮ ಗುರುಗಳ ಆಶ್ರಮವಿದೆ. ನಾವವರನ್ನು ತಾಯಿತಂದೆಯರೊಡನೆ ಸೇವಿಸುತ್ತಿದ್ದೇವೆ. ಅವಕಾಶವಿದ್ದರೆ ಆಗಮಿಸುವ ಕೃಪೆದೋರಬೇಕು.

ಸಾವಿತ್ರಿ: ತಮ್ಮ ತೃಪ್ತಿಯೇ ನನ್ನ ಇಷ್ಟ. (ಹೋಗುವರು.)

ತೆರೆ.

---

## ದೃಶ್ಯ ೫.

(ಆಶ್ರಮ. ಗುರುಗಳು ಹೂಗಿಡವನ್ನು ಹಿಡಕೊಂಡು)

ಗುರು: ಈ ಹೂಗಿಡವನ್ನು ಎಲ್ಲಿ ನೆಡಲಿ. ಯಾವ ಪಾತಿಯೂ ಅಪೂರ್ಣವಿಲ್ಲ.

(ಅರುಣ, ಸತ್ಯವಾನ, ಸಾವಿತ್ರಿ ಮತ್ತು ಸ್ವರ್ಣಲತಾರ ಪ್ರವೇಶ.)

ಸತ್ಯವಾನ: ಗುರುಗಳೇ, ಇವರು ಮದ್ರದೇಶದ ರಾಜಕುಮಾರಿ. ತಮ್ಮ ದರ್ಶನಾರ್ಥಿಗಳು.

ಸಾವಿತ್ರಿ: (ವಂದಿಸಿ) ಪೂಜ್ಯ ಪಾದರಿಗೆ ವಂದನೆಗಳು.

ಗುರು: (ಆಶೀರ್ವದಿಸುತ್ತಾ) ಮಗಳೇ, ಕಲ್ಯಾಣಮಸ್ತು.

ಆರುಣ: ಗುರುಗಳೇ, ಆ ಹೂಗಿಡಕ್ಕೆ ಬೇರೆ ಪಾತಿ ತಯಾರಿಸಿ ನಾನು ನೆಡುತ್ತೇನೆ. ದಯಪಾಲಿಸಿರಿ. (ಕೈಯೊಡ್ಡುವನು)

(ಗುರುಗಳು ಕೊಡುವರು. ಆರುಣ ಹೋಗುವನು)

ಸತ್ಯವಾನ: ಅರುಣ, ನಾನೂ ಬರುತ್ತೇನೆ. (ಹೋಗುವನು.)

(ಸಾವಿತ್ರಿ ಆ ಕಡೆಗೇ ನೋಡುವಳು.)

ಗುರು: ಮಗಳೇ, ಅಷ್ಟು ದೂರದಿಂದ ಈ ಅಡವಿಗೆ ಏಕೆ ಬಂದೆ?

ಸಾವಿತ್ರಿ: ಸಖೀ, ಸ್ವರ್ಣಲತಾ, ಬಿನ್ನವಿಸು.

ಸ್ವರ್ಣಲತಾ: ಬಿನ್ನವಿಸು ದೇವಿ. ನೀನೇ ಬಿನ್ನವಿಸು.

ಗುರು: ಸರಿ, ಕುಲಸ್ತ್ರೀಯರಿಗೆ ಲಜ್ಜೆಯೇ ಸುಶೀಲವು. (ಸಖಿಯೊಡನೆ) ಹೇಳಮ್ಮಾ, ನೀನು ಹೇಳು.

ಸ್ವರ್ಣಲತಾ: ಮುನಿವರ್ಯರೇ, ನಮ್ಮ ರಾಜಪುತ್ರಿಯು ಸದ್ವರನನ್ನು ಅರಸುತ್ತಾ ಬಂದಿದ್ದಾಳೆ. ಆಕೆಗೆ ರೂಪಗುಣ ಸಂಪನ್ನನಾದ ಸತ್ಯವಾನನ ಮೇಲೆ ಮನಸ್ಸಾಗಿದೆ. ತಮ್ಮ ಆಶ್ರಮದ ನಿವಾಸಿಯಾದುದರಿಂದ ತಮ್ಮ ಅಪ್ಪಣೆ, ಆಶೀರ್ವಾದಗಳನ್ನು ಅಪೇಕ್ಷಿಸುತ್ತಾಳೆ.

ಗುರು: ಮಕ್ಕಳೇ, ಈ ವಿಚಾರಕ್ಕೆ ಸತ್ಯವಾನನು ಸಮ್ಮತಿಸಿದಲ್ಲಿ ನನ್ನದೇನೂ ಆಕ್ಷೇಪವಿಲ್ಲ. ನಾನು ಸದಾ ನಿಮ್ಮೆಲ್ಲರ ಹಿತಾಕಾಂಕ್ಷಿ. ಮಗೂ, ಸತ್ಯ, ಹೀಗೆ ಬಾ. (ಕೈಮಾಡಿ ಕರೆವನು)

ಸತ್ಯವಾನ: (ಬಂದು) ಗುರುಗಳೇ, ಏನಾಜ್ಞಾಪನೆ?

ಗುರು: ಸತ್ಯ, ಈ ರಾಜಪುತ್ರಿಯು ನಿನ್ನ ಕೈಹಿಡಿಯಲು ಅಪೇಕ್ಷಿಸುವಳು. ನಿನಗದು ಒಪ್ಪಿಗೆಯೇನು?

ಸತ್ಯವಾನ: ತಮ್ಮೆಲ್ಲರ ಆಶೀರ್ವಚನಗಳೇ ನನ್ನ ಮನಸ್ಸು. ಗುರುಗಳೇ, ತಮ್ಮ ಮೆಚ್ಚಿಗೆಯೇ ನನ್ನ ಒಪ್ಪಿಗೆ.

ಸಾವಿತ್ರಿ: (ಸ್ವಗತ) ನಾನು ಭಾಗ್ಯಶಾಲಿನಿ.

ತೆರೆ.

---

## ದೃಶ್ಯ ೩.

[ಅಶ್ವಪತಿ ಅರಮನೆ ಚಾವಡಿಯಲ್ಲಿ ಶತಪಥ ಹಾಕುತ್ತಿರುವನು. ಸಾವಿತ್ರಿ, ಸ್ವರ್ಣಲತೆಯರ ಪ್ರವೇಶ.]

ಸಾವಿತ್ರಿ: ತಾತಾ, ಪ್ರಣಾಮಗಳು. (ಎರಗುವಳು.)

ಅಶ್ವಪತಿ: (ಹರಸಿ) ಮುದ್ದು, ಸಂಚಾರವು ಸಫಲವಾಯಿತೆ? ಅದೃಷ್ಟವು ಎಂತಿದೆ?

ಸಾವಿತ್ರಿ: ಅಪ್ಪಯ್ಯ, ಭಾಗ್ಯದೇವತೆಯ ಪೂರ್ಣಕೃಪೆ, ನನ್ನ ಪುಣ್ಯ.

ಅಶ್ವಪತಿ: ಮಗೂ, ಯಾರನ್ನು ಒಲಿದೆ? ಯಾವ ದೇಶದ ರಾಜಕುಮಾರ?

ಸಾವಿತ್ರಿ: ಅಪ್ಪ, ನಿಮ್ಮಳಿಯ ಒಬ್ಬ ಸುಂದರ ಯುವಕ. ತಂದೆ ತಾಯಿಂದಿರೊಡನೆ ಮಹರ್ಷಿಗಳೊಬ್ಬರ ಆಶ್ರಮದಲ್ಲಿ ವಾಸವಾಗಿದ್ದಾರೆ. ಅವರಿಗೊಪ್ಪುವ ಹೆಸರು—ಸತ್ಯವಾನ. ತಾತ, ನನಗೆ ಅವರ ಮೇಲೆ ಪೂರ್ಣ ಮನಸ್ಸು. ಅಮಿತಪ್ರೀತಿ.

ಅಶ್ವಪತಿ: ಆಗಲಿ, ಸಂತೋಷ. ಅದೋ ದೇವರ್ಷಿಗಳು ಆಗಮಿಸುತ್ತಿದ್ದಾರೆ. ಬಾ, ವಂದಿಸಿ ಈ ಸಂತಸದ ಸಂಗತಿಯನ್ನವರಿಗೆ ಅರುಹೋಣ.

(ನಾರದರ ಆಗಮನ)

ನಾರದ: ಶಂಭೋ ಶಂಕರ—ಶಂಭೋ ಶಂಕರ
ತ್ರಿಪುರಾಸುರ ಸಂಹಾರಿ।
ಶಂಭೋ ಶಂಕರ—ಶಂಭೋ ಶಂಕರ
ಗಜಚರ್ಮಾಂಬರಧಾರಿ।
ಶಂಭೋ ಶಂಕರ—ಶಂಭೋ ಶಂಕರ
ಹರ ದಾಕ್ಷಾಯಣಿ ರಮಣ।
ಶಂಭೋ ಶಂಕರ—ಶಂಭೋ ಶಂಕರ
ಜಯ ಸರ್ಪಾಭರಣ।
ಶಂಭೋ ಶಂಕರ-ಶಂಭೋ ಶಂಕರ-ಶಂಭೋ ಶಂಕರ॥

(ಅಶ್ವಪತಿ ಸಾವಿತ್ರಿಯರು ಎರಗುವರು.)

ನಾರದ: (ಆಶೀರ್ವದಿಸಿ) ಎದ್ದೇಳಿರಿ. ಅಶ್ವಪತಿ, ನಿನ್ನ ಮಗಳಿಗೆ ವರನು ದೊರೆತನೇನು?

ಸಾವಿತ್ರಿ, ಅಶ್ವಪತಿ: (ಇಬ್ಬರೂ) ಹೌದು ಸ್ವಾಮಿ, ತಮ್ಮ ಕೃಪೆಯಿಂದ ಆಯಿತು.

ನಾರದ: ಕುಮಾರಿ, ಯಾರನ್ನು ಆರಿಸಿದೆ?

ಸಾವಿತ್ರಿ: ಸತ್ಯವಾನ ಎಂಬವರನ್ನು.

ನಾರದ: (ಬೆರಳನ್ನು ಕಚ್ಚಿ, ತಲೆಯೊಲೆದು) ಹೂಂ.... ಹೂಂ........

(ಆಲೋಚಿಸುವನು. ಬೇಸರದಿಂದ)

ಸಾವಿತ್ರಿ, ಅಶ್ವಪತಿ: (ಇಬ್ಬರೂ) ಏನು ಸ್ವಾಮಿ, ಹೇಳಿರಿ.

ನಾರದ: ಅಮ್ಮಾ, ಬೇರೆ ಯಾರಾದರೂ ದೀರ್ಘಾಯುಷಿಯನ್ನು ಆರಿಸಿಕೊ. ಸತ್ಯವಾನ ಬೇಡ.

ಅಶ್ವಪತಿ: ದೇವರ್ಷಿಗಳೇ, ಏನು? ಸತ್ಯವಾನನು ಅಲ್ಪಾಯುವೇ?

ನಾರದ: ಹೌದು, ಕೇವಲ ಇನ್ನು ಒಂದು ವರ್ಷದಲ್ಲೇ ಅತನ ಆಯುಸ್ಸು ತೀರುವುದು. ಅದಕ್ಕೇನಂತೆ, ಬೇರೊಬ್ಬ ಯೋಗ್ಯನನ್ನು ಆರಿಸಿಕೊಂಡರಾಯಿತು.

ಸಾವಿತ್ರಿ: ಸ್ವಾಮಿ, ಸ್ವಾಮಿ............

ಅಶ್ವಪತಿ: (ತಡೆದು) ಮಗಳೇ, ಹಾಗಿದ್ದರೆ ನೀನಾತನ ಚಿಂತೆಯನ್ನು ಬಿಡು. ಬೇರೊಬ್ಬನನ್ನು ಹುಡುಕೋಣವಂತೆ.

ಸಾವಿತ್ರಿ: ಅಪ್ಪಾ, ಅದು ಎಂದಿಗೂ ಆಗದ ಮಾತು. ನನಗೆ ಅವರೇ ಯೋಗ್ಯ. ನಾನವರನ್ನು ಪತಿಯಾಗಿ ಭಾವಿಸಿಕೊಂಡಿದ್ದೇನೆ. ಇನ್ನು ಮರೆಯಲು ಅಸಾಧ್ಯ.

ನಾರದ: ಮಗಳೇ, ನೀನಿನ್ನೂ ಅಗ್ನಿಸಾಕ್ಷಿಯಾಗಿ ಏನೂ ಅತನ ಕೈ ಹಿಡಿದಿಲ್ಲ. ನೀನು ಭಾಗ್ಯವಂತೆ. ಈಗಲೇ ಆತನ ಹಂಬಲವನ್ನು ಬಿಟ್ಟು ಬಿಡು.

ಸಾವಿತ್ರಿ: ಸ್ವಾಮಿ, ಕ್ಷಯಿಸುವ ಕಾರಣದಿಂದ ಪ್ರಭೆಯೂ ಚಂದ್ರನೂ ಬೇರ್ಪಡುವರೇ? ನನ್ನ ಹೃದಯ ಕಮಲದಲ್ಲಿ ಅವರ ಪವಿತ್ರ ಮೂರ್ತಿಯು ಮಂಡಿಸಿ ನನ್ನನ್ನು ಆಳುತ್ತಿರುವುದು. ಅವರಿಗೆ ನನ್ನನ್ನೇ ನಾನು ಅರ್ಪಿಸಿದ್ದೇನೆ. ಅವರನ್ನು ಮರೆಯಲಾರೆ. ಪರರನ್ನು ಯೋಚಿಸಲಾರೆ. ಸ್ವಾಮಿ, ಕಮಲವನ್ನು ನೀರಿನಿಂದ ಬೇರೆ ಮಾಡಬಾರದು. ಕ್ಷಮಿಸಿರಿ. ನನ್ನ ಜನ್ಮ ಜನ್ಮಾಂತರಗಳ ಸ್ವಾಮಿ ಸತ್ಯವಾನ. ಅವರೇ ಖಂಡಿತ.

ನಾರದ: ಹಾಗೆಯೇ ಆಗಲಿ. ಆತ್ಮಧೈರ್ಯವನ್ನು ಮಾತ್ರ ಸಡಿಲಿಸದಿರು. ನಿಮಗೆ ಮಂಗಳವಾಗಲಿ.

ಶಂಭೋ ಶಂಕರ—ಶಂಭೋ ಶಂಕರ
ಭೀತಿವಿನಾಶಕ—ಹರ—ಭೂತಪತೇ ।
ಶಂಭೋ ಶಂಕರ—ಶಂಭೋ ಶಂಕರ—ಶಂಭೋ ಶಂಕರ ।

ತೆರೆ.

---

## ದೃಶ್ಯ ೭.

[ಕಾಡು. ಬ್ರಾಹ್ಮಣರಿಬ್ಬರ ಪ್ರವೇಶ.]

ರಾಗ ॥ ಪೀಲು ॥ ಕೇರವ ತಾಳ ॥

ರಾಮಣ್ಣ: ಪಕ್ವಾನ್ನವೆನಿತು ಮಧುರಾ
ಚೊಕ್ಕವಾದುದು ಸವಿ ಕ್ಷೀರಾ
ಕೃಷ್ಣಯ್ಯ: ಇಕ್ಕಿದರು ಲಾಡು ಬಹಳಾ
ಮುಕ್ಕಿದೆನು ಭಕ್ಷ್ಯವೆಲ್ಲಾ ॥ ೧ ॥
ರಾಮಣ್ಣ: ಬೇಳೆ ಸಾರನ್ನದಾ ಸ್ವಾದಾ
ಪೇಳಲೇ ನಾನದರ ಮೋದಾ
ಕೃಷ್ಣಯ್ಯ: ಪಾಯಸದ ರುಚಿಯು ನೆನೆಯೇ
ಬಾಯಿಯಲಿ ನೀರು ಬರದೇ ॥ ೨ ॥
ರಾಮಣ್ಣ, ಕೃಷ್ಣಯ್ಯ: ಆದರದಿ ಸುರಿದೆ ಸರಭರಾ
(ಇಬ್ಬರೂ) ಆದರಿಸಿ ಕೇಳಿರಾ ಸ್ವರಾ ॥ ೩ ॥

ರಾಮಣ್ಣ: ಹೋ, ಕೃಷ್ಣಯ್ಯ! ನೀವೂ ಬಂದಿದ್ದಿರೇನು ಮದುವೆಗೆ? ನಮಗೆ ಈ ಕಾಡಿನಲ್ಲೂ ಇಂತಹ ಔತಣ ದೊರಿತುದೆಂದರೆ ನಮ್ಮ ಭಾಗ್ಯವೇ ಭಾಗ್ಯ. ಹೇಗೆ?

ಕೃಷ್ಣಯ್ಯ: ನಿಜಕ್ಕೂ ಅಷ್ಟು ಮಂದಿಗೆ ತೃಪ್ತಿಯಾಗುವಷ್ಟು ಬಗೆ ಬಗೆಯ ಭಕ್ಷ್ಯಭೋಜ್ಯಗಳ ಊಟ ಕೊಡುವುದೆಂದರೆ ಸಾಮಾನ್ಯರಿಗೆ ಸಾಧ್ಯವೆ? ಮುನಿಗಳೆಲ್ಲಾ ಹಾಗೇನೇ ಎಣಿಸಿದಂತೆ ಮಾಡಬಲ್ಲರು.

ರಾಮಣ್ಣ: ಅಷ್ಟೇ ಅಲ್ಲ. ದಕ್ಷಿಣೆಯೂ ಕೈತುಂಬಾ ಸಿಕ್ಕಿತಲ್ಲಾ; ಮನಸ್ಸಿಗೆ ಬಹಳ ಆನಂದವಾಯಿತು.

ಕೃಷ್ಣಯ್ಯ: ನನಗೆ ಊಟ ದಕ್ಷಿಣೆಗಳಿಗಿಂತಲೂ ಆ ದಂಪತಿಗಳನ್ನು ನೋಡಿ, ಕಣ್ಣು ತುಂಬಾ ನೋಡಿ ಹಿಡಿಸಲಾರದಷ್ಟು ಆನಂದವಾಗಿದೆ.

ರಾಮಣ್ಣ: ಹಿಡಿಸುತ್ತಿದ್ದರೆ ಒಂದು ಲಾಡೇ ಹೆಚ್ಚು ಹೊಡೆಯುತಿದ್ದೆಯೋ ಏನೋ?

ಕೃಷ್ಣಯ್ಯ: ನಿನ್ನ ಹಾಗೇನೇ. ಇರಲಿ, ಜೋಡಿ ಎಂದರೆ ಹಾಗಿರಬೇಕು. ಎಷ್ಟು ಅನುರೂಪ! ಎಷ್ಟು ಸಮತೆ!!

ರಾಮಣ್ಣ: ಕೃಷ್ಣಯ್ಯ, ಹೌದು, ನನಗೂ ಹಾಗೆ ಅನ್ನಿಸಿತು. ಆ ಹುಡುಗಿ ಯಾರು ಬಲ್ಲೆಯಾ?

ಕೃಷ್ಣಯ್ಯ: ತಿಳಿಯದೇ ಉಂಟೆ? ನಮ್ಮ ಅಶ್ವಪತಿರಾಯರ ಕನ್ಯೆ, ಸಾವಿತ್ರಿ.

ರಾಮಣ್ಣ: ಅಂದಿನ ಗಂಡಿಲ್ಲದ ಮದುವೆಯ ವಧು.

ಕೃಷ್ಣಯ್ಯ: ಆ ವರ ದ್ಯುಮತ್ಸೇನನ ಮಗ ಸತ್ಯವಾನನಂತೆ. ಒಳ್ಳೆಯ ಹುಡುಗ. ಅವನೂ ರಾಜಕುಮಾರನಂತೆ.

ರಾಮಣ್ಣ: ಇರಬೇಕು. ನನಗೂ....ಅದೇ....ಬಹಳ ತೇಜಸ್ವಿ.

ಕೃಷ್ಣಯ್ಯ: ಪ್ರೀತಿಯಿಂದಿರಲಿ. ಇನ್ನೊಮ್ಮೆ ಬೇಗನೆ ಔತಣ ಸಿಗುವಂತಾಗಲಿ. (ಹೋಗುವರು.)

ತೆರೆ.

---

## ದೃಶ್ಯ ೮.

(ಆಶ್ರಮ. ಸತ್ಯವಾನ ಕತ್ತಿ ಹಿಡಕೊಂಡು)

ಸತ್ಯವಾನ: ಸಾವಿತ್ರಿ, ಕಾಡಿಗೆ ಹೋಗೋಣ, ಎಲ್ಲಿರುವೆ?

ಸಾವಿತ್ರಿ: ಪ್ರಿಯನೇ, ಬೇಗನೆ ಬರುವೆ. ಅತ್ತೆ ಮಾವಂದಿರಿಗೆ ಹಣ್ಣು ಹಂಪಲುಗಳನ್ನು ಆಯ್ದು ಕೊಡುತ್ತಿದ್ದೇನೆ. ಈಗ ಬಂದೆ.

ಸತ್ಯವಾನ: (ಸ್ವಗತ) ಧನ್ಯೆ, ಹೃದಯೇಶ್ವರಿಯೇ, ನೀನು ನನ್ನನ್ನು ಪ್ರೇಮದಿಂದ ಗೆದ್ದಿರುವೆ. ಹಿರಿಯರನ್ನು ಭಕ್ತಿಯಿಂದ ಒಲಿಸಿರುವೆ.

ರಾಗ ॥ ದೇಸ್‌ಕಾರ್ ॥ ತಾಳ ॥ ಕೇರವ ॥

ಧನ್ಯನಾದೆ ನೀ ಕನ್ನೆಯ ಪಡೆದು ।
ಪುಣ್ಯರೂಪೆಯಾ ಸಗ್ಗಚೆಲುವೆಯ ।
ಗಣ್ಯರಾಜಭವೆ ಚೆಲ್ವ ಕುಸುಮವು ।
ಫುಲ್ಲನೇತ್ರೆ ಈ ಭಾಗ್ಯವಲ್ಲರಿಯ ॥ ೧ ॥

ಸಾವಿತ್ರಿ: (ಪ್ರವೇಶಿಸಿ) ಇಲ್ಲಿ ಕೊಡಿರಿ. ಕತ್ತಿಯನ್ನು ನಾನು ಹಿಡಕೊಳ್ಳುವೆ.

ಸತ್ಯವಾನ: ಬೇಡ. ನಿನ್ನ ಕೈಲಿ ಹಗ್ಗವಿದೆ, ಸಾಕು. ನೀನು ಪ್ರೇಮದ ಹಗ್ಗದಲ್ಲಿ ನನ್ನ ಮನಸ್ಸನ್ನು ಕಟ್ಟಿರುವೆ. ಮತ್ತೆ ಈ ಹಗ್ಗವೇಕೆ?

ಸಾವಿತ್ರಿ: ಪ್ರಿಯಾ, ಅದು ಅಸತ್ಯ. ನನ್ನ ಪ್ರಾಣಪಕ್ಷಿಯನ್ನೇ ತಾವು ಹೃದಯಪಂಜರದಲ್ಲಿ ಸೆರೆಹಾಕಿರುವಿರಿ. ನಾನು ನಿಮ್ಮ ಚರಣದಾಸಿ. ಸ್ವಾಮಿ, ಇಂದು ಕಟ್ಟಿಗೆ ನಾನೇ ಹೊರುವೆನು; ಹ್ಞಂ. ನೀವು ಹೂವನ್ನು ಹಿಡಕೊಳ್ಳಿರಿ.

ಸತ್ಯವಾನ: ಚೆನ್ನೆ, ನಿನ್ನನ್ನೇ ನಾನು ಹೃದಯದಲ್ಲಿ ಹೊತ್ತುದಕ್ಕೆ ಸಾಲದೆ ಹೂವನ್ನೂ ಹೊರಿಸುವೆಯಾ, ನೀನು ಬಲು ಜಾಣೆ.

ಸಾವಿತ್ರಿ: ಸಾಕು ನಿಮ್ಮ ಚೇಷ್ಟೆ. ಸುಮ್ಮನಿರಿ. ಆಶ್ರಮಕ್ಕೆ ಹೋಗೋಣ ಹೊತ್ತು ನೆತ್ತಿಗೇರಿತು. (ಹೋಗುವರು.)

ತೆರೆ.

---

## ದೃಶ್ಯ ೯.

(ಆಶ್ರಮದ ಉದ್ಯಾನ. ಸಾವಿತ್ರಿ ಒಬ್ಬಳೇ ಕುಳಿತಿರುವಳು.)

ಸಾವಿತ್ರಿ: ದೇವರ್ಷಿಗಳ ಮಾತಿನಂತೆ ವರ್ಷ ಒಂದು ಸಂದಿತು. ಅವರು ಹೇಳಿದ ಆ ದುರ್ದಿನವು ಸಮೀಪಿಸಿತು. ನಾಳೆ ಬೆಳಗಾದರೆ, ಛೇ! ಛೇ! ದೇವರೇ ಅದು ಸುಳ್ಳಾಗಲಿ!

ರಾಗ ॥ ಬೇಹಾಗ್ ॥ ತ್ರಿತಾಳ ॥

ದೀನದಯಾನಿಧಿ ಕರುಣಿಸು ಶುಭವಾ ।
ದೀನೆಯು ನಾ ಮುಡಿಪಿಡುವೆನು ಹರಣವ ॥ ಪಲ್ಲ ॥
ಶಿರವಣಿದೆರಗುತ ಬೇಡುವೆ ನಾನು ।
ನಿರತವು ಪತಿಯನು ಜೊತೆಯಾಗಿರಿಸು ॥
ಕಾಲನ ದವಡೆಗೆ ಸಿಲುಕಿಸಬೇಡ ।
ಬಾಲೆಯ ಮೊರೆಯನು ಆಲಿಸು ದೇವ ॥ ೧ ॥

ನನ್ನ ಕುಂಕುಮದ ಭಾಗ್ಯ ಉಳಿಸು ದೇವಿ. ನನ್ನ ವ್ರತಗಳೆಲ್ಲವೂ ಫಲಿಸಬೇಕಾದ ಕಾಲವಿದು. ಇಂದು ಇಡೀ ದಿನ ನಾನು ಉಪವಾಸವಿರುವೆನು. ಪತಿಯನ್ನು ಅರೆನಿಮಿಷವೂ ಅಗಲಲಾರೆನು.

ತೆರೆ.

---

## ದೃಶ್ಯ ೧೦.

(ಸತ್ಯವಾನನ ಪ್ರವೇಶ. ಕೊಡಲಿಯೊಡನೆ)

ಸತ್ಯವಾನ: ಸಾವಿತ್ರೀ, ಸಾವಿತ್ರೀ, ಕಾಡಿಗೆ ಹೋಗೋಣವೇ?

ಸಾವಿತ್ರಿ: ನಾಥಾ ಬೇಡ, ಈ ದಿನ ನಾನೇ ಹೋಗುತ್ತೇನೆ. ನೀವು ಇಲ್ಲೇ ಇದ್ದು ಬಿಡಿ.

ಸತ್ಯವಾನ: ಏನು? ಇಲ್ಲಿ ನಿಲ್ಲಿಸಿ, ಸೀರೆ ಉಡಿಸಿ, ಬಳೆ ತೊಡಿಸಿ, ನನ್ನನ್ನು ಅಡುಗೆ ಕೆಲಸಕ್ಕೆ ಹಚ್ಚುವೆಯಾ? ಸಾವಿತ್ರಿ, ಏಕಿಷ್ಟು ಬಾಡಿದೆ ನಿನ್ನ ಮುಖ?

ಸಾವಿತ್ರಿ: ಏನೂ ಇಲ್ಲ. ಏಕೋ ಮನಸ್ಸು ಹಿಮ್ಮೆಟ್ಟುವುದು. ಈ ದಿನ ಕಟ್ಟಿಗೆ ತರುವುದೇ ಬೇಡ. ನಾಳೆ ಹೋಗೋಣ.

ಸತ್ಯವಾನ: ಹೋಗಲೇಬೇಕು. ದಿನವೂ ತರುವ ಕಟ್ಟಿಗೆಯನ್ನು ಈ ದಿನ ಏಕೆ ನಿಲ್ಲಿಸಲಿ? ಭಯವೇನು? ಬಾ, ಹೋಗೋಣ.

ಸಾವಿತ್ರಿ: (ಸ್ವಗತ) ಅತ್ತೆಮಾವಂದಿರ ಆಶೀರ್ವಾದ ಪಡೆದು ನಾನೂ ಅನುಸರಿಸುತ್ತೇನೆ. (ಪ್ರಕಾಶ) ಹಾಗಾದರೆ ಪ್ರಿಯಾ, ಇದೋ ಬಂದೆ. (ಹೋಗುವರು.)

(ತೆರೆ.)

---

## ದೃಶ್ಯ ೧೧.

(ಸತ್ಯವಾನನ ಒಂದು ಕೈಲಿ ಕಟ್ಟಿಗೆ ತುಂಡು. ಇನ್ನೊಂದರ ಕೊಡಲಿ ಜಾರುವುದು.)

ಸತ್ಯವಾನ: (ಕಣ್ಣು ಮುಚ್ಚಿ) ಮರದಿಂದ ಇಳಿದವನಿಗೆ ಒಮ್ಮೆಲೇ ಕಣ್ಣು ಕತ್ತಲೆ! ಸಾವಿತ್ರೀ! ಸಾವಿತ್ರೀ!

ಸಾವಿತ್ರಿ: (ಕಟ್ಟಿಗೆ ಒಟ್ಟು ಮಾಡುವವಳು ಹತ್ತಿರಬಂದು) ಪ್ರಿಯಾ, ಇಲ್ಲೇ ಇರುವೆನಲ್ಲಾ! (ಎಂದು ಬಂದು ಆಧರಿಸುವಳು.) (ಕುಳಿತು ತೊಡೆಯಲ್ಲಿ ತಲೆಯಿರಿಸಿ ಮಲಗಿಸಿ) ನಾಥಾ! ಪ್ರಿಯಾ!! ಪ್ರಾಣೇಶ್ವರಾ!!! (ಎದ್ದು ನಿಲ್ಲುವಳು.)

(ಯಮನು—ಪಾಶದೊಡನೆ ಪ್ರವೇಶ.)

ಯಾರದು ನನ್ನ ಹೃದಯೇಶ್ವರನನ್ನು ಕೊಂಡೊಯ್ಯುವವರು? ನನ್ನನ್ನೂ ಕರೆದೊಯ್ಯಿರಿ.

ಯಮ: ಇಲ್ಲ. ನಿನಗಿನ್ನೂ ಕಾಲಬಂದಿಲ್ಲ. ನಡೆಹಿಂದೆ.

ಸಾವಿತ್ರಿ: ಪತಿಯನ್ನುಳಿದು ನಾನಿರಲಾರೆ. ಬಂದೇ ಬರುವೆನು. (ಮುನ್ನಡೆಯುವರು.)

(ಯಮನೂ ಸಾವಿತ್ರಿಯೂ ಪುನಃ ಕಾಣಿಸಿಕೊಂಡು.)

ಯಮ: (ಹಿಂದಿರುಗಿ ನೋಡಿ.) ಈ ಕಠಿಣವಾದ ದಾರಿಯಲ್ಲೂ ನೀನು ಅನುಸರಿಸುತ್ತಿರುವೆ. ಸಾಮಾನ್ಯರಿಗೆ ಇಲ್ಲಿ ಬರಲಾಗುವುದಿಲ್ಲ. ದೇವಿ, ನೀನು ಪುಣ್ಯ ಶೀಲೆ. ಆದರೆ ಸತ್ಯವಾನನ ಪ್ರಾಣವಿನ್ನು ಸಿಗಲಾರದು. ಹಿಂಬಾಲಿಸಬೇಡ.

ಸಾವಿತ್ರಿ: ಧರ್ಮಪ್ರಭು, ನಾನು ಅವರ ನೆರಳು. ದೇಹ ಹೋಗಲು ನೆರಳು ನಿಲ್ಲುವುದೇನು?

ಯಮ: ತಾಯಿ, ನಾನು ನಿನ್ನ ಪತಿಭಕ್ತಿಗೆ ಮೆಚ್ಚಿರುವೆನು. ನಿನ್ನ ಪತಿಯ ಪ್ರಾಣ ಹೊರತು ಎರಡು ವರಗಳನ್ನು ದಯಪಾಲಿಸಿರುವೆನು. ಬೇಡು.

ಸಾವಿತ್ರಿ: ನ್ಯಾಯಮೂರ್ತಿ, ಅನುಗ್ರಹಿಸುವುದಾದರೆ, ನನ್ನ ಕುರುಡರಾದ ಅತ್ತೆ ಮಾವಂದಿರಿಗೆ ಕಣ್ಣುಗಳನ್ನೂ ಅವರು ಕಳಕೊಂಡ ರಾಜ್ಯವನ್ನೂ ದೊರಕಿಸು.

ಯಮ: ಹಾಗಾಗಲಿ. ಮಗಳೇ, ಎರಡನೇ ವರವನ್ನು ಯೋಚಿಸು.

ಸಾವಿತ್ರಿ: ಎರಡನೆಯದಾಗಿ ಗಂಡು ಮಕ್ಕಳಿಲ್ಲದ ನನ್ನ ತಂದೆಗೆ ನೂರು ಮಂದಿ ಗಂಡುಮಕ್ಕಳನ್ನು ದಯಪಾಲಿಸು.

ಯಮ: ಸತಿಶಿರೋಮಣಿ, ಕರುಣಿಸಿರುವೆನು. ನಡೆ ಹಿಂದಕ್ಕೆ. ನಮ್ಮನ್ನು ಅನುಸರಿಸಬೇಡ.

ಸಾವಿತ್ರಿ: ನನ್ನ ಪ್ರಾಣವನ್ನು ಬಿಟ್ಟು ನಾನು ಹೇಗಿರಲಿ. ಅವರೇ ನನ್ನ ದೇವರು. ಅವರನ್ನು ಬಿಡಲಾರೆ; ಮರೆಯಲಾರೆ. ಆದ್ದರಿಂದ ಕರುಣಾಳು, "ಪತಿಂ ದೇಹಿ."

ಯಮ: ಸಾಧ್ವಿಯರು ಪತಿವಿರಹವನ್ನು ಪುತ್ರರ ಮುಖದರ್ಶನದಿಂದ ಮರೆಯಬಲ್ಲರು. ಅದೋ ನಿನ್ನ ಪಾತಿವ್ರತ್ಯಕ್ಕೆ ಮೆಚ್ಚಿ ನಿನಗೆ ನೂರು ಜನ ಗಂಡುಮಕ್ಕಳಾಗಲಿ ಎಂದು ಹರಸಿದ್ದೇನೆ. ಹೋಗು. ಇನ್ನು ಬರಬೇಡ.

ಸಾವಿತ್ರಿ: ಗೆದ್ದೆ. ನಾನೇ ಗೆದ್ದೆ. ದೇವಾ, ಪತಿವ್ರತೆಯಾದ ನನಗೆ ಪತಿಯ ಒಡನಾಟವಿಲ್ಲದೆ ಹೇಗೆ ಪುತ್ರರಾಗುವರು? ನನ್ನ ಪ್ರಾಣಪದಕವನ್ನು ನನಗೆ ಕರುಣಿಸಿ ನಿನ್ನ ವರವು ನಿಜವಾಗುವಂತೆ ಮಾಡು.

ಯಮ: ನಿಜ, ನಾನೇ ಸೋತೆನು. ಮಾತ್ರವಲ್ಲ, ನಿನ್ನ ಪತಿಭಕ್ತಿಗೆ, ಆತ್ಮಬಲಕ್ಕೆ ವಿಶ್ವವೇ ಸೋಲಬೇಕು. ಎಲೌ ಸಾವಿತ್ರಿ, ನೀನು ಸಾಮಾನ್ಯ ಸ್ತ್ರೀಯಲ್ಲ, ಮಹಾಸತಿ. ಇದೋ, ನಿನ್ನ ಪತಿಯೊಂದಿಗೆ ಸೂರ್ಯ ಚಂದ್ರ ನಕ್ಷತ್ರಗಳಿರುವ ತನಕ ಕೂಡಿರು.

ಸತ್ಯವಾನ, ನಿನ್ನ ಪತ್ನಿಯ ತಪಸ್ಸಿನ ಪುಣ್ಯಫಲವು ನಿನ್ನನ್ನು ರಕ್ಷಿಸಿತು. ನಾನು ನಿನ್ನನ್ನು ಮುಟ್ಟಲಾರೆ. ನೀನು ಆಕೆಯೊಡನೆ ಸುಖವಾಗಿ ಜೀವಿಸು.

ತೆರೆ.

(ತೆರೆಯ ಹಿಂದೆ ಜನರ ಏಕಕಂಠ)

[ಆಕಾಶದಲ್ಲಿ ಸೂರ್ಯಚಂದ್ರರುದಿಸಿದಂತೆ ಹೊಸತಾಗಿ ಕಣ್ಣುಗಳು ಮೂಡಿದ ದ್ಯುಮತ್ಸೇನ ಮಹಾರಾಜನೇ ನಮ್ಮ ಪ್ರಭು. ದುರ್ಜಯನನ್ನು ಅಧಿಕಾರದಿಂದ ತಳ್ಳಿಹಾಕಲಾಯಿತು.]

ದ್ಯುಮತ್ಸೇನ ಮಹಾರಾಜಕೀ ಜೈ!
ಯುವರಾಜ ಸತ್ಯವಾನಕೀ ಜೈ!!
ಮಹಾಸತಿ ಸಾವಿತ್ರಿಕೀ ಜೈ!!!

॥ ಮಂಗಳಂ ॥



# 45

# ಸುಭಾಷಿತ

(ಮೂಲ ಸಂಸ್ಕೃತ ಶ್ಲೋಕಗಳು
ಮತ್ತು ಕನ್ನಡ ಅನುವಾದ ಸಹಿತ)

ಸಂಗ್ರಾಹಕರು, ಅನುವಾದಕರು:

ಶ್ರೀ| ಎಮ್. ಸುಬ್ರಾಯನ್, ವಿದ್ವಾನ್,

ಮಂಗಳೂರು.

**1955.**




ಒಂದಾಣೆ ಮಾಲೆ

# ಒಂದಾಣೆ ಮಾಲೆಯಲ್ಲಿ ಈ ವರೆಗೆ ಪ್ರಕಟವಾದ ಪುಸ್ತಕಗಳು

೧. *ಕೆಪ್ಪಟರಾಯ (ವಿನೋದ ಕಥೆ)
೨. *ನಾರೀಶ್ವರರು (ಏಕಾಂಕ ಪ್ರಹಸನ)
೩. *ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು.
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ)
೫. *ಅದ್ಭುತತ್ಯಾಗ ಮತ್ತು ಇತರ ಕಥೆಗಳು
೬. ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ)
೭. *'ಬೀಡಿ ಸೇದಬೇಡಿ' ಮತ್ತು 'ಆ ಮಗು' (ವಿನೋದ ಕಥೆಗಳು)
೮. ಇಂಗ್ಲಿಷ್-ಕನ್ನಡ ಅರ್ಥಕೋಶ
೯. *ಲಂಚಕ್ಕೆ ಸಂಚಕಾರ
೧೦. ಟಿಶ್ಯೂ ಔಷಧಿಗಳ ಕೈಪಿಡಿ.
೧೧. ಶ್ರೀಕ್ಷೇತ್ರ ಧರ್ಮಸ್ಥಳ (ದ್ವಿ. ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು
೧೪. ವೆಂಕಟನ ಸಂಕಟ (ಏಕಾಂಕ ಪ್ರಹಸನ)
೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ)
೧೬. ವೇಣೂರಿನ ಗತವೈಭವ.
೧೭. ಒಗಟುಗಳು [ದ್ವಿತೀಯ ಮುದ್ರಣ]
೧೮. ಜಗಳಗಂಟ ಮತ್ತು ಇತರ ಕಥೆಗಳು
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಪ್ಪು
೨೧. *ಭಾರತದ ಮಹಾನಗರಗಳು (ಭಾಗ ೧)
೨೨. ತಿರುಕ್ಕುರಲ್
೨೩. ಸೂರ್ಯನ ಸಂಸಾರ ಮತ್ತು ಇತರ ಕಥೆಗಳು
೨೪. ಭಾರತದ ಮಹಾನಗರಗಳು (ಭಾಗ ೨)
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳು.
೨೬. ಮಾರಾವತಾರ (ಏಕಪಾತ್ರ ಯಕ್ಷಗಾನ ಪ್ರಬಂಧ)
೨೭. ಹಾಸವಿಲಾಸ (ನಗೆಹನಿಗಳು)
೨೮. ಸತ್ಯವಂತ ಬಾಬಿ (ಏಕಾಂಕ ಪ್ರಹಸನ)
೨೯. ಜಾಣ್ಮೆಯ ಒಗಟುಗಳು
೩೦. ಜಾತಕ ಕಥೆಗಳು
೩೧ ಕಾರ್ಕಳದ ಚರಿತ್ರೆ
೩೨. ಮರ್ಜಿ (ಏಕಾಂಕ ಪ್ರಹಸನ)
೩೩. ದರ್ಶನದ ಕಥೆಗಳು
೩೪. ಅಳುವಿನ ಹೊಳೆ ಮತ್ತು ಕೇಶವಭೂಪ (ಮಕ್ಕಳ ಕಥೆಗಳು)
೩೫. ಶರಾಬಿನ ಪೀಪಾಯಿಗಳು
೩೬. ಉಪದೇಶ ಶತಕ
೩೭. ನಿಮಗೆ ಗೊತ್ತಿದೆಯೇ?
೩೮. ಚತುರ ಚಮತ್ಕಾರ
೩೯. ಸತೀ ಸಾವಿತ್ರಿ
೪೦. ಆಭರಣಗಳ ಪೆಟ್ಟಿಗೆ ಇತರ ಕಥೆಗಳು
೪೧. ಭಾರತದ ಮಂತ್ರಿಮಂಡಲಗಳು
೪೨. ಕಾಲುಬಳೆಯ ಕಥೆ
೪೩. ಭಾರತದ ನಾಲ್ಕು ಕಲಶಗಳು
೪೪. ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು
೪೫. ಸುಭಾಷಿತ

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಈ ವರೆಗೆ ನಾಲ್ವತ್ತಐದು ಪುಸ್ತಕಗಳಲ್ಲಿ, ನಾಲ್ವತ್ತಐದು ಆಣೆಗಳಿಗೆ, 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, 996 ಪುಟಗಳನ್ನು ಕೊಟ್ಟಿರುತ್ತದೆ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ, ಮಂಗಳೂರು-೧

# ಸುಭಾಷಿತ

ಅಕ್ರೋಧೇನ ಜಯೇತ್ ಕ್ರೋಧಂ ಅಸಾಧುಂ ಸಾಧುನಾ ಜಯೇತ್ ।
ಜಯೇತ್ ಕದರ್ಯಂ ದಾನೇನ ಸತ್ಯೇನಾಲೀಕ ವಾದಿನಂ ॥ ೧ ॥

ಸಿಟ್ಟಿರದೆ ಸಿಟ್ಟನ್ನು ಗೆಲ್ಲಬೇಕು. ದುರ್ಜನನನ್ನು ಉಪಕಾರದಿಂದ ಗೆಲ್ಲಬೇಕು. ಲೋಭಿಯನ್ನು ದಾನದಿಂದ ಗೆಲ್ಲಬೇಕು. ಸುಳ್ಳುಗಾರನನ್ನು ಸತ್ಯದಿಂದ ಜಯಿಸಬೇಕು.

ಸುಖಂ ಹಿ ದುಃಖಾನ್ಯನುಭೂಯ ಶೋಭತೇ ಘನಾಂಧಕಾರೇಷ್ವಿವ
ದೀಪದರ್ಶನಂ ॥
ಸುಖಾತ್ತು ಯೋಯಾತಿನರೋ ದರಿದ್ರತಾಂ ಧೃತಶ್ಶರೀರೇಣ
ಮೃತಸ್ಸಜೀವತಿ ॥ ೨ ॥

ದುಃಖವನ್ನು ಅನುಭವಿಸಿದ ನಂತರ ಸುಖವು ಮಾನವನಿಗೆ ಜೀವನದ ಬೆಡಗನ್ನು ಕೊಡುತ್ತದೆ. ಸುಖಾನಂತರ ಬರುವ ಬಡತನದ ದುಃಖದಿಂದ ಮಾನವನು ಮೃತಪ್ರಾಯನಾಗಿ ಜೀವಿಸುತ್ತಿರುವನು.

ಅಯಂ ಪರಃ ನಿಜೋವೇತಿ ಗಣನಾಂ ಲಘುಚೇತಸಾಂ ।
ಉದಾರ ಚರಿತಾನಾಂತು ವಸುಧೈವ ಕುಟುಂಬಕಂ ॥ ೩ ॥

ಇವನು ಸ್ವಕೀಯ ಪರಕೀಯನೆಂಬ ಭಾವನೆ ಅಲ್ಪವಾದ ಮನಸ್ಸಿನವರಲ್ಲಿರುವುದು. ಉದಾರ ಭಾವನೆಯ ನಡತೆಯವರಿಗೆ ಪ್ರಪಂಚವೇ ಕುಟುಂಬವಾಗಿರುವುದು.

ಕೋಲಾಭೋ ಗುಣಿಸಂಗಮಃ ಕಿಮಸುಖಂ ಪ್ರಾಜ್ಞೇತರೈಸ್ಸಂಗತಿಃ ।
ಕಾ ಹಾನಿಃ ಸಮಯ ಚ್ಯುತಿರ್ನಿಪುಣತಾ ಕಾ ಧರ್ಮತತ್ವೇರತಿಃ ॥ ೪ ॥

ಯಾವುದು ಲಾಭವು? ಗುಣವಂತರ ಗೆಳೆತನ. ಯಾವುದು ದುಃಖವು? ಅಜ್ಞಾನಿಗಳ (ಮೂರ್ಖರ) ಗೆಳೆತನ. ಯಾವುದು ಹಾನಿ? ಸಮಯವನ್ನು ಕೆಡಿಸುವುದು. ಯಾವುದು ನಿಪುಣತೆ? ಧರ್ಮತತ್ವಗಳಲ್ಲಿ ಆಸಕ್ತಿ.

ರಾಜಾ ಕುಲವಧೂರ್ವಿಪ್ರಾಃ ಮಂತ್ರಿಣಶ್ಚ ಪಯೋಧರಾಃ ।
ಸ್ಥಾನಭ್ರಷ್ಟಾ ನ ಶೋಭಂತೇ ದಂತಾಃ ಕೇಶಾ ನಖಾ ನರಾಃ ॥ ೫ ॥

ರಾಜ, ಕುಲಸ್ತ್ರೀ, ಬ್ರಾಹ್ಮಣ, ಮಂತ್ರಿ, ಮೊಲೆ ಮತ್ತು ಹಲ್ಲು, ತಲೆಕೂದಲು, ಉಗುರು, ಮನುಷ್ಯರು ಸ್ಥಾನಭ್ರಷ್ಟರಾದರೆ ಶೋಭಿಸುವುದಿಲ್ಲ.

ಆಯುಃ ಕರ್ಮಚ ವಿತ್ತಂ ಚ ವಿದ್ಯಾ ನಿಧನಮೇವ ಚ ।
ಪಂಚೈತಾನ್ಯಪಿ ಸೃಜ್ಯಂತೇ ಗರ್ಭಸ್ಥಸ್ಯೈವ ದೇಹಿನಃ ॥ ೬ ॥

ಆಯುಸ್ಸು, ಕೆಲಸ, ಹಣ, ವಿದ್ಯೆ, ಮರಣ ಈ ಐದು, ಗರ್ಭದಲ್ಲಿರುವ ಮನುಷ್ಯನಿಗೆ ಬ್ರಹ್ಮನಿಂದ ಸೃಷ್ಟಿಸಲ್ಪಡುತ್ತವೆ.

ನಿದ್ರಾದಿ ಮೈಥುನಾಹಾರಾಸ್ಸರ್ವೇಷಾಂ ಪ್ರಾಣಿನಾಂ ಸಮಾಃ ।
ಜ್ಞಾನವಾನ್ಮಾನವಃ ಪ್ರೋಕ್ತೋ ಜ್ಞಾನಹೀನಾಃ ಪಶೋಸ್ಸಮಾಃ ॥ ೭ ॥

ಎಲ್ಲಾ ಜೀವಿಗಳಿಗೂ ನಿದ್ದೆ ಆಹಾರ ಮತ್ತು ಮೈಥುನಗಳು ಸಮಾನವಾಗಿಯೇ ಇರುವುವು. ಆದರೆ, ಅವರಲ್ಲಿ ತಿಳಿವುಳ್ಳವನೇ ಮಾನವನು; ಜ್ಞಾನಹೀನರಾಗಿರುವವರು ಪಶುಸಮಾನರು.

ಪ್ರಾಯಶ್ಚಿತ್ತೇಪಿ ದಂಡೇಪಿ ವೇಶ್ಯಾ ಭೋಗೇಪಿ ಗಚ್ಛತಿ ।
ಚೋರಾಗ್ನಿ ನೃಪಬಾಧಾಯಾಂ ಧನಂ ಗಚ್ಛತಿ ಪಾಪಿನಾಂ ॥ ೮ ॥

ಪಾಪಿಗಳ ಹಣವು ಪ್ರಾಯಶ್ಚಿತ್ತ, ದಂಡ, ಸೂಳೆಗಾರಿಕೆಗಳಲ್ಲಿಯೂ, ಕಳ್ಳ, ಬೆಂಕಿ ಮತ್ತು ರಾಜಬಾಧೆಯಿಂದಲೂ ಹೋಗುತ್ತಿರುವುದು.

ಕಾವ್ಯ ಶಾಸ್ತ್ರ ವಿನೋದೇನ ಕಾಲೋ ಗಚ್ಛತಿ ಧೀಮತಾಂ ।
ವ್ಯಸನೇನ ಚ ಮೂರ್ಖಾಣಾಂ ನಿದ್ರಯಾ ಕಲಹೇನವಾ ॥ ೯ ॥

ಬುದ್ಧಿವಂತರಿಗೆ ಕಾವ್ಯ, ಶಾಸ್ತ್ರ, ವಿನೋದಗಳಿಂದ ಸಮಯವು ಹೋಗುತ್ತಿರುವುದು. ಮೂರ್ಖರಿಗೆ ವ್ಯಸನ ಕಲಹಗಳಿಂದ ಸಮಯವು ಹೋಗುತ್ತಿರುವುದು.

ಅಲ್ಪಾನಾಮಪಿ ವಸ್ತೂನಾಂ ಸಂಹತಿಃ ಕಾರ್ಯಸಾಧಿಕಾ ।
ತೃಣೈರ್ಗುಣತ್ವಮಾಪನ್ನೈರ್ಬಧ್ಯಂತೇ ಮತ್ತದಂತಿನಃ ॥ ೧೦ ॥

ಕೇವಲ ಅಲ್ಪವೆನಿಸುವ ವಸ್ತುಗಳ ಸಂಘಟನೆಯೂ (ಒಗ್ಗಟ್ಟೂ) ಕಾರ್ಯಸಾಧನೆಯನ್ನು ಮಾಡುವುದು. ಹಗ್ಗದ ರೂಪವನ್ನು ಹೊಂದಿದ ಹುಲ್ಲುಗಳಿಂದ, ಮದಬಂದ ಆನೆಗಳೂ ಕಟ್ಟಲ್ಪಡುತ್ತವೆ.

ಷಡ್ ದೋಷಾ ಪುರುಷೇಣೇಹ ಹಾತವ್ಯಾ ಭೂತಿಮಿಚ್ಛತಾ ।
ನಿದ್ರಾ ತಂದ್ರಾ ಭಯಂ ಕ್ರೋಧಂ ಆಲಸ್ಯಂ ದೀರ್ಘಸೂತ್ರತಾ ॥ ೧೧ ॥

ಸಂಪತ್ತನ್ನು ಇಚ್ಛಿಸುವ ಪುರುಷನು ನಿದ್ದೆ, ಜಾಡ್ಯ, ಹೆದರಿಕೆ, ಸಿಟ್ಟು, ಆಲಸ್ಯ ದೀರ್ಘಾಲೋಚನೆ ಈ ಆರುಗಳನ್ನು ಬಿಡಬೇಕು.

ಅರಾವಪ್ಯುಚಿತಂ ಕಾರ್ಯಮಾತಿಥ್ಯಂ ಗೃಹಮಾಗತೇ ।
ಛೇತ್ತುಃ ಪಾರ್ಶ್ವಗತಾಂ ಛಾಯಾಂ ನೋಪಸಂಹರತೇ ದ್ರುಮಃ ॥ ೧೨ ॥

ಮನೆಗೆ ಬಂದ ಶತ್ರುವಿಗೂ ಯೋಗ್ಯವಾದ ಆತಿಥ್ಯವನ್ನು ಮಾಡಬೇಕು. ಮರವು, ತನ್ನ ಪಕ್ಕಕ್ಕೆ ಬಂದ ಮರವನ್ನು ಕಡಿಯುವವನಿಗೂ ನೆರಳನ್ನು ಕೊಡುತ್ತದೆ.

ಆಪತ್ಸು ಮಿತ್ರಂ ಜಾನಿಯಾದ್ಯುದ್ಧೇ ಶೂರಂಋಣೇ ಶುಚಿಂ ।
ಭಾರ್ಯಾಂ ಕ್ಷೀಣೇಷು ವಿತ್ತೇಷು ವ್ಯಸನೇಷು ಚ ಬಾಂಧವಾನ್ ॥ ೧೩ ॥

ಆಪತ್ತಿನಲ್ಲಿ ಮಿತ್ರನನ್ನೂ, ಯುದ್ಧದಲ್ಲಿ ಶೂರನನ್ನೂ, ಸಾಲದ ಕಷ್ಟ ಕಾಲದಲ್ಲಿ ಮರ್ಯಾದೆಯ ಶುಚಿತ್ವವನ್ನೂ, ಬಡತನ ಬಂದಾಗ ಹೆಂಡತಿಯನ್ನೂ ವ್ಯಸನಗಳಲ್ಲಿ ಬಾಂಧವರನ್ನೂ ತಿಳಿಯಬಹುದಾಗಿದೆ.

ಲೋಕಯಾತ್ರಾ ಭಯಂ ಲಜ್ಜಾ ದಾಕ್ಷಿಣ್ಯಂ ತ್ಯಾಗಶೀಲತಾ ॥
ಪಂಚಯತ್ರ ನ ವರ್ತಂತೇ ನ ಕುರ್ಯಾತ್ತತ್ರ ಸಂಸ್ಥಿತಿಂ ॥ ೧೪ ॥

ಲೋಕಾಚಾರ, ಹೆದರಿಕೆ, ನಾಚಿಕೆ, ದಾಕ್ಷಿಣ್ಯ, ಉದಾರ ಬುದ್ಧಿಯ ತ್ಯಾಗ ಈ ಐದುಗಳಿಲ್ಲದ ಕಡೆಯಲ್ಲಿ ನಿಲ್ಲಕೂಡದು.

ತತ್ರ ಮಿತ್ರ ನವಸ್ತವ್ಯಂ ಯತ್ರ ನಾಸ್ತಿ ಚತುಷ್ಟಯಂ ।
ಋಣದಾತಾ ಚ ವೈದ್ಯಶ್ಚ ಶ್ರೋತ್ರಿಯಃ ಸಜಲಾ ನದೀ ॥ ೧೫ ॥

ಸಾಲವನ್ನು ಕೊಡುವವ, ವೈದ್ಯ, ವಿದ್ವಾಂಸ ಮತ್ತು ನೀರಿನಿಂದ ತುಂಬಿರುವ ನದಿಗಳಿಲ್ಲದಲ್ಲಿ ವಾಸಿಸಕೂಡದು.

ಧನವಾನ್ ಬಲವಾನ್ ಲೋಕೇ ಸರ್ವಃ ಸರ್ವತ್ರ ಸರ್ವದಾ ।
ಪ್ರಭುತ್ವಂ ಧನಮೂಲಂ ಹಿ ರಾಜ್ಞಾಮಪ್ಯುಪಜಾಯತೇ ॥ ೧೬ ॥

ಯಾವಾಗಲೂ ಲೋಕದಲ್ಲಿ ಧನವಂತನು, ಬಲವಂತನೂ ಎಲ್ಲಾ ಕಡೆಯಲ್ಲಿಯೂ ಸಕಲನೂ ಆಗುತ್ತಾನೆ. ಅರಸರಿಗೂ ಹಣದ ಮೂಲಕ ಪ್ರಭುತ್ವ ಉಂಟಾಗುವುದಲ್ಲವೇ?

ನರಪತಿ ಹಿತ ಕರ್ತಾ ದ್ವೇಷ್ಯತಾಂ ಯಾತಿ ಲೋಕೇ ।
ಜನಪದ ಹಿತಕರ್ತಾ ತ್ಯಜ್ಯತೇ ಪಾರ್ಥಿವೇನ ।
ಇತಿ ಮಹತಿ ವಿರೋಧೇ ವಿದ್ಯಮಾನೇ ಸಮಾನೇ
ನೃಪತಿ ಜನಪದಾನಾಂ ದುರ್ಲಭಃ ಕಾರ್ಯಕರ್ತಾ ॥ ೧೭ ॥

ಲೋಕದಲ್ಲಿ ಹಿತವನ್ನು ಮಾಡುವ ರಾಜನು ದ್ವೇಷವನ್ನು ಹೊಂದುತ್ತಾನೆ. ದೇಶಕ್ಕೆ ಹಿತವನ್ನು ಮಾಡುವವನನ್ನು ರಾಜನು ಬಿಡುತ್ತಾನೆ. ಈ ರೀತಿಯಿಂದ ಸಮಾನವಾದ ಮಹಾವಿರೋಧ ಸ್ಥಿತಿ ಇರುವ ಕಾರಣ ದೇಶಕ್ಕೆ ರಾಜನೂ, ಕಾರ್ಯಕರ್ತೃವಾದ ಮುಂದಾಳುವೂ ಸಿಗುವುದು ದುರ್ಲಭವಾಗಿರುವುದು.

ಅಪುತ್ರಸ್ಯ ಗೃಹಂ ಶೂನ್ಯಂ ಸನ್ಮಿತ್ರರಹಿತಸ್ಯ ಚ ।
ಮೂರ್ಖಸ್ಯ ಚ ದಿಶಃ ಶೂನ್ಯಾಃ ಸರ್ವಂ ಶೂನ್ಯಾ ದರಿದ್ರತಾ ॥ ೧೮ ॥

ಉತ್ತಮರಾದ ಗೆಳೆಯರಿಲ್ಲದವನ ಮತ್ತು ಮಕ್ಕಳಿಲ್ಲದವನ ಮನೆಯು ಬರಿದಾಗಿರುವುದು. ಮೂರ್ಖನಿಗೆ, ನೋಡಿದ ದಿಕ್ಕು ಶೂನ್ಯವಾಗಿರುವುದು. ಬಡತನವು ಎಲ್ಲಾ ಬಗೆಯಿಂದಲೂ ಶೂನ್ಯತ್ವವುಳ್ಳದು.

ಅರ್ಥನಾಶಂ ಮನಸ್ತಾಪಂ ಗೃಹೇ ದುಶ್ಚರಿತಾನಿ ಚ ।
ವಚನಂ ಚಾಪಮಾನಂ ಚ ಮತಿಮಾನ್ನ ಪ್ರಕಾಶಯೇತ್ ॥ ೧೯ ॥

ಬುದ್ಧಿವಂತನು ಧನನಾಶವನ್ನೂ ಮನಸ್ಸಿನ ತಾಪವನ್ನೂ, ಮನೆಯು ಕೆಟ್ಟಕೆಲಸಗಳನ್ನೂ, ನಡೆದ ಮಾತುಕತೆಗಳನ್ನೂ, ಅಪಮಾನವನ್ನೂ ಹೊರಗೆಡಹಬಾರದು.

ದಾರಿದ್ರ್ಯಾತ್ ಹ್ರಿಯಮೇತಿ ಹ್ರೀ ಪರಿಗತಃಸತ್ವಾತ್ಪರಿಭ್ರಶ್ಯತೇ
ನಿಃಸತ್ವಃ ಪರಿಭೂಯತೇ ಪರಿಭವಾನ್ನಿರ್ವೇದಮಾಪದ್ಯತೇ ।
ನಿರ್ವಿಣ್ಣಃ ಶುಚಮೇತಿ ಶೋಕ ನಿಹತೋ ಬುದ್ಧ್ಯಾ ಪರಿತ್ಯಜ್ಯತೇ
ನಿರ್ಬುದ್ಧಿಃ ಕ್ಷಯಮೇತ್ಯಹೋ ನಿಧನತಾ ಸರ್ವಾಪದಾಮಾಸ್ಪದಂ ॥ ೨೦ ॥

ಬಡತನದಿಂದ ಲಜ್ಜೆಯೂ, ಲಜ್ಜೆಯಿಂದ ಮಾನವನ ಸತ್ವನಾಶವೂ ಸತ್ವನಾಶದಿಂದ ಅಪಮಾನವೂ, ಅಪಮಾನದಿಂದ ದುಃಖವೂ, ದುಃಖದಿಂದ ಬುದ್ಧಿನಾಶವೂ, ಬುದ್ಧಿನಾಶದಿಂದ ಜೀವನದ ನಾಶಸ್ಥಿತಿಯೂ ಉಂಟಾಗುತಿದ್ದು, ಬಡತನವು ಎಲ್ಲಾ ಆಪತ್ತುಗಳಿಗೂ ಕಾರಣವಾಗಿದೆ.

ಸಂಸಾರ ವಿಷವೃಕ್ಷಸ್ಯ ದ್ವೇಫಲೇ ಅಮೃತೋಪಮೇ ।
ಕಾವ್ಯಾಮೃತರಸಾಸ್ವಾದಃ ಸಂಗಮ ಸುಜನೈಃ ಸಹ ॥ ೨೧ ॥

ಸಂಸಾರದ ವಿಷದ ಮರಕ್ಕೆ ಕಾವ್ಯಾಮೃತ, ಸುಜನರ ಸಂಸರ್ಗವೆಂಬ ಎರಡು ಅಮೃತತುಲ್ಯ ಫಲಗಳು.

ದಾನಂ ಪ್ರಿಯವಾಕ್ಸಹಿತಂ ಜ್ಞಾನಮಗರ್ವಂ ಕ್ಷಮಾನ್ವಿತಂ ಶೌರ್ಯಂ
ವಿತ್ತಂ ತ್ಯಾಗನಿಯುಕ್ತಂ ದುರ್ಲಭಮೇತಚ್ಚತುಷ್ಟಯಂ ಲೋಕೇ ॥ ೨೨ ॥

ಪ್ರಿಯವಾದ ಮಾತಿನಿಂದ ಕೂಡಿರುವ ದಾನರೂಪವಾದ ತ್ಯಾಗ, ಗರ್ವವಿರದ ಜ್ಞಾನ, ಕ್ಷಮೆಯಿಂದ ಕೂಡಿದ ಶೌರ್ಯ, ತ್ಯಾಗಪ್ರೇರಣೆಯುಳ್ಳ ಧನ ಸಂಗ್ರಹ ಈ ನಾಲ್ಕು, ಲೋಕದಲ್ಲಿ ದುರ್ಲಭ.

ನಾಪ್ರಾಪ್ಯಮಭಿವಾಂಛಂತಿ ನಷ್ಟಂನೇಚ್ಛಂತಿ ಶೋಚಿತುಂ ।
ಆಪತ್ಸ್ವಪಿ ನ ಮುಹ್ಯಂತಿ ನರಾಃ ಪಂಡಿತ ಬುದ್ಧಯಃ ॥ ೨೩ ॥

ಪಂಡಿತನಾದ ಮನುಷ್ಯನು ಹೊಂದಲಸಾಧ್ಯವಾದುದನ್ನು ಇಚ್ಛಿಸುವುದಿಲ್ಲ. ನಷ್ಟವಾದ ವಿಷಯದಲ್ಲಿ ಚಿಂತೆಗೊಳ್ಳುವುದಿಲ್ಲ. ಕಷ್ಟಕಾಲದಲ್ಲಿ ಎದೆಗೆಡುವುದಿಲ್ಲ.

ನಿಪಾನಮಿವ ಮಂಡೂಕಾಃ ಸರಃ ಪೂರ್ಣಮಿವಾಂಡಜಾಃ ।
ಸೋದ್ಯೋಗಂ ನರಮಾಯಾಂತಿ ವಿವಶಾಃ ಸರ್ವಸಂಪದಃ ॥ ೨೪ ॥

ನೀರ ಹೊಂಡವನ್ನು ಕಪ್ಪೆಗಳು ಸೇರುವಂತೆಯೂ, ನೀರು ತುಂಬಿದ ಸರೋವರವನ್ನು ಹಕ್ಕಿಗಳು ಕೂಡುವಂತೆಯೂ ಉದ್ಯೋಗಶೀಲನಾದ ಮನುಷ್ಯನನ್ನು ಗತಿ ತೋರದೆ ಎಲ್ಲಾ ಸಂಪತ್ತುಗಳೂ ಬಂದು ಸೇರುವವು.

ಧನವಾನಿತಿ ಮದಸ್ತೇ ಕಿಂ ಗತ ವಿಭವೋ ವಿಷಾದಮುಪಯಾಸಿ ।
ಕರ ನಿಹತ ಕಂದುಕ ಸಮಾಃ ಪಾತೋತ್ಪಾತಾ ಮನುಷ್ಯಾಣಾಂ ॥ ೨೫ ॥

ಹಣವಂತನೆಂದು ನಿನಗೆ ಹೆಮ್ಮೆ ಏಕೆ? ಬಡತನ ಬಂತೆಂದು ದುಃಖವನ್ನೇಕೆ ಪಡುವೆ? ಕೈಯಿಂದ ಬಿದ್ದ ಚೆಂಡಿನ ಏರು ಬೀಳುಗಳಂತೆ ಮನುಷ್ಯರಿಗೆ ಉನ್ನತಿ ಅವನತಿಗಳಿರುತ್ತವೆ.

ವೃತ್ತ್ಯರ್ಥಂ ನಾತಿಚೇಷ್ಟೇತ ಸಾಹಿ ಧಾತ್ರೈವ ನಿರ್ಮಿತಾ ।
ಗರ್ಭಾದುತ್ಪತಿತೇ ಜಂತೌ ಮಾತುಃ ಪ್ರಸವತಃಸ್ತನೌ ॥ ೨೬ ॥

ಮಾನವನು ವೃತ್ತಿಗಾಗಿ ಹೆಚ್ಚು ಶ್ರಮಪಡುವ ಅಗತ್ಯವಿಲ್ಲ. ಅದು ಬ್ರಹ್ಮನಿಂದಲೇ ನಿರ್ಮಿತವಾದುದು. ಗರ್ಭದಿಂದ ಪ್ರಾಣಿ ಹೊರಬಿದ್ದೊಡನೆಯೇ ತಾಯಿಯ ಮೊಲೆಯಿಂದ ಹಾಲು ಸುರಿಯುತ್ತದೆ.

ರಾಜತಃ ಸಲಿಲಾದಗ್ನೇಶ್ಚೋರತಃ ಸ್ವಜನಾದಪಿ ।
ಭಯಮರ್ಥವತಾಂ ನಿತ್ಯಂ ಮೃತ್ಯೋಃ ಪ್ರಾಣಭೃತಾಮಿವ ॥ ೨೭ ॥

ಜೀವಿಗಳಿಗೆ ಮರಣಭಯವಿರುವಂತೆ ಸಂಪತ್ತುಳ್ಳವರಿಗೆ ರಾಜನಿಂದಲೂ, ನೀರಿನಿಂದಲೂ, ಬೆಂಕಿಯಿಂದಲೂ ಕಳ್ಳರಿಂದಲೂ, ಸ್ವಜನರಿಂದಲೂ ನಿತ್ಯ ಭಯವಿರುವುದು.

ಅವ್ಯವಸಾಯಿನಮಲಸಂ ದೈವಪರಂ ಸಾಹಸಾಚ್ಚಪರಿಹೀನಂ ।
ಪ್ರಮದೇವಹಿ ವೃದ್ಧಪತಿಂ ನೇಚ್ಛತ್ಯುಪಗೂಹಿತುಂ ಲಕ್ಷ್ಮೀಃ ॥ ೨೮ ॥

ಕೆಲಸವಮಾಡದ ಆಲಸಿಯನ್ನೂ ಅದೃಷ್ಟವಾದಿಯನ್ನೂ ಪ್ರಯತ್ನ ಗೊಳ್ಳದವನನ್ನೂ ಮುದುಕನಾದ ಗಂಡನನ್ನು ಹೆಂಡತಿಯು ಸೇರದಂತೆ ಲಕ್ಷ್ಮಿಯು ಸೇರಲು ಬಯಸುವುದಿಲ್ಲ.

ಕೋತಿಭಾರಃ ಸಮರ್ಥಾನಾಂ ಕಿಂದೂರಂ ವ್ಯವಸಾಯಿನಾಂ ।
ಕೋವಿದೇಶಃ ಸವಿದ್ಯಾನಾಂ ಕಃಪರಃ ಪ್ರಿಯವಾದಿನಾಂ ॥ ೨೯ ॥

ಸಮರ್ಥರಾದವರಿಗೆ ಯಾವುದು ಅತಿ ಭಾರವಾಗಿ ತೋರುವುದು? ಉದ್ಯೋಗಶೀಲರಿಗೆ ಯಾವುದು ದೂರವಾದುದು? ವಿದ್ಯಾವಂತರಿಗೆ ಯಾವುದು ವಿದೇಶ? ಪ್ರಿಯವಾದ ನುಡಿಯುಳ್ಳವರಿಗೆ ಯಾರು ಶತ್ರುವು?

ಸೇವಯಾಧನಮಿಚ್ಛದ್ಭಿಃ ಸೇವಕೈಃ ಪಶ್ಯಯತ್ಕೃತಂ ।
ಸ್ವಾತಂತ್ರ್ಯಂಯಚ್ಚರೀರಸ್ಯ ಮೂಢೈಸ್ತದಪಿಹಾರಿತಂ ॥ ೩೦ ॥

ಸೇವಕತನದಿಂದ ಧನವನ್ನು ಬಯಸುವ ಸೇವಕರಿಂದ ಮಾಡಲಾದ ಕೆಲಸವನ್ನು ನೋಡು. ಮೂಢರಾದ ಅವರಿಂದ ದೇಹದ ಯಾವುದೊಂದು ಸ್ವಾತಂತ್ರ್ಯವಿದೆಯೋ ಅದನ್ನೂ ಕಳೆಯಲಾಗಿದೆ.

ಅಶ್ವಃ ಶಸ್ತ್ರಂ ಶಾಸ್ತ್ರಂ ವೀಣಾ ವಾಣೀನರಶ್ಚ ನಾರೀಚ ।
ಪುರುಷ ವಿಶೇಷಂ ಪ್ರಾಪ್ಯಹಿ ಭವಂತಿ ಯೋಗ್ಯಾ ಅಯೋಗ್ಯಾಶ್ಚ ॥ ೩೧ ॥

ಕುದುರೆ, ಶಸ್ತ್ರ, ಶಾಸ್ತ್ರ, ವೀಣೆ, ಮಾತು, ಗಂಡುಸು ಮತ್ತು ಹೆಂಗುಸರು ವ್ಯಕ್ತಿ ವಿಶೇಷವನ್ನು ಹೊಂದಿ ಯೋಗ್ಯರೂ ಅಯೋಗ್ಯರೂ ಆಗುತ್ತಾರೆ.

ಪಯಃ ಪಾನಂ ಭುಜಂಗಾನಾಂ ಕೇವಲಂ ವಿಷವರ್ಧನಂ ।
ಉಪದೇಶೋ ಹಿ ಮೂರ್ಖಾಣಾಂ ಪ್ರಕೋಪಾಯ ನ ಶಾಂತಯೇ ॥ ೩೨ ॥

ಹಾವಿಗೆ ಹಾಲನ್ನು ಕುಡಿಸಿದರೆ ಕೇವಲ ವಿಷದ ಏರುವಿಕೆಯುಂಟಾಗುವುದು. ಅಂತೆಯೇ ಮೂರ್ಖರಿಗೆ ಉಪದೇಶಿಸಿದರೆ ಸಿಟ್ಟಿಗೆ ಕಾರಣವಾಗುವುದಲ್ಲದೆ ಶಾಂತಿಗಾಗದು.

ಹೀನ ಸೇವಾ ನಕರ್ತವ್ಯಾ ಕರ್ತವ್ಯೋ ಮಹದಾಶ್ರಯಃ
ಪಯೋಪಿ ಶೌಂಡಿಕೀ ಹಸ್ತೇ ವಾರುಣೀತ್ಯಭಿಧೀಯತೇ ॥ ೩೩ ॥

ಹೀನ ಜನರ ಸೇವೆಯನ್ನು ಎಂದೂ ಮಾಡಕೂಡದು. ಮಹಾಜನರ ಆಶ್ರಯವನ್ನು ಹೊಂದಬೇಕು. ಹಾಲು, ಹೆಂಡ ಮಾರುವವಳ ಕೈಯನ್ನು ಹೊಂದಿದಾಗ ಹೆಂಡವೆಂದೇ ಹೇಳಲ್ಪಡುತ್ತದೆ.

ಖ್ಯಾತಃ ಸರ್ವರಸಾನಾಂ ಹಿ ಲವಣೋ ರಸ ಉತ್ತಮಃ ।
ಗೃಹೀತಂ ಚ ವಿನಾ ತೇನ ವ್ಯಂಜನಂ ಗೋಮಯಾಯತೇ ॥ ೩೪ ॥

ಎಲ್ಲಾ ರಸಗಳಲ್ಲೂ ಲವಣ (ಉಪ್ಪು) ರಸ ಹೆಸರುಗೊಂಡುದೂ ಉತ್ತಮವಾದುದೂ ಆಗಿದೆ. ಅದನ್ನು ಸೇರಿಸದ ಮೇಲೋಗರವು ಸೆಗಣಿಯಂತಾಗುತ್ತದೆ.

ಅಸಂತುಷ್ಟಾ ದ್ವಿಜಾ ನಷ್ಟಾಃ ಸಂತುಷ್ಟಾಶ್ಚ ಮಹೀಭುಜಃ ।
ಸಲಜ್ಜಾ ಗಣಿಕಾ ನಷ್ಟಾ ನಿರ್ಲಜ್ಜಾಶ್ಚ ಕುಲಸ್ತ್ರಿಯಃ ॥ ೩೫ ॥

ಸಂತುಷ್ಟನಾಗದ ಬ್ರಾಹ್ಮಣನೂ ಸಂತುಷ್ಟನಾದ ರಾಜನೂ ನಷ್ಟಪ್ರಾಯರಾಗುವರು. ಲಜ್ಜೆಯಿಂದ ಕೂಡಿದ ವೇಶ್ಯೆಯೂ ನಾಚಿಕೆಯಿಲ್ಲದ ಕುಲಸ್ತ್ರೀಯೂ ನಷ್ಟರಾಗುತ್ತಾರೆ.

ಪರೋಪಿ ಹಿತವಾನ್ ಬಂಧುರ್ಬಂಧುರಪ್ಯಹಿತಃ ಪರಃ ।
ಅಹಿತೋ ದೇಹಜೋ ವ್ಯಾಧಿರ್ಹಿತಮಾರಣ್ಯಮೌಷಧಂ ॥ ೩೬ ॥

ಹಿತವನ್ನುಂಟು ಮಾಡುವ ಶತ್ರುವೂ ಬಂಧುವು. ಅಹಿತವನ್ನುಂಟು ಮಾಡುವ ಬಂಧುವು ಶತ್ರುವು. ದೇಹದಲ್ಲಿ ಹುಟ್ಟಿದ ವ್ಯಾಧಿಯಾದರೂ ಅಹಿತ. ಔಷಧವು ಕಾಡು ಮೂಲಿಕೆಗಳಿಂದಾದುದಾದರೂ ಹಿತ.

ಮಾಂಸಲುಬ್ಧೋ ಯಥಾ ಮತ್ಸ್ಯೋ ಲೋಹ ಶಂಕುಂ ನಪಶ್ಯತಿ ।
ಸುಖಲುಬ್ಧಸ್ತಥಾದೇಹಿ ಯಮಬಾಧಾಂ ನಪಶ್ಯತಿ ॥ ೩೭ ॥

ಮಾಂಸಕ್ಕೆ ಆಶೆಗೊಂಡ ಮೀನು ಗಾಳವನ್ನು ಕಾಣದಂತೆ ಸುಖಕ್ಕೆ ಆಶೆಗೊಂಡ ಮನುಷ್ಯನು ಯಮಬಾಧೆಯನ್ನು ಕಾಣುವುದಿಲ್ಲ.

ಯಾವನ್ನಾಶ್ರಯತೇ ದುಃಖಂ ಯಾವನ್ನಾಯಾಂತಿ ಸಂಪದಃ ।
ಯಾವನ್ನೇಂದ್ರಿಯ ವೈಕಲ್ಯಂ ತಾವತ್ ಶ್ರೇಯಃ ಸಮಭ್ಯಸೇತ್ ॥ ೩೮ ॥

ಎಷ್ಟರ ವರೆಗೆ ದುಃಖ ಆಪತ್ತುಗಳು ಮತ್ತು ಇಂದ್ರಿಯ ದೌರ್ಬಲ್ಯ ಇವು ಬಂದು ತಗಲುವುದಿಲ್ಲವೋ ಅಷ್ಟರ ವರೆಗೆ ಶ್ರೇಯಸ್ಸನ್ನು ಪಡೆಯ ತಕ್ಕದ್ದು.

ತೃಣಪರ್ಣೋದಕಾಹಾರಾಃ ಸತತಂ ವನವಾಸಿನಃ ।
ಜಂಬೂಕಾಖು ಮೃಗಾದ್ಯಾಶ್ಚ ತಾಪಸಾಸ್ತೇ ಭವಂತಿ ಕಿಂ ॥ ೩೯ ॥

ವನವಾಸಿಗಳು ಯಾವಾಗಲೂ ಹುಲ್ಲು, ಎಲೆ, ನೀರು, ಆಹಾರವಾಗು ಳ್ಳವರು. ನರಿ, ಇಲಿ, ಮೃಗಾದಿಗಳು ವನವಾಸಿಗಳಾದರೂ ಅವು ತಾಪಸ ರಾಗುವವೇನು?

ಗೃಹಾರಣ್ಯ ಸಮಾಲೋಕೇ ಗತವ್ರೀಡಾ ದಿಗಂಬರಾಃ ।
ಚರಂತಿ ಗರ್ದಭಾದ್ಯಾಶ್ಚ ವಿರಕ್ತಾಸ್ತೇ ಭವಂತಿ ಕಿಂ ॥ ೪೦ ॥

ದಿಗಂಬರರು ಗೃಹಾರಣ್ಯವನ್ನು ನೋಡಿದಾಗ ನಾಚುಗೆ ಹೋದವರಾ ಗುವರು. ಕತ್ತೆ ಮೊದಲಾದುವುಗಳು ನಗ್ನವಾಗಿ ಸಂಚರಿಸುತಿದ್ದರೂ ಅವು ವಿರಕ್ತ ಜೀವನದವೇ? (ದಿಗಂಬರತ್ವದಿಂದ ವಿರಕ್ತರಾದರೆ ನಗ್ನ ಮೃಗ ಯಾಕಲ್ಲ?)

ಜಟಾಭಾರಾಜಿನೈರ್ಯುಕ್ತಾ ದಾಂಭಿಕಾ ವೇಷಧಾರಿಣಃ ।
ಭ್ರಮಂತಿ ಜ್ಞಾನಿವಲ್ಲೋಕೇ ಭ್ರಾಮಯಂತಿ ಜನಾನಪಿ ॥ ೪೧ ॥

ಜಟೆ, ಕೃಷ್ಣಮೃಗದ ಚರ್ಮಗಳಿಂದ ಕೂಡಿ ಡಾಂಭಿಕ ವೇಷವನ್ನು ಧರಿಸಿದವರು ಜ್ಞಾನಿಗಳಂತೆ ತಿರುಗಾಡುತ್ತಾರೆ. ಜನರನ್ನೂ ಕೂಡ ಮರು ಳುಗೊಳಿಸುತ್ತಾರೆ.

ಆತ್ಮೈವಯದಿನಾತ್ಮಾನಂ ಅಹಿತೇ ಭ್ಯೋ ನಿವಾರಯೇತ್ ।
ಕೋನ್ಯೋಹಿತಕರಸ್ತಸ್ಮಾದಾತ್ಮಾನಂತಾರಯಿಷ್ಯತಿ ॥ ೪೨ ॥

ತಾನೇ ತನ್ನನ್ನು ಕೆಟ್ಟ ಕೆಲಸಗಳಿಂದ ದೂರ ಮಾಡದಿದ್ದರೆ ಮತ್ತೆ ಯಾರು ಹಿತನನ್ನುಂಟುಮಾಡುವವರು ಮತ್ತು ಉದ್ಧಾರ ಮಾಡತಕ್ಕ ವರು?

ಲೋಹದಾರುಮಯೈಃ ಪಾಶೈಃ ಪುಮಾನ್ ಬದ್ಧೋ ವಿಮುಚ್ಯತೇ ।
ಪುತ್ರ ದಾರಮಯೈಃ ಪಾಶೈಃ ಮುಚ್ಯತೇ ನಕದಾಚನ ॥ ೪೩ ॥

ಕಬ್ಬಿಣ, ಮರ, ಬಳ್ಳಿಗಳಿಂದ ಬಂಧನಗೊಂಡವನು ಬಿಡುವಿಕೆಗೊಳ್ಳು. ವನು. ಮಕ್ಕಳು ಹೆಂಡಿರ ಪಾಶದಿಂದ ಬಂಧನಗೊಂಡವನು ಎಂದೂ ಬಿಡು. ವಿಕೆಯುನ್ನು ಹೊಂದುವುದಿಲ್ಲ.

ಸತ್ಪಾತ್ರೇ ತೀರ್ಥಯಾತ್ರಾಯಾಂ ವಿವಾಹೇ ಯಜ್ಞಕರ್ಮಸು ।
ವಾಪೀ ಕೂಪ ತಾಟಾಕೇಷು ದಾತೃಣಾಂ ಧನಮ್ಪುಚ್ಯತೀ ॥ ೪೪ ॥

ದಾನಿಗಳ (ಪುಣ್ಯವಂತರ) ಧನ 'ಸತ್ಪಾತ್ರ, ತೀರ್ಥಯಾತ್ರೆ, ಮದುವೆ ಯಜ್ಞ, ಕೆರೆ, ಬಾವಿ, ತಟಾಕಗಳಿಗೆ ವೆಚ್ಚವಾಗುವುದು.

ಮೋಕ್ಷದ್ವಾರೇ ದ್ವಾರಪಾಲಾಶ್ಚತ್ವಾರಃ ಪರಿಕೀರ್ತಿತಾಃ ।
ಶಮೋ ವಿಚಾರಃ ಸಂತೋಷ ಶ್ಚತುರ್ಥಃ ಸಾಧುಸಂಗಮಃ ॥ ೪೫ ॥

ಇಂದ್ರಿಯನಿಗ್ರಹ, ವಿಚಾರ ಶಕ್ತಿ, ಸಂತೋಷ, ಸಜ್ಜನರ ಸಂಸರ್ಗ ಇವೇ ನಾಲ್ಕು ಮೋಕ್ಷದ ದ್ವಾರಪಾಲಕರು.

ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।
ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಭಿ ಜಾಯತೇ ।
ಕ್ರೋಧಾದ್ಭವತಿ ಸಂಮೋಹಃ ಸಮ್ಮೋಹಾತ್ ಸ್ಮೃತಿ ವಿಭ್ರಮಃ ।
ಸ್ಮೃತಿಭ್ರಂಶಾತ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ॥ ೪೬ ॥

ವಿಷಯುಗಳನ್ನು ಚಿಂತಿಸುವವನಿಗೆ ಅವುಗಳಲ್ಲಿ ಆಸಕ್ತಿ ಉಂಟಾಗು. ವುದು. ಆಸಕ್ತಿಯಿಂದ ಆಶೆ, ಆಶೆಯಿಂದ ಸಿಟ್ಟು, ಸಿಟ್ಟಿನಿಂದ ಮೋಹ, ಮೋಹದಿಂದ ಅವಿವೇಕ ಅವಿವೇಕದಿಂದ ಬುದ್ಧಿನಾಶ, ಬುದ್ಧಿ ನಾಶದಿಂದ ಸರ್ವ ನಾಶ ಉಂಟಾಗುತ್ತಿರುವುದು.

ಏಕಸ್ಯ ಕರ್ಮ ಸಂವೀಕ್ಷ್ಯ ಕರೋತ್ಯನ್ಯೋ ವಿಗರ್ಹಿತಂ ।
ಗತಾನುಗತಿಕೋ ಲೋಕಃ ನಲೋಕಃ ಪಾರಮಾರ್ಥಿಕಃ ॥ ೪೭ ॥

ದುಷ್ಕರ್ಮವನ್ನು ಮಾಡುವುದರಲ್ಲಿ ಒಬ್ಬರನ್ನು ಇನ್ನೊಬ್ಬರು ಹಿಂಬಾ ಲಿಸುವರಲ್ಲದೆ ಪಾರಮಾರ್ಥಿಕ ವಿಷಯದಲ್ಲಿ ಹಾಗೆ ಮಾಡುವುದಿಲ್ಲ.

ಕಾಮಂ ಕ್ರೋಧಂ ತಥಾ ಲೋಭಂ ಸ್ವಾದು ಶೃಂಗಾರ ಕೌತುಕೇ ।
ಅತಿ ನಿದ್ರಾತಿ ಸೇವೇಚ ವಿದ್ಯಾರ್ಥೀಹ್ಯಷ್ಟವರ್ಜಯೇತ್ ॥ ೪೮ ॥

ಕಾಮ, ಕ್ರೋಧ, ಲೋಭ, ಸ್ವಾದು ಭೋಜನ, ಶೃಂಗಾರ, ಆಟ ವಿನೋದ, ಅತಿ ನಿದ್ರೆ, ಸೇವಾವೃತ್ತಿ ಈ ಎಂಟನ್ನು ವಿದ್ಯಾರ್ಥಿಯು ಬಿಡಬೇಕು.

ಸುಖಾರ್ಥೀಚೇತ್ ತ್ಯಜೇತ್ ವಿದ್ಯಾಂ ವಿದ್ಯಾರ್ಥೀಚೇತ್ ತ್ಯಜೇತ್ಸುಖಂ ।
ಸುಖಾರ್ಥಿನಃ ಕುತೋ ವಿದ್ಯಾ ಕುತೋ ವಿದ್ಯಾರ್ಥಿನಃ ಸುಖಂ ॥ ೪೯ ॥

ಸುಖವನ್ನು ಬಯಸುವುದಿದ್ದರೆ ವಿದ್ಯೆಯನ್ನು ಬಿಡಬೇಕು. ವಿದ್ಯಾರ್ಥಿಯಾದರೆ ಸುಖವನ್ನು ಬಿಡಬೇಕು. ಸುಖವನ್ನು ಇಚ್ಛಿಸುವವನಿಗೆ ವಿದ್ಯೆಯು ಎಲ್ಲಿಂದ ಬರುವುದು! ವಿದ್ಯಾರ್ಥಿಗೆ ಸುಖವು ಎಲ್ಲಿರುವುದು!

ಅನ್ಯಾಯೋಪಾರ್ಜಿತಂ ದ್ರವ್ಯಂ ದಶವರ್ಷಾಣಿ ತಿಷ್ಠತಿ ।
ಪ್ರಾಪ್ತೇತ್ವೇಕಾದಶೇ ವರ್ಷೇ ಸ ಮೂಲಂ ಸ ವಿನಶ್ಯತಿ ॥ ೫೦ ॥

ಅನ್ಯಾಯದಿಂದ ಸಂಗ್ರಹಿಸಿದ ಸಂಪತ್ತು ಹತ್ತು ವರ್ಷ ನಿಲ್ಲುವುದು. ಹನ್ನೊಂದನೆ ವರ್ಷ ಬಂದೊಡನೆ ಸಮೂಲ ನಾಶಗೊಳ್ಳುವುದು.

ದೌರ್ಮಂತ್ರ್ಯಾನ್ನೃಪತಿರ್ವಿನಶ್ಯತಿ ಯತಿಸ್ಸಂಗಾತ್ಸುತೋಲಾಲನಾ—
ದ್ವಿಪ್ರೋನಧ್ಯಯನಾತ್ಕುಲಂ ಕುತನಯಾಚ್ಛೀಲಂಖಲೋಪಾಸನಾತ್ ।
ಹ್ರೀಮದ್ಯಾದನವೇಕ್ಷಣಾದಪಿಕೃಷಿಃ ಸ್ನೇಹ ಪ್ರವಾಸಾಶ್ರಯಾತ್
ಮೈತ್ರೀ ಚಾಪ್ರಣಯಾತ್ಸಮೃದ್ಧಿರನಯಾತ್ತ್ಯಾಗಾತ್ಪ್ರಮಾದ್ಧನಂ ॥ ೫೧ ॥

ದುರಾಲೋಚನೆಯಿಂದ ರಾಜ, ಸಂಗದಿಂದ ಯತಿ, ಲಾಲನೆಯಿಂದ ಮಗ, ಅನಧ್ಯಯನದಿಂದ ಬ್ರಾಹ್ಮಣ, ಕೆಟ್ಟ ಮಗನಿಂದ ಕುಲ, ದುಷ್ಟರ ಸೇವೆಯಿಂದ ಶೀಲ, ಮದ್ಯದಿಂದ ನಾಚಿಕೆ, ನೋಡದೆ ಕೃಷಿ, ದೂರವಾಸದಿಂದ ಸ್ನೇಹ, ಅಧರ್ಮದಿಂದ ವೃದ್ಧಿ, ವ್ಯಯ ಯಾ ಬುದ್ಧಿ ಶೂನ್ಯತೆಯಿಂದ ಧನ ನಾಶವಾಗುತ್ತಿರುವುದು.

ಪಾಂಡಿತ್ಯಸ್ಯ ವಿಭೂಷಣಂ ಮಧುರತಾ ಶೌರ್ಯಸ್ಯ ವಾಕ್ ಸಂಯಮೋ
ಜ್ಞಾನಸ್ಯೋಪಶಮಃ ಕುಲಸ್ಯ ವಿನಯಃ ಸೌಜನ್ಯಮರ್ಥಸ್ಯ ಚ ।
ಅಕ್ರೋಧಸ್ತಪಸಃ ಕ್ಷಮಾ ಪ್ರಭವತಃ ಧರ್ಮಸ್ಯ ನಿರ್ವ್ಯಾಜತಾ
ಸರ್ವಸ್ಯಾಪ್ಯಸ್ಯ ಪುನಸ್ತಥೈವ ಜಗತಃ ಶೀಲಂ ಪರಂ ಭೂಷಣಂ ॥ ೫೨ ॥

ಪಾಂಡಿತ್ಯಕ್ಕೆ ಮಧುರವಾದ ಭಾಷಣವೇ ಅಲಂಕಾರವು. ಶೌರ್ಯಕ್ಕೆ ಮಾತನ್ನು ನಿಯಮಗೊಳಿಸುವಿಕೆಯೇ ಅಲಂಕಾರವು. ಜ್ಞಾನಕ್ಕೆ ಶಾಂತಿಯೇ ಅಲಂಕಾರವು. ಕುಲಕ್ಕೆ ವಿನಯವೇ ಅಲಂಕಾರವು. ಸಂಪತ್ತಿಗೆ ಸೌಜನ್ಯತೆಯೇ ಭೂಷಣವು. ತಪಸ್ಸಿಗೆ ಸಿಟ್ಟಿಲ್ಲದಿರುವಿಕೆಯೇ ಅಲಂಕಾರವು. ಬಲವಂತನಿಗೆ ಕ್ಷಮೆಯೇ ಅಲಂಕಾರವು. ಧರ್ಮಕ್ಕೆ ನಿಷ್ಕಪಟತೆಯೇ ಅಲಂಕಾರವು. ಇವೆಲ್ಲಕ್ಕೂ ಜಗತ್ತಿನ ಜನತೆಗೂ ಶೀಲವೇ ಪರಮೋತ್ತಮವಾದ ಅಲಂಕಾರವು.

ಅಕೃತ್ಯಂ ನೈವ ಕರ್ತವ್ಯಂ ಪ್ರಾಣತ್ಯಾಗೇಪಿ ಸಂಸ್ಥಿತೇ ।
ನ ಚ ಕೃತ್ಯಂ ಪರಿತ್ಯಾಜ್ಯಂ ಧರ್ಮಏಷ್ಸನಾತನ ॥ ೫೩ ॥

ಪ್ರಾಣವನ್ನು ಬಿಡಬೇಕಾದ ಸಂಭವ ಬಂದರೂ ಮಾಡಬಾರದ ಕೆಲಸವನ್ನು ಮಾಡಬಾರದು. ಮಾಡತಕ್ಕ ಕೆಲಸವನ್ನು ಬಿಡಬಾರದು. ಇದು ಸನಾತನ ಧರ್ಮವಾಗಿದೆ.

ಏಷಾಂ ನ ವಿದ್ಯಾ ನ ತಪೋ ನ ದಾನಂ ಜ್ಞಾನಂ ನ ಶೀಲಂ
ನ ಗುಣೋ ನ ಧರ್ಮಃ ।
ತೇ ಮೃತ್ಯು ಲೋಕೇ ಭುವಿ ಭಾರಭೂತಾಃ ಮನುಷ್ಯರೂಪೇಣ
ಮೃಗಾಶ್ಚರಂತಿ ॥ ೫೪ ॥

ಯಾರಿಗೆ ವಿದ್ಯೆ, ತಪಸ್ಸು, ದಾನ, ಜ್ಞಾನ, ಒಳ್ಳೆಯ ನಡತೆ, ಗುಣ, ಧರ್ಮಗಳಿಲ್ಲವೋ ಅವರು ಕೇವಲ ಭೂಭಾರಭೂತರಾಗಿ ಮನುಷ್ಯರೂಪದ ಮೃಗಗಳಾಗಿ ಸಂಚರಿಸುತ್ತಾರೆ.

ನ ಹಿ ಸತ್ಯಾತ್ಪರೋ ಧರ್ಮಃ ನಾನೃತಾತ್ಪಾತಕಂ ಪರಂ !
ಕುರುಪುಣ್ಯಮಹೋರಾತ್ರಂ ಸ್ಮರೇನ್ನಿತ್ಯಮನಿತ್ಯತಾಂ || ೫೫ ||

ಸತ್ಯಕ್ಕಿಂತ ಹಿರಿಯ ಧರ್ಮವಿಲ್ಲ. ಸುಳ್ಳಿಗಿಂತ ದೊಡ್ಡ ಪಾಪವಿಲ್ಲ. ರಾತ್ರಿ ಹಗಲು ಪುಣ್ಯವನ್ನು ಸಂಪಾದಿಸು. ದೇಹವು ಸ್ಥಿರವಲ್ಲವೆಂದು ನೆನಪಿನಲ್ಲಿಡುತ್ತಿರು.

ಬಾಲಸ್ತಾವತ್ಕ್ರೀಡಾಸಕ್ತಸ್ತರುಣಸ್ತಾವತ್ತರುಣೀ ಸಕ್ತಃ ||
ವೃದ್ಧಸ್ತಾವಚ್ಚಿಂತಾಸಕ್ತಃ ಪರೇ ಬ್ರಹ್ಮಣಿ ಕೋಪಿ ನ ಸಕ್ತಃ || ೫೬ ||

ಹುಡುಗನು ಆಡುವುದರಲ್ಲಿ ಆಸಕ್ತನಾಗಿರುವನು. ತರುಣನು ತರುಣೀ ವಿಷಯದಲ್ಲಿ ಆಸಕ್ತನಾಗಿರುವನು. ಮುದುಕನು ಯೋಚನಾ ಮಗ್ನನಾಗಿರುವನು. ಯಾರೂ ಪರಬ್ರಹ್ಮಾಸಕ್ತರಿರುವುದಿಲ್ಲ.

ವಸ್ತ್ರೇಣ ವಪುಷಾ ವಾಚಾ ವಿದ್ಯಯಾ ವಿಭವೇನ ಚ |
ವಕಾರ ಪಂಚಭಿರ್ಹೀನೋ ನರೋ ನಾಪ್ನೋತಿ ಗೌರವಂ || ೫೭ ||

ವಸ್ತ್ರದಿಂದ, ದೇಹದಿಂದ, ಮಾತಿನಿಂದ, ವಿದ್ಯೆಯಿಂದ, ವೈಭವದಿಂದ— ಈ ವಕಾರಾದಿಯಾದ ಪಂಚಕಗಳಿಂದ (ವಕಾರಾದಿ ಐದರಿಂದ) ಹೀನನಾದ ಮನುಷ್ಯನು ಗೌರವವನ್ನು ಹೊಂದುವುದಿಲ್ಲ.

ಅರ್ಥಾರ್ಥೀ ಯಾನಿ ದುಃಖಾನಿ ಸಹತೇ ಕೃಪಣೋ ಜನಃ |
ತಾನ್ಯೇವ ಯದಿ ಧರ್ಮಾರ್ಥೀ ನ ಭೂಯೋ ಜನ್ಮಭಾಗ್ಭವೇತ್ || ೫೮ ||

ಕೃಪಣನು ಹಣವನ್ನು ಆಶಿಸಿ ಯಾವ ಕಷ್ಟಗಳನ್ನು ಸಹಿಸುವನೋ ಅಷ್ಟೇ ಕಷ್ಟವನ್ನು ಧರ್ಮವನ್ನು ಆಶಿಸಿ ಮಾಡಿದರೆ ಪುನರ್ಜನ್ಮವನ್ನು ತಾಳಲಾರನು. (ಮೋಕ್ಷಗೊಳ್ಳುವನು.)

ಆಶಯಾ ಬಧ್ಯತೇ ಲೋಕಃ ಕರ್ಮಣಾ ಬಹುಚಿಂತಯಾ |
ಆಶಾ ಹಿ ಪರಮಂ ದುಃಖಂ ನಿರಾಶಾ ಪರಮಂ ಸುಖಂ || ೫೯ ||

ಆಶೆಯಿಂದಲೂ, ಕೆಲಸದಿಂದಲೂ, ಬಹು ಚಿಂತೆಯಿಂದಲೂ ಪ್ರಪಂಚದ ಜನರು ಬಂಧಿಸಲ್ಪಡುತ್ತಾರೆ. ಆಶೆಯೇ ಮಹಾದುಃಖವಾಗಿರುವುದು. ಆಶೆಯನ್ನು ತೊರೆಯುವುದೇ ಪರಮ ಸುಖವಾಗಿರುವುದು.

ಆಶಾಯಾಃ ಯೇ ದಾಸಾಸ್ತೇ ದಾಸಾಃ ಸರ್ವಲೋಕಸ್ಯ ।
ಆಶಾ ದಾಸೀಕೃತಾಯೇನ ತಸ್ಯ ದಾಸಾಯತೇ ವಿಶ್ವಂ ॥ ೬೦ ॥

ಯಾರು ಆಶೆಯ ದಾಸರಾಗಿರುವರೋ ಅವರು ಲೋಕದ ಸಕಲಕ್ಕೂ ದಾಸರು. ಆಶೆಯನ್ನು ಯಾರು ದಾಸಿಯಾಗಿ ಮಾಡಿರುವರೋ ಅವರಿಗೆ ವಿಶ್ವವೇ ದಾಸ್ಯಗೊಳ್ಳುವುದು.

ಕಾತೇ ಕಾಂತಾ ಕಸ್ತೇ ಪುತ್ರಃ ಸಂಸಾರೋಽಯಮತಿ ವಿಚಿತ್ರಃ
ಕಸ್ಯತ್ವಂ ಕುತಆಯಾತಃ ಚಿಂತಯ ತದಿಹ ಭ್ರಾಂತಃ ॥
ಸಾರೀಸ್ತನ ಭರ ನಾಭೀ ದೇಶಂ ದೃಷ್ಟ್ವಾಮಾಗಾ ಮೋಹಾವೇಶಂ ।
ಏತನ್ಮಾಂಸವಸಾದಿ ವಿಕಾರಂ ಮನಸಿ ವಿಚಿಂತಯ ವಾರಂ ವಾರಂ ॥ ೬೧ ॥

ತನ್ನ ಹೆಂಡತಿ ಯಾರು? ತನ್ನ ಮಗನು ಯಾರು? ತಾನು ಯಾರು? ತನ್ನ ಹುಟ್ಟು ಎಲ್ಲಿಂದ? ಎಂಬುದನ್ನು ಎಲೇ ಭ್ರಾಂತನೇ ವಿಚಾರಿಸು. ಈ ಸಂಸಾರ ಅತಿ ವಿಚಿತ್ರವಾಗಿರುತ್ತದೆ. ಹೆಂಗಸಿನ ಸ್ತನ (ಮೊಲೆಯ ಭಾರ) ಹೊಕ್ಕುಳು, ಗಳಸ್ಥಾನವನ್ನು ನೋಡಿ ಮರುಳಾಗಬೇಡ. ಇದು ಮಾಂಸ, ವಸಾ ಮೊದಲಾದ ಧಾತುವಿಕಾರಾದಿಗಳಿಂದ್ಯಕೂಡಿದ್ದು. ಇದನ್ನು ಅಡಿಗಡಿಗೆ ಆಲೋಚಿಸುತ್ತಿರು. ಕಾಮವಶನಾಗಬೇಡ.

ಮೂಢ ಜಹೀಹಿ ಧನಾಗಮ ತೃಷ್ಣಾಂ ಕುರುಸದ್ಬುದ್ಧಿಂ ಮನಸಿ ವಿತೃಷ್ಣಾಂ ।
ಯಲ್ಲಭಸೇ ನಿಜಕರ್ಮೋಪಾತ್ತಂ ವಿತ್ತಂತೇನ ವಿನೋದಯ ಚಿತ್ತಂ ॥ ೬೨ ॥

ಎಲೆ ತಿಳಿಗೇಡಿ ಮಾನವಾ! ಧನಸಂಗ್ರಹದ ಬಾಯಾರಿಕೆಯನ್ನು ಬಿಟ್ಟುಬಿಡು. ತೃಷ್ಣಾರಹಿತವಾದ ಉತ್ತಮವಾದ ವಿಚಾರವನ್ನು ಮನಸ್ಸಿನಲ್ಲಿಡು. ತನ್ನ ಕರ್ಮದ ಮೂಲಕ ಯಾವುದನ್ನು ಹೊಂದುವೆಯೋ ಆ ಸಂಪತ್ತಿನಿಂದ ಮನಸ್ಸನ್ನು ವಿನೋದಗೊಳಿಸು.

ಕಿಂ ಕರ್ಮ ಯತ್ಪ್ರೀತಿ ಕರಂ ಮುರಾರೇಃ ಜಾಗರ್ತಿಕೋವಾ ಸದಸದ್ವಿವೇಕೀ ।
ಕೇಶತ್ರವಃಸಂತಿ ನಿಜೇಂದ್ರಿಯಾಣಿ ತಾನ್ಯೇವ ಮಿತ್ರಾಣಿ ಜಿತಾನಿ ತಾನಿ ॥ ೬೩ ॥

ಕರ್ಮವು ಯಾವುದು? ದೇವರಿಗೆ (ಮುರಾರಿ=ಶ್ರೀಕೃಷ್ಣ) ಪ್ರೀತಿಯನ್ನುಂಟುಮಾಡುವ ಕೆಲಸವೇ ಕರ್ಮವು. ಯಾರು ಜಾಗೃತನಾಗಿರು

ವನು? ಸದಸದ್ವಿವೇಕವುಳ್ಳವನೇ ಜಾಗೃತನು. ಶತ್ರುಗಳು ಯಾರು? ತನ್ನ ಇಂದ್ರಿಯಗಳು ಶತ್ರುಗಳು. ಅವುಗಳನ್ನು ಜಯಿಸಿದರೆ ಅವುಗಳೇ ಗೆಳೆಯರಾಗುವವು.

ಕಿಂ ಭೂಷಣಾದ್ಭೂಷಣಮಸ್ತಿ ಶೀಲಂ ತೀರ್ಥಂ ಪರಂ ಕಿಂ
ಸ್ವಮನೋ ವಿಶುದ್ಧಂ ।
ಕೋಽತ್ರ ಮಹಾಂಧೋ ಮದನಾತುರೋ ಯೋ ಮೃತ್ಯುಶ್ಚ ಕೋ
ಽಪಯಶಃ ಸ್ವಕೀಯಂ ॥ ೭೪ ॥
ಕೋ ದೀರ್ಘರೋಗೋ ಭವ ಏವ ಸಾಧೋ ಕಿಮೌಷಧಂ ತಸ್ಯ ವಿಚಾರ ಏವ
ಕಸ್ಯ ವಶೇ ಪ್ರಾಣಿಗಣಃ ಸತ್ಯಪ್ರಿಯಭಾಷಿಣೋ ವಿನೀತಸ್ಯ ॥ ೭೫ ॥

ಮನುಷ್ಯನಿಗೆ ಅಲಂಕಾರಗಳಲ್ಲಿ ಹಿರಿದಾದ ಅಲಂಕಾರನೇನು? ಶೀಲ. ಶ್ರೇಷ್ಠವಾದ ತೀರ್ಥವು ಏನು? ತನ್ನ ಶುದ್ಧವಾದ ಮನಸ್ಸು. ಪ್ರಪಂಚದಲ್ಲಿ ಮಹಾಂಧನು ಯಾರು? ಯಾರು ಕಾಮಾತುರನಾಗಿರುವನೋ ಅವನು. ಮರಣವು ಯಾವುದು? ತನ್ನ ಅಪಕೀರ್ತಿ. ಸಜ್ಜನನಿಗೆ ಯಾವುದು ದೀರ್ಘವಾದ ರೋಗ? ಸಂಸಾರ. ಅದಕ್ಕೆ ಮದ್ದೇನು? ವಿಚಾರವೇ ಆಗಿರುವುದು. ಯಾರ ಅಧೀನವಾಗಿ ಪ್ರಾಣಿಕೂಟಗಳಿರುತ್ತವೆ? ಸತ್ಯ ಮತ್ತು ಪ್ರಿಯವಾದ ಮಾತನ್ನು ಆಡುವ ವಿನೀತನಾದ ಮಹಾಪುರುಷನ ವಶದಲ್ಲಿರುತ್ತವೆ.

ಪಾತ್ರಃ ಕಃ ಅನ್ನದಾನೇ ಕ್ಷುಧಿತಃ ಕೋಽರ್ಚ್ಯೋ ಭಗವದವತಾರಃ ।
ಕಶ್ಚ ಭಗವಾನ್ಮಹೇಶ-ಶ್ಶಂಕರನಾರಾಯಣಾತ್ಮೈಕಃ ॥ ೭೬ ॥

ಅನ್ನದಾನಕ್ಕೆ ಪಾತ್ರನು ಯಾರು? ಹಸಿವೆಯಾದವನು. ಯಾರು ಪೂಜಿಸತಕ್ಕವನು? ಅವತಾರಸ್ವರೂಪನಾದ ದೇವರು. ದೇವರು ಯಾರು? ಶಿವ, ವಿಷ್ಣುರೂಪನಾಗಿದ್ದು ಏಕಾತ್ಮನಾದವನು.

ಕಾ ಸಂಪಾದ್ಯಾ ಮನುಜೈರ್ವಿದ್ಯಾ ವಿತ್ತ ಬಲಂ ಯಶಃ ಪುಣ್ಯಂ ।
ಕಸ್ಸರ್ವಗುಣ ವಿನಾಶೀ ಲೋಭಶ್ಶತ್ರುಶ್ಚ ಕಃ ಕಾಮಃ ॥ ॥ ೭೭ ॥

ಮನುಷ್ಯರಿಂದ ಯಾವುದು ಸಂಪಾದಿಸತಕ್ಕುದು? ವಿದ್ಯೆ, ಧನ, ಬಲ, ಯಶಸ್ಸು, ಪುಣ್ಯಗಳು. ಸರ್ವಗುಣವನ್ನೂ ನಾಶಗೊಳಿಸುವುದು ಯಾವುದು? ಲೋಭ (ಆಸೆ). ಶತ್ರುವು ಯಾರು? ಕಾಮನು.

ಕುತ್ರ ವಿಧೇಯೋ ಯತ್ನೋ ವಿದ್ಯಾಭ್ಯಾಸೇ ಸದೌಷಧೇ ದಾನೇ ।
ಅವಧೀರಣಾ ಕ್ವ ಕಾರ್ಯಾ ಖಲಪರಯೋಷಿತ್ಪರ ಧನೇಷು || ೬೮ ||

ಯಾವುದರಲ್ಲಿ ಯತ್ನ ಬೇಕು? ವಿದ್ಯಾಭ್ಯಾಸ, ಉತ್ತಮವೌಷಧ, ದಾನ ಗಳಲ್ಲಿ. ತಿರಸ್ಕಾರ ಯಾವುದರಲ್ಲಿ ಮಾಡತಕ್ಕದ್ದು? ಖಲ, ಪರಸ್ತ್ರೀ ಪರಧನಗಳಲ್ಲಿ.

ಕೋ ನರಕಃ ಪರವಶತಾ ಕಿಂ ಸೌಖ್ಯಂ ಸರ್ವಸಂಗವಿರತಿರ್ಯಾ ।
ಕೋ ವಾಸ್ತಿ ಘೋರೋ ನರಕಃ ಸ್ವದೇಹೇ ಪ್ರಾಣಾದಪಿ ಕೋರಮ್ಯಃ
ಕುಲಧರ್ಮ ಸಾಧು ಸಂಗಶ್ಚ || ೬೯ ||

ಯಾವುದು ನರಕ? ಪರತಂತ್ರ. ಯಾವುದು ಸೌಖ್ಯ? ಸಕಲ ಸಂಗ ಪರಿತ್ಯಾಗ. ಘೋರವಾದ ನರಕವೆಲ್ಲಿದೆ? ದೇಹದಲ್ಲಿ. ಪ್ರಾಣಕ್ಕಿಂತ ರಮ್ಯವಾವುದು? ಕುಲಧರ್ಮ, ಸಾಧುಜನರ ಸಂಸರ್ಗಗಳು.

ಕಿಂ ಮರಣಂ ಮೂರ್ಖತ್ವಂ ಕಿಂ ಚಾನರ್ಘಂ ಅವಸರೇ ದತ್ತಂ ।
ಆಮರಣಾತ್ಕಿಂ ಶಲ್ಯಂ ಪ್ರಚ್ಛನ್ನಂ ಯತ್ಕೃತಂ ಪಾಪಂ || ೭೦ ||

ಮರಣವು ಯಾವುದು? ತಿಳಿಗೇಡಿತನ. ಅಮೂಲ್ಯವಾದುದಾವುದು? ತಕ್ಕ ಸಮಯದಲ್ಲಿ ಕೊಟ್ಟದ್ದು. ಮರಣ ವರೆಗೂ ಬಾಧಿಸುವುದಾವುದು? ಗುಟ್ಟಾಗಿ ಮಾಡಿದ ಪಾಪ.



# 49

# ಸಂಜ್ಞಾ ಜ್ಞಾನಕೋಶ

(ಪ್ರಥಮಭಾಗ)



ಸಂಗ್ರಾಹಕರು:

**ಡಾ| ಎಸ್. ಪಿ. ಭಟ್**

ಮಂಗಳೂರು.

**1955.**

(ಸಂಖ್ಯಾನುಕ್ರಮ ಮತ್ತು ವರ್ಣಾನುಕ್ರಮವಾಗಿ ವರ್ಗೀಕರಿಸಲ್ಪಟ್ಟುದು.)

ಒಂದಾಣೆ




ಮಾಲೆ

# ಒಂದಾಣೆ ಮಾಲೆಯಲ್ಲಿ ಈ ವರೆಗೆ ಪ್ರಕಟವಾದ ಪುಸ್ತಕಗಳು

೧. *ಕೆಪ್ಪಟರಾಯ (ವಿನೋದ ಕಥೆ)
೨. *ನಾರೀಶ್ವರರು (ಏಕಾಂಕ ಪ್ರಹಸನ)
೩. *ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು.
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ)
೫. *ಅದ್ಭುತತ್ಯಾಗ ಮತ್ತು ಇತರ ಕಥೆಗಳು
೬. ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ)
೭. *'ಬೀಡಿ ಸೇದಬೇಡಿ' ಮತ್ತು 'ಆ ಮಗು' (ವಿನೋದ ಕಥೆಗಳು)
೮. ಇಂಗ್ಲಿಷ್-ಕನ್ನಡ ಅರ್ಥಕೋಶ
೯. *ಲಂಚಕ್ಕೆ ಸಂಚಕಾರ
೧೦. ಟಿಶ್ಯೂ ಔಷಧಿಗಳ ಕೈಪಿಡಿ.
೧೧. ಶ್ರೀಕ್ಷೇತ್ರ ಧರ್ಮಸ್ಥಳ (ದ್ವಿ. ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು
೧೪. ವೆಂಕಟನ ಸಂಕಟ (ಏಕಾಂಕ ಪ್ರಹಸನ)
೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ)
೧೬. ವೇಣೂರಿನ ಗತವೈಭವ.
೧೭. ಒಗಟುಗಳು [ದ್ವಿತೀಯ ಮುದ್ರಣ]
೧೮. ಜಗಳಗಂಟಿ ಮತ್ತು ಇತರ ಕಥೆಗಳು
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಪ್ಪು
೨೧. *ಭಾರತದ ಮಹಾನಗರಗಳು (ಭಾಗ ೧)
೨೨. ತಿರುಕ್ಕುರಲ್
೨೩. ಸೂರ್ಯನ ಸಂಸಾರ ಮತ್ತು ಇತರ ಕಥೆಗಳು.
೨೪. ಭಾರತದ ಮಹಾನಗರಗಳು (ಭಾಗ ೨)
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳು.
೨೬. ಮಾರಾವತಾರ (ಏಕಪಾತ್ರ ಯಕ್ಷಗಾನ ಪ್ರಬಂಧ)
೨೭. ಹಾಸವಿಲಾಸ (ನಗೆಹನಿಗಳು)
೨೮. ಸತ್ಯವಂತ ಬಾಬಿ (ಏಕಾಂಕ ಪ್ರಹಸನ)
೨೯. ಜಾಣ್ಮೆಯ ಒಗಟುಗಳು
೩೦. ಜಾತಕ ಕಥೆಗಳು
೩೧ ಕಾರ್ಕಳದ ಚರಿತ್ರೆ
೩೨. ಮರ್ಜಿ (ಏಕಾಂಕ ಪ್ರಹಸನ)
೩೩. ದರ್ಶನದ ಕಥೆಗಳು
೩೪. ಅಳುವಿನ ಹೊಳೆ ಮತ್ತು ಕೇಶವಭೂಪ (ಮಕ್ಕಳ ಕಥೆಗಳು)
೩೫. ಶರಾಬಿನ ಸಿಪಾಯಿಗಳು
೩೬. ಉಪದೇಶ ಶತಕ
೩೭. ನಿಮಗೆ ಗೊತ್ತಿದೆಯೇ?
೩೮. ಚತುರ ಚಮತ್ಕಾರ
೩೯. ಸತೀ ಸಾವಿತ್ರಿ
೪೦. ಆಭರಣಗಳ ಪೆಟ್ಟಿಗೆ ಇತರ ಕಥೆಗಳು
೪೧. ಭಾರತದ ಮಂತ್ರಿಮಂಡಲಗಳು
೪೨ ಕಾಲುಬಳೆಯ ಕಥೆ
೪೩. ಭಾರತದ ನಾಲ್ಕು ಕೆಲಸಗಳು
೪೪. ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು
೪೫. ಸುಭಾಷಿತ
೪೬ ೧೮೫೭ರ "ಸಿಪಾಯಿ ದಂಗೆ" ಅಥವಾ ಬ್ರಿಟಿಷರಿಗೆದುರಾಗಿ ಭಾರತೀಯರ ಸ್ವಾತಂತ್ರ್ಯಸಮರ
೪೭. ಅಕಾಂಡ ತಾಂಡವ (ರೇಡಿಯೋನಾಟಕ)
೪೮. ಸಾಹಸದ ಕಥೆಗಳು.
೪೯. ಸಂಜ್ಞಾ ಜ್ಞಾನ ಕೋಶ

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಈ ವರೆಗೆ ನಾಲ್ವತ್ತೊಂಭತ್ತು ಪುಸ್ತಕಗಳಲ್ಲಿ, ನಾಲ್ವತ್ತೊಂಭತ್ತು ಆಣೆಗಳಿಗೆ, 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, 1984 ಪುಟಗಳನ್ನು ಕೊಟ್ಟಿರುತ್ತದೆ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ, ಮಂಗಳೂರು-೧

# ಸಂಜ್ಞಾ ಜ್ಞಾನಕೋಶ

## ಏಕ ವರ್ಗ

ಏಕಮೇವಾದ್ವಿತೀಯಃ: ಬ್ರಹ್ಮ.

## ದ್ವಿ ವರ್ಗ

ಅಯನ ದ್ವಯಃ: ಉತ್ತರಾಯಣ, ದಕ್ಷಿಣಾಯನ.
ಅಲಂಕಾರಭೇದ ದ್ವಯಃ: ಅರ್ಥಾಲಂಕಾರ, ಶಬ್ದಾಲಂಕಾರ.
ಗ್ರಂಥಭೇದ ದ್ವಯ: ಕಾವ್ಯ, ಶಾಸ್ತ್ರ.
ಪಕ್ಷ ದ್ವಯಃ: ಶುಕ್ಲಪಕ್ಷ, ಕೃಷ್ಣಪಕ್ಷ.
ಪಾಕ ದ್ವಯಃ: ನಾರಿಕೇಳ ಪಾಕ, ದ್ರಾಕ್ಷಾ ಪಾಕ.
ವಚನ ದ್ವಯಃ: ಏಕವಚನ, ಬಹುವಚನ.
ಶೃಂಗಾರ ವಿಧಾನ ದ್ವಯಃ: ಸಂಭೋಗ ಶೃಂಗಾರ, ವಿಪ್ರಲಂಭ ಶೃಂಗಾರ.
ಸೂತಕ ದ್ವಯಃ: ಜಾತಸೂತಕ, ಮೃತಸೂತಕ.

## ತ್ರಿ ವರ್ಗ

ಅಗ್ನಿ ತ್ರೇತ: ದಕ್ಷಿಣಾಗ್ನಿ (ಅನ್ವಾಹಾರ್ಯ ಪಚನ), ಗಾರ್ಹಪತ್ಯ, ಆಹವನೀಯ.
ಅಜ್ಞಾನ ತ್ರಯಃ: ಮತ್ಯ, ಶ್ರುತಃ, ಅವಧ್ಯ.
ಅಂಜನ ತ್ರಯಃ: ಕಾಲಾಂಜನ, ರಸಾಂಜನ, ಪುಷ್ಪಾಂಜನ.
ಅಧ್ಯಾತ್ಮ ಶಾಸ್ತ್ರ ತ್ರಯಃ: ಸಾಂಖ್ಯ, ಪಾತಂಜಲ, ವೇದಾಂತ.
ಅರ್ಥವಿಶೇಷ ತ್ರಯಃ: ಸಂಭವ, ಅಭಾವ, ವಿಧಿ.
ಅವಸ್ಥಾತ್ರಯಃ: I ಶಾಕ್ಯ, ಜಾಗರಣ, ಸಂತಾಪ;
II ಜಾಗರ, ಸ್ವಪ್ನ, ಸುಷುಪ್ತಿ
ಆತ್ಮತ್ರಯಃ: ಜೀವಾತ್ಮ, ಅಂತರಾತ್ಮ, ಪರಮಾತ್ಮ.

ಈಷಣ ತ್ರಯ: ಅರ್ಥ, ಪುತ್ರ, ದಾರಾ.
ಉಪಾಧಿ ತ್ರಯ: ಅವಿಚ್ಛಿನ್ನ, ಪ್ರತಿಬಿಂಬ, ಅಧ್ಯಾಸ.
ಊಷಣ ತ್ರಯ (=ತ್ರಿಕಟುಕ): ಹಿಪ್ಪಲಿ, ಕಾಳುಮೆಣಸು, ಶುಂಠಿ.
ಕಟುಕ, ತ್ರಿ-,= ಊಷಣ ತ್ರಯ.
ಕಥಾ ತ್ರಯ: ರಾಜ, ಚೋರ, ಭೋಗ.
ಕರ್ಮ, ತ್ರಿ-,: ಯಜನ, ಅಧ್ಯಯನ, ದಾನ.
ಕಾಲ ತ್ರಯ: ವರ್ತಮಾನ, ಭೂತ, ಭವಿಷ್ಯತ್.
ಕಾಲ, ತ್ರಿ-,: ಪ್ರಾತಃ, ಮಧ್ಯಾಹ್ನ, ಸಾಯಂ.
ಕಾವ್ಯರೀತಿ ತ್ರಯ: ಗೌಡಿ, ವೈದರ್ಭಿ, ಪಾಂಚಾಲಿ.
ಗಣ, ತ್ರಿ-, (=ತ್ರಿವರ್ಗ): ಧರ್ಮ, ಅರ್ಥ, ಕಾಮ.
ಗುಣ ತ್ರಯ: ಸತ್ವ, ರಜಸ್, ತಮಸ್.
ಜಗ, ತ್ರಿ-, (=ತ್ರಿಪಥ): I ಭೂಮಿ, ಆಕಾಶ, ವಾಯುಮಂಡಲ;
II ಭೂ, ವ್ಯೋಮ, ಪಾತಾಳ.
ಜ್ಞಾನ, ತ್ರಿ-, : ಮತಿ, ಶ್ರುತ, ಅವಧಿ.
ತನು ತ್ರಯ: ಸ್ಥೂಲ, ಸೂಕ್ಷ್ಮ, ಕಾರಣ.
ತಾಪ ತ್ರಯ: ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ.
ದಂಡ, ತ್ರಿ-,: ವಾಕ್, ಮನಸ್, ಕಾಯ.
ದೋಷ, ತ್ರಿ-, (=ತ್ರಿಧಾತು): ವಾತ, ಪಿತ್ತ, ಶ್ಲೇಷ್ಮ.
ಧಾತು, ತ್ರಿ-,= ತ್ರಿದೋಷ.
ಧಾತ್ವರ್ಥ ತ್ರಯ: ಸಕರ್ಮಕ, ಅಕರ್ಮಕ, ಪ್ರಯೋಜಕ.
ನಾಡಿ, ತ್ರಿ-,: ಇಡಾ, ಪಿಂಗಳಾ, ಸುಷುಮ್ನಾ.
ಪಥ, ತ್ರಿ-, = ತ್ರಿಜಗ.
ಪರಿಚ್ಛೇದ ತ್ರಯ: ಕಾಲ, ದೇಶ, ವಸ್ತು.
ಪುಟಿ, ತ್ರಿ-, : ಜ್ಞಾತೃ, ಜ್ಞಾನ, ಜ್ಞೇಯ.
ಪುರ, ತ್ರಿ-,: ಸ್ವರ್ಣ, ರಜತ, ಲೋಹ. ಇವುಗಳ ಅಧಿಪತಿಗಳು: ತಾರಕಾಕ್ಷ, ಕಮಲಲೋಚನ, ವಿದ್ಯುನ್ಮಾಲಿ.
ಪುರುಷ ತ್ರಯ: ಉತ್ತಮ, ಮಧ್ಯಮ, ಪ್ರಥಮ.
ಪ್ರತಿಬಂಧಕ ತ್ರಯ: ಭೂತ, ವರ್ತಮಾನ, ಆಗಾಮಿ.

ಪ್ರಾರಬ್ಧ ತ್ರಯು: ಇಚ್ಛಾ, ಅನಿಚ್ಛಾ, ಪರೇಚ್ಛಾ.
ಫಲ, ತ್ರಿ-,: ಸಾಂತಿ, ಅಣಿಲೆ, ನೆಲ್ಲಿ.
ಭಾವ ತ್ರಯು: ಜ್ಞಾನ ವಿಕೃತಿ, ವರ್ತನ ವಿಕೃತಿ, ಮೋಹನ ವಿಕೃತಿ.
ಭುವನ, ತ್ರಿ-, (=ತ್ರಿಲೋಕ): ಸ್ವರ್ಗ, ಮೃತ್ಯು, ಪಾತಾಳ.
ಮಧುರ, ತ್ರಿ-,: ಸಕ್ಕರೆ, ಜೇನು, ತುಪ್ಪ.
ಮಂಡಲ ತ್ರಯು: ಸೂರ್ಯ, ಚಂದ್ರ, ಅಗ್ನಿ.
ಮಂತ್ರಮಲ ತ್ರಯು: ಅನದ್ಧ (ಮಾನಸಂ), ಮಾಯಿಕ (ಮಾಯಾಭೂತಂ), ಕಾರ್ಮಣ (ಪಾರುಷ್ಯಂ).
ಮುನಿ, ತ್ರಿ-,: ಪಾಣಿನಿ, ಕಾತ್ಯಾಯನ, ಪತಂಜಲಿ.
ಮೂರ್ತಿ, ತ್ರಿ-,: ಬ್ರಹ್ಮ, ವಿಷ್ಣು, ಮಹೇಶ್ವರ. ಇವರ ಕ್ರಿಯೆಗಳು: ಸೃಷ್ಟಿ, ಸ್ಥಿತಿ, ಲಯು.
ರಾಜತೇಜಸ್ ತ್ರಯು: ಯುದ್ಧಮಧ್ಯದಲ್ಲಿ ಪಲಾಯನ ಮಾಡದಿರುವುದು, ಯುದ್ಧಾಹ್ವಾನವನ್ನು ಮಾನಿಸುವುದು, ಭಾರ್ಯೆಯನ್ನು ರಕ್ಷಿಸುವುದು.
ರೂಪ ತ್ರಯು: ಅವ್ಯಯಾತ್ಮಕ, ನಾಮಾತ್ಮಕ, ಪುರುಷಾತ್ಮಕ.
ಲಿಂಗ ತ್ರಯು: ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕ ಲಿಂಗ.
ಲೋಕ, ತ್ರಿ-, = ತ್ರಿಭುವನ.
ಲೋಹ, ತ್ರಿ-,: ಚಿನ್ನ, ಬೆಳ್ಳಿ, ತಾಮ್ರ.
ವರ್ಗ ತ್ರಯು: ಕ್ಷಯು, ಸ್ಥಾನ, ವೃದ್ಧಿ.
ವರ್ಗ, ತ್ರಿ-, = ತ್ರಿಗಣ.
ವರ್ಣ, ತ್ರಿ-,: ಬ್ರಾಹ್ಮಣ, ಕ್ಷತ್ರಿಯು, ವೈಶ್ಯ.
ವಾಗರ್ಥ ತ್ರಯು: ನಾಮಪದ, ಕ್ರಿಯಾಪದ, ಅವ್ಯಯು.
ವಾತ ತ್ರಯು: ಘನ, ಅಂಬು, ತನು.
ವೇಣಿ, ತ್ರಿ-,: ಗಂಗಾ, ಯುಮುನಾ, ಸರಸ್ವತೀ.
ವ್ಯಾಹೃತಿ ತ್ರಯು: ಭೂಃ, ಭುವಃ, ಸ್ವಃ.
ವ್ಯುತ್ಪತ್ತಿಭೇದ ತ್ರಯು: ಸಿದ್ಧ, ವ್ಯುತ್ಪನ್ನ, ಸಮಾಸ.

ಶಕ್ತಿ ತ್ರಯ: I ಪ್ರಭುಶಕ್ತಿ, ಮಂತ್ರಶಕ್ತಿ, ಉತ್ಸಾಹಶಕ್ತಿ;
II ದಾಹಶಕ್ತಿ, ಕಾಳೀಶಕ್ತಿ, ರಾಹುಶಕ್ತಿ. ಇವುಗಳ ಪೀಠಗಳು: ಜ್ವಾಲಾಮುಖಿ, ಉಜ್ಜಯಿನಿ, ಧರ್ಮಸ್ಥಳ.

ಶಬ್ದಾಲಂಕಾರಭೇದ ತ್ರಯ: ಯಮಕ, ಅನುಪ್ರಾಸ, ಚಿತ್ರ.

ಶಾಸ್ತ್ರ ತ್ರಯ: ಶ್ರುತಿ, ಯುಕ್ತಿ, ಸ್ವಾನುಭವ.

ಸೂತ್ರ ತ್ರಯ: ಸಾಂಖ್ಯ, ಯೋಗ, ಬ್ರಹ್ಮ

ಸ್ವರ, ತ್ರಿವಿಧ–,: I ಮೃದು, ಮಧುರ, ಮಂದ್ರ;
II ಕಲ, ಮಂದ್ರ, ತಾರ.

## ಚತುರ್ ವರ್ಗ

ಅನಂತ ಚತುಷ್ಟಯ: ಅನಂತ ಜ್ಞಾನ, ಅನಂತ ವೀರ್ಯ, ಅನಂತ ದರ್ಶನ, ಅನಂತ ಸುಖ.

ಅಭಾವ ಚತುಷ್ಟಯ: ಪ್ರಾಗಭಾವ, ಪ್ರಧ್ವಂಸಾಭಾವ, ಅನ್ಯೋನ್ಯಾಭಾವ, ಅತ್ಯಂತಾಭಾವ.

ಅರ್ಥಾಲಂಕಾರ, ಚತುರ್ವಿಧ–,: ವಾಸ್ತವ, ಉಪಮಾ, ಶ್ಲೇಷ, ಅತಿಶಯೋಕ್ತಿ.

ಅಂಗಬಲ, ಚತುರ್–,: ಗಜ, ತುರಗ, ರಥ, ಪದಾತಿ.

ಅಂತಃಕರಣ ಚತುಷ್ಟಯ: ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ.

ಆಶ್ರಮ ಚತುಷ್ಟಯ: ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ.

ಉಪವೇದ ಚತುಷ್ಟಯ: ಆಯುರ್ವೇದ, ಅರ್ಥವೇದ, ಧನುರ್ವೇದ, ಗಾಂಧರ್ವವೇದ.

ಉಪಾಯ, ಚತುರ್–,: ಸಾಮ, ದಾನ, ಭೇದ, ದಂಡ.

ಊಷಣ ಚತುಷ್ಟಯ: ಹಿಪ್ಪಲಿ, ಕಾಳುಮೆಣಸು, ಶುಂಠಿ, ಮೆಣಸು.

ಏಕದಂಡಿ, ಚತುರ್ವಿಧ–,: ಕುಟೀಚಕ, ಬಹೂದಕ, ಹಂಸ, ಪರಮಹಂಸ.

ಕಾರ್ಯ, ಚತುರ್ವಿಧ: ವೃತ್ತಿ, ಪರಿಣಾಮ, ಆರಂಭ, ವಿವರ್ತ.

ಚಿದ್ಭೇದ, ಚತುರ್ವಿಧ: ಜೀವ, ಈಶ್ವರ, ಕೂಟಸ್ಥ, ಬ್ರಹ್ಮ.

ಜಾತಿ ಚತುಷ್ಟಯ: ಕಮ್ಮೆ, ಕನ್ನಡಿಗ, ಆಂಧ್ರ, ದ್ರಾವಿಡ.

ಜ್ಞಾನಫಲ ಚತುಷ್ಟಯ: ದುಃಖಾಪಸರ್ಗ, ಕಾಮಾಪ್ತಿ, ಕೃತಕೃತ್ಯತ್ವ, ಪ್ರಾಪ್ಯಪ್ರಾಪ್ತಿ.

ದಿಕ್ಕು, ಚತುರ್: ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ.

ಪುರುಷಜಾತಿ, ಚತುರ್ವಿಧ: ಶಶಕ, ಮೃಗ, ಅಶ್ವ, ಹಸ್ತಿ.

ಪುರುಷಾರ್ಥ ಚತುಷ್ಟಯ=(ಚತುರ್ಭದ್ರ=ಚತುರ್ವರ್ಗ): ಧರ್ಮ, ಅರ್ಥ, ಕಾಮ, ಮೋಕ್ಷ.

ಭದ್ರ, ಚತುರ್,=ಪುರುಷಾರ್ಥ ಚತುಷ್ಟಯ=ಚತುರ್ವರ್ಗ.

ಭಾಷಾ, ಚತುರ್: ಸಂಸ್ಕೃತ, ಪ್ರಾಕೃತ, ಅಪಭ್ರಂಶ, ಪೈಶಾಚಿಕ.

ಭೋಗಸಖ, ಚತುರ್ವಿಧ: ವಿಟ, ವಿದೂಷಕ, ಪೀಠಮರ್ದ, ನಾಗರಿಕ.

ಮಹಾನಾಯಕ, ಚತುರ್ವಿಧ: ಧೀರೋದಾತ್ತ, ಧೀರೋದ್ಧತ, ಧೀರಲಲಿತ, ಧೀರಶಾಂತ.

ಮೋಹ ಚತುಷ್ಟಯ: ಲಜ್ಜಾಮೋಹ, ವಿಭವಮೋಹ, ಕರುಣಾಮೋಹ, ನಿಜಮೋಹ.

ಯುಗ, ಚತುರ್: ಕೃತ, ತ್ರೇತಾ, ದ್ವಾಪರ, ಕಲಿ.

ವರ್ಗ, ಚತುರ್: ಪುರುಷಾರ್ಥ ಚತುಷ್ಟಯ=ಚತುರ್ಭದ್ರ.

ವರ್ಣ, ಚತುರ್: ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ.

ವಾದ್ಯ, ಚತುರ್ವಿಧ: ತತ (ತಂತಿವಾದ್ಯ), ಆನದ್ಧ (ಚರ್ಮವಾದ್ಯ), ಘನ (ಲೋಹವಾದ್ಯ), ಸುಷಿರ (ಊದಿ ಬಾರಿಸುವ ವಾದ್ಯ).

ವಿಯೋಗ ಚತುಷ್ಟಯ: ಪೂರ್ವಾನುರಾಗ, ಮಾನಾಖ್ಯ, ಪ್ರವಾಸ, ಕರುಣಾತ್ಮಕ.

ವೇದ, ಚತುರ್: ಋಗ್ವೇದ, ಯಜುರ್ವೇದ; ಸಾಮವೇದ, ಅಥರ್ವಣ ವೇದ.

ವೇದಾಂಗ ಚತುಷ್ಟಯ: ಬ್ರಾಹ್ಮಣ, ಸಂಹಿತಾ, ಆರಣ್ಯಕ, ಉಪನಿಷತ್.

ವೇದೋಪಾಂಗ ಚತುಷ್ಟಯ: ಮೀಮಾಂಸಾ, ನ್ಯಾಯ, ಪುರಾಣ, ಸ್ಮೃತಿ.

ಶಾಸ್ತ್ರ, ಚತುಃ: ಶಬ್ದ, ತರ್ಕ, ಮೀಮಾಂಸಾ, ಧರ್ಮ.

ಶಿಕ್ಷಣಭೇದ, ಚತುರ್ವಿಧ: I ಶಾರೀರಿಕ, ಮಾನಸಿಕ, ವ್ಯಾವಹಾರಿಕ, ನೈತಿಕ. II ಅರ್ಥಶಾಸ್ತ್ರಾದಿ, ವೇದವೇದಾಂಗಾದಿ, ಕೃಷಿವಾಣಿಜ್ಯಾದಿ, ಪೌರನೀತಿ.

ಶೃಂಗಾರನಾಯಕ, ಚತುರ್ವಿಧ: ಅನುಕೂಲ, ದಕ್ಷಿಣ, ಧೃಷ್ಟ, ಶಠ.

ಶ್ರೀಕೃಷ್ಣ ರಥಹಯ ಚತುಷ್ಟಯ: ಶೈಬ್ಯ, ಮೇಘಪುಷ್ಪ, ಸುಗ್ರೀವ, ವಲಾಹಕ.

ಸಮ, ಚತುಃ: ಶ್ರೀಗಂಧ, ಅಗರು, ಕುಂಕುಮಕೇಸರ, ಕಸ್ತೂರಿ.

ಸಮಾಸಭೇದ ಚತುಷ್ಟಯ: ದ್ವಂದ್ವ, ತತ್ಪುರುಷ, ಬಹುವ್ರೀಹಿ, ಅವ್ಯಯೀಭಾವ.

ಸಾಧನ ಚತುಷ್ಟಯ: ನಿತ್ಯಾನಿತ್ಯ ವಸ್ತು ವಿವೇಕ, ಇಹಾಮುತ್ರಾರ್ಥ ಫಲ, ಸಮಾಧಿ ಷಟ್‌ಸಂಪತ್ತಿ, ಮುಮುಕ್ಷುತ್ವ.

ಸ್ತ್ರೀ ಜಾತಿ, ಚತುರ್ವಿಧ: ಪದ್ಮಿನಿ, ಚಿತ್ರಿನಿ, ಶಂಖಿನಿ, ಹಸ್ತಿನಿ.

## ಪಂಚ ವರ್ಗ

ಅಗ್ನಿ, ಪಂಚ: I ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ, ಊರ್ಧ್ವ (ಸೂರ್ಯ); II ಅನ್ವಾಹಾರ್ಯ ಪಚನ (ದಕ್ಷಿಣ), ಗಾರ್ಹಪತ್ಯ, ಆಹವನೀಯ, ಸಭ್ಯ, ಆವಸಥ್ಯ.

ಅಧಿಕಾರಿ, ಪಂಚ: ಕರ್ಮಿ, ಮುಮುಕ್ಷು, ಅಭ್ಯಾಸಿ, ಅನುಭವಿ, ಆರೂಢ.

ಅಮೃತ, ಪಂಚ: ಹಾಲು, ಸಕ್ಕರೆ, ತುಪ್ಪ, ಮೊಸರು, ಜೇನು.

ಅವಯವ, ಪಂಚ: ಪ್ರತಿಜ್ಞಾ, ಹೇತು, ಉದಾಹರಣ, ಉಪನಯ, ನಿಗಮನ.

ಅವಸ್ಥೆ, ಪಂಚ: ಜಾಗರ, ಸ್ವಪ್ನ, ಸುಷುಪ್ತಿ, ತುರ್ಯ, ತುರ್ಯಾತೀತ.

ಅಂಗ, ಪಂಚ: I ತಿಥಿ, ವಾರ, ನಕ್ಷತ್ರ, ಯೋಗ, ಕರಣ; II ತ್ವಕ್, ಪತ್ರ, ಕುಸುಮ, ಮೂಲ, ಫಲ; III ಬಾಹು, ಜಾನು, ಶಿರ, ವಕ್ಷ, ದೃಕ್ಕು.

ಅಂಗಾಭಿನಯ, ಪಂಚ: ಚಿತ್ತ, ಅಕ್ಷಿ, ಭ್ರೂ, ಹಸ್ತ, ಪಾದ.

ಆಚಾರ, ಪಂಚ: ಜ್ಞಾನ, ದರ್ಶನ, ವೀರ್ಯ, ಚಾರಿತ್ರ, ತಪಾಚಾರ.

ಆತ್ಮಸ್ವರೂಪ ಲಕ್ಷಣ ಪಂಚಕ: ಸತ್, ಚಿತ್, ಆನಂದ, ನಿತ್ಯ, ಪರಿಪೂರ್ಣ.

ಇಂದ್ರಿಯಾರ್ಥ ಪಂಚಕ (=ವಿಷಯ ಪಂಚಕ): ರೂಪ, ಶಬ್ದ, ಗಂಧ, ರಸ, ಸ್ಪರ್ಶ.

ಉಪಚಾರ, ಪಂಚ: ಧೂಪ, ದೀಪ, ನೈವೇದ್ಯ, ಗಂಧ, ಪುಷ್ಪ.

ಉಪವಾಯು, ಪಂಚ: ನಾಗ, ಕೂರ್ಮ, ಕೃಕರ, ದೇವದತ್ತ,ಧನಂಜಯ.

ಕರ್ಮ, ಪಂಚ (ವೈದ್ಯಕ): ವಮನ, ರೇಚನ, ನಸ್ಯ, ಅನುವಾಸನ, ನಿರೂಹ.

ಕರ್ಮೇಂದ್ರಿಯ ಪಂಚಕ: ವಾಕ್, ಪಾಣಿ, ಪಾದ, ಉಪಸ್ಥ, ಪಾಯು. ಇವುಗಳ ದೇವತೆಗಳು, ಅನುಕ್ರಮವಾಗಿ: ಅಗ್ನಿ, ಇಂದ್ರ, ರವಿ, ಮೃತ್ಯು, ಪ್ರಜಾಪತಿ.

ಕಾರುಕ, ಪಂಚ: ಬಡಗಿ, ಜೇಡ, ನಾಪಿತ, ಅಗಸ, ಸಮಗಾರ.

ಕುಸುಮಾಸ್ತ್ರ ಪಂಚಕ: ಅರವಿಂದ, ಅಶೋಕ, ಚೂತ, ಮಲ್ಲಿಕಾ, ನೀಲೋತ್ಪಲ.

ಕೃತ್ಯ, ಪಂಚ: ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಅನುಪ್ರವೇಶ.

ಕೋಶ, ಪಂಚ: ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನ ಮಯ, ಆನಂದಮಯ.

ಕ್ಲೇಶ, ಪಂಚ: ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ, ಅಭಿನಿವೇಶ.

ಗವ್ಯ, ಪಂಚ: ಹಾಲು, ಮೊಸರು, ತುಪ್ಪ, ಗೋಮೂತ್ರ, ಗೋಮಯ.

ಗೌಡ, ಪಂಚ: ಕನ್ಯಾಕುಬ್ಜ, ಸಾರಸ್ವತ, ಗೌಡ, ಮಿಥಿಲ, ಉತ್ಕಲ.

ಜನ, ಪಂಚ: I ಸುರ, ಮಾನವ, ಗಂಧರ್ವ, ಉರಗ, ಪಿತೃ; II ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ನಿಷಾದ.

ಜೀವನ್ಮುಕ್ತ ಪ್ರಯೋಜನ ಪಂಚಕ: ಜ್ಞಾನರಕ್ಷೆ, ತಪಸ್ಸು, ಸರ್ವಸಂವಾದ, ದುಃಖಸಂಕ್ಷಯ, ಸುಖಾವಿರ್ಭಾವ.

ಜ್ಞಾನೇಂದ್ರಿಯ ಪಂಚಕ: ತ್ವಕ್, ರಸನಾ, ಚಕ್ಷುಸ್, ಕರ್ಣ, ಘ್ರಾಣ. ಇವುಗಳ ದೇವತೆಗಳು, ಅನುಕ್ರಮವಾಗಿ: ಮಾರುತ, ವರುಣ, ಮಿತ್ರ, ದಿಕ್ಕು, ಅಶ್ವಿನೇಯರು.

ತರು, ಪಂಚ: ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ, ಹರಿಚಂದನ.

ತಂತ್ರ, ಪಂಚ: ಭೇದಂತತ್ರ, ಪರೀಕ್ಷಾತಂತ್ರ, ವಿಶ್ವಾಸತಂತ್ರ, ವಂಚನಾ ತಂತ್ರ, ಮಿತ್ರಕಾರ್ಯ ತಂತ್ರ.

ತಿಕ್ತ, ಪಂಚ: ನಿಂಬಾ, ಅಮೃತ, ವೃಷ, ಪಟೋಲ, ನಿದಿಗ್ಧಕ.

ದೀರ್ಘ, ಪಂಚ: ಬಾಹು, ನೇತ್ರದ್ವಯ, ಕುಕ್ಷಿ, ನಾಸಾ, ಸ್ತನ.

ದೇವತೆ, ಪಂಚ: ಆದಿತ್ಯ, ಗಣನಾಥ, ದೇವಿ (ಅಂಬಿಕೆ), ರುದ್ರ, ಕೇಶವ.

ದ್ರಾವಿಡ, ಪಂಚ: ಮಹಾರಾಷ್ಟ್ರ, ತೆಲಿಂಗ, ದ್ರಾವಿಡ, ಕರ್ನಾಟ, ಗುರ್ಜರ.

ನದ, ಪಂಚ: ಶತದ್ರು, ವಿಪಾಶಾ, ಇರಾವತೀ, ಚಂದ್ರಭಾಗಾ, ವಿತಸ್ತಾ.

ನಿದಿಧ್ಯಾಸನ ರೂಪಯೋಗ ಪಂಚಕ: ಮಂತ್ರಯೋಗ, ಸ್ಪರ್ಶಯೋಗ, ಭಾವಯೋಗ, ಅಭಾವಯೋಗ, ಸುಖಾವಿರ್ಭಾವ ಯೋಗ.

ನೀರಾಜನ, ಪಂಚ: ದೀಪ, ಕಮಲ, ವಸ್ತ್ರ, ಆಮ್ರಫಲ, ತಾಂಬೂಲ.

ಪತ್ರ, ಪಂಚ: ಬರೆದುಕೊಡುವವ, ಬರೆದುಕೊಳ್ಳುವವ, ಇಬ್ಬರು ಸಾಕ್ಷಿಗಳು, ಬರೆಯುವವ.

ಪರ್ವ, ಪಂಚ: ಚತುರ್ದಶಿ, ಅಷ್ಟಮಿ, ಅಮಾವಾಸ್ಯೆ, ಪೂರ್ಣಿಮೆ. ರವಿಸಂಕ್ರಾಂತಿ.

ಪಿತೃ, ಪಂಚ: ಜನಕ, ಉಪನೀತ, ಕನ್ಯಾದಾತ, ಅನ್ನದಾತ, ಭಯತ್ರಾತ.

ಪುರಾಣಲಕ್ಷಣ ಪಂಚಕ: ಸರ್ಗ, ಉಪಸರ್ಗ, ವಂಶ, ಮನ್ವಂತರ, ವಂಶಾನುಚರಿತ.

ಪ್ರಾಣ, ಪಂಚ (= ವಾಯು ಪಂಚಕ): ಪ್ರಾಣ, ಅಪಾನ, ಉದಾನ, ವ್ಯಾನ, ಸಮಾನ.

ಬಾಣ, ಪಂಚ: ಸಂಮೋಹನ, ಉನ್ಮಾದನ, ಶೋಷಣ, ತಾಪನ, ಸ್ತಂಭನ.

ಬ್ರಹ್ಮಪುತ್ರ, ಪಂಚ: ಸನಕ, ಸನಂದನ, ಸನಾತನ, ಸನತ್ಸುಜಾತ, ಸನತ್ಕುಮಾರ.

ಭೂತ, ಪಂಚ: ಪೃಥ್ವಿ, ಅಪ, ತೇಜ, ವಾಯು, ಆಕಾಶ.

ಇವುಗಳ ದೇವತೆಗಳು, ಅನುಕ್ರಮವಾಗಿ: ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ. ಇವುಗಳ ವ್ಯಾಪಾರಗಳು, ಅನುಕ್ರಮವಾಗಿ: ಧಾರಣ, ಪಿಂಡೀಕರಣ, ಪಾಕ, ವ್ಯೂಹೀಕರಣ, ಅವಕಾಶ.

ಮಕಾರ, ಪಂಚ (ತಾಂತ್ರಿಕ): ಮದ್ಯ, ಮಾಂಸ, ಮತ್ಸ್ಯ, ಮುದ್ರಾ, ಮೈಥುನ.

ಮಹಾಪತಿವ್ರತಾ, ಪಂಚ: ಅಹಲ್ಯಾ, ತಾರಾ, ಮಂಡೋದರಿ, ಸೀತಾ, ದ್ರೌಪದಿ.

ಮಹಾಪಾತಕ, ಪಂಚ: ಬ್ರಹ್ಮಹತ್ಯ, ಸುರಾಪಾನ, ಸ್ವರ್ಣಸ್ತೇಯ, ಗುರುತಲ್ಪಗಮನ, ತತ್ಸಂಯೋಗ.

ಮಹಾಯಜ್ಞ, ಪಂಚ: ಆತ್ಮಪೂಜೆ, ಪಿತೃಪೂಜೆ, ದೇವಪೂಜೆ, ವೇದಪೂಜೆ, ಮನುಷ್ಯಪೂಜೆ.

ಮಹಾವಾದ್ಯ, ಪಂಚ: ಶೃಂಗಾರವಾದ್ಯ (ಕೊಂಬು), ತಮ್ಮಟೆ (ಹಲಿಗೆ), ಶಂಖ (ಧವಳ), ಭೇರಿ (ಬಾಜಾ), ಜಯಘಂಟೆ (ಜಾಗಟೆ).

ಮಂತ್ರಬಾಣ, ಪಂಚ: ಉನ್ಮಾದನ, ಮದನ, ಮೋಹನ, ಸಂತಾಪನ, ವಶೀಕರಣ.

ಮಾಯಾ ಪಂಚಕ: ತಮಸ್ಸು, ಮಾಯೆ, ಮೋಹ, ಅವಿದ್ಯೆ, ಅನೃತಾತ್ಮಿಕೆ.

ಮಾಯಾಲಕ್ಷಣ ಪಂಚಕ: ಅಸತ್, ಜಡ, ದುಃಖ, ಅನಿತ್ಯ, ಖಂಡಿತ.

ಮುಖ, ಪಂಚ: ಸದ್ಯೋಜಾತ, ಅಘೋರ, ತತ್ಪುರುಷ, ವಾಮದೇವ, ಈಶಾನ.

ಮುದ್ರೆ, ಪಂಚ: ಶಂಖ, ಚಕ್ರ, ಗದಾ, ಪದ್ಮ, ನಂದಕ.

ಯಜ್ಞ, ಪಂಚ: ಬ್ರಹ್ಮಯಜ್ಞ (ಅಧ್ಯಾಪನ), ಪಿತೃಯಜ್ಞ (ತರ್ಪಣ), ದೇವಯಜ್ಞ (ಹೋಮ), ಭೂತಯಜ್ಞ (ಬಲಿ), ನೃಪಯಜ್ಞ (ಅತಿಥಿಪೂಜನ).

ರತ್ನ, ಪಂಚ: I ಸ್ವರ್ಣ, ರಜತ, ಮುಕ್ತ, ರಾಜಾವರ್ತ, ಪ್ರವಾಳ; II ನೀಲ, ಪದ್ಮರಾಗ, ವಜ್ರ, ಮೌಕ್ತಿಕ, ಪ್ರವಾಳ; III ಸ್ತ್ರೀ, ಖಡ್ಗ, ಅಶ್ವ, ಭೂ, ವಿದ್ಯಾ; IV ಕನಕ, ಹೀರಕ, ನೀಲ, ಪದ್ಮರಾಗ, ಮೌಕ್ತಿಕ.

ರಂಗ, ಪಂಚ: ಅಂತರಂಗ, ರಣರಂಗ, ಮಧ್ಯರಂಗ, ನಾಟ್ಯರಂಗ, ಮಲ್ಲರಂಗ.

ಲಲಿತಕಲಾ ಪಂಚಕ: ವಾಸ್ತುಕಲೆ, ಶಿಲ್ಪಕಲೆ, ಸಾಹಿತ್ಯಕಲೆ, ಚಿತ್ರಕಲೆ, ಸಂಗೀತಕಲೆ.

ಲವಣ, ಪಂಚ: ಕಾಚ, ಸೈಂಧವ, ಸಾಮುದ್ರ, ಬಿಡ, ಸೌವರ್ಚಲ.

ಲಹರಿ, ಪಂಚ (ಜಗನ್ನಾಥ ಪಂಡಿತ ಕೃತ): ಗಂಗಾ, ಪೀಯೂಷ, ಸುಧಾ, ಅಮೃತ, ಕರುಣಾ.

ಲೋಹ, ಪಂಚ: ತಾಮ್ರ, ಹಿತ್ತಾಳಿ, ತವರ, ಸೀಸ, ಕಬ್ಬಿಣ.

ಲೋಹಕ, ಪಂಚ: ಬಂಗಾರ, ಬೆಳ್ಳಿ, ತಾಮ್ರ, ತವರ, ಸೀಸ.

ವಟ, ಪಂಚ: ಅಶ್ವತ್ಥ, ಬಿಲ್ವ, ವಟ, ಧಾತ್ರಿ, ಅಶೋಕ.

ವರ್ಗ, ಪಂಚ: ಕವರ್ಗ, ಚವರ್ಗ, ಟವರ್ಗ, ತವರ್ಗ, ಪವರ್ಗ.

ವರ್ಣ, ಪಂಚ: ಬಿಳುಪು, ಕೆಂಪು, ಕಪ್ಪು, ಹಳದಿ, ಹಸುರು.

ವಲ್ಕಲ, ಪಂಚ: ನ್ಯಗ್ರೋಧ, ಉದುಂಬರ, ಅಶ್ವತ್ಥ, ಪ್ಲಕ್ಷ, ವೇತಸ.

ವಾಕ್ಯಾವಯವ ಪಂಚಕ: ಸೂಕ್ಷ್ಮ, ಸಂಖ್ಯಾ, ಕ್ರಮ, ನಿರ್ಣಯ, ಪ್ರಯೋಜನ.

ವಾಯು ಪಂಚಕ=ಪಂಚಪ್ರಾಣ.

ವಿಪ್ರಲಂಭ, ಪಂಚವಿಧ: ಅಭಿಲಾಷ, ವಿರಹ, ಈರ್ಷ್ಯೆ, ಪ್ರವಾಸ, ಶಾಪಹೇತುಕ.

ವಿಷಯ ಪಂಚಕ=ಇಂದ್ರಿಯಾರ್ಥ ಪಂಚಕ.

ಶಾಸ್ತ್ರ, ಪಂಚವಿಧ: ಲೌಕಿಕ, ವೈದಿಕ, ಅಧ್ಯಾತ್ಮಿಕ, ಅತಿಮಾರ್ಗಿಕ, ಮಂತ್ರ.

ಶಿಖಿ, ಪಂಚ: ಜುಟ್ಟು, ಕಂಕುಳ ರೋಮ, ರೆಪ್ಪೆಯ ರೋಮ, ಹುಬ್ಬಿನ ರೋಮ, ಬೆನ್ನಿನ ರೋಮ.

ಸುಗಂಧ, ಪಂಚ: ಕರ್ಪೂರ, ಕಕ್ಕೋಲ, ಲವಂಗ ಪುಷ್ಪ, ಗುವಾಕ, ಜಾತೀಫಲ.

ಸೂನ, ಪಂಚ: ಒಲೆ, ಕಡೆಯುವ ಕಲ್ಲು, ಕಸಬರಿಕೆ, ಒರಳು ಮತ್ತು ಒನಕೆ, ನೀರಿನ ಗಡಿಗೆ.

# ಷಟ್ ವರ್ಗ

ಅಗ್ನಿ, ಷಟ್: ಗಾರ್ಹಪತ್ಯ, ಆಹವನೀಯ, ದಕ್ಷಿಣ, ಸಭ್ಯ, ಆವಸಥ್ಯ, ಔಪಾಸನ.

ಅನ್ನ, ಷಡ್ವಿಧ: ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ, ಪಿಚ್ಛಿಲ, ಪಾನೀಯ.

ಅಭಿಜ್ಞಾನ, ಷಟ್: ದಿವ್ಯದೃಷ್ಟಿ, ದಿವ್ಯಶ್ರುತಿ, ಪೂರ್ವಾನುಸ್ಮೃತಿ, ಪರೇಂಗಿತ ಜ್ಞಾನ, ಪರೋಕ್ಷ ವಿಷಯ ಜ್ಞಾನ, ಆಕಾಶ ಸಂಚಾರ ಜ್ಞಾನ.

ಅವಯವ, ಷಟ್ (ಷಡ್ಜ ಸ್ವರಜನಕ): ನಾಸಾ, ಕಂಠ, ಉರಸ್, ತಾಲು, ಜಿಹ್ವಾ, ದಂತ.

ಅಂಗ, ಷಟ್: ಛಂದಸ್, ಕಲ್ಪ, ವ್ಯಾಕರಣ, ಶಿಕ್ಷಾ, ಜ್ಯೋತಿಷ್ಯ, ನಿರುಕ್ತ. ಇವುಗಳ ಉತ್ಪತ್ತಿಸ್ಥಾನ, ಅನುಕ್ರಮವಾಗಿ: ಪಾದ, ಹಸ್ತ, ಮುಖ, ಘ್ರಾಣ, ನೇತ್ರ, ಶ್ರೋತ್ರ.

ಅಂಗಧೂಪ, ಷಟ್: ಸಿತ, ಆಜ್ಯ, ಮಧು, ಗುಗ್ಗುಲ, ಅಗರು, ಚಂದನ.

ಅಂಗನ್ಯಾಸ, ಷಟ್: ಚರಣ, ಜಾನು, ಕಟಿ, ನಾಭಿ, ಹೃದಯ, ಶಿರಸ್.

ಆತತಾಯಿ, ಷಟ್: ಪರಪ್ರಾಣಾಪಹಾರಿ, ಪರಕ್ಷೇತ್ರಾಪಹಾರಿ, ಪರದಾರಾಪಹಾರಿ, ಶಸ್ತ್ರದ ಮೂಲಕ ಪ್ರಾಣಾಪಹಾರಿ, ವಿಷದ ಮೂಲಕ ಪ್ರಾಣಾಪಹಾರಿ, ದಹನದಿಂದ ಪರಗೃಹಾಪಹಾರಿ.

ಇಂದ್ರಿಯ, ಷಟ್: ತ್ವಚ್, ರಸನಾ, ಚಕ್ಷುಸ್, ಕರ್ಣ, ಘ್ರಾಣ, ಮನಸ್.

ಇಂದ್ರಿಯಾರ್ಥ, ಷಟ್ (=ಷಡ್ವಿಷಯ): ಸ್ಪರ್ಶ, ರಸ, ರೂಪಂ, ಶಬ್ದ, ಗಂಧ, ಜ್ಞಾನ.

ಈತಿಬಾಧೆ, ಷಟ್: ಅತಿವೃಷ್ಟಿ, ಅನಾವೃಷ್ಟಿ, ರಾಜಬಾಧೆ, ಮೂಷಿಕಾದಿ ಜಂತು ಬಾಧೆ, ಶಲಭಾದಿ ಕೀಟಬಾಧೆ, ಶುಕಾದಿ ಪಕ್ಷಿಬಾಧೆ.

ಉಪಪ್ರಾಸ, ಷಟ್: ವಿಸಂತ, ಶಾಂತ, ಸಮೀಪ, ಅಂತ್ಯ, ಸುಪ್ರಾಸ, ಅನುಪ್ರಾಸ.

ಊರ್ಮಿ, ಷಟ್: ಅಶನ, ಪಿಪಾಸಾ, ಶೋಕ, ಮೋಹ, ಜರಾ, ಮರಣ.

ಕರ್ಮ, ಷಟ್: I ಬ್ರಾಹ್ಮಣ: ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ; II ಮಾಂತ್ರಿಕ: (೧) ಮಾರಣ, ಮೋಹನ, ಸ್ತಂಭನ, ಉಚ್ಚಾಟನ, ಆಕರ್ಷಣ, ವಿದ್ವೇಷಣ; (೨) ಶಾಂತಿ, ವಶೀಕರಣ, ಸ್ತಂಭನ, ವಿದ್ವೇಷ, ಉಚ್ಚಾಟನ, ಮಾರಣ; III ಯೋಗಿಕ: ಧೌತಿ, ವಸ್ತಿ, ನೇತಿ, ನಿಲಿಕೀ (ನೌಲಿಕೀ), ತ್ರಾಟಕ, ಕಪಾಲಭಾತಿ; IV ವಾರ್ತಿಕ: ಉಂಛ, ಪ್ರತಿಗ್ರಹ, ಭಿಕ್ಷಾ, ವಾಣಿಜ್ಯ, ಪಶುಪಾಲನ, ಕೃಷಿಕರ್ಮ; V ಶ್ರಾವಕ: ತಪಸ್, ಸಂಯಮ, ಧ್ಯಾನ, ಗುರುಸೇವಾ, ಸ್ವಾಧ್ಯಾಯ, ದೇವಪೂಜಾ.

ಕೋಶ, ಷಟ್: ರೋಮ, ನಾಡಿ, ಅಸ್ಥಿ, ರಕ್ತ, ಮಾಂಸ, ತ್ವಚ್.

ಗಯಾ, ಷಟ್: ಗಯಾಗಜ, ಗಯಾದಿತ್ಯ, ಗಾಯತ್ರಿ, ಗದಾಧರ, ಗಯಾ, ಗಯಾಸುರ.

ಗುಣ, ಷಟ್: I ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಮಾಶ್ರಯ; II ಜ್ಞಾನ, ಶಕ್ತಿ ಬಲ, ಐಶ್ವರ್ಯ, ತೇಜಸ್, ವೀರ್ಯ.

ಗೋಷಡಂಗ: ದಧಿ, ಕ್ಷೀರ, ಘೃತ, ಗೋಮೂತ್ರ, ಗೋಮಯ, ಗೋರೋಚನ.

ಚಕ್ರ, ಷಟ್: ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಗ್ನೇಯ. ಇವುಗಳ ಸ್ಥಾನಗಳು: ದೇಹಮಧ್ಯ, ಲಿಂಗ, ನಾಭಿ, ಹೃದಯ, ಕಂಠತಾಲು, ಭ್ರೂಮಧ್ಯ. ಇವುಗಳ ಆಕಾರಗಳು: ಚತುರಸ್ರ, ಅರ್ಧಚಂದ್ರ, ತ್ರಿಕೋಣ, ಷಟ್ಕೋಣ, ವೃತ್ತ, ಚಿತ್ರ. ಇವುಗಳ ಭೂತಗಳು: ಪೃಥ್ವಿ, ಆಪ, ತೇಜ, ವಾಯು, ಆಕಾಶ, ಮನಸ್ಸು. ಇವುಗಳ ವರ್ಣಗಳು: ಪೀತ, ಶ್ವೇತ, ರಕ್ತ, ನೀಲ, ಸ್ಫಟಿಕ, ಮಾಣಿಕ್ಯ. ಇವುಗಳ ಕಮಲದಳಗಳು: ಚತುರ್ದಳ, ಷಡ್ದಳ, ದಶದಳ, ದ್ವಾದಶದಳ, ಷೋಡಶದಳ, ದ್ವಿದಳ. ಇವುಗಳ ಅಕ್ಷರಗಳು: ವಾದಿಸಾಂತ, ಬಾದಿಲಾಂತ, ಡಾದಿಫಾಂತ,

ಕಾದಿಠಾಂತ, ಅಆದಿಔಅಂತ, ಅಹಂಕ್ಷ. ಇವುಗಳ ದೇವರು: ಗಣ
ಪತಿ, ಬ್ರಹ್ಮ, ವಿಷ್ಣು, ಮಹೇಶ್ವರ, ಜೀವ, ಬಿಂದುರೂಪ.

ಚಕ್ರವರ್ತಿ, ಷಟ್: ಹರಿಶ್ಚಂದ್ರ, ನಳ, ಪುರುಕುತ್ಸ, ಪುರೂರವ, ಸಗರ,
ಕಾರ್ತವೀರ್ಯ.

ಚಿತ್ರಕಲಾ ಷಡಂಗ: ರೂಪ, ಪ್ರಮಾಣ, ಭಾವ, ಯೋಜನಾ, ಸಾದೃಶ್ಯ,
ವರ್ಣಿತ, ಭಂಗಿ.

ದರ್ಶನ, ಷಟ್: ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಮೀಮಾಂಸಾ,
ವೇದಾಂತ.

ದಾನ ಷಡಂಗ: ದಾತ, ಪ್ರತಿಗೃಹೀತ, ಶುದ್ಧಿ, ದೇಯಸಾಧನ, ದೇಶ, ಕಾಲ.

ದುರ್ಗ, ಷಟ್: ಧನ್ವದುರ್ಗ, ಮಹೀದುರ್ಗ, ಗಿರಿದುರ್ಗ, ಮನುಷ್ಯ
ದುರ್ಗ, ವೃದ್ಧುರ್ಗ, ವನದುರ್ಗ.

ದ್ರವ್ಯ, ಷಟ್: ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ.

ಪದಿ, ಷಟ್: ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ,
ವಾರ್ಧಿಕ.

ಪ್ರತ್ಯಯ, ಷಟ್: ಪ್ರಸ್ತಾರ, ನಷ್ಟ, ಉದ್ದಿಷ್ಟ, ಏಕದ್ವ್ಯಾದಿಲಗಕ್ರಿಯ,
ಸಂಖ್ಯಾನ, ಅಧ್ವಯೋಗ.

ಪ್ರಾಸ, ಷಟ್: ಸಿಂಹ, ಗಜ, ಶರಭ, ಅಜ, ಹಯ, ವೃಷಭ.

ಭಾವವಿಕಾರ, ಷಟ್: ಜಾಯತಾ, ಅಸ್ತಿತಾ, ಪರಿಣಮತಾ, ಪ್ರವರ್ಧತಾ,
ಅಪೇಕ್ಷೀಯತಾ, ವಿನಶ್ಯತಾ.

ಭಾಷೆ, ಷಟ್: ಸಂಸ್ಕೃತ, ಪ್ರಾಕೃತ, ಮಾಲವ, ಮಾಗಧೀ, ರಾಕ್ಷಸ,
ಪೈಶಾಚೀ.

ಭ್ರಮೆ, ಷಟ್: ಕುಲ, ಗೋತ್ರ, ಜಾತಿ, ವರ್ಣ, ಆಶ್ರಮ, ರೂಪ.

ಯೋಗಾಂಗ, ಷಟ್: ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ,
ಧಾರಣ, ಸಮಾಧಿ.

ರತಿ, ಷಟ್: ದಾಸ್ಯ, ಸಖ್ಯ, ವಾತ್ಸಲ್ಯ, ಶಾಂತ, ಕಾಂತ, ಅದ್ಭುತ.

ರಸ, ಷಟ್: ಕಟು, ಆಮ್ಲ, ಮಧುರ, ಲವಣ, ತಿಕ್ತ, ಕಷಾಯ.

ರಾಗ, ಷಟ್ (ಭರತ): ಭೈರವ, ಕೌಶಿಕ, ಹಿಂದೋಲ, ದೀಪಕ, ಶ್ರೀ,
ಮೇಘ.

ರಿಪು, ಷಟ್ (ಷಡ್ವರ್ಗ): ಕಾಮ, ಕ್ರೋಧ, ಲೋಭ, ಮದ, ಮೋಹ, ಮತ್ಸರ.

ವರ್ಗ, ಷಟ್= ಷಡ್ರಿಪು.

ವರ್ಣ, ಷಟ್: ಶ್ವೇತ, ಪೀತ, ಕಪಿಲ, ಹರಿತ, ಕೃಷ್ಣ, ಮಾಂಜಿಷ್ಠ.

ವಿಕಾರ, ಷಟ್: ಸತ್ತಾ, ಉತ್ಪತ್ತಿ, ವೃದ್ಧಿ, ವಿಪರಿಣಾಮ, ಅಪೇಕ್ಷಾ, ನಾಶ.

ವಿಷಯ, ಷಟ್: ಷಡಿಂದ್ರಿಯಾರ್ಥ.

ವಿಸರ್ಗ, ಷಟ್: ಪ್ರತಿಭಾ, ಶ್ರವಣ, ವಾರ್ತಾ ದರ್ಶನ, ಆಸ್ವಾದನ, ಆಘ್ರಾಣ.

ಶಕ್ತಿ, ಷಡ್ವಿಧ–I ಶೈವ: ಚಿಚ್ಛಕ್ತಿ, ಪರಾಶಕ್ತಿ, ಅನಾದಿಶಕ್ತಿ, ಇಚ್ಛಾಶಕ್ತಿ. ಜ್ಞಾನಶಕ್ತಿ, ಕ್ರಿಯಾಶಕ್ತಿ. II ವೈಷ್ಣವ: ಆಹ್ಲಾದಿನೀ, ಸಂಧಿನೀ, ಜ್ಞಾನ, ಇಚ್ಛಾ, ಕ್ರಿಯಾ, ಲೀಲಾ.

ಶಾಸ್ತ್ರ, ಷಟ್: ವೇದಾಂತ, ವೈಶೇಷಿಕ, ಭಾಟ್ಟ, ಪ್ರಾಭಾಕರ, ಪೂರ್ವ ಮೀಮಾಂಸಾ, ಉತ್ತರ ಮೀಮಾಂಸಾ.

ಸಮಾಧಿ, ಷಟ್: ಅಭ್ಯಂತರ ದೃಶ್ಯಾನುವಿದ್ಧ, ಅಭ್ಯಂತರ ಶಬ್ದಾನು ವಿದ್ಧ, ಅಭ್ಯಂತರ ನಿರ್ವಿಕಲ್ಪಕ, ಬಾಹ್ಯದೃಶ್ಯಾನುವಿದ್ಧ, ಬಾಹ್ಯ ಶಬ್ದಾನುವಿದ್ಧ, ಬಾಹ್ಯನಿರ್ವಿಕಲ್ಪಕ.

ಸಮಾಸ, ಷಟ್: ತತ್ಪುರುಷ, ಕರ್ಮಧಾರಯ, ದ್ವಿಗು, ದ್ವಂದ್ವ, ಬಹು ವ್ರೀಹಿ, ಅವ್ಯಯೀಭಾವ.

ಸಾಧನಸಂಪತ್ತಿ, ಷಟ್: ಶಮ, ದಮ, ಉಪರತಿ, ತಿತಿಕ್ಷಾ, ಸಮಾ ಧಾನ, ಶ್ರದ್ಧಾ.

ಸಾಹಿತ್ಯರೀತಿ, ಷಡ್ವಿಧ: ಗೌಡಿ, ವೈದರ್ಭಿ, ಪಾಂಚಾಲಿ, ಲಾಟಿ, ಅವಂತಿ, ಮಾಗಧಿ.

ಹಾವಭಾವ, ಷಡ್ವಿಧ: ವಿಲಾಸ, ವಿಭ್ರಮ, ಲಲಿತ, ಬಿಬ್ಬೋಕ, ಹೇಲಾ, ಲೀಲಾ.

ಹಾಸ, ಷಡ್ವಿಧ: ಸ್ಮಿತ, ಹಸಿತ, ವಿಹಸಿತ, ಅಪಹಸಿತ, ಉಪಹಸಿತ, ಅತಿಹಸಿತ.

# ಸಪ್ತ ವರ್ಗ

ಅನುರೂಪ ಗುಣ ಸಪ್ತಕ: ಕುಲ, ಧನ, ವಿದ್ಯಾ, ರೂಪ, ಯೌವನ, ಶೀಲ, ಆಚಾರ.

ಅರ್ಚಿ, ಸಪ್ತ: ಕಾಳಿ, ಕರಾಳಿ, ಮನೋಜವ, ಸುಲೋಹಿತ, ಸುಧೂಮ್ರ ವರ್ಣ, ಸ್ಫುಲಿಂಗಿನಿ, ವಿಶ್ವದಾಸಾ.

ಅರ್ಥವಿಶೇಷ, ಸಪ್ತವಿಧ: ಅರ್ಥ, ವಾಚ್ಯಾರ್ಥ, ಭಾವಾರ್ಥ, ಸಂಪ್ರದಾ ನಾರ್ಥ, ಕೌಲಿಕಾರ್ಥ, ರಹಸ್ಯಾರ್ಥ, ತತ್ತ್ವಾರ್ಥ.

ಅವಸ್ಥೆ, ಸಪ್ತ: ಅಜ್ಞಾನ, ಆವರಣ, ವಿಕ್ಷೇಪ, ಪರೋಕ್ಷಜ್ಞಾನ, ಅಪ ರೋಕ್ಷಜ್ಞಾನ, ಶೋಕನಿವೃತ್ತಿ, ನಿರಂಕುಶತೃಪ್ತಿ.

ಅಶ್ವ, ಸಪ್ತ: I ಅವ್ಯಕ್ತ, ಮಹತ್, ಅಹಂಕಾರ, ವೇದ, ಅಂಡ, ಗರ್ಭರ, ಸಾಮ್ನ; II ಗಾಯತ್ರಿ, ಬೃಹತಿ, ಉಷ್ಣಿಕ್, ಜಗತಿ, ತ್ರಿಷ್ಟುಪ್, ಅನುಷ್ಟುಪ್, ಪಂಕ್ತಿ.

ಅಂಗ, ಸಪ್ತ: I ದೇಹ ಸಂಬಂಧ= ಶಿರಸ್, ಮುಖ, ನೇತ್ರ, ನಾಸಾ, ದೇಹಮಧ್ಯ, ಮೂತ್ರದ್ವಾರ, ಗುದದ್ವಾರ; II ದೃಷ್ಟಿ ಸಂಬಂಧ: ದ್ಯು, ಸೂರ್ಯ, ಅಗ್ನಿ, ಆಕಾಶ, ವಾಯು, ಜಲ, ಪೃಥ್ವಿ.

ಆಕಾಶ, ಸಪ್ತ: ಅಪೋದಕ, ಋತಧಾಮ, ಅಪರಾಜಿತ, ವೃಷ್ಣಿಸ್ವ, ವಿಷ್ಟಪಂ, ಅಧಿವ್ಯಾ, ಪ್ರದ್ಯಾ, ರೋಚನಾ.

ಉಪಾಯ, ಸಪ್ತ: I ದೇಶ, ಕಾಲ, ದ್ರವ್ಯ, ಮಂತ್ರ, ಋತ್ವಿಜ, ದಕ್ಷಿಣಾ, ವಿಧಾನ. II ಮಂತ್ರ, ಔಷಧಿ, ಇಂದ್ರಜಾಲ, ಸಾಮ, ದಾನ, ಭೇದ, ದಂಡ.

ಋಷಿ, ಸಪ್ತ: ಮರೀಚಿ, ಅತ್ರಿ, ಅಂಗಿರಸ್, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ.

ಕುಲಶೈಲ, ಸಪ್ತ: ಮಹೇಂದ್ರ, ಮಲಯ, ಸಹ್ಯ, ಶುಕ್ತಿಮತ್, ಋಕ್ಷ, ವಿಂಧ್ಯ, ಪಾರಿಯಾತ್ರ.

ಕುಲಾಚಲ, ಸಪ್ತ: ಹಿಮವತ್, ನಿಷಧ, ವಿಂಧ್ಯ, ಮಾಲ್ಯವಂತ, ಪಾರಿ ಯಾತ್ರಕ, ಗಂಧಮಾದನ, ಹೇಮಕೂಟ.

ಕ್ಷೇತ್ರ, ಸಪ್ತ (= ಸಪ್ತ ಮುಕ್ತಿಕ್ಷೇತ್ರ): ಅಯೋಧ್ಯಾ, ಮಥುರಾ, ಮಾಯಾ, ಕಾಶೀ, ಕಾಂಚೀ, ಅವಂತೀ, ದ್ವಾರಾವತೀ.

ಗಂಗಾ, ಸಪ್ತ: ಜಾಹ್ನವೀ, ಗೋದಾವರೀ, ಕಾಳಿಂದೀ, ಸರಸ್ವತಿ, ನರ್ಮದಾ, ವೇಣೀ, ಕಾವೇರೀ.

ಗಂಗಾಶಾಖೆ, ಸಪ್ತ: ಗಂಗಾ, ಯಮುನಾ, ಗೋಮತೀ, ಸರಯೂ, ಗಂಡಕೀ, ಕೌಶಿಕೀ, ಶೋಣ.

ಗುಣ, ಸಪ್ತ: ಭಕ್ತಿ, ಪ್ರೇಮ, ದಯಾ, ಔದಾರ್ಯ, ಶಕ್ತಿ, ಕ್ಷಮಾ, ಜ್ಞಾನ.

ಚಿರಂಜೀವಿ, ಸಪ್ತ: ಅಶ್ವತ್ಥಾಮ, ಬಲಿ, ವ್ಯಾಸ, ಹನುಮಂತ, ವಿಭೀಷಣ, ಕೃಪಾಚಾರ್ಯ, ಪರಶುರಾಮ.

ಜ್ಞಾನಭೂಮಿಕೆ, ಸಪ್ತ: ಸುಖೇಚ್ಛೆ, ವಿಚಾರಣೆ, ತನುಮಾನಸ, ಸತ್ತಾಪತ್ತಿ, ಸಂಸಕ್ತಿ, ಪದಾರ್ಥಭಾವನೆ, ತೂರ್ಯಗಾಮಿ.

ತಾಳ, ಸಪ್ತ: ಧ್ರುವ, ಮಟ್ಟ, ರೂಪಕ, ಜಂಪೆ, ತ್ರಿಪುಟ, ಅಷ್ಟ, ಏಕ.

ತ್ಯಾಗಾಂಗ, ಸಪ್ತ: ಆಂದೋಳನ, ವಸ್ತ್ರ, ಆಭರಣ, ವಾಹನ, ರಾಜ್ಯ, ವಧು, ಕರ್ಪೂರವೀಳ್ಯ.

ದ್ವೀಪ, ಸಪ್ತ: ಜಂಬು, ಪ್ಲಕ್ಷ, ಕುಶ, ಕ್ರೌಂಚ, ಶಾಕ, ಶಾಲ್ಮಲಿ, ಪುಷ್ಕರ.

ಧಾತು, ಸಪ್ತ: ಅನ್ನರಸ, ರಕ್ತ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜೆ, ಶುಕ್ರ.

ನಮೋಪಲಕ್ಷಕ, ಸಪ್ತವಿಧ: ಪಂಚನಖಯೋಗ, ದ್ವಂದ್ವಯೋಗ, ಅರ್ಧಚಂದ್ರಕ, ಮಂಡಲ, ಮಯೂರಪ್ಲುತ, ಶಶಪ್ಲುತ, ಉತ್ಪಲ.

ನರಕ, ಸಪ್ತ: ರೌರವ, ಮಹಾರೌರವ, ವಹ್ನಿ, ವೈತರಣೀ, ಕುಂಭೀ, ತಾಮಿಸ್ರ, ಅಂಧತಾಮಿಸ್ರ.

ನರಕಾವರಣ, ಸಪ್ತ: ರೌರವ, ಕಾಸ, ವಿಮೋಹನ, ಕ್ರಿಮೀಶ, ಲಾಲಾಭಕ್ಷ, ಅಧಃಶಿರಾ, ಅವೀಚಿ.

ಪದಾರ್ಥ, ಸಪ್ತ: ಜೀವ ಸಜೀವ, ನಿರ್ಜೀವ, ನಿರ್ಜರ, ಆಶ್ರಮ ಬಂಧ, ಮೋಕ್ಷ.

ಪಾತಾಳ, ಸಪ್ತ: ಪಾತಾಳ, ಮಹಾತಳ, ರಸಾತಳ, ತಳಾತಳ, ಸುತಳ, ವಿತಳ, ಅತಳ. ಇವುಗಳ ಭೂಮಿಗಳು ಅನುಕ್ರಮವಾಗಿ: ಸ್ವರ್ಣ, ರಜತ, ತಾಮ್ರ, ಕಾಂಸ್ಯ, ಲೋಹ, ವಾಲುಕಾ, ಮೃತ್ತಿಕಾ. ಕರ್ತೃಗಳು: ಬಲ, ಅತಿಬಲ, ಬಲವಾನ್, ಬಲವಿಕ್ರಮ, ಬಲೇಶ, ಬಲಶಾಲಿ, ಬಲಾಢ್ಯ. ಅಧಿಪತಿಗಳು: ಶಂಖಕರ್ಣ, ಪ್ರಹ್ಲಾದ, ಶಿಶುಪಾಲ, ಕರ್ಕಂಧುಕ, ಹಿರಣ್ಯಾಕ್ಷ, ಬೃಹದ್ಗರ್ಭ, ಬಲಿ. ಸರ್ಪಗಳು: ಕುಟಿಲ, ವಾಸುಕಿ, ಕಂಬಳ, ಕರ್ಕೋಟಕ, ಕಾಳಿಂಗ, ದುರ್ವರ್ಶನ, ತಕ್ಷಕ. ಲಿಂಗಗಳು: ಶಿವಲಿಂಗ, ಶಂಭುಲಿಂಗ, ಶಂಕರಲಿಂಗ, ನೀಲಕಂಠಲಿಂಗ, ಉಮಾಪತಿಲಿಂಗ, ಸರ್ವೇಶ್ವರಲಿಂಗ, ಶ್ರೀಕಂಠಲಿಂಗ.

ಪ್ರಕೃತಿ, (ಸಪ್ತ = ರಾಜ್ಯಾಂಗ ಸಪ್ತಕ): ಸ್ವಾಮಿ, ಅಮಾತ್ಯ, ಸುಹೃತ್, ಕೋಶ, ರಾಷ್ಟ್ರ, ದುರ್ಗ, ಬಲ.

ಮದ, ಸಪ್ತ: I ಕುಲ, ಧನ, ಯೌವನ, ಶ್ರೀ, ವಿದ್ಯಾ, ಅನ್ನ, ಉದ್ಯೋಗ; II ವಾತಜ, ಪಿತ್ತಜ, ಕಫಜ, ಸನ್ನಿಪಾತಕ, ರಕ್ತ, ಮದ್ಯ, ವಿಷ.

ಮಾತೃಕೆ, ಸಪ್ತ: ಬ್ರಾಹ್ಮಿ, ಮಾಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ, ಚಾಮುಂಡಾ.

ಮೋಹಾವಸ್ಥೆ, ಸಪ್ತವಿಧ: ಜಾಗ್ರತ್, ದ್ವಿತೀಯ ಜಾಗ್ರತ್, ತೃತೀಯ ಜಾಗ್ರತ್, ಜಾಗ್ರತ್ ಸ್ವಪ್ನ, ಸ್ವಪ್ನ, ಸ್ವಪ್ನ ಜಾಗ್ರತ್, ಸುಷುಪ್ತಿ.

ಮುಕ್ತಿಕ್ಷೇತ್ರ, ಸಪ್ತ = ಸಪ್ತ ಕ್ಷೇತ್ರ.

---

Edited, Printed & Published by K. V. Shenoy
at The Prabhat Printers, Ltd., Mangalore.

# 52

# ಸಂಗ್ರಾಮಸಿಂಹ

(ಒಂದು ಐತಿಹಾಸಿಕ ಕಥನ)



ಲೇಖಕರು:

ಶ್ರೀ| ಅ. ಗೌ. ಕಿನ್ನಿಗೋಳಿ

1955.

ಮಂಗಳೂರು.




ಒಂದಾಣ್ ಮಾಲೆ

# ಒಂದಾಣೆ ಮಾಲೆಯಲ್ಲಿ ಈ ವರೆಗೆ ಪ್ರಕಟವಾದ ಪುಸ್ತಕಗಳು

೧. *ಕೆಪ್ಪಟೆರಾಯ (ವಿನೋದ ಕಥೆ)
೨. *ನಾರೀಶ್ವರರು (ಏಕಾಂಕ ಪ್ರಹಸನ)
೩. *ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು.
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ)
೫. *ಅದ್ಭುತತ್ಯಾಗ ಮತ್ತು ಇತರ ಕಥೆಗಳು
೬. ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ)
೭. *'ಬೀಡಿ ಸೇದಬೇಡಿ' ಮತ್ತು 'ಆ ಮಗು' (ವಿನೋದ ಕಥೆಗಳು)
೮. *ಇಂಗ್ಲಿಷ್-ಕನ್ನಡ ಅರ್ಥಕೋಶ
೯. *ಲಂಚಕ್ಕೆ ಸಂಚಕಾರ
೧೦. *ಟಿಶ್ಯೂ ಔಷಧಿಗಳ ಕೈಪಿಡಿ.
೧೧. *ಶ್ರೀಕ್ಷೇತ್ರ ಧರ್ಮಸ್ಥಳ (ದ್ವಿ. ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು
೧೪. ವೆಂಕಟನ ಸಂಕಟ (ಏಕಾಂಕ ಪ್ರಹಸನ)
೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ)
೧೬. ವೇಣೂರಿನ ಗತವೈಭವ.
೧೭. ಒಗಟುಗಳು [ದ್ವಿತೀಯ ಮುದ್ರಣ]
೧೮. ಜಗಳಗಂಟಿ ಮತ್ತು ಇತರ ಕಥೆಗಳು
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಪ್ಪ
೨೧. *ಭಾರತದ ಮಹಾನಗರಗಳು (ಭಾಗ ೧)
೨೨. ತಿರುಕ್ಕುರಲ್
೨೩. ಸೂರ್ಯನ ಸಂಸಾರ ಮತ್ತು ಇತರ ಕಥೆಗಳು.
೨೪. ಭಾರತದ ಮಹಾನಗರಗಳು (ಭಾಗ ೨)
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳು.
೨೬. *ಮಾರಾವತಾರ (ಏಕಪಾತ್ರ ಯಕ್ಷಗಾನ ಪ್ರಬಂಧ)
೨೭. ಹಾಸವಿಲಾಸ (ನಗೆಹನಿಗಳು)
೨೮. ಸತ್ಯವಂತ ಬಾಬಿ (ಏಕಾಂಕ ಪ್ರಹಸನ)
೨೯. ಜಾಣ್ಮೆಯ ಒಗಟುಗಳು
೩೦. ಜಾತಕ ಕಥೆಗಳು
೩೧ ಕಾರ್ಕಳದ ಚರಿತ್ರೆ
೩೨. ಮರ್ಜಿ (ಏಕಾಂಕ ಪ್ರಹಸನ)
೩೩. ದರ್ಶನದ ಕಥೆಗಳು
೩೪. ಅಳುವಿನ ಹೊಳೆ ಮತ್ತು ಕೇಶವಭೂಪ (ಮಕ್ಕಳ ಕಥೆಗಳು)
೩೫. ಶರಾಬಿನ ಪೀಪಾಯಿಗಳು
೩೬. ಉಪದೇಶ ಶತಕ
೩೭. ನಿಮಗೆ ಗೊತ್ತಿದೆಯೋ?
೩೮. ಚತುರ ಚಮತ್ಕಾರ
೩೯. ಸತೀ ಸಾವಿತ್ರಿ
೪೦. ಆಭರಣಗಳ ಪೆಟ್ಟಿಗೆ, ಇತರ ಕಥೆಗಳು
೪೧. ಭಾರತದ ಮಂತ್ರಿಮಂಡಲಗಳು
೪೨. ಕಾಲುಬಳೆಯ ಕಥೆ
೪೩. ಭಾರತದ ನಾಲ್ಕು ಕಲಶಗಳು
೪೪. ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು
೪೫. ಸುಭಾಷಿತ
೪೬. ೧೮೫೭ರ "ಸಿಪಾಯಿ ದಂಗೆ" ಅಥವಾ ಬ್ರಿಟಿಷರಿಗೆದುರಾಗಿ ಭಾರತೀಯರ ಸ್ವಾತಂತ್ರ್ಯಸಮರ
೪೭. ಅಕಾಂಡ ತಾಂಡವ (ರೇಡಿಯೋ ನಾಟಕ)
೪೮. ಸಾಹಸದ ಕಥೆಗಳು.
೪೯. ಸಂಜ್ಞಾ ಜ್ಞಾನ ಕೋಶ
೫೦. ಪಂಡಿತನ ಪಿಟೀಲು
೫೧. ಭೋಗಯಾತ್ರೆ
೫೨. ಸಂಗ್ರಾಮಸಿಂಹ

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಈ ವರೆಗೆ ಐವತ್ತೆರಡು ಪುಸ್ತಕಗಳಲ್ಲಿ, ಐವತ್ತೆರಡು ಅಣೆಗಳಿಗೆ,
'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, 1146 ಪುಟಗಳನ್ನು ಕೊಟ್ಟಿರುತ್ತದೆ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ, ಮಂಗಳೂರು-೧

# ಸಂಗ್ರಾಮಸಿಂಹ

---

ಮೇವಾಡವು ವೀರಭೂಮಿ. ಸಂಗ್ರಾಮ ಸಿಂಹನು ೧೫೦೯ರಲ್ಲಿ ಮೇವಾಡದ ರಾಣನೆನಿಸಿದನು. ಸ್ವದೇಹ ಪ್ರೇಮಕ್ಕಿಂತಲೂ ಸ್ವಜನ ಪ್ರೇಮವು ಹಿರಿದು; ಸ್ವಜನ ಪ್ರೇಮಕ್ಕಿಂತಲೂ ಸ್ವದೇಶ ಪ್ರೇಮವು ಮಹಿಮಾನ್ವಿತವಾದುದು ಎಂಬುದೇ ವೀರ ಭೂಭುಜರ ಸರ್ವಶ್ರೇಷ್ಠವಾದ ಆದರ್ಶವೆಂದು ತಿಳಿದು ನಡೆದ ವೀರಾಗ್ರಣಿ ಈ ಸಂಗ್ರಾಮ ಸಿಂಹನು. 'ಮುಕುಟ ಧಾರಣವೊಂದೇ ಬಾಳಿನ ತೋರಣ'ವಲ್ಲ; ರಾಜರಿರಬೇಕಾದುದು ರಾಜ್ಯದ ಪಾಲನೆಗಾಗಿ ಮಾತ್ರ; ಅಧಿಕಾರದ ಅಮಲಿನ ನಿದ್ರೆಯಲ್ಲಿ ವ್ಯೈಮರೆಯುವುದಕ್ಕಲ್ಲ—ಎಂಬ ತತ್ತ್ವವನ್ನು ತನ್ನ ಆಚರಣೆಯ ಮೂಲಕ ಅನುಷ್ಠಾನ ಮಾಡಿ ತೋರಿಸದವನವನು. ಬಲ, ಸಾಹಸ, ಬುದ್ಧಿಗಳು ಒಂದಕ್ಕೊಂದು ಕಡಿಮೆಯೆನಿಸದಂತೆ ಸಂಗ್ರಾಮಸಿಂಹನನ್ನು ಆಶ್ರಯಿಸಿದ್ದವು.

ಈ ಮಾತೇನೂ ಅಸಂಭಾವಿತವಲ್ಲ. ಏಕೆಂದರೆ ತುಲಸಿಯ ಬೀಜಕ್ಕೆ ತುರುಚೆಯ ಬಳ್ಳಿಯು ಎಂದಾದರೂ ಹುಟ್ಟೀತೆ? ಸಂಗಾಮಸಿಂಹನ ತಂದೆಯಾದ ರಾಯಮಲ್ಲನ ಔದಾರ್ಯವೆಂತಹದೋ ಅದಕ್ಕೆ ಸರಿದೊರೆಯಾದ ಗುಣ ವಿಶೇಷಗಳು ಈ ಸತ್ಪುತ್ರನಲ್ಲೂ ಮನೆಮಾಡಿಕೊಂಡಿದ್ದರೆ ಆಶ್ಚರ್ಯವಲ್ಲ. ಇದಕ್ಕೆ ಅಪವಾದಗಳು ರಾಜಪುತ್ರರ ಉಜ್ವಲ ಇತಿಹಾಸದಲ್ಲಿ ದೊರೆಯುವುದೇ ಇಲ್ಲವೆಂದಲ್ಲ. ದೊರೆಯುತ್ತಿವೆ, ಎಲ್ಲೋ ಒಂದೆರಡು ಮಾತ್ರ. ಹದಿನೆರಡನೇ ಶತಮಾನದಲ್ಲಿ, ಪ್ರಸಿದ್ಧವಾದ ರಾಠೋಡ ವಂಶದಲ್ಲಿ ಹುಟ್ಟಿದ್ದ, ಕನ್ನೋಜ (ಕನ್ಯಾಕುಬ್ಜ)ದ ಸಮ್ರಾಟ, ಲೋಕೋತ್ತರ ಧೀರ ಕನ್ಯೆಯಾದ ಸಂಯುಕ್ತೆಯ ಪಿತೃ—ಜಯಚಂದ್ರನೊಬ್ಬ; ಹತ್ತೊಂಭತ್ತನೆ ಶತಮಾನದಲ್ಲಿ ಶ್ರೇಷ್ಠ ಬಾಪ್ಪಾರಾಯನ ವಂಶಗೌರವದ ಧವಳೇತಿಹಾಸವನ್ನು ತನ್ನ ಹೇಡಿತನದ ಕಾಳಿಮೆಯಿಂದ ಮುಸುಕುಗೊಳಿಸಿದ, ಅನುಪಮ ಲಾವಣ್ಯವತಿಯಾಗಿದ್ದ ಹತಭಾಗ್ಯೆ ಕೃಷ್ಣಾಕುಮಾರಿಯ ಪಿತೃ—ಭೀಮಸಿಂಹನೊಬ್ಬ; ಈ ಉಭಯರು—ಕ್ಷಾತ್ರತರುವಿನ ಕೀಟಗಳು ಹುಟ್ಟಿ,

ರಾಜಪುತ್ರರ ಪವಿತ್ರಪರಂಪರೆಯಲ್ಲಿ ಅಪವಾದದ ವಿಷಬೀಜವನ್ನು ಚೆಲ್ಲಿ ದವರು ಸಿಗುತ್ತಾರೆ. ಅವರ ನಿರ್ವೀರ್ಯರ್ಜಶನವನ್ನು ನೆನೆವಾಗ ದೇಶಪ್ರೇಮಿಯ ಎದೆ ಇಂದಿಗೂ ನಿರಾಶೆಯ ಸಿಗ್ಗಿನಿಂದ ಕುಸಿಯುತ್ತದೆ; ಮೊಗಬಾಗುತ್ತದೆ.

ಸಂಗ್ರಾಮಸಿಂಹನ ತಂದೆಯಾದ ರಾಯಮಲ್ಲನನ್ನು ಔದಾರ್ಯ ಮೂರ್ತಿ ಎಂದೆನಲ್ಲ? ಆ ವಿಷಯವನ್ನು ಒಂದಿಷ್ಟು ವಿವರವಾಗಿ ಹೇಳಿದರೆ ಅಸಂಗತವಾಗಲಾರದು. ಬದಲಿಗೆ, ಅಂಥಾ ತಂದೆಗೆ ಇಂಥಾ ಮಗ ಹುಟ್ಟಿದ್ದು ನ್ಯಾಯವಾದುದೇ ಎಂಬ ತೃಪ್ತಿ ಕೂಡಾ ಒಡಮೂಡೀತು!

ರಾಯಮಲ್ಲನು ಮೇವಾಡದ ಪಟ್ಟವೇರಿದುದು ಕ್ರಿ. ಶ. ೧೪೭೪ರಲ್ಲಿ. ಈ ಪ್ರಭುವಿಗೆ ಸಂಗ್ರಾಮಸಿಂಹ, ಪೃಥ್ವೀರಾಜ, ಜಯಮಲ್ಲ ಎಂಬ ಮೂವರು ಗಂಡುಗಲಿಗಳಾದ ಮಕ್ಕಳಿದ್ದರು. ಮೂವರೂ ಅಪ್ರತಿಮ ಸಾಹಸಿಗಳು. ಆದರೆ ಆ ಮೂವರಲ್ಲಿ ಮಧ್ಯಮನಾದ ಪೃಥ್ವೀರಾಜನು ಮಾತ್ರ ನಿಷ್ಠುರನೂ, ಕಠಿನ ಹೃದಯಿಯೂ ಆಗಿದ್ದುದು ದುರ್ದೈವ. ತಮ್ಮನ ಉಪದ್ರವಗಳನ್ನು ಸಹಿಸಲಾರದವನಾಗಿ ವಿವೇಕಿಯಾದ ಸಂಗ್ರಾಮ ಸಿಂಹನು ದೇಶವನ್ನೇ ಬಿಟ್ಟುಹೋಗಬೇಕಾದ ಪ್ರಸಂಗಬಂದಿತು. ಆದರೂ ಸಂಗ್ರಾಮನು ಸೋದರತ್ರಯರಲ್ಲಿ ವೈಮನಸ್ಯದ ಕೊಳಚೆಯನ್ನೆರಚುವು ದಕ್ಕೆ ಇಷ್ಟವಿಲ್ಲದೆ ತಾನೇ ಸ್ವಸಂತೋಷದಿಂದ ದೇಶತ್ಯಾಗಮಾಡಿ ತನ್ನ ಘನತೆಯನ್ನು ಮೆರೆಯಿಸಿದನು. ಈ ನಡತೆಯನ್ನು ಕಂಡ ಪೃಥ್ವೀರಾಜನು ಅದನ್ನು ಅಣ್ಣನ ದೌರ್ಬಲ್ಯದ ಚಿಹ್ನೆಯೆಂದು ಬಗೆದನೋ, ಅಲ್ಲ, ತನ್ನ ಧೃತಿಶಕ್ತಿಗಳ ಪ್ರಭಾವವೆಂದು ತಿಳಿದನೋ, ಅಂತೂ ದಿನದಿಂದ ದಿನಕ್ಕೆ ಅವನ ಔದ್ಧತ್ಯವು ಮೇರೆಮೀರುತ್ತಲೇ ಹೋಯಿತಲ್ಲದೆ ಕಡಿಮೆಯಾಗಲಿಲ್ಲ.

ರಾಯಮಲ್ಲನಿಗೆ ತನ್ನ ನಡುಮಗನ ವರ್ತನೆಯು ಬಿಸಿಯನ್ನದ ತುತ್ತಾಯಿತು. ಆದರೂ ಅವನು ತನ್ನ ವಿವೇಕವನ್ನು ಕೋಪದ ಕೈವಶ ಮಾಡದೆ ಮಗನನ್ನು ತಿದ್ದಲು ನೋಡಿದನು. ತಂದೆಯ ಹಿತೋಕ್ತಿಯು ಮಗನಿಗೆ ಪಥ್ಯವಾಗಲಿಲ್ಲ. ಕೊನೆಗೆ ಉಪಾಯಗಾಣದ ರಾಜಶಾಸನದ ಅಸ್ತ್ರವನ್ನು ತನ್ನ ಸ್ವಂತ ಮಗನ ಮೇಲಾದರೂ ಎತ್ತಲು ರಾಯಮಲ್ಲನು ಹಿಂದುಮುಂದು ನೋಡಲಿಲ್ಲ. ಪೃಥ್ವೀರಾಜನು ಮೇವಾಡಗಡಿಯನ್ನು ಬಿಟ್ಟು ಹೊರಹೋಗಬೇಕೆಂದು ತಂದೆಯು ರಾಜಾಜ್ಞೆ ಹೊರಡಿಸಿದನು. ಇದರಿಂದ ಮತ್ತಷ್ಟು ರೇಗಿಕೊಂಡ ಪೃಥ್ವೀರಾಜನು ರಾಜಾಜ್ಞೆಯಂತೆ ರಾಜ್ಯವನ್ನು

ಬಿಟ್ಟು ಹೊರನಡೆದನಾದರೂ ಅವನ ಬಗೆಯಾಳದಲ್ಲಿ ಸೇಡಿನ ಸರ್ಪ ಬುಸುಗುಟ್ಟುತ್ತಲೇ ಇತ್ತು. ತಾನೂ ಮೀಸೆಹೊತ್ತ ಗಂಡುಗಲಿ; ಅರಮನೆಯ ಹಂಗಿನಲ್ಲಿ ಬಿದ್ದು ಅಸ್ವತಂತ್ರನಾಗಿ, ದಿಗ್ಬಂಧಿತನಾಗಿ ಬಾಳುವುದಕ್ಕಿಂತಲೂ, ಆ ಹಂಗಿನ ದಾರವನ್ನು ಕಳಿದು ಸ್ವಚ್ಛಂದವಾಗಿ ಬದುಕುವುದು ಶ್ರೇಯಸ್ಕರ ವೆಂಬುದನ್ನು ಕೃತಿಯಿಂದ ತೋರಿಸುತ್ತಿರುವವನಂತೆ ಅವನು ಆಗಾಗ್ಗೆ ಮೇವಾಡದ ಗಡಿಯನ್ನು ಒಳನುಗ್ಗಿ ದರೋಡೆ ನಡೆಯಿಸಲು ತೊಡಗಿದನಂತೆ! ಹೀಗಾಗಿ ಮೂರನೆಯ ಮಗನಾದ ಜಯಮಲ್ಲನೊಬ್ಬನು ಮಾತ್ರ ತಂದೆಯ ಬಳಿಯಲ್ಲಿದ್ದನು. ಜಯಮಲ್ಲನಾದರೂ ತಂದೆಯ ಅಭೀಷ್ಟದಂತೆ ನಡೆಯುತ್ತಿ ರುವನೆಂದು ಸಂತೈಸಿಕೊಳ್ಳಲಿಕ್ಕುಂಟೆ? ಇಲ್ಲ! ಸಂತೈಸಿಕೊಳ್ಳುತ್ತಿರುವಷ್ಟರ ಅವಧಿಯಲ್ಲಿ ಮತ್ತೊಂದು ದುರ್ಘಟನೆಯು ಸುಳಿಯೆದ್ದು, ರಾಯನ ಬಗೆಯ ತಿಳಿಗೊಳವನ್ನು ಕಲಂಕಿಸಿಬಿಟ್ಟಿತು. ಅದನ್ನು ಇತಿಹಾಸದ ಪವಾಡವೆಂದರೂ ಸರಿ; ದೈವದ ಆಟವೆಂದರೂ ಸರಿ. ಆ ದುರ್ಘಟನೆ ಹೀಗಿದೆ:

ರಾಜಸ್ಥಾನದಲ್ಲಿ ತೋಡದೇಶವು ವೀರತೆಗೆ ಹೆಸರಾದುದು. ಈ ಮಾತಿಗೆ ಅಲ್ಲಿಯ ಹೆಮ್ಮಕ್ಕಳ ವಿವಾಹದ ಸಂಪ್ರದಾಯ ಕೂಡಾ ಸಾಕ್ಷಿ ಹೇಳುತ್ತದೆ. ವೀರರಿಗಲ್ಲದೆ ಇತರರಿಗೆ ತಮ್ಮ ಹೆಮ್ಮಕ್ಕಳನ್ನು ಅಲ್ಲಿಯ ರಾಜಮನೆತನದವರು ಧಾರೆಯೆರೆದು ಕೊಡುತಿದ್ದಿಲ್ಲ. ಆ ರೂಢಿಯನ್ನು ಮುರಿದವರಿಗೂ ಅವರ ಕುಟುಂಬಕ್ಕೂ ಮಾನ್ಯತೆಯಿಲ್ಲ. ಅಂಥಾ ತೋಡ ದೇಶದ ದೊರೆಯಾಗಿದ್ದ ರಾವುಸೂರ್ತನನೆಂಬವನನ್ನು ಢಿಲ್ಲಿಯ ಅಲ್ಲಾವುದ್ದೀನನು ಸೋಲಿಸಿ ದೇಶವನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡಿದ್ದನು. ರಾವುಸೂರ್ತನನು ಹೆಂಡತಿಮಕ್ಕಳನ್ನು ಕಟ್ಟಿಕೊಂಡು, ದೇಶಭ್ರಷ್ಟನಾಗಿ, ಮೇವಾಡರಾಜ್ಯದ ವೇದನೂರು ಎಂಬಲ್ಲಿಗೆ ಬಂದು ನೆಲಸಿದ್ದನು.

ತಾರಾಬಾಯಿಯೆಂಬ ಅನುಪಮ ರೂಪವತಿಯಾದ ಕನ್ಯೆಯೊಬ್ಬಳು ಸೂರ್ತನನ ಮಗಳಾಗಿದ್ದಳು. ಕೇವಲ ಬೆಡಗು ಬಿನ್ನಾಣಗಳನ್ನು ಮಾತ್ರ ಬಳೆಯಿಸಿಕೊಂಡು, 'ಹೆಣ್ತನಕ್ಕೆ ರೂಪೇ ಹೆಚ್ಚು, ವಯ್ಯಾರವೇ ಮೆಚ್ಚು', ಎಂಬಂತೆ ತಿಳಿದವಳಲ್ಲ ತಾರಾಬಾಯಿ! ಚಿಕ್ಕಂದಿನಿಂದಲೇ ವೀರಕನ್ಯೆಯರಿಗೆ ಭೂಷಣಪ್ರಾಯವಾದ ಕದನವಿದ್ಯೆಯಲ್ಲೂ ಆಸಕ್ತಿ ತೋರಿಸಿದವಳಾಗಿದ್ದಳು. ಕತ್ತಿ ಬೀಸುವಿಕೆ, ಕುದುರೆ ಸವಾರಿಗಳಲ್ಲಿ ನಿಷ್ಣಾತಳಾಗಿದ್ದಳು. ಜಟ್ಟಿ ಚಲ್ಲಣ ತೊಟ್ಟು ಗಂಡುಡಿಗೆಯಿಂದ ಅವಳು ಅಶ್ವಾರೋಹಿಣಿಯಾದಳೆಂದರೆ

ನಿಜವಾದ ಗಂಡುಗಳೇ ನಾಚಿಕೊಳ್ಳಬೇಕು. ಅಂಥಾ ರೀತಿ, ಗತ್ತುಗಳು ತಾರಾಬಾಯಿಯಲ್ಲಿದ್ದವು. ಕುಂದಣದ ಕುಸುಮಕ್ಕೆ ಕಂಪು ಸೇರಿಕೊಂಡಂತೆ, ಹರೆಯದ ಅಂದಣವನ್ನೇರುತಿದ್ದ ಕುಮಾರಿಗೆ ಅಪ್ರತಿಮವಾದ ಸೌಂದರ್ಯವೂ ಇದ್ದಿತು.

ಒಮ್ಮೆ ಆ ಬಾಲೆಯು ಗಂಡುಡುಗೆ ತೊಟ್ಟು ಅಶ್ವಾರೋಹಿಣಿಯಾಗಿದ್ದಾಗ ಯೌವನಶಾಲಿಯಾದ ಕ್ಷತ್ರಿಯ ಕುಮಾರನೊಬ್ಬನು ಆ ಅಪೂರ್ವ ಮೂರ್ತಿಯನ್ನು ಕಂಡನು. ಕಂಡು ಬೆರಗಾದನು. ಅವನು ಕುದುರೆ ಏರಿದ್ದನು. ಒಡನೆ ಅವಳೆಡೆಗೆ ಕುದುರೆಯೋಡಿಸಿ ನಿಲ್ಲಿಸಿದನು. ಅವನ ನಿಶ್ಚಲತೆಯು ನೀರಾಯಿತು; ಕಣ್ಣು ಕೈ ಸೆರೆಯಾಯಿತು; ಮನವು ಮೋಹದ ಮಡುವಿನಲ್ಲಿ ಮುಳುಗಿತು. ಆದರೆ ಆ ಕುಮಾರಿಯ ಚಿತ್ತ ಮಾತ್ರ ಕದಡಲಿಲ್ಲ. ತರುಣನ ಹೃದಯದಲ್ಲಿ ಏಕಕಾಲಕ್ಕೆ ಆಶೆ ನಿರಾಶೆಗಳೆರಡೂ ಕೈಕೈಹಿಡಿದು ಕುಣಿಯಲಾರಂಭಿಸಿದವು. "ಒಲಿಸಬಲ್ಲೆನೇ?" ಎಂಬ ಅವನ ಬಗೆಯ ಶಂಕೆಗೆ, "ಒಲಿದಾಳೇ?" ಎನ್ನುವ ಸಂದೇಹದ ಪ್ರಶ್ನೆಯು ಸಾಕಾರತೆಯನ್ನಿತ್ತಿತು.

ಆ ಯೌವನಶಾಲಿ ಕ್ಷತ್ರಿಯ ಕುಮಾರನಾರು? ಮತ್ತಾರು? ಜಯಮಲ್ಲ. ಮಹಾರಾಜನಾದ ರಾಯಮಲ್ಲನ ಮಗ. ತಾರಾಬಾಯಿಯನ್ನು ವಿವಾಹವಾಗಬೇಕೆಂದು ಅವನ ಆಸೆಯು ಕುಡಿ ಬಳ್ಳಿವರಿಯಿತು. ರಾವು ಸೂರ್ತನೊಡನೆ ಕೇಳಿಯೂ ಕೇಳಿದನು. ಕೇಳುವುದರಲ್ಲಿ ತಪ್ಪೇನು? ತಾನೂ ಒಬ್ಬ ಮಹಾರಾಜನ ಪುತ್ರ. ತಾರಾಬಾಯಿಯೂ ರಾಜಪುತ್ರಿಯೇ. ಹೀಗಿರಲು ಈ ನೆಂಟತನಕ್ಕೆ ಅಭ್ಯಂತರವೇನು? ಬೇರೇನೂ ಇಲ್ಲ. ಇದ್ದುದೊಂದೇ ಶರ್ತ. ಯಾವಾತನು ತಾನು ಕಳೆದುಕೊಂಡ ತೋಡದೇಶವನ್ನು ಗೆದ್ದು ಅಲ್ಲಾವುದ್ದೀನನಿಂದ ಬಿಡಿಸಿ ತನ್ನ ಕೈವಶ ಕೊಡುವನೋ ಅಂಥವನಿಗೆ ತನ್ನ ಮಗಳಾದ ತಾರಾಬಾಯಿಯನ್ನು ಧಾರೆಯೆರೆದು ಕೊಡುವೆನೆಂದು ಸೂರ್ತನನು ಈ ಮೊದಲೇ ಪ್ರತಿಜ್ಞೆ ಹಾಕಿಕೊಂಡಿದ್ದನು. ಸೂರ್ತನನು ಕನ್ಯಾರ್ಥಿಯಾಗಿ ಬಂದ ಜಯಮಲ್ಲನಿಗೆ ತನ್ನ ಪ್ರತಿಜ್ಞೆಯನ್ನು ತಿಳಿಸಿದನು.

ಆದರೆ ಜಯಮಲ್ಲನು ಅನುಸರಿಸಿದ ದಾರಿ ಅಡ್ಡದಾರಿ. ತಂದೆಯ ಮನೋಭೀಷ್ಟವನ್ನು ಸಲ್ಲಿಸಿ ರಾಜಕುಮಾರಿಯನ್ನು ವರಿಸುವುದೆಂದರೆ ಅದು ಶೀಘ್ರದಲ್ಲಿ ಘಟಿಸಬಹುದಾದ ಸಂಗತಿಯಲ್ಲ. ಅವನ ತವಕದ ತುರಂಗ

ತಾನೇ ತಾನಾಗಿ ಧಾವಿಸುತ್ತಿತ್ತು. ಆದುದರಿಂದ ಯಾವುದೇ ರೀತಿಯಿಂದಾದರೂ ತಾರಾಬಾಯಿಯನ್ನು ಹೊಂದಲೇಬೇಕೆಂದು ಬಗೆದ ಅವನು ವಾಮಮಾರ್ಗವನ್ನು ಹಿಡಿದನು. ಕನ್ಯೆಯನ್ನು ಉಪಾಯಾಂತರದಿಂದ ಅಪಹರಿಸಿ ಒಯ್ದು ವಿವಾಹವಾಗಿ ತನ್ನ ಇಷ್ಟಪೂರ್ತಿಯನ್ನು ಮಾಡಿಕೊಳ್ಳುವುದೆಂದು ಬಗೆದನು. ಕಾರ್ಯೋದ್ಯುಕ್ತನಾದನು.

ವಿಷಯವು ಸೂರ್ತನನಿಗೆ ತಿಳಿದೊಡನೆ ಆ ವೀರವರನ ನೆತ್ತರು ಕುದಿಯಿತು. ತನ್ನ ಕುಲಕ್ಕೆ ಅವಹೇಳನದ ಮಸಿ ಬಳಿಯಲು ಸಂಚುಗೈಯುತ್ತಿರುವ ದುಷ್ಟನ ತಲೆಯನ್ನು ಬಿಲೆಗೊಂಡಲ್ಲದೆ ತಾನು ವಿರಮಿಸೆನೆಂದು ಸೂರ್ತನನು ಮತ್ತೊಮ್ಮೆ ಶಪಥ ತೊಟ್ಟುಕೊಂಡನು. ಒಂದನೆಯ ಶಪಥವು ಈಡೇರದಿದ್ದರೂ ಎರಡನೆಯದು ಈಡೇರಿತು. ಜಯಮಲ್ಲನು ಸೂರ್ತನನ ಕೈಯಲ್ಲಿ ಸಿಕ್ಕಿಬಿದ್ದು ಹತನಾದನು. ರಾಯಮಲ್ಲ ಮಹಾರಾಜನ ಬಾಳಿನ ಕಣ್ಣಾಗಿದ್ದ ಜಯಮಲ್ಲನು ಮಡಿದುಬಿದ್ದನು. ಮೇವಾಡದ ಮುಂದಿನ ಅಧಿಕಾರಿಯಾಗಬಹುದಾಗಿದ್ದ ರಾಜಕುಮಾರನು ಅದೇ ಮೇವಾಡದ ನೆಲದಲ್ಲಿ ತಲೆಮರೆಸಿಕೊಳ್ಳಲೆಂದು ತಳವೂರಿದ್ದ ದೇಶಭ್ರಷ್ಟನೊಬ್ಬನ ಕೈಯ ಕತ್ತಿಗೆ ತನ್ನ ಕತ್ತನ್ನು ಮಾರಿಕೊಂಡನು.

ಈ ಕಗ್ಗೊಲೆಯ ಸುದ್ದಿಯು ಕಾಳ್ಗಿಚ್ಚು ಬಿರುಗಾಳಿ ಸೋಂಕಿದಂತೆ ಕರ್ಣಾಕರ್ಣಿಯಾಗಿ ಹಬ್ಬಿತು. ಏನೋ ಅವಾಂತರವೊಂದು ಸಂಭವಿಸಲಿದೆಯೆಂಬ ಭಯ ಜನರೆದೆಯ ತಳದಲ್ಲಿ ತಳವೂರಿತು. ವಾರ್ತೆಯು ಹಬ್ಬುವುದಕ್ಕೆ ತಡವಿಲ್ಲ, ನಿಜ. ಮಹಾರಾಜನ ಕಿವಿಗೆ ಮುಟ್ಟಿಸುವವರಾರು? ಅಂಥಾ ಎಂಟೆದೆ ಯಾರಿಗಿದೆ? ರಾಯನ ನಚ್ಚಿನ ಕುಮಾರನನ್ನು ಕೊಂದ ಬಡಪಾಯಿ ಸೂರ್ತನನನ್ನು ರಕ್ಷಿಸುವವರು ದೈವದ ಹೊರತು ಬೇರಾರು? ಜಯಮಲ್ಲನ ಮರಣವಾರ್ತೆಯು ರಾಜ್ಯದ ಮನೆಮನೆಯ ಮಾತಾಗಿದ್ದರೂ ಮಹಾರಾಜನ ಕಿವಿಗೆ ಸ್ವಲ್ಪ ಸಮಯದ ವರೆಗೆ ಅದು ತಲುಪಿರಲೇ ಇಲ್ಲ. ರಾಜನ ಅಮಾತ್ಯರಾದರೂ ಹೇಳಲು ಧೈರ್ಯಗೊಳ್ಳಲಿಲ್ಲ. ಜ್ಯೇಷ್ಠಪುತ್ರನು ಮೊದಲೇ ದೇಶತ್ಯಾಗ ಮಾಡಿದ್ದನು. ಮಧ್ಯಮನಾದ ಪೃಥ್ವಿರಾಜನಂತೂ ರಾಷ್ಟ್ರದ್ರೋಹಿಯೂ, ರಾಜದ್ರೋಹಿಯೂ ಆಗಿ ರಾಜಶಾಸನದಂತೆ ರಾಜ್ಯತೊರೆದು ಹೋಗಿದ್ದನು. ತಂದೆಯ ಹೃದಯರಂಜಕನಾಗಿದ್ದ ಒಬ್ಬನೇ ಒಬ್ಬ ಕನಿಷ್ಠ ಪುತ್ರನೂ ಈಗ ವೀರೋಚಿತವಲ್ಲದ ಸಾವಿಗೆ ಬಲಿ

ಯಾದನೆಂಬ ದುಸ್ಸಹವಾದ ವಾರ್ತೆಯನ್ನು ರಾಯನ ಕಿವಿಯಲ್ಲಿ ಹಾಕುವವರಾರು? ಆದರೆ, ತಮಗೆ ತಿಳಿದ ಸಂಗತಿಯನ್ನು, ಅತ್ಯಂತ ಪ್ರಾಮುಖ್ಯವಾದ ಸಂಗತಿಯನ್ನು ತಿಳಿಸದೆ ಬಿಡುವುದೂ ಸಾಧ್ಯವೆ? ಯಾರು ತಿಳಿಸಿದರೆಂಬುದು ಮುಖ್ಯವಲ್ಲ. ಅಂತೂ ಕೊನೆಗೆ ತಿಳಿಯಿತು. ರಾಯಮಲ್ಲನ ಕರ್ಣಪುಟಕ್ಕೆ ಕಾದಸೀಸದ ದ್ರವದಂತೆ ಇಳಿಯಿತು ವಾರ್ತೆ! ಆ ಶೋಕವಾರ್ತೆ!

ರಾವುಸೂರ್ತನನ ಹುಟ್ಟಡಗಿ ಹೋಯಿತೆಂದೇ ಬಗೆದರು ಮಂತ್ರಿಗಳು. ಇನ್ನು ರಾಜನನ್ನು ಹಿಡಿವವರಾರು? ತಡೆವವರಾರು? ಸಂತೈಸುವವರಾರು? ಎಂದು ಕಳವಳಿಸಿದರು ಇತರ ಸೇನಾಧಿಪತಿಗಳು. ರಾಣೀವಾಸಕ್ಕೆ ದಂಗುಬಡೆಯಿತು. ಸಾಮಂತರ ಬಾಯೊಣಗಿತು. ಪುರಜನರ ಎದೆಯಾರಿತು. ಅರಮನೆಯೊಳಗೆ, ಅಂತಃಪುರದೊಳಗೆ ಆಂದೋಲನವಾಯಿತು. ರಾಹುತರು ರಟ್ಟೆತಟ್ಟಿಕೊಂಡರು. ಕಾಲಾಳುಗಳು ಕಚ್ಚೆಬಿಗಿದು ಸಿದ್ಧರಾದರು. ಯಾವ ಕಾಲಕ್ಕೆ ಯಾವ ಆಜ್ಞೆ ಬಂದೀತೋ ಬಲ್ಲವರಾರು? ಅಂಥಾ ವಾರ್ತೆ ತಡವಾಗಿಯಾದರೂ ರಾಯಮಲ್ಲನ ಕಿವಿಯನ್ನು ಸೇರಿತು.

ಶಾಂತಚಿತ್ತದಿಂದ ಎಲ್ಲವನ್ನೂ ಕೇಳಿಕೊಂಡನು ಮಹಾರಾಜ! ಸರ್ವಶಕ್ತನಾದ ಮಹಾರಾಜ! ಸಾದ್ಯಂತವಾಗಿ ಕೇಳುತ್ತಲೇ ಅವನ ತಾಳ್ಮೆಯು ತಡಿಯೊಡೆಯಿತು. ಕೆಂಗೆಂಡಗಳಾಗಿ ಕಣ್ಣುಗಳು ಜ್ವಲಿಸಿದುವು. ಹುಬ್ಬುಗಳು ಒಂದನ್ನೊಂದು ಹುರುಡಿಸಿದವು. ಮೀಸೆಯು ಕುಡಿ ಕುಣಿಯಿತು. ಅಯ್ಯೋ! ರಾಜನ ಬಾಯಿಯಿಂದ ಎಂಥಾ ಕರ್ಣಾಭೀಕರ ಆಜ್ಞೆ-ಗರ್ಜನೆ ಹೊರಡುವದೋ ಎಂದು ಎದೆಯ ಮೇಲೆ ಕೈಯಿಟ್ಟುಕೊಂಡು ಓಲಗಸಾಲೆಯೇ ಕತ್ತೆತ್ತಿ ಕಾದಿತ್ತು. ಏಕೆಂದರೆ ಪ್ರಾಣಕ್ಕಿಂತಲೂ ಹೆಚ್ಚಿನವನಾದ ಪ್ರೇಮಪುತ್ರ ಜಯಮಲ್ಲನ ಮರಣವಾರ್ತೆಯನ್ನು ಕೇಳಿದ ರಾಜನಿಗೆ ಅಸಹನೀಯ ದುಃಖವಾಯಿತೋ, ಅಲ್ಲ--ಪ್ರಚಂಡ ಕೋಪೋದ್ರೇಕದಿಂದ ಅವನ ಕಣ್ಣುಗಳು ಕೆಂಪಡರಿದವೋ ಬಲ್ಲವರಾರು? ಥಿಕ್ಕನೆ ಸಿಂಹಾಸನದಿಂದ ಎದ್ದು ನಿಂತ ರಾಜನು, ಶೋಕಭಾರವನ್ನು ತಡೆಯಲಾರದವನಾಗಿ ಶೋಕಾಗಾರವನ್ನು ಸೇರಲೆಂದು ಎದ್ದನೋ, ಅಲ್ಲ,-ರಾವುಸೂರ್ತನನ ಎದೆಗುಂಡಿಗೆಯ ನೆತ್ತರನ್ನೇ ಮುಕ್ಕುಳಿಸಲೆಂದು ಹೊರಟನೋ ತಿಳಿದವರಾರು?

ಎದ್ದುನಿಂತವನೇ ರಾಯಮಲ್ಲನು ಗರ್ಜಿಸಿದನು:

"ಯಾವ ಕುಲಕಂಟಕನು ಹೇಡಿಯಂತೆ ವರ್ತಿಸಿ ನಮ್ಮ ಮನೆತನದ ಮರ್ಯಾದೆಯ ಕಲಶವನ್ನು ಹುಡಿಗಟ್ಟಲು ಬಗೆದನೋ ಅಂಥಾ ಜಯಮಲ್ಲ ನಿಗೆ ಮರಣವೇ ಯುಕ್ತವಾದ ಶಿಕ್ಷೆ. ಆ ಶಿಕ್ಷೆಯನ್ನು ವಿಧಿಸಿದ ಸೂರ್ತ ನನು ಮಾಡಿದುದು ಕ್ಷತ್ರಿಯೋಚಿತವಾದ ಕಾರ್ಯವೇ ಸರಿ."

ಹೀಗೆಂದವನೇ ರಾಯಮಲ್ಲನು ರಾವುಸೂರ್ತನನಿಗೆ ಆಹ್ವಾನ ಕಳುಹಿಸಿ ದನು. ಆದರೆ ಆ ಆಹ್ವಾನವನ್ನು ಆಹ್ವಾನವೆಂದು ಯಾರು ತಾನೆ ತಿಳಿಯ ಬಲ್ಲರು? ಯಾವ ಸರ್ವಶಕ್ತನಾದ ಮಹಾರಾಜನ ಬಸಿರ ಕಂದನನ್ನೇ ಸೂರ್ತನನು ಕೊಂದಿದ್ದನೋ ಅಂಥವನಿಂದ ಬಂದ ಆಹ್ವಾನವು ಪ್ರತ್ಯಕ್ಷ ಮೃತ್ಯುವಿನ ಆಹ್ವಾನವಲ್ಲದೆ ಬೇರೇನು? ಸೂರ್ತನನೂ ಹಾಗೆಂದೇ ಬಗೆ ದನು. ಆಹ್ವಾನ ತಂದವರು ಆಹ್ವಾನ ಪತ್ರದ ಜೊತೆಯಲ್ಲಿ ಕೆಲವು ಉಚಿತ ಬಹುಮಾನಗಳನ್ನೂ ತಂದಿದ್ದರು. ಈ ಬಗೆಯ ವರ್ತನೆಯು ತನ್ನನ್ನು ನಿರಾಯಾಸವಾಗಿ ಓಲಗಕ್ಕೆ ಕರೆಯಿಸಿಕೊಳ್ಳುವ ತಂತ್ರವಲ್ಲದೆ ನಿಜವೆ? ಇನ್ನು ಉಳಿಗಾಲವಿಲ್ಲ. ಓಡಿ ಬದುಕುವ ಕುಲದಲ್ಲಿ ಸೂರ್ತನನು ಹುಟ್ಟಿ ದವನಲ್ಲ. ಅವನು ತನ್ನ ತಾಯಿನಾಡಾದ ತೋಡದೇಶವನ್ನು ಬಿಟ್ಟು ಓಡಿ ಬಂದಿದ್ದನು ನಿಜ. ಆದರೆ ಅದು ಜೀವದಾಸೆಗಾಗಿ ಕಾಲಿಗೆ ಬುದ್ಧಿ ಹೇಳಿ ದ್ದಾಗಿರಲಿಲ್ಲ. ಹುಟ್ಟುನೆಲವನ್ನು ಮರಳಿ ಗೆದ್ದೇ ತೀರಬೇಕೆಂದು ಹಟಸಾಧ ನೆಗಾಗಿ ತಲೆತಪ್ಪಿಸಿ ಬಂದಿದ್ದವನು. ಅಂಥಾ ಆಶೋತ್ತರದ ಗೋಪುರ ವನ್ನೂ ಕಟ್ಟುತಿದ್ದವನವನು. ಆ ಸೂರ್ತನನೇ ಇಂದು ತಾನು ಆಶ್ರಯ ಪಡೆದ ರಾಜ್ಯದ ಮಹಾರಾಜನ ಮಗನನ್ನೇ ಕೊಂದಿಕ್ಕಿ ಮತ್ತೆ ತನ್ನ ತಲೆ ಗಾಯ್ದುಕೊಳ್ಳಲೆಂದು ಹೇಡಿಯಂತೆ ಓಡಿಹೋದಾನೆ? ಎಂದೆಂದಿಗೂ ಇಲ್ಲ.

ಹುಟ್ಟಲೊಂದು ದಿನ; ಸಾಯಲೊಂದು ದಿನ. ಮಧ್ಯೆ ಜೀವನದ ಅವಧಿ ಎಷ್ಟೇ ದೀರ್ಘವಾಗಿದ್ದರೂ ಆ ಅವಧಿಯನ್ನೂ ಕೇವಲ 'ಒಂದೇ ದಿನ' ಎಂದಿದ್ದಾರೆ ತಾತ್ವಿಕರು. ಆದುದರಿಂದಲೇ ಈ ಭೂಮಿಯ ಮೇಲೆ ಜೀವಿಗಳದ್ದೆಲ್ಲ 'ಮೂರು ದಿನದ ಬಾಳುವೆ' ಎಂಬ ಗಾದೆ ರೂಢಿಯಾಗಿ ರುತ್ತದೆ. ನೀರ ಬುದ್ಬುದದಂತೆ ನಶ್ವರವಾಗಿರುವ ಈ ಕಾಯದ ಕೊರಡನ್ನು—ಕುಲಾಭಿಮಾನವನ್ನು ಕಳಕೊಂಡ ಹೇಡಿಯ ಕಾಯವು ಕೊರಡಲ್ಲದೆ ಬೇರೇನು?—ಬರಡು ಕಾಷ್ಠವನ್ನು ಹೊತ್ತುಕೊಂಡು ಯಾವ ನೆಲಕ್ಕೆ ಹೋದರೇನು? ಹೆಡತಲೆಯ ಮೃತ್ಯುವಿಗೆ ಈ ಜಗದ ಯಾವ

ಮಾಲೆಯಾದರೂ ಕೈಗೆಟಕದ ದೂರವೇ? ಥೂ, ಓಡಿ ಬದುಕುವ ಪ್ರಾಣ ಇಂದೇ ಹಾರಬಾರದೇಕೆ? ಎಣಿಸಿದನು ಸೂರ್ತನನು. ಅವನ ಧಮನಿಗಳಲ್ಲಿ ವೀರತೆಯ ವಿದ್ಯುತ್ತು ಸಂಚಾರವಾಯಿತು. ಬೀರಗಚ್ಚೆಯನ್ನು ಬಿಗಿದುಟ್ಟು, ಕಿಗ್ಗಟ್ಟಿನ ಕಠಾರಿಯನ್ನು ಜೋಲಿಸಿ, ಕತ್ತುರಿಯ ಬೊಟ್ಟಿಟ್ಟು ಮೀಸೆಯನ್ನು ತಿದ್ದಿ, ತಲೆಗೆ ರುಮಾಲನ್ನು ಸುತ್ತಿ, ಸಮಾರಂಭಕ್ಕೆ ಹೋಗುವ ಮದುವಣಿಗನಂತೆ ಸೂರ್ತನನು ರಾಯಮಲ್ಲನ ಓಲಗಕ್ಕೆ ನಡೆದನು.

ಆದರೆ, ಹಾವೆಂದು ಭ್ರಮಿಸಿದುದು ಹೂಮಾಲೆಯಾಯಿತು; ಕೆಂಡವೆಂದು ತಿಳಿದುದು ನವಮಾಣಿಕ್ಯವಾಯಿತು. ನಿಡುನಂಜಿನ ಗಡಿಗೆಯೇ ಸುಧಾಕಲಶವಾಯಿತು. ರಾಯಮಲ್ಲನು ಸೂರ್ತನನನ್ನು ಬಾಗಿಲಲ್ಲೆ ಎದುರುಗೊಂಡು ಅಪ್ಪಿ ಆಲಿಂಗಿಸಿದನು. ಓಲಗಕ್ಕೆ ಒಯ್ದು ಒಪ್ಪುವ ಆಸನವನ್ನಿತ್ತು ಸತ್ಕರಿಸಿದನು. ಉಡುಗೊರೆಯಿಂದ, ಉಪಚಾರಗಳಿಂದ ಉಪರಮಿಸಿದನು. ಮಹಾರಾಜ ರಾಯಮಲ್ಲನು ಸಾಮಾನ್ಯನೊಬ್ಬ ರಾಜನಾಗಿದ್ದ ಸೂರ್ತನನನ್ನು, ಅದರಲ್ಲೂ ಈಗ ದೇಶಭ್ರಷ್ಟನಾಗಿರುವ ಬಡಪಾಯಿಯನ್ನು, ಆದರೆ ತನ್ನ ಹೊಟ್ಟೆಯ ಮಗನನ್ನೇ ಬಲಿಗೊಂಡ ಅಪರಾಧಿಯನ್ನು ಸತ್ಕರಿಸಿದ ಉದಾರತೆ ಅಸದೃಶವಾದುದು; ಚಿರಸ್ಮರಣೀಯವಾದುದು. ವೇದನೂರು ರಾಜ್ಯವನ್ನೇ ಸೂರ್ತನನಿಗೆ ಬಹುಮಾನವಾಗಿ ಕೊಟ್ಟು, ತನ್ನ ಗುಣಗ್ರಾಹಿತನವನ್ನು ಮೆರೆಯಿಸಿದ ಹೃತ್ಸಂಪತ್ತು ಅದ್ವಿತೀಯವಾದುದು. ಆದುದರಿಂದಲೇ ರಾಯಮಲ್ಲನ ಚರಿತ್ರೆಯು ದೇವಭಾವದಿಂದ ನಿರ್ಭರವಾಗಿರುವುದು. ಪ್ರಪಂಚದ ಇತಿಹಾಸದಲ್ಲಿ ಇಂಥಾ ಇನ್ನೊಂದು ಉದಾಹರಣೆ ಸಿಗುವುದು ಸುಲಭಸಾಧ್ಯವಲ್ಲ. ಅಂಥಾ ರಾಯಮಲ್ಲನ ಗುಣವಿಶೇಷಗಳಿಂದ ಕರುವಿಟ್ಟ ಮೂರ್ತಿಯಾಗಿ ಸಂಗ್ರಾಮಸಿಂಹನು ಮೇವಾಡದ ಉತ್ತರಾಧಿಕಾರಿಯಾದನು.

ಸಂಗ್ರಾಮಸಿಂಹನು ಸಿಂಹಾಸನವೇರಿದುದು ೧೫೦೯ರಲ್ಲಿ. ಆ ಮೊದಲು ರಾಜ್ಯತ್ಯಾಗಿಯಾಗಿದ್ದ ಅವನು ಪಟ್ಟ ಕಷ್ಟ ಅಷ್ಟಿಷ್ಟಲ್ಲ. ಉಣ್ಣುವ ಅನ್ನಕ್ಕೆ, ಉಡುವ ಬಟ್ಟೆಗೆ ಕೊರತೆಯಾಗಿ, ಕಾಡುಗುಡ್ಡಗಳನ್ನು ಅಲೆದಿದ್ದನು. ಹಸಿವು ಬಾಯಾರಿಕೆಗಳಿಂದ ಬೆಂಡಾಗಿದ್ದನು. ಕುರುಬರ ಆಳಾಗಿ ನಿಂತು ಕುರಿಮೇಯಿಸಿ ಹೊಟ್ಟೆಹೊರೆದಿದ್ದನು. ಹೀಗೆ ಸಾಮಾನ್ಯ ಜನದ ಕಣ್ಣಿಗೆ ಸಂಗ್ರಾಮಸಿಂಹನು ನಿಷ್ಪ್ರಯೋಜಕ ವ್ಯಕ್ತಿಯಾಗಿದ್ದವನೇ

ಮತ್ತೆ ಮೇವಾಡದ ಅಧಿಪತಿಯಾಗಿ ರಾಷ್ಟ್ರಕ್ಕೆ ಅಚ್ಚಳಿಯದ ಕೀರ್ತಿಯನ್ನು ಸೆಳೆತಂದನು. ತನ್ನ ಹೆಸರಿಗೆ ತನ್ನ ಕೃತಿಗಳು ಅನ್ವರ್ಥವಾಗುವಂತೆ ಆಚರಿಸಿದವರು ಲೋಕಚರಿತ್ರೆಯಲ್ಲಿ ಎಲ್ಲೋ ಸ್ವಲ್ಪ ಮಂದಿ ಮಾತ್ರ ಸಿಗಬಹುದು. ಅವರಲ್ಲಿ ಸಂಗ್ರಾಮಸಿಂಹನೂ ಒಬ್ಬನು.

ಹೌದು; ಸಂಗ್ರಾಮದಲ್ಲಿ ಸೋಲರಿಯದ ಸಿಂಹನೇ ಅವನು. ಈ ಸಂಗತಿಯನ್ನು ಮೊದ ಮೊದಲು ತಿಳಿಯದಿದ್ದ ಜ್ಞಾತಿಗಳು, ಅವನು ಪಟ್ಟವೇರಿದ ಆರಂಭದಲ್ಲಿ ಸುತ್ತಣಿಂದಲೂ ಮೇವಾಡದ ಮೇಲೆ ದಂಡೆತ್ತಿಕೊಂಡು ಬಂದರು. ಆದರೆ ಈ ಹುಟ್ಟುವೀರನ ಎದೆಗುಂಡಿಗೆ ಅದಿರಲಿಲ್ಲ. ಒಂದು ಯುದ್ಧದಲ್ಲಿ ಅವನ ಒಂದು ಕಣ್ಣು ಹೋಯಿತು. ಇನ್ನೊಂದರಲ್ಲಿ ಒಂದು ಕೈ, ಮತ್ತೊಂದರಲ್ಲಿ ಒಂದು ಕಾಲು ಊನವಾದುವು. ಆದರೂ ಅವನ ಕೆಚ್ಚಿನ ಮಂಜು ಕರಗಲಿಲ್ಲ. ಢಿಲ್ಲಿಯ ಇಬ್ರಾಹಿಮ್ ಲೋಡಿಯೊಬ್ಬನೊಡನೆಯೇ ಸಂಗ್ರಾಮಸಿಂಹನು ಹದಿನೆಂಟು ಯುದ್ಧಗಳನ್ನು ಮಾಡಿದ್ದನು. ಆ ಹದಿನೆಂಟೂ ಯುದ್ಧಗಳಲ್ಲಿ ಸೋಲುವ ಗೌರವದ ಮಾಲೆ ಲೋಡಿಯ ಕೊರಳಿಗೇ ಬಿದ್ದಿತಲ್ಲದೆ ಸಂಗ್ರಾಮಸಿಂಹನಿಗಲ್ಲ. ಕೊನೆಯ ಯುದ್ಧದಲ್ಲಂತೂ ಇಬ್ರಾಹಿಮ್ ಲೋಡಿಯು ಸೋತುದು ಮಾತ್ರವಲ್ಲದೆ, ಅವನ ಸೈನ್ಯವೆಲ್ಲ ಧೂಳೀಪಟವಾಗಿ ಹೋಯಿತು. ಅಲ್ಲಿಗೆ ಮೇವಾಡದ ವಿರೋಧಿಗಳೆಲ್ಲ ತಣ್ಣಗಾದರು. ಸಂಗ್ರಾಮಸಿಂಹನ ಪ್ರತಿಷ್ಠೆಯು ಹೆಚ್ಚಿತು. ರಾಜಪುತ್ರರೆಲ್ಲ ಅವನನ್ನು ಭಾರತಸಮ್ರಾಜನೆಂದೇ ಗೌರವಿಸತೊಡಗಿದರು. ಸಮಸ್ತ ಭಾರತಭೂಮಿಗೂ ಅವನು ಚಕ್ರವರ್ತಿಯಾಗುವ ಲಕ್ಷಣಗಳು ಕಾಣಬಂದುವು.

ಇದೇ ಸಂದರ್ಭದಲ್ಲಿ ತೈಮೂರ್‌ಲಂಗನ ವಂಶದವನಾದ ಬಾಬರನು ತನ್ನ ಅದೃಷ್ಟಪರೀಕ್ಷೆಗಾಗಿಯೋ ಎಂಬಂತೆ ಭಾರತಕ್ಕೆ ದಂಡೆತ್ತಿಕೊಂಡು ಬಂದನು. ಸಂಗ್ರಾಮಸಿಂಹನೊಬ್ಬನನ್ನು ಬಿಟ್ಟರೆ ಬಾಬರನನ್ನು ಎದುರಿಸಬಲ್ಲ ಸಮರ್ಥರು ಆ ಕಾಲಕ್ಕೆ ಭಾರತದಲ್ಲಿ ಬೇರಾರು?

ಬಾಬರನೇನೂ ಸಾಮಾನ್ಯನಲ್ಲ. ಧೀರನೂ ರಣಪಂಡಿತನೂ ಆಗಿದ್ದನು. ಕಷ್ಟಕಾರ್ಪಣ್ಯಗಳ ಮಧ್ಯೆ ಬಳೆದವನಾಗಿದ್ದನು. ತನ್ನ ಹದಿಮೂರು ವರ್ಷದ ಹರೆಯದಲ್ಲಿಯೇ ತಂದೆಯ ಸಿಂಹಾಸನಕ್ಕೊಡೆಯನಾಗಿ, ಹದಿನಾರು ತುಂಬುವುದರೊಳಗೆನೇ ಹಲವಾರು ಯುದ್ಧಗಳನ್ನು ಗೆದ್ದು,

ಕೊನೆಗೆ ದುರ್ದೈವದಿಂದ ದೇಶಭ್ರಷ್ಟನಾಗಿ ಹುಟ್ಟುನಾಡನ್ನು ಬಿಟ್ಟು, ಭವಿಷ್ಯದ ಹಾಸಿನ ಮೇಲೆ ವಿಧಿಯು ಎಸೆದಾಡುವ ಪಗಡೆಕಾಯಿಯಂತೆ ಉರುಳುರುಳುತ್ತಾ ಭಾರತದತ್ತ ಬಂದನು. ಕ್ರಿ. ಶ. ೧೫೨೬ರಲ್ಲಿ ಢಿಲ್ಲಿಯ ಸಾಮ್ರಾಜ್ಯದ ಮೇಲೆ ಅವನು ದಂಡೆತ್ತಿಬಂದನು. ಆ ಕಾಲದಲ್ಲಿ ಢಿಲ್ಲೀಶ್ವರನಾಗಿದ್ದ ಇಬ್ರಾಹಿಮ್ ಲೋಡಿಯು ಈ ಮೊದಲೇ ಸಂಗ್ರಾಮಸಿಂಹನೊಡನೆ ಕೈಕೊಂಡಿದ್ದ ಯುದ್ಧಗಳಲ್ಲಿ ಸೋತುಸುಣ್ಣವಾಗಿ ಕ್ಷೀಣದಶೆಯಲ್ಲಿದ್ದನು. ಆದುದರಿಂದ ಅದೃಷ್ಟವನ್ನೇ ಅಡಿಮೇಲು ಮಾಡುವುದಕ್ಕಾಗಿ ಆವೇಶಗೊಂಡು ಹೊರಟ ಬಾಬರನ ರಣೋತ್ಸಾಹದ ಎದುರಲ್ಲಿ ಅವನು ನಿಲ್ಲುವ ಬಗೆಯೆಂತು? ಆದರೂ ಲೋಡಿಯು ಕಾದದೆ ಬಿಡಲಿಲ್ಲ. ರಣದ ಹಸಿವು ತಂಗುವ ತನಕ, ಪ್ರಾಣದ ಉಸಿರು ಇಂಗುವ ತನಕ ಕಡಿಕಡಿದು ಕಾದಾಡಿ ಕದನಕಣದಲ್ಲೆ ತನ್ನ ಕಾಯವಿಟ್ಟನು. ಕಟ್ಟಾಳುಗಳಿಂದ ಕೂಡಿದ ಅವನ ಸೈನ್ಯಗಳ ಬಹುಭಾಗ ಕಾಲನೂರಿನ ಕರಿಯೋಲೆಯನ್ನು ಕೈಕೊಂಡಿತು.

ಬಾಬರನು ಗೆದ್ದನು. ಢಿಲ್ಲಿಯ ಸಿಂಹಾಸನ ಅವನ ವಶವಾಯಿತು.

“ಜಗದೀಶ್ವರನಾದ ಅಲ್ಲಾ, ಈ ದಿಗ್ವಿಜಯವು ನನ್ನದಲ್ಲ. ಇದನ್ನು ನಿನಗರ್ಪಿಸಿದ್ದೇನೆ. ನೀನು ಎತ್ತಿದರೆ ನಾನು ಏಳುವೆ; ಒತ್ತಿದರೆ ಬೀಳುವೆ! ನಿನ್ನ ಕೈಯ ಮಿಣಿಯಂತೆ ಮಣಿವೆ; ಕುಣಿಸಿದರೆ ಕುಣಿವೆ!” ಎಂಬುದಾಗಿ ತನ್ನ ವಿಜಯವನ್ನೂ, ದಕ್ಕಿದ ರಾಜ್ಯವನ್ನೂ ಅವನು ದೇವನಿಗರ್ಪಿಸಿದನು.

ಎಲ್ಲ ಸರಿ; ಆದರೆ ಸಾಮ್ರಾಜ್ಯವಿಸ್ತರಣದ ಲಾಲಸೆಯು ಬಾಬರನನ್ನು ಬಿಡಲಿಲ್ಲ. ಢಿಲ್ಲಿಯನ್ನು ಗೆದ್ದ ಆರಂಭದಲ್ಲಿ ಯಾವ ನಿಸ್ಪೃಹವಾದ ಬುದ್ಧಿಯಿಂದ ಅವನು ಸರ್ವವನ್ನೂ ಪರಮಾತ್ಮನಿಗೆ ಪದಾರ್ಪಣಮಾಡಿದನೋ ಅದೇ ನಿಸ್ಪೃಹತೆ, ನಿಷ್ಕಾಮ, ನಿರಾಸಕ್ತಿ ಅವನಲ್ಲಿ ಕೊನೆಯ ವರೆಗೂ ನಿಲ್ಲಲಿಲ್ಲ. ಕಾಮನೆ ಕೊನರಿತು; ಆಸಕ್ತಿ ಅತಿಗೊಂಡಿತು. ಅವನ ಬಗೆಯ ಬೆಳ್ಳಿರಲೆಯು ಲಾಲಸೆಯ ಬಲೆಯಲ್ಲಿ ಬಿದ್ದು ಬಳಲಿತು. ಬಾಬರನು ಒಂದು ವರ್ಷದೊಳಗೇ ಸಂಗ್ರಾಮಸಿಂಹನ ಮೇಲೆ ಸಂಗ್ರಾಮ ಹೂಡಿದನು.

ಎಷ್ಟೆಂದರೂ ಸಂಗ್ರಾಮಸಿಂಹನೆಂದರೆ 'ಸಂಗ್ರಾಮಸಿಂಹ'ನಲ್ಲವೇ? ಅವನು ಲೋಡಿಯನ್ನು ಗೆದ್ದಿದ್ದನಹುದು. ಆದರೆ ಅವನ ಬುದ್ಧಿಯು ವಿಜಯಮತ್ತವಾಗಿ ವಿಲಾಸದಲ್ಲಿ ವಿರಮಿಸಿರಲಿಲ್ಲ. ಅರಿಗಳಿಲ್ಲವೆಂಬ ಅಹಂ ಭಾವ ಅಂಕುರಿಸಿರಲಿಲ್ಲ. ಥಿಲ್ಲಿಯ ಗದ್ದುಗೆಯ ಕುರಿತಾದ ಪರಿವರ್ತನೆ ಗಳನ್ನು ಅವನು ಕಣ್ಣಿಟ್ಟು ಕಾದಿದ್ದನು. ಯವನರ ರಾಜ್ಯದಾಹದ ಪರಿಚಯು ಅವನಿಗೆ ಅಪರಿಚಿತವೇನಲ್ಲ. ಕಾರಣ-ಇಂದಲ್ಲ ನಾಳೆ ಬಾಬರ ನೊಂದಿಗೆ ಹೋರಾಟ ಕಟ್ಟಿಟ್ಟದ್ದೇ ಎಂದು ನಿರೀಕ್ಷಿಸಿಕೊಂಡಿದ್ದನು. ಅಂತೂ ಅವನ ನಿರೀಕ್ಷೆಯಂತೆಯೇ ಆಯಿತಷ್ಟೆ! ಕಣ್ವ ಎಂಬ ಸ್ಥಳದಲ್ಲಿ ಸಂಗ್ರಾಮ ಸಿಂಹನು ಬಾಬರನ ದಂಡಯಾತ್ರೆಯ ದಂಡನ್ನಿದಿರುಗೊಂಡನು. ಕಾಳಗ ಕೈಹತ್ತಿತು.

ಬಾಬರನೇನೋ ಧುರವೀರನೆಂಬುದು ನಿಜ. ಅವನ ಕಟ್ಟಾಳುಗಳೂ ಕಡಿಮೆಯವರಲ್ಲವೆಂಬುದು ಸತ್ಯ. ಆದರೆ ಅಷ್ಟು ಬೇಗನೆ ಸಂಗ್ರಾಮಸಿಂಹ ನಿಂದ ತಮಗೆ ತಡೆಯಾದೀತೆಂದು ಅವರು ಎಣಿಸಿರಲಿಲ್ಲ. ಆಯಕಟ್ಟಿನ ತಾಣವನ್ನು ಅವರು ಆರಿಸಿರಲಿಲ್ಲ. ಆತ್ಮರಕ್ಷಣೆಯ ಉಪಾಯಗಳನ್ನು ಮುಂದಾಗಿ ಕೈಕೊಂಡು ಡೇರೆ ಬಲಿದಿರಲಿಲ್ಲ. ವ್ಯೂಹ ಹೂಡಿರಲಿಲ್ಲ. ಸುರಕ್ಷಿತ ಸ್ಥಳದಲ್ಲಿ ತಳವೂರಿರಲಿಲ್ಲ. ಅಷ್ಟರೊಳಗೇ ಸಂಗ್ರಾಮಸಿಂಹನು ತನ್ನ ಸಮರತೃಷಿತವಾದ ಸೈನ್ಯಗಳ ಸಹಿತ ಸಡ್ಡುಹೊಡೆದು ನಿಂತನು. ಹೋರಾಟಕ್ಕೆ ಹುರುಡೇರಿತು. ಬಾಬರನ ಸೇನೆ ಬಾಯ್ಬಿಟ್ಟಿತು. ಬದುಕಿನ ಆಸೆ ಬಯಲಾಯಿತು. ಅಸಂಖ್ಯ ವೀರರು ಆಹುತಿಯಾದರು. ಅಳಿವುದು ಅಚ್ಚರಿಯಲ್ಲ, ಉಳಿವುದಕ್ಕೆ ಉಪಾಯವೇನು?

ಸಾಯಬಾರದು; ಸಾವಿನ ಪಂಜರದಲ್ಲೆ ಸಿಕ್ಕಿದ್ದರೂ ಸಾಯಬಾರದು. ಆದೀಗ ಚತುರವೀರನ ಗುರಿ. ಬಾಬರನು ತನ್ನ ಪಾಳೆಯಕ್ಕೆ ಪ್ರಾಣರಕ್ಷ ಣೆಯ ತಂತ್ರವನ್ನು ಕೈಕೊಳ್ಳಲು ಆದೇಶಿಸಿದನು. ಅವರು ಶಿಬಿರವನ್ನು ಹೊಕ್ಕುತಲೆಮರೆಸಿಕೊಂಡರು. ಶಿಬಿರದ ಸುತ್ತಲೂ ಶತಘ್ನಿ(ಪಿರಂಗಿ)ಗಳನ್ನು ಸರಪಯಿಗಳಿಂದ ಬಿಗಿದು ಸಾಲಾಗಿ ನೆಟ್ಟರು. ಆದರಾಚೆ ಕಂದಕಗಳನ್ನು ಕಡಿದರು. ಆದರೂ ಕಳವಳವೇನೂ ಕಡಿಮೆಯಾಗಲಿಲ್ಲ. ಹದಿನಾಲ್ಕು ಹಗಲಿರುಳುಗಳು ಹಾದುಹೋದುವು. ಮೊಗಲರು ಶಿಬಿರವನ್ನು ಸಂಗ್ರಾ ಮನ ಸೈನಿಕರು ಸುತ್ತುಗಟ್ಟಿದ್ದರು. ಇನ್ನು ಮೋಹರದ ಆಸೆಯೆಲ್ಲಿ?

ಮಾನಕ್ಕೆ ಮಣ್ಣಿಡಲಿ, ಪ್ರಾಣ ಕೂಡಾ ಉಳಿಯುವ ದಾರಿ ಕಾಣದಾಯಿತು!

ಬಾಬರನಿಗೆ ತನ್ನ ಶೌರ್ಯದ ಕುರಿತಾಗಿಯಾಗಲೀ ಸಮರನೈಪುಣ್ಯದ ಕುರಿತಾಗಿಯಾಗಲೀ ಎಂದೂ, ಹಿಂದೆಂದೂ ನಿರಾಶೆಯಾದುದಿಲ್ಲ. ಇಂದು ಮಾತ್ರ ದೈವವೊಂದೇ ತಮ್ಮನ್ನು ರಕ್ಷಿಸಬೇಕಲ್ಲದೆ ಅನ್ಯರಿಂದ ಸಾಧ್ಯವಿಲ್ಲವೆಂದು ಅವನೂ ತಿಳಿಯುವಂತಾಯಿತು. ಆದುದರಿಂದ ಅವನು ವಿಲಾಸವಸ್ತುಗಳನ್ನೆಲ್ಲ ತ್ಯಜಿಸಿದನು. ಮದ್ಯದ ಕೊಡಗಳನ್ನೆಲ್ಲ ಒಡೆದೊಡೆದನು. ಮುಂದೆ ತನ್ನ ಜೀವನಾಂತ್ಯದ ವರೆಗೂ ಮದ್ಯವನ್ನು ಮುಟ್ಟಲಾರೆನೆಂದು ಪ್ರತಿಜ್ಞೆಮಾಡಿದನು. ಮೆತ್ತನೆಯ ಹಾಸಿಗೆಗಳನ್ನೆಲ್ಲ ಹರಿದೊಗೆದನು. ಚಿನ್ನ ಬೆಳ್ಳಿಯ ವಸ್ತು ಒಡವೆ, ಪಾತ್ರೆಗಳನ್ನೆಲ್ಲ ಹುಡಿಗುಟ್ಟಿ ಹಂಚಿಕೊಟ್ಟನು. ಮಣ್ಣಿನ ಪಾಲಾಗಲಿರುವ ಈ ಮಣ್ಣಿನ ದೇಹಕ್ಕೆ ಮಣ್ಣಿನ ಪಾತ್ರೆಗಳೇ ಧಾರಾಳ ಸಾಕೆಂದು ಸಾರಿದನು. ಹಗಲೂ ಇರುಳೂ ಬಲುಹೊತ್ತು ದೇವನಿಗೆ ನಮಾಜಮಾಡಿದನು. ಇದೂ ಒಂದು ವಿಧದ ವೈರಾಗ್ಯವೇ ಸರಿ. ವೀರವೈರಾಗ್ಯ; ಉದ್ದೇಶಯುಕ್ತ ವೈರಾಗ್ಯ. ಆದರೂ ಅದು ಅವನ ಸೈನಿಕರಲ್ಲಿ ಅಮೋಘ ಪರಿಣಾಮವನ್ನುಂಟುಮಾಡಿತು. ಅವರಲ್ಲಿ ಅದೊಂದು ತರದ ಧರ್ಮಬುದ್ಧಿಯು ಜಾಗೃತವಾಯಿತು. ದೈವನಿಷ್ಠೆಯು ಒಡಮೂಡಿತು. ಎಲ್ಲ ನಿಜ; ಆದರೆ ಶತ್ರುಭಯ ಮಾತ್ರ ಪರಿಹಾರವಾಗಲಿಲ್ಲ. ಪ್ರಾಣಭೀತಿಯೊಂದೇ ತೊಲಗಿಹೋಗಲಿಲ್ಲ.

ಭೀತಿಜ್ವರಕ್ಕೆ ಮದ್ದೇನು? ಧರ್ಮದ ಹುಚ್ಚಿನ ಆವೇಶರಸವನ್ನು ಕುಡಿಸುವುದೊಂದೇ ಮದ್ದು. ಕೊನೆಗೆ ಬಾಬರನಾದರೂ ತನ್ನ ಸೈನಿಕರಿಗೆ ಕುಡಿಸಿದ ಮದ್ದು ಅದೇ.

"ಇಸ್ಲಾಂ ವೀರರೆ, ನಿಮ್ಮ ಹುಟ್ಟಿನ ಉದ್ದೇಶವೇನು ಬಲ್ಲಿರಾ? ಇಸ್ಲಾಂ ರಾಜ್ಯವನ್ನು ಸ್ಥಾಪಿಸಿ ಅಲ್ಲಾನ ಕೃಪೆಗೆ ಪಾತ್ರವಾಗುವುದಲ್ಲವೆ? ಅದಕ್ಕೆಂದೇ ದೇವನು ನಮ್ಮನ್ನು ಈ ಕುತ್ತದಲ್ಲಿ ಕೆಡವಿ ಪರೀಕ್ಷಿಸುತ್ತಿರುವನು. ಅವನ ಮೇಲಿನ ನಮ್ಮ ನಿಷ್ಠೆಯನ್ನು ಅಲುಗಾಡಿಸಿ ನೋಡುತ್ತಿರುವನು. ಸಂಕಷ್ಟಗಳ ಒರೆಗಲ್ಲಿಗೆ ನಮ್ಮ ಧೃತಿ ವಿಶ್ವಾಸಗಳ ಹೊನ್ನನ್ನು ತಿಕ್ಕಿ ಬಣ್ಣ ನೋಡುತ್ತಿರುವನು. ನನಗೆ ಗೊತ್ತು—ನನ್ನ ನಚ್ಚಿನ ಕಟ್ಟಾಳುಗಳಾದ ನೀವು ಹಿತ್ತಾಳೆಗಳೆನಿಸಲಾರಿರಿ, ಎಂದು! ಮತ್ತೇಕೆ ಈ ಭಯ? ಎದ್ದೇಳಿರಿ. ಶುದ್ಧ

ಸ್ವರ್ಣಗಳಾಗಿ ಬಣ್ಣದೋರಿರಿ. ಅದೇ ನಿಮ್ಮ ಜನ್ಮದ ಉದ್ದೇಶ; ಅಲ್ಲಾನ ಆಜ್ಞೆ! ಯುದ್ಧದಲ್ಲಿ ಸತ್ತರೆ ದೇವನ ಸಾನ್ನಿಧ್ಯ, ಉಳಿದರೆ ಇಸ್ಲಾಂ ರಾಜ್ಯ. ನಮಗೆರಡೂ ಒಂದೇ. ಮಾನವನ್ನು ಹೋಗಲಾಡಿಸಿ ಬದುಕುವುದಕ್ಕಿಂತಲೂ ಸಾಯುವುದು ಸುಖ. ಪೈಗಂಬರರನ್ನು ನೆನೆದುಕೊಳ್ಳಿ. ಆ ಪ್ರವಾದಿಯು ಪಟ್ಟ ಪಾಡನ್ನು ಜ್ಞಾಪಿಸಿಕೊಳ್ಳಿ. ಏತಕ್ಕಾಗಿ? ಅಷ್ಟೆಲ್ಲ ಏತಕ್ಕಾಗಿ ಎಂಬುದನ್ನು ನೀವೂ ತಿಳಿದಿರುವಿರಿ. ಧರ್ಮಕ್ಕಾಗಿ, ಧರ್ಮರಾಜ್ಯಕ್ಕಾಗಿ, ಇಸ್ಲಾಂ ರಾಜ್ಯ ಸಂಸ್ಥಾಪನೆಗಾಗಿ!

"ಹಸಿದು ಹಾರುವ ವ್ಯಾಘ್ರಗಳು ನೀವು! ಹಸುಗಳಾದ ಈ ವಿಧರ್ಮಿಗಳಿಗೆ ಹೆದರುವಿರೆ? ಇಲ್ಲ, ಎಂದೆಂದಿಗೂ ಇಲ್ಲ. ಮತ್ತೇಕೆ ಈ ಸೋಲು? ಅಲ್ಲ, ಇದು ಸೋಲಲ್ಲ! ನಿಮ್ಮ ಶೌರ್ಯದ ಲೋಪದಿಂದಾಗಿ ಬಂದ ಸೋಲಲ್ಲವಿದು. ಅಲ್ಲಾನು ಪರೀಕ್ಷಾರ್ಥವಾಗಿ ಕೊಟ್ಟ ಸೋಲಿನ ಸೋಗು ಮಾತ್ರವಿದು! ವಿರೋಧಿ ಬಲಗಳ ಮೇಲೆ ಬಡಿಯುವ ಬರಸಿಡಿಲು ನೀವು! ಬಡಿಯಿರಿ. ಬಡಿಯುವುದಕ್ಕಿಂತ ಮೊದಲು, ಕಾಣುವವರ ಕಣ್ಣು ಕೋರೈಸುವಂತೆ, ಮಿಂಚನ್ನು ಎರಯೆರಚಿ ಬಡಿಯಿರಿ. ಹೇಗೆಂದು ಬಲ್ಲಿರಾ? ಹಿಡಿಯಿರಿ ಕುರಾನ್; ಹಾಕಿರಿ ಪ್ರತಿಜ್ಞೆ; 'ಭಗವಾನ್, ಕೆನ್ನೀರ ಕೆನೆಯ ಕಣವಿರುವ ವರೆಗೆ ಕಾಳೆಗದಿಂದ ಕಾಲ್ದೆಗೆಯೆವು. ನಿನ್ನ ಇಚ್ಛೆಯೆ ನಡೆಯುಲಿ. ನಿನ್ನ ಆಜ್ಞೆಯೆ ಮೆರೆಯುಲಿ. ನಿನ್ನ ರಾಜ್ಯವೆ ತೆರೆಯುಲಿ. ನಿನಗಾಗಿ ಕಡಿಯುವೆವು. ನಿನಗಾಗಿ ಮಡಿಯುವೆವು' ಎಂದು ಪ್ರತಿಜ್ಞೆ ಹಾಕಿಕೊಳ್ಳೋಣ. ಆ ಮೇಲೆ ಆ ಅಲ್ಲಾನೇ ನಮ್ಮನ್ನು ನಡೆಯಿಸಿಕೊಳ್ಳುವನು............"

ಬಾಬರನ ಭಾಷಣವಿದು. ಭೀತಿಗೊಂಡ ಬಲದವರ ಕಿವಿಗಳಿಗೆ ಬಸಿದ ಆವೇಶರಸ. ಧರ್ಮದ ಹೆಸರಿನಿಂದ ಮರುಳೆಬ್ಬಿಸುವ ಮದ್ದು. ಇಸ್ಲಾಮಿನ ರಕ್ಷಣೆಗೆಂದು ಇರಿದಾಡಿಸುವ ಗತ್ತು. ನಿಜವಾದ ಮದಿರೆಯ ಗಡಿಗೆಗಳನ್ನು ಒಡೆದು ಚೆಲ್ಲಿದ್ದರೂ, ಈಗ ಈ ಧರ್ಮದ ಮದಿರೆಯನ್ನು ಕುಡಿದು ಮೊಗಲರು ಮತ್ತೇರಿದರು. ಮರಳಿ ಮದನೇರಿದರು. ಕೇಳು ಕೇಳುತಿದ್ದಂತೆ ಕಲಿತನವುಕ್ಕಿತು. ಭೀತಿ ಬಿಟ್ಟೋಡಿತು. ಖಾತಿ ಕಟ್ಟೊಡೆಯಿತು. ಕೈಯಲ್ಲಿ ಕುರಾನ್ ಹಿಡಿದು ಅವರೆಲ್ಲರೂ ಪ್ರತಿಜ್ಞೆ ಹಾಕಿಕೊಂಡರು.

ಹೆಚ್ಚುಕಡಿಮೆ ಮೂರು ವಾರಗಳ ತನಕ ಬಾಬರನ ಸೈನಿಕರು ಶಿಬಿರದಲ್ಲೇ ತಲೆಮರೆಸಿಕೊಂಡಿದ್ದರಷ್ಟೆ! ಬಾಬರನು ತನ್ನ ಸೈನಿಕರನ್ನು ಹುರಿದುಂಬಿಸುತ್ತಲೇ ಇದ್ದನಾದರೂ ಇತ್ತ ಕಡೆಯಿಂದ ಸಂಧಿಪ್ರಸ್ತಾಪವೊಂದನ್ನು ಮುಂದೊಡ್ಡಿದ್ದನು. ಅದೂ ಒಂದು ಯುದ್ಧತಂತ್ರವೇ ಸರಿ. ಸಂಗ್ರಾಮಸಿಂಹನಿಗೆ ಈ ಅವಧಿಯಲ್ಲಿ ಬಾಬರನನ್ನು ನಿರಾಯಾಸವಾಗಿ ಗೆಲ್ಲಬಹುದಿತ್ತು. ಅವನ ಶಿಬಿರವನ್ನು ನಿಪಾತಗೊಳಿಸಬಹುದಿತ್ತು. ಆದರೆ ಅವನು ಅಂಥಾ ಧರ್ಮವಿರುದ್ಧವಾದ ಗೈಮೆಗೆ ಮನಸ್ಸುಮಾಡಲಿಲ್ಲ. ಏನದು ಧರ್ಮವಿರುದ್ಧ? ವೈರಿಯು ಆಪತ್ತಿನಲ್ಲಿ ಸಿಕ್ಕಿದಾಗಲೇ ಅವನನ್ನು ಹಣ್ಣುಮಾಡಬೇಕೆಂಬುದು ಯುದ್ಧದ ಒಂದು ಧರ್ಮವೇ ಆಗಿರುವಾಗ, ಸಂಗ್ರಾಮಸಿಂಹನೂ ಹಾಗೆ ಮಾಡಿದ್ದರೆ ಏನು ಧರ್ಮವಿರುದ್ಧವಾಗುತಿತ್ತು? ಮಧ್ಯದಲ್ಲೇ ಬಾಬರನು ಸಂಧಿಪ್ರಸ್ತಾವವನ್ನು ತೆಗೆದನಲ್ಲವೆ? ಹಾಗೆ ಸಂಧಿಯ ಯತ್ನಗಳು ನಡೆಯುತ್ತಿರುವಾಗ ಎದುರುಪಕ್ಷದ ಮೇಲೆ ಬಿದ್ದು ಧ್ವಂಸಗೊಳಿಸುವುದು ಕ್ಷತ್ರಿಯರಿಗೆ ಧರ್ಮವಿರುದ್ಧವಾದುದು. ಸಂಗ್ರಾಮಸಿಂಹನು ಎಂಥಾ ಅಸಾಧಾರಣ ಶೂರನೋ ಅಷ್ಟೇ ಧರ್ಮರಕ್ಷಕನೂ ಉದಾರಹೃದಯಿಯೂ ಆಗಿದ್ದನು. ಆ ತಂದೆ ರಾಯಮಲ್ಲನಂತೆ ಗುಣಗ್ರಾಹಿಯೂ ಆಗಿದ್ದನು.

ಧರ್ಮದಿಂದ ನಡೆದು ಕೆಟ್ಟವರುಂಟೆ? ಇಲ್ಲವೆನ್ನುತ್ತಿವೆ ಶಾಸ್ತ್ರಾದಿಗಳು. ನಮ್ಮ ಇತಿಹಾಸದಲ್ಲಿ ಮಾತ್ರ 'ಉಂಟು' ಎಂಬುದಕ್ಕೆ ಬೇಕಾದಷ್ಟು ದೃಷ್ಟಾಂತಗಳು ಸಿಗುತ್ತಲಿವೆ. ಅವುಗಳಲ್ಲಿ ಸಂಗ್ರಾಮಸಿಂಹನದೂ ಒಂದು. ಮೋಸ ವಿಶ್ವಾಸಘಾತುಕತನಗಳಿಗೆ ಜಯದೊರೆತೀತೆ? ಖಂಡಿತ ದೊರೆಯಲಾರದು—ಎಂಬುದು ಹಳೆಯ ನಂಬಿಕೆ. ರಾಯಸಿನ್ ನಾಡಿನ ಶೀಲ್ಹೈದಿಯೊಡನೆ ಇದೇ ಪ್ರಶ್ನೆಯನ್ನು ಕೇಳಿದ್ದರೆ ಏನು ಹೇಳುತಿದ್ದನೋ! ಈ ಶೀಲ್ಹೈದಿ ಎಂಬವನೇ ರಾಷ್ಟ್ರದ್ರೋಹ ಬಗೆದವನು. ಪ್ರಭುದ್ರೋಹ ಮಾಡಿದವನು. ನಂಬಿಸಿ ಕೊರಳನ್ನು ಕೊಯ್ದವನು. ಯಾರ ಹೆಸರನ್ನು ನೆನೆದರೂ ಪಾಪ ಬಂದೀತೋ ಅಂಥವನು. ಸಂಗ್ರಾಮಸಿಂಹನ ಸಾಮಂತನಾಗಿದ್ದು, ವಿಶ್ವಾಸದ ನಾಯಕನಾಗಿದ್ದು, ಅಪಾರ ಸೈನ್ಯಕ್ಕೆ ನೇತಾರನೆಂದು ಅಧಿಕಾರವನ್ನೂ ಪಡೆದಿದ್ದು ಶೀಲ್ಹೈದಿಯು ಒಳಸಂಚಿನಲ್ಲಿ ಸೇರಿ ಯುದ್ಧರಂಗದ ನಡುವೆಯೆ ಶತ್ರುಪಕ್ಷಕ್ಕೆ ಸೇರಿಬಿಟ್ಟನು. ಯಾವ ಯುದ್ಧವನ್ನು ನೇರವಾದ ರೀತಿಯಿಂದ ಗೆಲ್ಲುವುದು

ಸಾಧ್ಯವಾಗಲಿಲ್ಲವೋ ಅದನ್ನೇ ಬಾಬರನು ವಾಮಮಾರ್ಗದಿಂದ ಗೆಲ್ಲುವಂತಾಯಿತು. ಶೀಲ್ಹೆದಿಯನ್ನು ವಿವಿಧ ವಿಲೋಭಲನಗಳ ಆಸೆ ತೋರಿಸಿ ತನ್ನ ಪಕ್ಷಕ್ಕೆ ಸೇರಿಕೊಂಡು ಅವನು ಭೇದನೀತಿಯಲ್ಲಿ ಯಶಸ್ವಿಯಾದನು.

ಸಂಧಿ ನಡೆಯಲಿಲ್ಲ. ಸಮರವೇ ನಿಶ್ಚಯವಾಯಿತು. ಹೀಗಾಗಲು ಕಾರಣ ಸಂಗ್ರಾಮಸಿಂಹನಲ್ಲ. ಬಾಬರನು ಸಹಜವಾದ ಅಭಿಪ್ರಾಯದಿಂದಲೇ ಈ ಪ್ರಸಾಪಕ್ಕಿಳಿಯಲಿಲ್ಲ. ಕೇವಲ ಕಾಲವಂಚನೆಗೆಂದೇ ಅವನು ಸಂಧಿಯನ್ನು ಮುಂದೊಡ್ಡಿದುದು. ಹೀಗಿರುವಾಗ ಅದು ಯಶಸ್ವಿಯಾಗುವುದಾದರೂ ಹೇಗೆ? ಇದೇ ಸಂದರ್ಭದಲ್ಲಿಯೇ ಶೀಲ್ಹೆದಿಯನ್ನು ತನ್ನಡೆಗೆ ಒಲಿಸುವುದೂ ಬಾಬರನಿಗೆ ಸಾಧ್ಯವಾಯಿತು.

ಮತ್ತೆ ಯುದ್ಧವಾಯಿತು. ಆದರೂ ಮೊಗಲರಿಗೆ ಜಯದ ಆಸೆ ಕಾಣಲಿಲ್ಲ. ರಾಜಪುತ್ರರು ಜೀವದ ಹಂಗು ತೊರೆದು ಕಾದುತಿದ್ದರು. ಮೊಗಲರೂ ವೀರಾವೇಶದಿಂದ ಹೋರಾಡುತಿದ್ದರು. ಅಂದಿನ ಮೊಗಲರ ಆವೇಶ ಕಂಡು ಯಾರಾದರೂ ಆಶ್ಚರ್ಯಪಡುವಂತಿತ್ತು. ರಾಜಪುತ್ರರಿಗೆ ಯಾವುದರಲ್ಲಿಯೂ ತಾವು ಕಡಿಮೆಯವರಲ್ಲ ಎಂಬುದನ್ನು ತೋರಿಸುವಂತಿತ್ತು ಅಂದಿನ ಮೊಗಲರ ರಣಮತ್ತತೆ, ಆದರೂ ಅವರಿಗೆ ಗೆಲವಿನ ಭರವಸೆ ಮೂಡಲಿಲ್ಲ. ಅವರು ಮದ್ದುಗುಂಡುಗಳನ್ನು ಧಾರಾಳವಾಗಿ ಉಪಯೋಗಿಸುತಿದ್ದರು. ಶತಘ್ನಿಗಳನ್ನು ಹಾರಿಸುತಿದ್ದರು. ಶತಘ್ನಿಯ ಒಂದೊಂದು ಗುಂಡಿಗೆ ಹತ್ತಾರು ರಜಪೂತರು ಉರುಳುತಿದ್ದರು. ಆದರೂ ವಿಜಯರವಿಯು ಉದಿಸುವಂತಾಗಲಿಲ್ಲ.

ಸಂಗ್ರಾಮಸಿಂಹನು ಅರಿಭಯಂಕರನಾಗಿ ತನ್ನ ಪಾಳಯದ ಹಿಂದು ಮುಂದು ಮಧ್ಯಗಳಲ್ಲೆಲ್ಲಾ ಸಂಚರಿಸುತ್ತಾ ಹುರಿದುಂಬಿಸುತಿದ್ದನು. ಕ್ಷಣದಿಂದ ಕ್ಷಣಕ್ಕೆ ರಾಜಪುತ್ರರ ಕೆಚ್ಚು ದ್ವಿಗುಣಿತವಾಗುತಿತ್ತು. ಆನೆಗಳ ಘೀಳು, ಕುದುರೆಗಳ ಹೇಷಾರವ, ಶೂರ ಸೈನಿಕರ ಅಟ್ಟಹಾಸಗಳಿಂದ ದಿಙ್ಮಂಡಲ ಬಿರಿವಂತಾಯಿತು. ಹಲವಾರು ಗಂಟೆಗಳ ತನಕ ಜಯವನಿತೆಯು ಇಬ್ಬಣಗಳ ಮಧ್ಯದಲ್ಲೇ ನಿಂತಿದ್ದಳು. ಅವಳ ಕಣ್ಣಿನ ಒಲವು ಮಾತ್ರ ರಜಪೂತರತ್ತ ಇದ್ದಿತು. ಮೊಗಲ ವೀರರು ಎಷ್ಟೊಂದು ಶೌರ್ಯ ತೋರಿದರೂ ಅವಳು ಅವರ ಕಡೆಗೆ ಕಡೆಗಣ್ಣನ್ನೂ ತಿರುಗಿಸಲಿಲ್ಲ

ಅಷ್ಟರಲ್ಲಿ, ದ್ರೋಹಿಗಳ ನರಕದ ನಾಯಕತನಕ್ಕೆ ಅರ್ಹನಾದ ಶೀಲ್ಹೈದಿಯು ಸಂಗ್ರಾಮಸಿಂಹನ ಪಕ್ಷಕ್ಕೇ ತಿರುಗಿಬಿದ್ದನು. ತನ್ನ ಸಾವಿರಾರು ಸೈನಿಕರೊಂದಿಗೆ ಉಂಡ ಬಟ್ಟಲನ್ನೇ ಒಡೆಯಲೆಳಸಿದನು. ಒಮ್ಮೆಲೇ ಅವನು ತನ್ನ ಸೈನಿಕರಿಗೆ ಆಜ್ಞೆಕೊಡುತ್ತಾ ಸಂಗ್ರಾಮಸಿಂಹನ ಸೈನಿಕರನ್ನೇ ಸವರತೊಡಗಿದನು. ರಾಷ್ಟ್ರದ್ರೋಹದ ರೌರವಕ್ಕಿಳಿದನು. ಕುಲದ್ರೋಹದ ಕುಂಭೀಪಾಕಕ್ಕೆ ಕುಪ್ಪಳಿಸಿದನು.

ಆಕಸ್ಮಿಕವಾಗಿ ಉಂಟಾದ ಈ ಅವಾಂತರವನ್ನು ಕಂಡ ರಜಪೂತರು ಅಪ್ರತಿಭರಾದರು. ದಿಗ್ಭ್ರಮೆಗೊಂಡರು. ಆ ಕಡೆಯಿಂದ ಮೊಗಲರ ದ್ವಿಗುಣಿತ ಆವೇಶದ ಹೊಡೆತ; ಈ ಕಡೆಯಿಂದ ತಮ್ಮವನೇ ಆಗಿದ್ದ ಶೀಲ್ಹೈದಿಯ ಸೈನಿಕರ ತಿವಿತ; ಅರ್ಧ ತಾಸಿನ ವರೆಗೆ ನಡೆಯಿತು ಈ ಮಾರಣ ಯಜ್ಞ. ರಾಜಪುತ್ರರು ದಿಕ್ಕುತೋರದವರಾಗಿ ದಿಂಡುರುಳಿ ಬಿದ್ದರು. ಬಿದ್ದವರ ಮೇಲೆಯೇ ಬಿದ್ದರು. ಶವಗಳ ಶೈಲವೇ ಏರಿತು; ಅಲ್ಲಿಂದ ನೆತ್ತರಿನ ಹೊಳೆಯೇ ಹರಿಯಿತು.

ಜಯಕನ್ಯೆಯು ಕುಲಟೆಯಂತೆ ಶೀಲ್ಹೈದಿಯನ್ನು ಹಿಂಬಾಲಿಸಿದಳು. ದ್ರೋಹಿಯನ್ನು ಮೆಚ್ಚಿಕೊಂಡ ಆಕೆಯನ್ನು ತಾನು ಕಣ್ಣಿನಿಂದಲೂ ನೋಡಲಾರೆನೆಂಬಂತೆ ಶೂರ ಸಂಗ್ರಾಮಸಿಂಹನು ಯುದ್ಧರಂಗದಿಂದ ಮೊಗದಿರುಹಿ ನಡೆದನು. ಎಲ್ಲಿಗೆ? ತನ್ನ ಹುಟ್ಟು ನಾಡನ್ನು ಮರಳಿ ಗೆದ್ದುಕೊಳ್ಳಬಲ್ಲ ಸಾಮರ್ಥ್ಯವನ್ನು ಹೊಂದುವ ತನಕ, ಮತ್ತು ಗೆಲ್ಲುವ ತನಕ, ವೀರಭೂಮಿಯಾದ ಮೇವಾಡದತ್ತ ತಲೆಯಿಟ್ಟೂ ಮಲಗಲಾರೆನೆಂಬ ಪ್ರತಿಜ್ಞೆಯನ್ನು ತೊಟ್ಟು, ಸಂಗ್ರಾಮಸಿಂಹನು ಮೇವಾಡದ ಗಡಿಪ್ರಾಂತದ ಗುಡ್ಡಬೆಟ್ಟಗಳತ್ತ ವೀರವ್ರತಧಾರಿಯಾಗಿ ನಡೆದನು.

ಮೊಗಲರಿಗೆ ಜಯವಾಯಿತು ಎಂದು ಹೇಳುವುದಾದರೂ ಹೇಗೆ? ದ್ರೋಹಕ್ಕೆ ಜಯವಾಯಿತು; ಕುಯುಕ್ತಿ, ಕುತಂತ್ರಗಳಿಗೆ ಗೆಲವಾಯಿತು ಎನ್ನುವುದೇ ಸರಿಯಾದುದು. ಬಾಬರನು ಸತ್ತ ವಿರೋಧಿ ಸೈನಿಕರ ರುಂಡಗಳನ್ನೆಲ್ಲಾ ಕಡಿಕಡಿದು ಒಟ್ಟುಗೂಡಿಸಿ ರಾಸಿಹಾಕಿ, ಅದರ ಮೇಲೆ ಒಂದು ಕಟ್ಟಡವನ್ನು ಕಟ್ಟಿಸಿ, ಅದಕ್ಕೆ "ವಿಜಯಮಂದಿರ"ವೆಂದು ಹೆಸರಿಟ್ಟು ತಾನೂ ಘಾಜಿ ಎಂಬ ಬಿರುದನ್ನು ತಾಳಿದನಂತೆ! ಆದರೆ, ರಜಪೂತ ಸೈನಿಕರ ಆ

ಸಾವಿರಗಟ್ಟಲೆ ರುಂಡಗಳನ್ನೂ ಅವನು ತನ್ನ ದೇವನಿಗೆ ಅರ್ಪಿಸಿದನೋ, ಇಲ್ಲವೋ ತಿಳಿಯದು. ಅಂತೂ, ತಲೆಬುರುಡೆಗಳ ಮೇಲೆ ಕಟ್ಟಿದ 'ವಿಜಯ ಮಂದಿರ'ದಿಂದಲೇ ಧರ್ಮರಾಜ್ಯ ಸ್ಥಾಪನೆಯಾಯಿತೆಂದೂ ಎಣಿಸಿದ್ದರೂ ಇರಬಹುದು.

ಮೇವಾಡದ ಗುಡ್ಡಬೆಟ್ಟಗಳ ಗಿರಿಕಂದರಗಳಿಗೆ ಮಾತ್ರ ಗೊತ್ತು ಸಂಗ್ರಾಮಸಿಂಹನ ಕೊನೆಗಾಲದ ರಹಸ್ಯ! ಆ ವೀರವ್ರತನು ಅಲ್ಲಿಯ ಗುಡ್ಡದಿಂದ ಗುಡ್ಡಕ್ಕೆ ಅಲೆಯುತ್ತಿದ್ದನಂತೆ! ಮೇವಾಡವನ್ನು ಮತ್ತೊಮ್ಮೆ ಗೆದ್ದೇ ತೀರುವೆನೆಂದು ತನ್ನಲ್ಲಿ ತಾನೇ ಗರ್ಜಿಸುತಿದ್ದನಂತೆ! ಸಾಹಸದ ಖನಿಯಾಗಿ ಅಸಹಾಯಕನಾಗಿಯೂ ಬಿಸಿಗುಂದದಿರುವ ಕೆಚ್ಚಿನ ಕುಲುಮೆಯಾಗಿ ಸ್ವದೇಶದ ಹಿತಸಾಧನೆಗಾಗಿಯೇ ಯಾರು ಪ್ರಾಣಧಾರಣ ಮಾಡಿಕೊಂಡಿದ್ದನೋ ಅಂಥ ರಾಷ್ಟ್ರಪ್ರೇಮಿಗೆ, ಸಮ್ರಾಜನಿಗೆ, ಪ್ರಜಾವತ್ಸಲನಿಗೆ ಯಾರೋ ವಿಷ ಹಾಕಿ ಕೊಂದರಂತೆ! ಅಂಥಾ ದುರಾತ್ಮನಾರೆಂದು ಇತಿಹಾಸಕ್ಕೆ ತಿಳಿದಿಲ್ಲ, ನಿಜ. ಆದರೆ ಅಲ್ಲಿಯ ಆ ಬೆಟ್ಟಗಳ ಕಣಿವೆಗಳಿಗೆ ಇಂದಿಗೂ ಮರೆತಿರಲಾರದು, ಎಂದಿಗೂ ಮರೆಯಲಾರದು. ಸಂಗ್ರಾಮಸಿಂಹನ ಕೊನೆಗಾಲದ ರಹಸ್ಯವನ್ನು ಅಂದು ಅವು ಕಂಡಿದ್ದುವು. ಕಂಡು ವಿಸ್ಮಯಗೊಂಡು ನಿಶ್ಚಲವಾಗಿ ನಿಂತಿದ್ದುವು. ಕಂಡಿದ್ದರೂ ಹೇಳಲಾಗದ ಮೂಕವೇದನೆಯನ್ನು ಹೊತ್ತುಕೊಂಡು ಅಂದಿನಿಂದೀವರೆಗೂ ಆ ಕಣಿವೆಗಳ ಉಸಿರಾದ ಗಾಳಿ ಭಾರವಾಗಿ ಬೀಸುತ್ತಿರಬಹುದು. ಯಾರ ದೇಹವು ವೈರಿಶಸ್ತ್ರಗಳಿಯ ನೂರಾರು ಗಾಯಗಳಿಂದ ಜರ್ಜರಿತವಾಗಿದ್ದು, ಮದ್ದಿಲ್ಲದೆ, ಪಥ್ಯೋಪಚಾರಗಳಿಲ್ಲದೆ, ನಿಲ್ಲಲು ತ್ರಾಣವಿಲ್ಲದೆ, ಸಂಗಡಿಗರಿಲ್ಲದೆ ಕೊರಕೊರಗಿ ಕೃಶವಾಗುತಿದ್ದರೂ, ತಾಯಿನಾಡ ಬಿಡುಗಡೆಗಾಗಿಯೇ ಅಸುವಿಡಿದು ಬಾಳಿದ್ದಿತೋ ಆ ಕ್ಷತ್ರಕುಲರತ್ನವನ್ನು ಯಾವ ಪಾತಕಿಯೋ ಹುಡಿಗೈದನಂತೆ!



Edited, Printed & Published by K. V. Shenoy
at The Prabhat Printers, Ltd., Mangalore.

# 53

# ಧರ್ಮ ಶಿಕ್ಷಾ




ಲೇಖಕರು: ಶ್ರೀ| ಕೋ. ಶ. ಕಾರಂತ,
ಬಿ. ಎ., ಬಿ. ಎಲ್., ಎಡ್ವೊಕೇಟ್, ಮಂಗಳೂರು.



1955.

ಒಂದಾಣೆ




ಮಾಲೆ

# "ಒಂದಾಣೆಮಾಲೆ"ಯು ಎರಡನೇ ವರ್ಷ.

## ಎರಡನೇ ವರ್ಷದಲ್ಲಿ ವಿಸ್ತಾರಗೊಂಡ ಲೇಖಕರ ಬಳಗ.

## ಹೊಸ ಐವತ್ತೆರಡು ಪುಸ್ತಕಗಳು ಹೊರಡುವುವು.

**ಈ 53ನೇ ಪುಸ್ತಕದಿಂದ 'ಒಂದಾಣೆ ಮಾಲೆ'ಯು ಎರಡನೇ ವರ್ಷವು ಆರಂಭವಾಗಿದೆ**

ಪ್ರಥಮ ವರ್ಷದಲ್ಲಿ ನಮ್ಮೊಂದಿಗೆ ಸಹಕರಿಸಿದ ಪ್ರಸಿದ್ಧ ಲೇಖಕರಲ್ಲದೆ ಈ ಎರಡನೇ ವರ್ಷದಲ್ಲಿ ಮತ್ತೆ ಹಲವು ಲೇಖಕರು 'ಒಂದಾಣೆ ಮಾಲೆ'ಗೆ ಬರೆಯುವರು. ಅವರಲ್ಲಿ, ರಾಷ್ಟ್ರಕವಿಗಳಾದ ಶ್ರೀ| ಮಂಜೇಶ್ವರ ಗೋವಿಂದ ಪೈಯವರು, ಶ್ರೀ| ಕೆ. ಎಸ್. ಶರ್ಮ, ವಿದ್ವಾನ್, ಕಾಸರಗೋಡು, ಶ್ರೀ| ಕೆ. ಎಸ್. ಪದ್ಮನಾಭಾಚಾರ್ಯ, ವಿದ್ವಾನ್ (ಹಿಂದೀ ಮತ್ತು ಕನ್ನಡ),—

ಇವರಲ್ಲದೆ ಇನ್ನೂ ಹಲವರು ಇರುವರು.

**ಲೇಖಕರ ಹೆಸರುಗಳು:**

ಶ್ರೀ|ಗಳಾದ ರಾಷ್ಟ್ರಕವಿ ಗೋವಿಂದ ಪೈಯವರು, ಕೆ. ಎಸ್. ಶರ್ಮ--ವಿದ್ವಾನ್, ಕೆ. ಎಸ್. ಪದ್ಮನಾಭ ಆಚಾರ್ಯ--ವಿದ್ವಾನ್(ಹಿಂದೀ ಮತ್ತು ಕನ್ನಡ), ಎಮ್. ಸುಬ್ರಾಯನ್, ವಿದ್ವಾನ್, ಡಿ. ಪುಟ್ಟಸ್ವಾಮಿ, ಬಿ. ಎ., ಬಿ. ಎಲ್, ಎಡ್ವೊಕೇಟ್ (ಸಂಪಾದಕ: 'ವಿವೇಕಾಭ್ಯುದಯ'), ಪಿ ಎಸ್. ವೆಂಕಟಕೃಷ್ಣ ರಾವ್, ಎಂ.ಎ, ಬಿ.ಟಿ, ಕೋ. ಶ. ಕಾರಂತ, ಬಿ. ಎ., ಬಿ ಎಲ್, ಎಡ್ವೊಕೇಟ್, ಬಿ. ಶಂಕರ ಭಟ್, ವಿದ್ವಾನ್, ಬಳ್ಳೂರು ಸುಬ್ರಾಯ ಅಡಿಗ, ಅಮ್ಮೆಂಬಳ ಅನಂತಯ್ಯ ನಾವಡ, ಟಿ. ಚಂದ್ರರಾಜ ಸೆಟ್ಟಿ, ವೈದ್ಯಗುರು ಎಂ. ಆರ್. ಭಟ್. (ಸಂಪಾದಕ: "ದೀರ್ಘಾಯು"), ಡಾ| ಎಸ್. ಪಿ. ಭಟ್, ಶ್ರೀ| ಎಲ್. ಎಸ್. ನಾಯಕ್, ಕುಡ್ಪಿ ವಾಸುದೇವ ಶೆಣೈ, ದಿ|ಎಮ್. ಎನ್. ಕಾಮತ್, ಮೊದಲಾದವರು.

ಪ್ರತಿ ಶನಿವಾರ ಒಂದು ಹೊಸ ಪುಸ್ತಕ. ಪ್ರತಿಯೊಂದಕ್ಕೆ ಒಂದಾಣೆ. ಪ್ರತಿಯೊಂದು ಪುಸ್ತಕದಲ್ಲಿ ಹದಿನಾರಕ್ಕೆ ಕಡಿಮೆಯಾಗದಷ್ಟು ಪುಟಗಳು.

**ಎಲ್ಲ ನ್ಯೂಸ್ ಏಜಂಟರಲ್ಲೂ ಪುಸ್ತಕ ವ್ಯಾಪಾರಿಗಳಲ್ಲೂ ದೊರೆವುದು.**

ಅಥವಾ

ಒಂದಾಣೆಮಾಲೆ, ಪ್ರಭಾತ ಆಫೀಸು, ರಥಬೀದಿ, ಮಂಗಳೂರು-೧.

The Prabhat Printers, Ltd., Mangalore.

# ಮುನ್ನುಡಿ.

ನಮ್ಮ ಭಾರತಕ್ಕೆ ಒಂದು ರಾಜ್ಯಾಂಗವನ್ನು ರಚಿಸುವುದಕ್ಕಾಗಿ ಬ್ರಿಟಿಷ್ ಸರಕಾರವು ಒಂದು ಸಭೆಯನ್ನು ಏರ್ಪಡಿಸಿತ್ತು. ಅದರ ಹೆಸರು "ಸಂವಿಧಾನ ಸಭೆ" (Constituent Assembly). ಆ ಸಭೆಯು ಒಂದು ರಾಜ್ಯಾಂಗವನ್ನು (Constitution) ರಚಿಸಿ, ಅದನ್ನು ೧೯೪೯ನೆ ಇಸವಿಯ ನವಂಬರು ೨೬ನೆ ದಿನ ತನ್ನ ಸಭೆಯಲ್ಲಿ ಅಧಿನಿಯಮಮಾಡಿತು. ಅದಕ್ಕೆ "ಭಾರತ ಸಂವಿಧಾನ" ಎಂಬ ಮಹತ್ವದ ಹೆಸರನ್ನಿಟ್ಟಿತು.

ಭಾರತದ ಸಂವಿಧಾನವು ಪ್ರತಿಯೊಬ್ಬ ನಾಗರಿಕನಿಗೆ **ಧರ್ಮ ಮತ್ತು ಉಪಾಸನಾ ಸ್ವಾತಂತ್ರ್ಯ**, ವಾಕ್ ಸ್ವಾತಂತ್ರ್ಯ, ಸಂಸ್ಕೃತಿ ಮತ್ತು ವಿದ್ಯಾಭ್ಯಾಸ ಸ್ವಾತಂತ್ರ್ಯ ಮೊದಲಾದ ಕೆಲವು ಸ್ವಾತಂತ್ರ್ಯಗಳನ್ನು ಕೊಟ್ಟಿದೆ. ಇವೆಲ್ಲವನ್ನ "ಮೂಲ ಅಧಿಕಾರಗಳು" (fundamental rights) ಎಂದು ಕರೆದಿದೆ.

ನಮ್ಮ ಚಿಕ್ಕಂದಿನಲ್ಲಾಗಲಿ, ಅನಂತರದ ವಿದ್ಯಾಭ್ಯಾಸದ ಕಾಲದಲ್ಲಾಗಲಿ ನಮ್ಮ ಧರ್ಮಶಿಕ್ಷಣವು ನಮಗಿರಲಿಲ್ಲ. ಬ್ರಿಟಿಷ್ ರಾಜ್ಯಭಾರವು ಮುಗಿದು ಸ್ವಾತಂತ್ರ್ಯ ಭಾರತವು ನೆಲಸಿದೆ. ಆದರೂ ನಮ್ಮ ಮಕ್ಕಳಿಗೆ ಧಾರ್ಮಿಕ ಶಿಕ್ಷಣವು ಇಲ್ಲವೇ ಇಲ್ಲ. "ರಾಜ್ಯನಿಧಿಯಿಂದ ಸಂಪೂರ್ಣವಾಗಿ ಪೋಷಿತವಾದ ಯಾವುದೇ ವಿದ್ಯಾ ಸಂಸ್ಥೆಯಲ್ಲಿಯೂ ಧಾರ್ಮಿಕ ಶಿಕ್ಷಣವನ್ನು ಕೊಡತಕ್ಕುದಲ್ಲ" ಎಂಬ ರಾಜ್ಯನೀತಿಯನ್ನು ಸಂವಿಧಾನವು ಕೈಗೊಂಡಿದೆ. ಈ ಪ್ರಕಾರದ ರಾಜ್ಯನೀತಿಯನ್ನು "ಧರ್ಮ ನಿರಪೇಕ್ಷಿತ ರಾಜ್ಯ" (Secular State) ಎಂದು ಹೇಳುತ್ತಾರೆ. ಆದರೆ ಸಂವಿಧಾನವು ಭಾರತದ ಸಮಸ್ತ ನಾಗರಿಕರಿಗೆ ಧರ್ಮ ಮತ್ತು ಉಪಾಸನಾ ಸ್ವಾತಂತ್ರ್ಯವನ್ನು ಕೊಟ್ಟಿದೆ. ಅದು ನಮ್ಮ ಮೂಲ ಅಧಿಕಾರವೂ ಆಗಿದೆ.

ನಮ್ಮ ಧರ್ಮ, ಅದರ ಆಚರಣೆ ಮತ್ತು ಉಪಾಸನೆ ಏನೆಂದು ಜನಸಾಮಾನ್ಯರಿಗೆ ಮತ್ತು ಆಬಾಲವೃದ್ಧರಿಗೆ ತಿಳಿಸುವುದಕ್ಕಾಗಿ ಈ 'ಧರ್ಮಶಿಕ್ಷಾ' ಎಂಬ ಹೊತ್ತಿಗೆಯು ಬರೆಯಲ್ಪಟ್ಟಿದೆ. ಇದಕ್ಕೆ ಪ್ರೋತ್ಸಾಹವು ದೊರೆತರೆ ಮುಂದಿನ ಆನುಕ್ರಮಿಕ ಹೊತ್ತಿಗೆಗಳನ್ನು ಪ್ರಕಾಶಿಸುವ ಆಸೆ ಇದೆ.

ಮಂಗಳೂರು,<br>
೧೫—೯—೧೯೫೫.

**ಕೋ. ಶ. ಕಾರಂತ.**

# ಧರ್ಮ ಶಿಕ್ಷಾ

## ೧. ನಮ್ಮ ಧರ್ಮ

ಕ್ರಿಸ್ತಶಕ ಏಳನೇ ಶತಮಾನದಲ್ಲಿ ಇಟ್ಸಿಂಗನೆಂಬ ಬೌದ್ಧ ಯಾತ್ರಿಕನು ನಮ್ಮ ದೇಶಕ್ಕೆ ಬಂದಿದ್ದನು. ನಮ್ಮ ದೇಶದ ಪ್ರಸಿದ್ಧವಾದ ಹೆಸರು "ಆರ್ಯಾವರ್ತ" ಎಂದು ಅವನು ಬರೆದಿರುವನು. ಆರ್ಯಾವರ್ತ ಎಂದರೆ ಆರ್ಯರು ನೆಲಸಿದ ಭೂಮಿ. ಇದು ಹಿಮಾಲಯ ಮತ್ತು ವಿಂಧ್ಯ ಪರ್ವತಗಳ ಮಧ್ಯದ ಪ್ರದೇಶವೆಂದು ಅಮರಕೋಶವು ವರ್ಣಿಸಿದೆ.

ಆರ್ಯಾವರ್ತಃ ಪುಣ್ಯಭೂಮಿರ್ಮಧ್ಯಂ ವಿನ್ಧ್ಯಹಿಮಾಲಯೋ.

೨ನೇ ಕಾಂಡ—೫೭೨.

ಆರ್ಯರು ಹೊರದೇಶಗಳಿಂದ ಪಂಜಾಬಿಗೆ ಬಂದ ಕುರುಬರಲ್ಲ. ಅವರು ಉತ್ತರ ಧ್ರುವದಿಂದ ಬಂದವರಲ್ಲ. ಈ ಪ್ರಕಾರದ ಹೇಳಿಕೆಗಳು ಭಾಷಾಶಾಸ್ತ್ರಿಗಳ ಊಹನೆಗಳಾಗಿವೆ. ಇವು ನಿರಾಧಾರವಾಗಿವೆ ಎಂದು ಶ್ರೀ ಮಹರ್ಷಿ ದಯಾನಂದರು, ಶ್ರೀ ಸ್ವಾಮಿ ವಿವೇಕಾನಂದರು, ಶ್ರೀ ಅರವಿಂದರು ಸ್ಪಷ್ಟಪಡಿಸಿದ್ದಾರೆ.

ಒಂದು ಕಾಲದಲ್ಲಿ ನಮ್ಮ ದೇಶವನ್ನು ಭಾರತವರ್ಷ ಅಥವಾ ಭರತ ಖಂಡ ಎಂದು ಕರೆಯುತ್ತಿದ್ದರು. ಜಂಬೂ ದ್ವೀಪ ಎಂಬ ಹೆಸರೂ ಇತ್ತು. ಆದರೆ ಹಿಂದೂ ಪದವು ನಮ್ಮ ಸಾಹಿತ್ಯ ಗ್ರಂಥಗಳಲ್ಲಿ ಇಲ್ಲ. ಅದು ನಮ್ಮ ಧರ್ಮಗ್ರಂಥಗಳಲ್ಲಿ ಇಲ್ಲವೇ ಇಲ್ಲ. ಅದು ನಮ್ಮ ದೇಶದ ಜನರಿಗೆ ಬಂದ ವಿಚಿತ್ರವಾದ ಹೆಸರು.

ಹಿಂದೂ ಪದವು ಹಳೆ ಪಾರ್ಶಿ ಗ್ರಂಥಗಳಲ್ಲಿ ಇದೆಯೆಂದು ಸಂಶೋಧಕರು ಹೇಳುತ್ತಿದ್ದಾರೆ. 'ಸಿಂಧೂ' ಪದದಿಂದ ಹಿಂದೂ ಪದವು ಹುಟ್ಟಿತೆಂದು ಅವರು ಸಾಧಿಸಿದ್ದಾರೆ. ಸಿಂಧೂ ನದಿಯ ಬಯಲಲ್ಲಿದ್ದ ಆರ್ಯರನ್ನು ಪಾರ್ಶಿಗಳು "ಸಿಂಧೂ"ಗಳು ಎಂದು ಕರೆಯುತ್ತಿದ್ದರಂತೆ. ಕಾಲಕ್ರಮದಿಂದ ಆ ಹೆಸರು ಹಿಂದೂ ಆಗಿದೆಯೆಂದು ಸಂಶೋಧಕರು ಸಾಧಿಸುತ್ತಿದ್ದಾರೆ. ಅದು ಏನೂ ಇರಲಿ. ಅದು ಈಗ ಒಂದು ಧರ್ಮವನ್ನು ಆಚರಿಸುವವರ ಹೆಸರಾಗಿ ಬಿಟ್ಟಿದೆ. ಅವರು ಪರಂಪರೆಯಿಂದ ಆಚರಿಸಿ ಬಂದಿರುವ ಧರ್ಮವೇ ಹಿಂದೂ ಧರ್ಮ. ಅದೇ ನಮ್ಮ ಧರ್ಮ.

ವೇದೋಽಖಿಲೋ ಧರ್ಮಮೂಲಂ

ಮನುಸ್ಮೃತಿ ಅಧ್ಯಾಯ ೨–ಶ್ಲೋಕ–೬.

ವೇದವು ಎಲ್ಲಾ ಧರ್ಮಗಳ ಮೂಲಸ್ವರೂಪವಾಗಿದೆ. ವೇದಗಳು ನಾಲ್ಕು: ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವವೇದ. ಈ ವೇದಗಳಲ್ಲಿ ಹೇಳಿರುವ ಧರ್ಮವೇ ವೈದಿಕ ಧರ್ಮ. ವೈದಿಕ ಧರ್ಮವೇ ಆರ್ಯರ ಧರ್ಮವಾಗಿತ್ತು. ಅದುವೇ ಪರಂಪರೆಯಿಂದ ಬಂದ ನಮ್ಮ ಹಿಂದೂ ಧರ್ಮವಾಗಿದೆ. ವೈದಿಕ ಧರ್ಮವು ಮುಖ್ಯವಾಗಿ ಜೀವ, ಜಗತ್ತು, ಮತ್ತು ಈಶ್ವರ ಇವುಗಳ ಜ್ಞಾನವನ್ನು ಬೋಧಿಸುತ್ತದೆ.

ವೇದವು ಒಬ್ಬ ಸಂತ, ಋಷಿ, ಮಹಾತ್ಮನಿಂದ ಬರೆಯಲ್ಪಟ್ಟ ಗ್ರಂಥ ವಲ್ಲ. ವೇದವು ಮನುಷ್ಯರಿಂದ ಬರೆಯಲ್ಪಟ್ಟ ಧರ್ಮಗ್ರಂಥವಲ್ಲ. ಅದು ಈಶ್ವರನಿಂದ ಋಷಿಗಳು ತಿಳಿದ ಧರ್ಮ. ಅದು ಎಲ್ಲಾ ಕಾಲದಲ್ಲಿಯೂ ಇರುವ ಧರ್ಮವಾಗಿದೆ. ಆದಕಾರಣ ಅದನ್ನು ಶಾಶ್ವತ ಧರ್ಮ ಎಂದು ಕರೆಯುತ್ತಾರೆ. ಅದು ಸನಾತನ ಧರ್ಮವಾಗಿದೆ. ಆದಕಾರಣ ಮನುವು 'ಏಷ ಧರ್ಮ ಸನಾತನ' ಎಂದಿರುವನು.

■■■■■■■■

## ೨. 'ಸಂಸಾರ' ಎಂದರೇನು?

'ಸಂಸಾರ' ಎಂಬೀ ಪದವನ್ನು ಕೇಳದವರಿಲ್ಲ. ಅದನ್ನು ಆಡದವರಿಲ್ಲ. ಈ ಪದವು ಸೃ (=ತಿರುಗು) ಎಂಬ ಧಾತುವಿನಿಂದ ಆಗಿದೆ. ಗರಗರನೆ ತಿರುಗುವುದೇ ಸಂಸಾರ. ಏನು ತಿರುಗುವುದು?

ಜನ್ಮವೃದ್ಧಿಕ್ಷಯೈರ್ನಿತ್ಯಂ ಸಂಸಾರಯತಿ ಚಕ್ರವತ್ ॥

ಮನುಸ್ಮೃತಿ: ಅ. ೧೨–೧೨೪.

(ಜನ್ಮ=ಹುಟ್ಟು, ವೃದ್ಧಿ=ಬೆಳವಣಿಗೆ, ಕ್ಷಯ=ನಾಶ ಅಥವಾ ಮರಣ, ಚಕ್ರದಂತೆ ನಿತ್ಯಂ=ಯಾವಾಗಲೂ, ಚಕ್ರವತ್=ಗರಗರನೆ ಚಕ್ರ ತಿರುಗು ವಂತೆ, ಸಂಸಾರಯತಿ = ತಿರುಗುತ್ತಿದೆ.]

ಎಲ್ಲಾ ಪ್ರಾಣಿಗಳು ಹುಟ್ಟಿ, ಬೆಳೆದು ಸಾಯುತ್ತಿವೆ. ಹುಟ್ಟು ಸಾವು ಗಳ ಗತಿಯೇ ಸಂಸಾರ.

ತಾಯಿಯ ಹೊಟ್ಟೆಯಲ್ಲಿ ನಮ್ಮ ಜೀವನವು ಆರಂಭವಾಗಿದೆ. ತಾಯಿ ತಿಂದ ಅನ್ನ ಅಥವಾ ಆಹಾರದಿಂದ ನಮ್ಮ ಈ ಶರೀರವು ಆಗಿದೆ. ಅನ್ನ ದಿಂದ ಇದು ಬೆಳೆಯುತ್ತದೆ. ಕೆಲವು ಕಾಲ ಬೆಳೆದು ಈ ಶರೀರವು ನಾಶ

ವಾಗುತ್ತದೆ. ಸತ್ತ ಮೇಲೆ ಏನಾಗುತ್ತದೆ? ಸಾವಿನಿಂದ ನಮ್ಮ ಜೀವನವು ಅಂತ್ಯವಾಗುವುದೇ? ಎಂಬೀ ಪ್ರಶ್ನೆಗಳು ಬರುವುವು.

ಸತ್ತ ಮೇಲೆ ಇನ್ನೊಂದು ಬಗೆಯ ಜೀವನ ಇದೆಯೆಂದು ನಮ್ಮ ಹಿರಿಯರು ನಂಬಿದ್ದರು. ಈ ನಂಬಿಗೆಯಿಂದ ನಮ್ಮ ಹಿರಿಯರ ದಿನವನ್ನು ಆಚರಿಸುತ್ತಾರೆ. ಅವರ ನೆನಪಿಗಾಗಿ ಶ್ರಾದ್ಧವನ್ನು ಮಾಡುತ್ತಿದ್ದಾರೆ. ಕೆಲವು ಕಾಲದ ಮೇಲೆ ಜೀವನು ತಿರುಗಿ ಹುಟ್ಟುತ್ತಾನೆಂದು ಅವರ ದೃಢ ವಿಶ್ವಾಸವಾಗಿತ್ತು, ತಿರುಗಿ ಹುಟ್ಟುವುದೇ ಪುನರ್ಜನ್ಮ.

ಅನ್ನದಿಂದ ಅಥವಾ ತಿಂದ ಪದಾರ್ಥದಿಂದ ಆಗಿರುವ ನಮ್ಮ ಶರೀರ ವನ್ನು "ಅನ್ನಮಯಕೋಶ" ಎಂದು ಕರೆಯುತ್ತಾರೆ. ಇದನ್ನು ಜಡ ಶರೀರ ಅಥವಾ ಸ್ಥೂಲ ಶರೀರ ಎಂದೂ ಹೇಳುತ್ತಾರೆ. ಈ ಶರೀರದಲ್ಲಿ ಕೈ ಕಾಲು,ಕಣ್ಣು ಮೊದಲಾದ ಇಂದ್ರಿಯಗಳು ಇವೆ. ಇಂದ್ರಿಯಗಳ ಮೂಲಕ ನಾವು ಕೆಲಸ ಮಾಡುತ್ತೇವೆ.

ಈ ಶರೀರದೊಳಗೆ ನಮ್ಮ ಮನಸ್ಸು, ಬುದ್ಧಿ ಮೊದಲಾದ ಸೂಕ್ಷ್ಮ ವಾದ ಇಂದ್ರಿಯಗಳು ಇವೆ. ಇವು ನಮ್ಮ ಕಣ್ಣಿಗೆ ಕಾಣದಷ್ಟು ಸೂಕ್ಷ್ಮ ವಾಗಿವೆ. ಈ ಸೂಕ್ಷ್ಮ ಇಂದ್ರಿಯಗಳು ಇರುವ ಕೋಶವನ್ನು "ಸೂಕ್ಷ್ಮಶರೀರ" ಎಂದು ಕರೆಯುತ್ತಾರೆ. ಈ ಸೂಕ್ಷ್ಮ ಶರೀರದಿಂದ ನಾವು ಸುಖ ದುಃಖ ವನ್ನು ಅನುಭವಿಸುತ್ತೇವೆ. ನಾವು ವಿಷಯಗಳ ಜ್ಞಾನವನ್ನು ಅದರ ಸಹಾಯದಿಂದ ಪಡೆಯುತ್ತೇವೆ.

ಈ ಸೂಕ್ಷ್ಮ ಶರೀರದೊಳಗೆ ಒಂದು ವಿಶೇಷ ಶಕ್ತಿ ಇದೆ. ಅದು ನಮ್ಮ ಜೀವ. ಅದನ್ನು ಜೀವಾತ್ಮ ಎಂದೂ ಕರೆಯುತ್ತಾರೆ. ಅದು ಸೂಕ್ಷ್ಮ ಶರೀರದಲ್ಲಿ ನೆಲಸಿರುತ್ತದೆ. ಜೀವನಿಗೆ ಸ್ಥೂಲ ಮತ್ತು ಸೂಕ್ಷ್ಮ ಶರೀರ ಗಳು ಬಂಧನವಾಗಿವೆ. ಜೀವನಿಗೆ ಹುಟ್ಟು ಸಾವು ಇರುವುದಿಲ್ಲ. ಸ್ಥೂಲ ಶರೀರವು ನಾಶನಾದೊಡನೆ ಸೂಕ್ಷ್ಮ ಶರೀರದೊಡನೆ ಸಂಚರಿಸುವನು. ಇನ್ನೊಂದು ಶರೀರವನ್ನು ಪಡೆಯುವುದಕ್ಕಾಗಿ ಸಂಚರಿಸುತ್ತಿರುವನು. ಆದಕಾರಣ ಸೂಕ್ಷ್ಮ ಶರೀರ ಇರುವ ವರೆಗೆ ಸ್ಥೂಲ ಶರೀರದ ಆಸೆ ಅದಕ್ಕೆ ಇದೆ ಎನ್ನುತ್ತಾರೆ. ಆಸೆಯು ಇರುವ ವರೆಗೆ ಅದಕ್ಕೆ ಸೂಕ್ಷ್ಮ ಶರೀರವಿದೆ. ಜೀವನಿಗೆ ತಿರುಗಾಟವಿದೆ. ಎಂದರೆ ಆಸೆಯ ನೆರವೇರಿಕೆಯೇ ಜೀವನ ತಿರುಗಾಟ. ಅದೇ ನಮ್ಮ ಸಂಸಾರ.

ಸ್ಥೂಲ ಮತ್ತು ಸೂಕ್ಷ್ಮಶರೀರಗಳಿಂದ ಬಿಡುಗಡೆಯಾಗದೆ ಸಂಸಾರ ಚಕ್ರದ ಗತಿಯು ನಿಲ್ಲುವುದಿಲ್ಲ. ಈ ಬಂಧವಿಮೋಚನೆ ಅಥವಾ ಬಿಡುಗಡೆಯೇ ಮೋಕ್ಷ. ಆಗ ಸಂಸಾರಗತಿಯು ನಿರ್ಗತಿಯಾಗುವುದು.

ಹುಟ್ಟು-ಸಾವಿನ ಗತಿಯೇ ಸಂಸಾರ. ಹುಟ್ಟು ಸಾವಿನ ನಿರ್ಗತಿಯೇ ಮೋಕ್ಷ.

--------

## ೩. ಜೀವನ ರಹಸ್ಯ

ಮನುವು ಮಾನವ ಕುಲದ ಮೂಲಪುರುಷನು. ಅವನು ಮಾನವ ಜೀವನ ರಹಸ್ಯವನ್ನು ಈ ಪ್ರಕಾರ ವಿವರಿಸಿರುವನು.

ಏಕಃ ಪ್ರಜಾಯತೆ ಜಂತುರೇಕ ಏವ ಪ್ರಲೀಯತೆ ।
ಏಕೋಽನು ಭುಂಕ್ತೇ ಸುಕೃತಮೇಕ ಏವಚ ದುಷ್ಕೃತಮ್ ।

ಮನುಸ್ಮೃತಿ ಅ ೪-೨೪೦.

[ಜಂತು: ಪ್ರಾಣಿಯು, ಮನುಷ್ಯನು, ಏಕಏವ-ಒಬ್ಬನಾಗಿಯೇ ಪ್ರಜಾಯತೆ-ಹುಟ್ಟುತ್ತಾನೆ, ಏಕಏವ-ಒಬ್ಬನೇ, ಪ್ರಲೀಯತೆ-ಸಾಯುತ್ತಾನೆ, ಸುಕೃತಂ-ಅವನು ಮಾಡಿರುವ ಒಳ್ಳೆಯ ಕರ್ಮದ ಫಲವನ್ನು, ಏಕ-ಒಬ್ಬನೇ, ಅನುಭುಂಕ್ತೆ-ಅನುಭವಿಸುತ್ತಾನೆ. ದುಷ್ಕೃತಮ್-ಕೆಟ್ಟ ಕೆಲಸಗಳ ಫಲವನ್ನು, ಏಕಏವ-ಅವನೊಬ್ಬನೇ, ಅನುಭುಂಕ್ತೆ-ಅನುಭವಿಸುತ್ತಾನೆ.]

ಜೀವನು ಅಥವಾ ಮನುಷ್ಯನು ಒಬ್ಬನಾಗಿಯೇ ಹುಟ್ಟುತ್ತಾನೆ. ಅವನು ಒಬ್ಬನಾಗಿಯೇ ಸಾಯುತ್ತಾನೆ. ಅವನ ತಂದೆ, ತಾಯಿ, ಹೆಂಡತಿ, ಮಕ್ಕಳು, ಬಂಧು ಬಳಗದವರಾರೂ ಅವನೊಡನೆ ಸಾಯುವುದಿಲ್ಲ ಅಥವಾ ಹುಟ್ಟುವುದಿಲ್ಲ. ಅವನು ಮಾಡಿರುವ ಸುಕೃತ-ಒಳ್ಳೆಯ ಕರ್ಮ ಅಥವಾ ದುಷ್ಕೃತ-ದುಷ್ಟ ಕರ್ಮ ಇವುಗಳ ಪುಣ್ಯ ಅಥವಾ ಪಾಪ ರೂಪದ ಫಲಗಳನ್ನು ಅವನೊಬ್ಬನೇ ಅನುಭವಿಸುತ್ತಾನೆ.

ಮೃತಂ ಶರೀರಮುತ್ಸೃಜ್ಯ ಕಾಷ್ಠಲೋಷ್ಠ ಸಮಂಕ್ಷಿತೌ ।
ವಿಮುಖಾ ಬಾಂಧವಾ ಯಾಂತಿ ಧರ್ಮಸ್ತಮನುಗಚ್ಛತಿ ॥

ಅ. ೪. ಶ್ಲೋಕ ೨೪೧.

[ಮೃತಂ ಶರೀರಂ-ಮರಣ ಶರೀರವನ್ನು, ಕಾಷ್ಠ-ಕಟ್ಟಿಗೆ, ಲೋಷ್ಠ-ಮಣ್ಣು ಹೆಂಟೆಗೆ, ಸಮಂ-ಸರಿಯಾಗಿ, ಕ್ಷಿತೌ-ಭೂಮಿಯಲ್ಲಿ, ಉತ್ಸೃಜ್ಯ-ತ್ಯಜಿಸಿಬಿಟ್ಟು, ಬಾಂಧವಾ-ಬಾಂಧವರು, ವಿಮುಖಾಯಾಂತಿ-ಪರಾಂಮುಖ

ರಾಗಿ ಹೋಗುತ್ತಾರೆ. ಧರ್ಮಃ-ಅವನು ಮಾಡಿದ ಧರ್ಮಾಧರ್ಮಗಳು, ತಂ-ಅವನನ್ನು, ಅನುಗಚ್ಛತಿ-ಹಿಂಬಾಲಿಸುತ್ತವೆ.]

ಮೃತ ಶರೀರವನ್ನು ಬಂಧು ಬಾಂಧವರು ಸ್ಮಶಾನಕ್ಕೆ ಒಯ್ದು ಅಲ್ಲಿ ಕಟ್ಟಿಗೆ ಅಥವಾ ಮಣ್ಣು ಹೇಂಟೆಗೆ ಸಮಾನವಾಗಿ ತ್ಯಜಿಸಿ ಬರುತ್ತಾರೆ. ಆತನು ಮಾಡಿದ ಧರ್ಮಾಧರ್ಮಗಳು ಮಾತ್ರ ಅವನನ್ನು ಹಿಂಬಾಲಿಸುತ್ತವೆ. ಆದಕಾರಣ ನಮ್ಮ ಮುಂದಿನ ಸಹಾಯಕ್ಕಾಗಿ, ನಮ್ಮ ಧಾರಣೆ ಅಥವಾ ಪೋಷಣೆಗಾಗಿ ಅನುದಿನವೂ ಧರ್ಮವನ್ನು ಆಚರಿಸುತ್ತಾ ಬರಬೇಕು. ಆದಕಾರಣ ಮನುವು ಈ ರೀತಿ ಬೋಧಿಸಿರುವನು.

ತಸ್ಮಾದ್ಧರ್ಮಂ ಸಹಾಯಾರ್ಥಂ ನಿತ್ಯಂ ಸಂಚಿನುಯಾಚ್ಛನೈಃ
ಧರ್ಮೇಣ ಹಿ ಸಹಾಯೇನ ತಮಸ್ತರತಿ ದುಸ್ತರಮ್ ||

ಮನು ಅ ೪—೨೪೨.

[ತಸ್ಮಾತ್-ಆದಕಾರಣ, ಧರ್ಮಂ-ಧರ್ಮವನ್ನು, ಸಹಾಯಾರ್ಥಂ-ತನ್ನ ಸಹಾಯಕ್ಕಾಗಿ, ನಿತ್ಯಂ-ಅನುದಿನವೂ, ಯಾವಾಗಲೂ, ಶನೈ-ಸಮಾಧಾನದಿಂದ, ಮೆಲ್ಲಮೆಲ್ಲಗೆ,ಸಂಚಿನುಯಾತ್-ಆಚರಿಸುತ್ತಾ ಸಂಗ್ರಹ ಮಾಡಿಟ್ಟುಕೊಳ್ಳಬೇಕು. ಜೀವನು, ಧರ್ಮೇಣ-ಧರ್ಮದ ಸಹಾಯದಿಂದ, ಹಿ-ನಿಶ್ಚಯವಾಗಿಯೂ, ದುಸ್ತರಂ-ಅಸಾಧ್ಯವಾದ, ತಮಃ-ಅಂಧಕಾರವನ್ನು, ನರಕಾದಿ ಕಷ್ಟಗಳನ್ನು, ತರತಿ-ದಾಟುತ್ತಾನೆ.]

ಆದಕಾರಣ ನಾವು ನಮ್ಮ ಸಹಾಯಕ್ಕಾಗಿ ಅನುದಿನವೂ ಧರ್ಮವನ್ನು ಆಚರಿಸಿ ಸಂಗ್ರಹಿಸಬೇಕು. ಆಗ ಮಾತ್ರ ದುಸ್ತರವಾದ ಕ್ಲೇಶಗಳನ್ನು ನಾವು ಆ ಪ್ರಕಾರ ಕಾಪಾಡಿಕೊಂಡು ಬಂದಿರುವ ಧರ್ಮದ ಸಹಾಯದಿಂದ ದಾಟಬಹುದೆಂದು ಮನುವು ಹೇಳಿರುವನು. ನಮ್ಮ ನಿತ್ಯ ಜೀವನದಲ್ಲಿ ಆಚರಿಸಬೇಕಾದ ಧರ್ಮವನ್ನು ಮನುವು ವಿವರಿಸಿರುವನು. ಅವುಗಳಲ್ಲಿ ಜನಸಾಮಾನ್ಯರು ಆಚರಿಸಲೇ ಬೇಕಾದ ಮುಖ್ಯ ಧರ್ಮಗಳು ಐದು ಎಂದಿರುವನು. ಈ ಪಂಚಧರ್ಮಗಳು ನಮ್ಮ ಜೀವನದ ಆಧಾರಸ್ತಂಭಗಳಾಗಿವೆ. ಎಲ್ಲರೂ ಲೋಪದೋಷಗಳಿಲ್ಲದೆ ಈ ಪಂಚ ಧರ್ಮಗಳನ್ನು ಆಚರಿಸಲೇಬೇಕು. ಇವು ನಮ್ಮ ಪಂಚವ್ರತಗಳಾಗಿರಬೇಕು.

ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯ ನಿಗ್ರಹಃ |
ಏತಾನ್ ಧರ್ಮಾನ್ ಸಮಾಸೇನ ಚಾತುರ್ವರ್ಣ್ಯೇಽಬ್ರವೀನ್ಮನು ||

ಮನು ಅ. ೧೦-೬೩.

[ಅಹಿಂಸಾ-ಯಾವ ಪ್ರಾಣಿಯನ್ನೂ ಹಿಂಸೆ ಮಾಡದೆ ಇರುವುದು. ಸತ್ಯ-ಸತ್ಯವನ್ನೇ ಆಡುವುದು, ಆಡಿದಂತೆ ಮಾಡುವುದು, ಮತ್ತು ಆಚರಿಸುವುದು. ಅಸ್ತೇಯಂ-ಅನ್ಯರ ವಸ್ತುಗಳನ್ನು ಕಳವು ಮಾಡದಿರುವುದು. ಶೌಚ-ಶುಚಿಯಾಗಿರುವುದು. ನಮ್ಮ ಇಂದ್ರಿಯಗಳನ್ನು ಮತ್ತು ಮನಸ್ಸನ್ನು ಪವಿತ್ರ ಅಥವಾ ನಿರ್ಮಲವಾಗಿಟ್ಟುಕೊಳ್ಳುವುದೇ ಇಂದ್ರಿಯ ನಿಗ್ರಹವು. ಏತಾನ್ ಧರ್ಮಾನ್-ಈ ಐದು ಧರ್ಮಗಳನ್ನು,ಚಾತುರ್ವರ್ಣ್ಯೇ-ನಾಲ್ಕು ವರ್ಣಗಳಲ್ಲಿಯೂ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ. ಇವು ನಾಲ್ಕು ವರ್ಣಗಳು) ಸಮಾಸೇನ-ಸರಿಸಮಾನವಾಗಿ ಎಲ್ಲರೂ ಆಚರಿಸಬೇಕು ಎಂದು ಮನು-ಮನುವು, ಅಬ್ರವೀನ್-ಹೇಳಿರುವನು.]

ಅಹಿಂಸೆ, ಸತ್ಯ, ಅಸ್ತೇಯ, ಶೌಚ ಮತ್ತು ಇಂದ್ರಿಯ ನಿಗ್ರಹ, ಇವು ಎಲ್ಲರೂ ಆಚರಿಸಬೇಕಾದ ವ್ರತಗಳಾಗಿವೆ. ಇವುಗಳನ್ನು ಎಲ್ಲಾ ವರ್ಣದವರೂ ಸರಿಸಮಾನರಾಗಿ ಆಚರಿಸಬೇಕೆಂದು ಮನುವು ಬೋಧಿಸಿರುವನು.

ಬುದ್ಧನು ಅಹಿಂಸೆಯ ಮೂರ್ತಿಮಂತ ಅವತಾರ ಎಂದು ಹೇಳಬಹುದು. ಅಹಿಂಸಾ ಪರಮೋ ಧರ್ಮ ಎಂಬುದು ಜೈನರ ಮುಖ್ಯ ಧರ್ಮವು. ಅಹಿಂಸೆಯು ಮಹಾತ್ಮಾ ಗಾಂಧೀಜಿಯ ಸತ್ಯಾಗ್ರಹದ ಮರ್ಮವು. ಅದು ಹಿಂದೂ ಧರ್ಮದ ಸಾರವು.

ನಮ್ಮ ಪೂರ್ವಿಕರು ಸತ್ಯವನ್ನು ಮಹಾವ್ರತವಾಗಿ ಆಚರಿಸುತ್ತಿದ್ದರು. 'ಸತ್ಯಮೇವ ಜಯತೆ ನಾನೃತಂ' ಸತ್ಯಕ್ಕೇನೆ ಜಯವು; ಅನೃತಕ್ಕೆ ಜಯವಲ್ಲ ಎಂಬುದು ಉಪನಿಷತ್ತಿನ ಬೋಧೆ. 'ಸತ್ಯಮೇವ ಜಯತೆ' ಎಂಬುದು ನಮ್ಮ ಸ್ವಾತಂತ್ರ್ಯದ ರಾಜ್ಯ ಚಿಹ್ನೆ. ರಾಮಾಯಣವು ಸತ್ಯದ ವ್ಯಾಖ್ಯಾನವು. ಹರಿಶ್ಚಂದ್ರ, ಶಿಬಿ ಮೊದಲಾದವರು ಸತ್ಯವನ್ನು ತಮ್ಮ ಜೀವನ ಪ್ರಧಾನ ಧರ್ಮವನ್ನಾಗಿ ಮಾಡಿಕೊಂಡ ಮಹಾಪುರುಷರು.

ಶೌಚ ಎಂದರೆ ನೈರ್ಮಲ್ಯ ಅಥವಾ ಪವಿತ್ರತೆ. ಶೌಚವು ಎರಡು ಬಗೆ: ಬಾಹ್ಯ ಮತ್ತು ಆಂತರಿಕ. ಬಾಹ್ಯ-ಎಂದರೆ, ಹೊರಗೆ, ದೇಹದ ಹೊರಗೆ ಆಂತರಿಕ ಎಂದರೆ ಒಳಗೆ ನಮ್ಮ ಶರೀರವು ಸ್ನಾನಮಾಡುವುದರಿಂದ ಶುದ್ಧವಾಗುತ್ತದೆ. ನಾವು ತೊಡುವ ಬಟ್ಟೆಗಳನ್ನು ತೊಳೆಯುವುದರಿಂದ ಅವು ನಿರ್ಮಲವಾಗುವುವು. ಇವು ಹೊರಗಿನ ಶೌಚ ಕ್ರಮವು. ನಮ್ಮ ಮನಸ್ಸು ಶುದ್ಧವಾಗಿರಬೇಕು; ಪವಿತ್ರವಾದ ವಿಷಯಗಳನ್ನು ಮಾತ್ರ ನಾವು ನೋಡಬೇಕು, ಕೇಳಬೇಕು, ಮತ್ತು ವಿಚಾರಿಸಬೇಕು. ನಮ್ಮ ಹೃದಯವು ಪವಿತ್ರ

ವಿಚಾರಗಳಿಂದ ಮಾತ್ರ ತುಂಬಿರಬೇಕು. ಆಗ ಮಾತ್ರ ನಮಗೆ ಆಂತರಿಕ ಶೌಚವು ಸಿದ್ಧಿಯಾಗುವುದು. ಇಂದ್ರಿಯ ನಿಗ್ರಹ ಎಂದರೆ ನಮ್ಮ ಎಲ್ಲಾ ಇಂದ್ರಿಯಗಳನ್ನು, ಮನಸ್ಸನ್ನು ನಮ್ಮ ಹತೋಟಿಯಲ್ಲಿ ಇಟ್ಟಿರುವುದು.

ಈ ಪ್ರಕಾರವಾದ ಪಂಚ ಧರ್ಮಾಚರಣೆಯೇ ಸಂಸಾರದಿಂದ ಪಾರಾಗುವ ಮಾರ್ಗ. ಇದುವೇ ನಮ್ಮ ಜೀವನ ರಹಸ್ಯವು.

ಧರ್ಮ ಪದದ ಅರ್ಥ ಏನೆಂದು ತಿಳಿಯಲು ಈಗ ಸಾಧ್ಯವಾಗಿದೆ. ಧೃ-ಎಂಬ ಧಾತುವಿನಿಂದ ಧರ್ಮ ಪದವು ಆಗಿದೆ. ಧೃ ಎಂದರೆ ಧರಿಸು, ಆಧರಿಸು, ಕಾಪಾಡು ಎಂದರ್ಥ. ಧರತೀತಿ ಧರ್ಮ; ಧಾರಣಾದ್ಧರ್ಮಃ. ಧರ್ಮವು ನಮ್ಮನ್ನು ಧಾರಣಮಾಡುತ್ತದೆ.ಅದು ನಮ್ಮನ್ನು ಪೋಷಿಸುತ್ತದೆ. ಧರ್ಮವು ಧಾರಣೆ ಮಾಡುತ್ತದೆ. ಧರ್ಮವು ಪ್ರಜೆಗಳನ್ನು ಧಾರಣೆಮಾಡುತ್ತದೆ ಅಥವಾ ಪೋಷಿಸುತ್ತದೆ. ಆದಕಾರಣ ಧಾರಣೆಸಂಯುಕ್ತವಾಗಿರುವುದೇ ಧರ್ಮ ಎಂದು ಶ್ರೀ ಕೃಷ್ಣನು ಮಹಾಭಾರತದಲ್ಲಿ ವಿವರಿಸಿರುವನು.

ಧಾರಣಾದ್ಧರ್ಮಮಿತ್ಯಾಹುರ್ಧರ್ಮೋ ಧಾರಯತೇ ಪ್ರಜಾಃ |
ಯಸ್ಮಾದ್ಧಾರಣ ಸಂಯುಕ್ತಂ ಸ ಧರ್ಮ ಇತಿ ನಿಶ್ಚಯಃ |

ಕರ್ಣಪರ್ವ ಅ. ೬೯—ಶ್ಲೋಕ ೫೯.

ಧಾರಣ ಮಾಡುವುದರಿಂದ ಧರ್ಮ ಎಂದು ಹೇಳಲಾಗಿದೆ ಧರ್ಮವು ಪ್ರಜೆಗಳನ್ನು ಧಾರಣೆ ಅಥವಾ ಪೋಷಣೆ ಮಾಡುತ್ತದೆ. ಆದಕಾರಣ ಧಾರಣೆ ಸಂಯುಕ್ತವಾಗಿರುವುದು ಧರ್ಮ ಎಂಬುದು ನಿಶ್ಚಯವು.

---

## ೪. ಇಂದ್ರಿಯ ಜ್ಞಾನ ಮತ್ತು ಸಂಸ್ಕಾರ

ನಾವು ಬಾಯಿಯಿಂದ ಆಹಾರವನ್ನು ತಿನ್ನುತ್ತೇವೆ. ನಾವು ಕೈಗಳಿಂದ ಬರೆಯುವ, ಹಿಡಿಯುವ, ಹೊಡೆಯುವ ಮೊದಲಾದ ಕೆಲಸಗಳನ್ನು ಮಾಡುತ್ತೇವೆ. ಕಾಲುಗಳಿಂದ ನಾವು ನಡೆಯುತ್ತೇವೆ. ದೇಹದ ಕಲ್ಮಶಗಳನ್ನು ಮಲ ಮತ್ತು ಮೂತ್ರ ಅಂಗಗಳು ಹೊರಕ್ಕೆ ಹಾಕುತ್ತವೆ. ಹೀಗೆ ಐದು ಬಗೆಯ ಚಲನೆ ಅಥವಾ ಗತಿಯ ಕಾರ್ಯಗಳು ನಮ್ಮ ದೇಹದಲ್ಲಿ ಆಗುತ್ತಿವೆ. ಕೆಲಸ ಅಥವಾ ಕರ್ಮ ಮಾಡುವ ಬಾಯಿ, ಕೈ, ಕಾಲು, ಮಲ ಮತ್ತು ಮೂತ್ರ ಈ ಅಂಗಗಳನ್ನು ಅಥವಾ ಇಂದ್ರಿಯಗಳನ್ನು ಕರ್ಮೇಂದ್ರಿಯಗಳು ಎಂದು ಕರೆಯುತ್ತಾರೆ.

ನಾವು ಕಣ್ಣುಗಳಿಂದ ನೋಡುತ್ತೇವೆ. ಕಿವಿಗಳಿಂದ ನಾವು ಕೇಳುತ್ತೇವೆ. ಮೂಗಿನಿಂದ ವಾಸನೆ ಅಥವಾ ಪರಿಮಳವನ್ನು ನಾವು ತಿಳಿಯುತ್ತೇವೆ. ನಾಲಗೆಯಿಂದ ದ್ರವ್ಯಗಳ, ರಸಗಳ ರುಚಿಯನ್ನು ನಾವು ತಿಳಿಯುತ್ತೇವೆ. ಮತ್ತು ಚರ್ಮದಿಂದ ವಸ್ತುಗಳ ಸ್ವಭಾವ, ಮೆತ್ತಗಿದೆಯೋ, ಮೃದುವೋ ಗಟ್ಟಿಯಾಗಿದೆಯೋ ಎಂದು ತಿಳಿಯುತ್ತೇವೆ.

ಕಣ್ಣಿನ ಗೊಂಬೆಯ ರಂಧ್ರದ ಮೂಲಕ ಬೆಳಕಿನ ಕಿರಣಗಳು ಪ್ರವೇಶಿಸುತ್ತವೆ. ಕಣ್ಣಿನ ನರತಂತುಗಳ ಮೇಲೆ ಆ ಕಿರಣಗಳು ಬಡಿದು ಅಲುಗಾಟ ಅಥವಾ ಕಂಪನೆಯನ್ನು ಉಂಟುಮಾಡುತ್ತವೆ. ನರಗಳು ಈ ಕಂಪನೆಯನ್ನು ಮನಸ್ಸಿಗೆ ಸಾಗಿಸುತ್ತವೆ. ಆಗ ಮನಸ್ಸಿಗೆ ಬೆಳಕಿನ ತಿಳಿವಾಗುವುದು.

ಶಬ್ದವು ಅಲೆಗಳ ಮೂಲಕ ಒಂದೆಡೆಯಿಂದ ಇನ್ನೊಂದು ಕಡೆಗೆ ಸಾಗುತ್ತದೆ. ಶಬ್ದದ ಅಲೆಗಳು ಬಂದು ಹೊರ ಕಿವಿಯ ಮೇಲೆ ಬಡಿದರೆ ಕಿವಿಯ ನರತಂತುಗಳಲ್ಲಿ ಕಂಪನೆ ಆಗುತ್ತದೆ. ನರಗಳು ಆ ಕಂಪನೆಯನ್ನು ಮನಸ್ಸಿಗೆ ಮುಟ್ಟಿಸುತ್ತವೆ. ಆಗ ನಮಗೆ ಶಬ್ದದ ಜ್ಞಾನವಾಗುವುದು.

ಈ ಪ್ರಕಾರವೇ ನಮಗೆ ವಾಸನೆ ಅಥವಾ ಪರಿಮಳ, ರುಚಿ, ವಸ್ತುಗಳ ಸ್ವಭಾವಗಳು ತಿಳಿಯಬರುತ್ತದೆ

ಕಣ್ಣುಗಳು, ಕಿವಿಗಳು, ಚರ್ಮ, ನಾಲಗೆ ಮತ್ತು ಮೂಗು ಇವು ನಮಗೆ ವಸ್ತುಗಳ ಗುಣ, ಸ್ವಭಾವ ಮೊದಲಾದ ಜ್ಞಾನವನ್ನು ಒದಗಿಸಿ ಕೊಡುತ್ತವೆ. ಆದಕಾರಣ ಇವುಗಳನ್ನು ನಮ್ಮ ಹಿರಿಯರು ಪಂಚ ಜ್ಞಾನೇಂದ್ರಿಯುಗಳು ಎಂದು ಕರೆದರು. ಇವು ನಮಗೆ ಜ್ಞಾನವನ್ನು ಒದಗಿಸುವ ಮಾರ್ಗಗಳು.

ಪಂಚ ಕರ್ಮೇಂದ್ರಿಯ ಮತ್ತು ಪಂಚ ಜ್ಞಾನೇಂದ್ರಿಯುಗಳನ್ನು ಮನಸ್ಸು ಆಳುತ್ತದೆ. ಮನಸ್ಸು ಇವುಗಳನ್ನು ನಿಗ್ರಹಿಸುತ್ತದೆ.

ಜ್ಞಾನೇಂದ್ರಿಯುಗಳಿಂದ ಬರುವ ಕಂಪನೆ ಅಥವಾ ಸಂವೇದನೆಗಳ ಅನುಭವವನ್ನು ಮನಸ್ಸು ಸ್ವೀಕರಿಸುತ್ತದೆ. ಆಗ ಬುದ್ಧಿಯು ಈ ಅನುಭವವನ್ನು ವಿಚಾರಿಸುತ್ತದೆ. "ನಾನು" "ನನ್ನದು" ಎಂದು ಮಾಡುವ ಅಹಂಕಾರವು ತನಗೆ ಇಷ್ಟವಿರುವ ಅನುಭವವನ್ನು ತನ್ನದಾಗಿ ಮಾಡುತ್ತದೆ. ಮನಸ್ಸು, ಬುದ್ಧಿ ಮತ್ತು ಅಹಂಕಾರ ಇವು ಮೂರು ಚಿತ್ತ ಎಂಬುದರ

ಮೂರು ಸ್ವರೂಪವಾಗ್ಗಿವೆ. ಇವುಗಳ ಕೆಲಸವನ್ನು ಈ ಕೆಳಗಿನ ನಿದರ್ಶನವು ಚೆನ್ನಾಗಿ ವಿವರಿಸುತ್ತದೆ.

ಒಂದು ಪ್ರಾಣಿಯು ಇತ್ತ ಓಡಿ ಬರುತ್ತದೆ. ಆಗ ಕಣ್ಣು ಈ ದೃಶ್ಯವನ್ನು ಮನಸ್ಸಿಗೆ ತಿಳಿಸುತ್ತದೆ. ಬುದ್ಧಿಯು ಅದೇನೆಂದು ವಿಚಾರಿಸುತ್ತದೆ. ಅದೊಂದು ಎತ್ತು ಎಂದು ನಿಶ್ಚಯಿಸುತ್ತದೆ. ಆಗ ಅಹಂಕಾರವು "ಇದು ನನ್ನ ಎತ್ತಲ್ಲ; ಹೋಗಲಿ" ಎಂದು ಈ ಅನುಭವವನ್ನು ಅಲಕ್ಷ್ಯಮಾಡುತ್ತದೆ.

ಆ ಮೇಲೆ ಇನ್ನೊಂದು ವಿಚಾರ ಕಣ್ಣು ಮುಂದೆ ಬರುತ್ತದೆ. ವಿಚಾರಿಸುತ್ತ ಅದು ಒಂದು ದನವೆಂದು ಬುದ್ಧಿಯು ನಿರ್ಧರಿಸುತ್ತದೆ. ಆಗ ಅಹಂಕಾರವು "ಇದು ನನ್ನ ದನ; ನಿನ್ನೆಯಿಂದ ಮನೆಗೆ ಬಾರದ ದನ" ಎಂದು ಈ ಅನುಭವವನ್ನು ತನ್ನದಾಗಿ ಮಾಡುತ್ತದೆ. ಕೂಡಲೇ ಆ ಮನುಷ್ಯನು ಆ ದನವನ್ನು ಕರೆದು ಹಟ್ಟಿಯಲ್ಲಿ ಕಟ್ಟುವನು. ಅಹಂಕಾರವು ತನ್ನದಾಗಿ ಮಾಡಿದ ಅನುಭವದಂತೆ ಮನುಷ್ಯನು ವರ್ತಿಸುತ್ತಾನೆ. ಅದು ಅವನ ಸ್ವಭಾವ.

ಜೀವನು ಜ್ಞಾನೇಂದ್ರಿಯ ಮತ್ತು ಮನಸ್ಸು ಇವುಗಳಲ್ಲಿ ನೆಲಸಿ ವಿಷಯಗಳನ್ನು ಈ ಪ್ರಕಾರ ಅನುಭವಿಸುತ್ತಾನೆ. ಶ್ರೀ ಕೃಷ್ಣನು ಈ ರಹಸ್ಯವನ್ನು ಈ ಪ್ರಕಾರ ವಿವರಿಸಿರುವನು:

> ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವಚ।
> ಅಧಿಷ್ಠಾಯ ಮನಶ್ಚಾಯ ವಿಷಯಾನುಪಸೇವತೆ॥
>
> ಗೀತಾ: ಅ. ೧೫-೯.

[ಜೀವನು-ಶ್ರೋತ್ರಂ--ಕಿವಿ, ಚಕ್ಷುಃ—ಕಣ್ಣು, ಸ್ಪರ್ಶನಂ—ಸ್ಪರ್ಶ ಮಾಡುವ ಚರ್ಮ, ಚ--ಮತ್ತು, ರಸನಂ--ರಸವನ್ನು ತಿಳಿಯುವ ನಾಲಗೆ, ಘ್ರಾಣಂ—ಮೂಸಿ ತಿಳಿಯುವ ಮೂಗು, ಚ--ಮತ್ತು, ಮನಃ--ಮನಸ್ಸು, ಇವುಗಳಲ್ಲಿ ಅಧಿಷ್ಠಾಯ--ಅಧಿಕರಿಸಿ, ವಿಷಯಾನ್--ವಿಷಯಗಳನ್ನು, ಉಪ ಸೇವತೆ--ಅನುಭವಿಸುತ್ತಾನೆ.]

೨

ನೀರಿನ ಮೇಲೆ ಒಂದು ಕಲ್ಲನ್ನು ಎಸೆದರೆ ಏನಾಗುತ್ತದೆ? ಆ ಕಲ್ಲು ಬಿದ್ದಲ್ಲಿ ನೀರಿನ ಅಲೆಗಳು ಉಂಟಾಗುತ್ತವೆ. ಒಂದರ ನಂತರ ಇನ್ನೊಂದು ಅಲೆ ಏಳುತ್ತದೆ. ಅಲೆಗಳು ಸುತ್ತುತ್ತಾ ದಡದ ವರೆಗೆ ಸಾಗಿ ಬಡಿಯುತ್ತವೆ.

ಹಾಗೆಯೇ ಇಂದ್ರಿಯಗಳಿಂದ ಬರುವ ಸಂವೇದಗಳು ಮನಸ್ಸಿನಲ್ಲಿ ಅಲೆಗಳನ್ನು ಎಬ್ಬಿಸುತ್ತವೆ. ಈ ಪ್ರಕಾರದ ವಿಚಾರದ ಅಲೆಗಳನ್ನು ಅಥವಾ ಚಿಂತನೆಯ ಸ್ವಭಾವವನ್ನು 'ಚಿತ್ತವೃತ್ತಿ' ಎಂದು ನಮ್ಮ ಪೂರ್ವಿಕರು ಕರೆದರು.

ಅಲೆಗಳು ನಮ್ಮ ಮನಸ್ಸಿನಲ್ಲಿ ಒಂದರ ನಂತರ ಇನ್ನೊಂದು ಏಳುತ್ತಿರುತ್ತವೆ. ಆ ಮೇಲೆ ಅವು ಅಡಗುತ್ತವೆ. ಮನಸ್ಸಿನಲ್ಲಿ ಈ ಅಲೆಗಳಿಂದ ಆಗುವ ಅನುಭವವನ್ನು 'ಸಂಸ್ಕಾರ' ಎಂದು ಕರೆಯುತ್ತಾರೆ. ಕೆಲವು ಸಂಸ್ಕಾರಗಳು ನಮ್ಮ ನೆನಪಿಗೆ ಬರುತ್ತವೆ. ಕೆಲವು ಸಂಸ್ಕಾರಗಳು ನೆನಪಿಗೆ ಬರುವುದಿಲ್ಲ.

ಅಲೆಗಳು ತಮ್ಮ ಸ್ವಭಾವವನ್ನು ನಮ್ಮ ಮನಸ್ಸಿನಲ್ಲಿ ಮುದ್ರಿಸುತ್ತವೆ. ಇವೇ ಅಲೆಗಳ ಸಂಸ್ಕಾರ. ಒಂದೇ ವಿಧದ ಅಲೆಗಳು ಬರುತ್ತಿದ್ದರೆ ಅವುಗಳು ಅಭ್ಯಾಸವಾಗಿ ನೆಲಸುತ್ತವೆ. ಕಾಲಕ್ರಮದ ಅಭ್ಯಾಸದಿಂದ ಅವು ಹುಟ್ಟುಗುಣ ಅಥವಾ ಸ್ವಭಾವವಾಗಿ ಪರಿಣಮಿಸುತ್ತವೆ. ಒಳ್ಳೆಯ ಸಂಸ್ಕಾರದಿಂದ ಒಳ್ಳೆಯ ಸ್ವಭಾವವು ಆಗುತ್ತದೆ. ಕೆಟ್ಟ ಸಂಸ್ಕಾರಗಳಿಂದ ಕೆಟ್ಟ ಸ್ವಭಾವ, ಚಾಳಿ ಅಥವಾ ನಡತೆಯಾಗಿ ಪರಿಣಮಿಸುತ್ತದೆ. ಸಂಸ್ಕಾರದ ಸಂಚಯವನ್ನು ನಡತೆ, ಶೀಲ, ಸ್ವಭಾವ, ಆಚಾರ ಅಥವಾ ಚಾರಿತ್ರ್ಯ ಎಂದು ಕರೆಯುತ್ತಾರೆ.

ನಮ್ಮ ಸಂಸ್ಕಾರಗಳು ಒಂದೇ ಜೀವಮಾನದಲ್ಲಿ ಆದವುಗಳಲ್ಲ. ಆಗಲೂ ಸಾಧ್ಯವೇ ಇಲ್ಲ. ಮಗುವು ಅನೇಕ ಸಂಸ್ಕಾರಗಳೊಡನೆ ಹುಟ್ಟುತ್ತದೆ. ಹಿಂದಿನ ಜನ್ಮದಲ್ಲಿ ಮಾಡಿದ ಸಂಸ್ಕಾರದೊಡನೆ ನಾವು ಹುಟ್ಟುತ್ತೇವೆ. ಅನುದಿನದ ಜೀವನದಲ್ಲಿ ನಾವು ಅನೇಕ ಸಂಸ್ಕಾರಗಳನ್ನು ಬೆಳೆಯಿಸುತ್ತಿದ್ದೇವೆ. ಹಿಂದಿನ ಜನ್ಮದಲ್ಲಿ ಮಾಡಿದ ಸಂಸ್ಕಾರಗಳ ಪರಿಣಾಮವಾಗಿ ನಮ್ಮ ಸ್ವಭಾವ, ಅಥವಾ ಗುಣಗಳು ಎಂದು ನಮ್ಮ ಪೂರ್ವಿಕರ ಮತವು. ಆದರೆ ಈಗಿನ ವಿಜ್ಞಾನಿಗಳು ಇವೆಲ್ಲಾ 'ಆನುವಂಶಿಕ' (hereditory) ಎಂದು ಈ ಸಂಸ್ಕಾರ ವಾದವನ್ನು ತಾತ್ಸಾರ ಮಾಡುತ್ತಾರೆ. ಆದರೆ ಸಂಸ್ಕಾರಗಳಿಂದ ಆಗುವ ಒಳ್ಳೆಯ ಅಥವಾ ಕೆಟ್ಟ ಪರಿಣಾಮಗಳನ್ನು ನಾವೇ ಅನುಭವಿಸಬೇಕಾಗಿದೆ. ಯಾವ ವಿಜ್ಞಾನಿಗಳ ಯಂತ್ರ,ಶಸ್ತ್ರಗಳಿಂದಲೂ ಇವುಗಳನ್ನು ಬಗೆಹರಿಸಲು ಸಾಧ್ಯವಾಗಲಿಲ್ಲ. ಆದರೆ ಇವುಗಳನ್ನು ಪರಿಹರಿಸಲು "ಧರ್ಮ" ಎಂಬ ದಿವ್ಯ ಮಾರ್ಗವನ್ನು ನಮ್ಮ ಪೂರ್ವಿಕರು ತೋರಿಸಿದ್ದಾರೆ: ಆದುದರಿಂದಲೇ ಮನುವು 'ಧರ್ಮೇಣ ಸಹಾಯೇನ ತಮಸ್ತರತಿ ದುಸ್ತರಮ್' ಎಂದಿರುವನು.

೩

ಒಂದು ಬೀಜವನ್ನು ನೆನಸಿ ಇಟ್ಟರೆ ಅದು ಕೆಲವು ದಿವಸಗಳಲ್ಲಿ ಮೊಳೆಯುವುದನ್ನು ಕಾಣಬಹುದು. ಈ ಮೊಳಕೆ ಎಲ್ಲಿತ್ತು? ಅದು ಸೂಕ್ಷ್ಮವಾದ ಸಂಸ್ಕಾರರೂಪದಲ್ಲಿ ಆ ಬೀಜದಲ್ಲಿ ಅಡಗಿತ್ತು. ಆ ಸಂಸ್ಕಾರಗಳು ಮೊಳಕೆ ರೂಪದಿಂದ ಈಗ ಪ್ರಕಟವಾಗಿವೆ. ಹಾಗೆಯೇ ನಮ್ಮ ಸೂಕ್ಷ್ಮ ಸಂಸ್ಕಾರಗಳು ಸತ್ತ ಮೇಲೆ ಸೂಕ್ಷ್ಮ ಶರೀರದಲ್ಲಿ ಇದ್ದು ಹೊಸ ಜನ್ಮಕ್ಕೆ ಕಾರಣವಾಗುವುವು.

ಆದಕಾರಣ ನಮ್ಮ ಸಂಚಿತ ಎಂದರೆ ಹಿಂದೆ ಮಾಡಿದ್ದ ಸಂಸ್ಕಾರಗಳನ್ನು ಮತ್ತು ನಮ್ಮ ಈ ಶರೀರದ ಹುಟ್ಟು ದೋಷಗಳನ್ನು ಪರಿಹರಿಸಲು ಒಂದು ಕ್ರಮವನ್ನು ನಮ್ಮ ಪೂರ್ವಿಕರು ಏರ್ಪಡಿಸಿದ್ದರು. ಅವುಗಳನ್ನು ವೇದದಲ್ಲಿ ಹೇಳಿರುವುದರಿಂದ ವೈದಿಕ ಕರ್ಮಗಳೆಂದು ಕರೆಯುತ್ತಾರೆ. ಅವುಗಳನ್ನು ನಮ್ಮ ಸಂಚಿತಾದಿ ಸಂಸ್ಕಾರಗಳನ್ನು ಹೋಗಲಾಡಿಸುವುದಕ್ಕಾಗಿ ಮಾಡುವು ದರಿಂದ "ವೈದಿಕ ಸಂಸ್ಕಾರ" ಎಂದು ಕರೆದಿರುವುದು ಪ್ರಶಸ್ತವಾಗಿದೆ.

ಮಗುವಾಗಿ ಹುಟ್ಟುವ ಮೊದಲು ನಮ್ಮ ಶರೀರದ ದೋಷ ಪರಿಹಾರಕ್ಕಾಗಿ ಗರ್ಭಾದಾನ, ಪುಂಸವನ, ಸ್ತ್ರೀಮಂತ ಎಂಬ ಮೂರು ಸಂಸ್ಕಾರಗಳನ್ನು ಮಾಡುತ್ತಾರೆ. ಆ ಮೇಲೆ ಮಗುವಿನ ಜಾತ ಮತ್ತು ನಾಮಕರಣ ಸಂಸ್ಕಾರವನ್ನು ಮಾಡುತ್ತಾರೆ. ನಾಲ್ಕನೆ ತಿಂಗಳಲ್ಲಿ ನಿಷ್ಕ್ರಮಣ ಸಂಸ್ಕಾರವನ್ನು ಮಾಡುತ್ತಾರೆ. ಆ ಮೇಲೆ ನಿಯಮಿತ ಕಾಲದಲ್ಲಿ ಅನ್ನಪ್ರಾಶನ, ಚೂಡಾಕರ್ಮ (ಚೌಲಕರ್ಮ), ಉಪನಯನ, ಸಮಾವರ್ತನ, ವಿವಾಹ, ಅಂತ್ಯೇಷ್ಟಿ ಮೊದಲಾದ ಸಂಸ್ಕಾರಗಳನ್ನು ಮಾಡುತ್ತಾರೆ. ಈ ಶರೀರ ಸಂಸ್ಕಾರಗಳ ಮುಖ್ಯ ಉದ್ದೇಶವನ್ನು ಮನುವು ಈ ಪ್ರಕಾರ ಹೇಳಿರುವನು.

ಕಾರ್ಯಃ ಶರೀರ ಸಂಸ್ಕಾರಃ ಪಾವನಃ ಪ್ರೇತ್ಯ ಚೇಹ ಚ॥

ಅ. ೨-೨೬.

[ಇಹ--ಈ ಲೋಕದಲ್ಲಿ ಎಂದರೆ ನಮ್ಮ ಈ ಜೀವಿತ ಕಾಲದಲ್ಲಿ, ಚ--ಮತ್ತು, ಪ್ರೇತ್ಯ--ಮರಣಾನಂತರ, ಪಾವನಃ-ಪವಿತ್ರವಾದ, ಶರೀರ ಸಂಸ್ಕಾರ--ಶರೀರ ಸಂಸ್ಕಾರಗಳನ್ನು, ಕಾರ್ಯಃ--ಮಾಡಲೇ ಬೇಕು.]

ಅಹಿಂಸಾ, ಸತ್ಯ, ಅಸ್ತೇಯ, ಶೌಚ ಮತ್ತು ಇಂದ್ರಿಯ ನಿಗ್ರಹ ಎಂಬೀ ಪಂಚ ವ್ರತಗಳು ನಮ್ಮ ಧರ್ಮದ ಮೊದಲನೆಯ ಮೆಟ್ಟಲು.

ವೈದಿಕ ಸಂಸ್ಕಾರಗಳು ನಾವು ಆಚರಿಸಬೇಕಾದ ಧರ್ಮದ ಎರಡನೆಯ ಮೆಟ್ಟಿಲಾಗಿದೆ. ನಮ್ಮ ಮೂಲ ಅಧಿಕಾರವಾದ 'ಉಪಾಸನೆ' ಎಂಬುದು ನಮ್ಮ ಧರ್ಮದ ಮೂರನೆ ಮೆಟ್ಟಿಲು. ಉಪಾಸನೆ ಏನೆಂದು ವಿಚಾರಿಸುವ.

■■■■■■■■■

## ೫. ಉಪಾಸನೆ

ಅಕ್ಬರ ಬಾದಶಹನು ದೇಹಲಿಯಲ್ಲಿ ಚಕ್ರವರ್ತಿಯಾಗಿದ್ದನು. ಅವನ ಆಸ್ಥಾನದಲ್ಲಿ ಬೀರ್ಬಲನೆಂಬ ಪ್ರಸಿದ್ಧ ಪುರುಷನಿದ್ದನು. ಒಂದು ದಿನ ಅಕ್ಬರನು ಬೀರ್ಬಲನನ್ನು ಕರೆದು ಹೀಗೆಂದನು, "ಬೀರ್ಬಲ್, ನಮ್ಮ ಮುಸ್ಲೀಮ್ ಧರ್ಮದಲ್ಲಿ ಅಲ್ಲಾ ಒಬ್ಬನೇ ದೇವರು. ಕ್ರಿಸ್ತರಿಗೂ ಒಬ್ಬನೇ ದೇವರು. ಆದರೆ ಹಿಂದೂ ಜನರಾದ ನಿಮಗೆ ಲೆಕ್ಕ ಸಂಖ್ಯೆ ಇಲ್ಲದ ದೇವರಂತೆ. ಇದೇನು ಬೀರ್ಬಲ್?"

ಬೀರ್ಬಲನು ಬಹು ಜ್ಞಾನಿಯು. ಅವನು ಈ ಪ್ರಕಾರವಾಗಿ ಉತ್ತರವಿತ್ತನು: "ಬಾದಶಹ ನಮಗೆ ಒಬ್ಬನೇ ದೇವರು. ಆದರೆ ಅವನನ್ನು ಬಹುವಿಧವಾಗಿ ಕರೆದಿರುವರು.

ಆದಕ್ಕೆ ಅಕ್ಬರನು, "ಬೀರ್ಬಲ್! ಇದೆಲ್ಲಾ ನಿನ್ನ ಬುದ್ಧಿವಂತಿಕೆಯ ಮಾತು. ಮೂವತ್ತಮೂರು ಕೋಟಿ ದೇವರು ಹಿಂದೂಗಳಿದ್ದಾರೆಂದು ನಮ್ಮ ಕಾಜಿ ಹೇಳುತ್ತಾರೆ."

ಬೀರ್ಬಲನು, "ಬಾದಶಹಾ! ನಮಗೆ ದೇವರು ಒಬ್ಬನೆ! ಒಬ್ಬನನ್ನು ಮಗನು ತಂದೆ ಎಂದು ಕರೆಯುತ್ತಾನೆ, ಹೆಂಡತಿ ಪತಿ ಎಂದು ಸಂಬೋಧಿಸುತ್ತಾಳೆ. ಅವನ ತಮ್ಮಂದಿರು ಅಣ್ಣಾ ಎಂದು ಕರೆಯುತ್ತಾರೆ. ಕೆಲವರು ಭಾವ, ಮಾವ ಈ ಮೊದಲಾಗಿ ಕರೆಯುತ್ತಾರೆ. ಆದರೆ ವ್ಯಕ್ತಿ ಒಬ್ಬನೆ; ಹೆಸರು ಮಾತ್ರ ಬೇರೆ ಬೇರೆ."

ಆಗ ಅಕ್ಬರನು "ಬೀರ್ಬಲ್! ಇದಕ್ಕೇನು ರುಜುವಾತು?" ಬೀರ್ಬಲನು ಹೀಗೆ ಉತ್ತರವಿತ್ತನು: "ಬಾದಶಹಾ! ಇದಕ್ಕೆ ಸಾವಿರಾರು ಪ್ರಮಾಣಗಳಿವೆ. ನಮ್ಮ ಋಗ್ವೇದವು ಈ ಪ್ರಕಾರ ಉದ್ಘೋಷಿಸುತ್ತದೆ:

ಏಕಂ ಸದ್ವಿಪ್ರಾ ಬಹುಧಾ ವದಂತಿ ।
ಅಗ್ನಿಂ ಯಮಂ ಮಾತರಿಶ್ವಾನಮಾಹುಃ ॥

ಋಗ್ವೇದ ೧—೧೬೪—೪೬.

[ಏಕಂ-ಒಂದೇ ಒಂದಾದ, ಸತ್-ಪರಮಾತ್ಮನನ್ನು, ವಿಪ್ರಾ-ಜ್ಞಾನಿಗಳು, ಬಹುಧಾ-ಅನೇಕ ಪ್ರಕಾರವಾಗಿ, ಅನೇಕ ಹೆಸರುಗಳಿಂದ, ವದಂತಿ-ಹೇಳುತ್ತಾರೆ. ಈ ಏಕ ದೇವರನ್ನು, ಅಗ್ನಿಂ-ಅಗ್ನಿ ಎಂದೂ, ಯಮಂ-ಯಮನೆಂದೂ, ಮಾತರಿಶ್ವಾನಂ-ವಾಯುದೇವನೆಂದೂ, ಆಹುಃ-ಹೇಳುತ್ತಾರೆ]

ಒಬ್ಬನೇ ಒಬ್ಬನಾಗಿರುವ ಪರಮಾತ್ಮ ಅಥವಾ ಈಶ್ವರನನ್ನು, ಅಗ್ನಿ, ಯಮ, ವಾಯು, ಇಂದ್ರ, ಮಿತ್ರವರುಣ ಈ ಪ್ರಕಾರ ಅನೇಕ ಹೆಸರುಗಳಿಂದ ಜ್ಞಾನಿಗಳು ಕರೆಯುತ್ತಾರೆ.

ಹಿರಣ್ಯಗರ್ಭ ಸಮವರ್ತತಾಗ್ರೆ ।
ಭೂತಸ್ಯ ಜಾತಃ ಪತಿರೇಕ ಆಸೀತ್ ॥

ಋಗ್ವೇದ ೧೦—೧೨೧—೧.

[ಅಗ್ರೇ-ಆದಿಯಲ್ಲಿ, ಸೃಷ್ಟಿಯ ಆರಂಭದಲ್ಲಿ, ಹಿರಣ್ಯಗರ್ಭ-ಪ್ರಕಾಶವಾದ ಎಲ್ಲವನ್ನು ಗರ್ಭರೂಪದಲ್ಲಿ ಧರಿಸಿರುವ ಪರಮಾತ್ಮನು, ಈಶ್ವರನು, ಸಂವರ್ತತೆ-ವಿದ್ಯಮಾನನಾಗಿದ್ದನು. ಈ ಈಶ್ವರನೇ, ಭೂತಸ್ಯ-ಎಲ್ಲಾ ಸೃಷ್ಟಿಯ, ಜಾತ-ತಿಳಿದ, ಏಕ-ಒಬ್ಬನೇ, ಪತಿ-ಸ್ವಾಮಿ, ಒಡೆಯ, ಆಸೀತ್-ಆಗಿರುವನು]

ಆದಿಯಲ್ಲಿ ಎಲ್ಲಾ ಸೃಷ್ಟಿಯನ್ನು ಧರಿಸಿದ ಮತ್ತು ತಿಳಿದ ಈಶ್ವರನೊಬ್ಬನೇ ಎಲ್ಲವುಗಳ ಪತಿಯಾಗಿ ಇರುವನು.

ಬೀರ್ಬಲನು ಇನ್ನೂ ಪ್ರಮಾಣಗಳನ್ನು ಹೇಳುವುದರಲ್ಲಿದ್ದನು. ಅಷ್ಟರಲ್ಲಿ ಬಾದಷಹನು "ಬೀರ್ಬಲ್! ನಿನ್ನ ರುಜುವಾತು ನಮಗೇನೂ ಅರ್ಥವಾಗುವುದಿಲ್ಲ. ಅದಿರಲಿ; ಹಾಗಾದರೆ ನಿಮ್ಮ ದೇವರು ಎಲ್ಲಿದ್ದಾನೆಂದು ತೋರಿಸು. ನಾವು ನೋಡಬೇಕು."

ಬೀರ್ಬಲನಿಗೆ ಇನ್ನೂ ಕಷ್ಟದ ಪ್ರಸಂಗವು ಬಂದೊದಗಿತು. "ನಿಮ್ಮ ಅಲ್ಲಾ ಎಲ್ಲಿದ್ದಾನೆ" ಎಂದು ಕೇಳಿದರೆ ಬಾದಶಹನು ರೇಗುವನು. ಅಲ್ಲಾನನ್ನು ಕಾಣದ ಬಾದಶಹನಿಗೆ ಹಿಂದೂದೇವರನ್ನು ತೋರಿಸಬೇಕಂತೆ. ಇದಕ್ಕೆ ತಪ್ಪಿದರೆ ಗಲ್ಲಿಗೇರಿಸುವ ದಂಡನೆ.

ಬೀರ್ಬಲನು ಹೀಗೆಂದನು: "ಬಾದಶಹಾ! ನಮ್ಮ ಈ ದೇವರು ಎಲ್ಲರ ಹೃದಯದಲ್ಲಿದ್ದಾನೆ."

ಅಕ್ಬರ: "ಅದು ಹೇಗೆ ಬೀರ್ಬಲ್!"

ಬೀರ್ಬಲನು "ಬಾದಶಹಾ! ಹಾಲಿನಲ್ಲಿ ಏನೂ ಕಾಣುವುದಿಲ್ಲ. ಆದರೆ ಅದನ್ನು ಕಡೆದರೆ ಬೆಣ್ಣೆ ಬರುತ್ತದೆ. ಎಳ್ಳಿನಲ್ಲಿ ಏನೂ ಇಲ್ಲ. ಆದರೆ ಅದನ್ನು ಹಿಂಡಿದರೆ ಎಣ್ಣೆ ಬರುತ್ತದೆ. ಹಾಗೆಯೇ ನಮ್ಮ ಹೃದಯದಲ್ಲಿರುವ ದೇವರನ್ನು ಉಪಾಸನೆ ಮಾಡಿದರೆ ಅವನನ್ನು ಕಾಣಬಹುದು. ತುಳಸೀ ದಾಸರು ಹೀಗೆ ಈ ವಿಚಾರವನ್ನು ಹಾಡಿದ್ದಾರೆ.

ಭವಾನಿ ಶಂಕರೌ ವಂದೇ ಶ್ರದ್ಧಾ ವಿಶ್ವಾಸ ರೂಪಿಣೌ
ಯಾಭ್ಯಾಂ ವಿನಾ ನ ಪಶ್ಯನ್ತಿ ಸಿದ್ಧಾಃ ಸ್ವಾನ್ತಃಸ್ಥಮೀಶ್ವರಮ್

ರಾಮಾಯಣ, ಬಾಲಕಾಂಡ—೨.

ನಮ್ಮೆಲ್ಲರ ಹೃದಯದಲ್ಲಿ ಈಶ್ವರನು ನೆಲಸಿರುವನು. ಈ ಪ್ರಕಾರ ಸ್ವಾನ್ತಸ್ಥಂ-ಸ್ವ-ನಮ್ಮ, ಅಂತಸ್ಥ-ಅಂತರ್ಯದಲ್ಲಿ, ನಮ್ಮ ಹೃದಯದಲ್ಲಿ ನೆಲಸಿರುವ, ಈಶ್ವರಂ-ಈಶ್ವರನನ್ನು, ಶ್ರದ್ಧೆ ಮತ್ತು ವಿಶ್ವಾಸಗಳಿಂದ ವಂದಿಸ ಬೇಕು. ಶ್ರದ್ಧೆ ಮತ್ತು ವಿಶ್ವಾಸಗಳಿಲ್ಲದೆ ನಮ್ಮ ದೇವರು ಸಿದ್ಧರಿಗೂ ಕಾಣ ಸಿಗುವುದಿಲ್ಲ. ಪ್ರಾಜ್ಞರು ಈ ಪ್ರಕಾರ ಶ್ರದ್ಧೆಯನ್ನು ಭವಾನಿ ಎಂತಲೂ ವಿಶ್ವಾಸವನ್ನು ಶಂಕರನೆಂತಲೂ ಕರೆದಿದ್ದಾರೆ.

ಕೃಷ್ಣನು ಗೀತೆಯಲ್ಲಿ ಈ ಪ್ರಕಾರ ಸ್ಪಷ್ಟಪಡಿಸಿದ್ದಾನೆ.

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।
ಭ್ರಾಮಯನ್ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ ।

ಗೀತಾ ೧೮—೬೧.

[ಅರ್ಜುನ-ಹೇ ಅರ್ಜುನನೆ! ಈಶ್ವರಃ-ಈಶ್ವರನು, ಮಾಯಯಾ-ತನ್ನ ಮಾಯಾ ಶಕ್ತಿಯಿಂದ, ಯಂತ್ರಾರೂಢಾನಿ-ಯಂತ್ರವನ್ನು ಏರಿದ್ದಂತೆ, ಸರ್ವಭೂತಾನಿ- ಎಲ್ಲಾ ಪ್ರಾಣಿಗಳನ್ನು, ಭ್ರಾಮಯನ್-ತಿರುಗಿಸುತ್ತಾನೆ. ಸರ್ವಭೂತಾನಾಂ-ಎಲ್ಲಾ ಜೀವಿಗಳ, ಹೃದ್ದೇಶೆ-ಹೃದಯದಲ್ಲಿ, ತಿಷ್ಠತಿ-ನಿವಾಸ ವಾಗಿರುವನು.]

ಈಶ್ವರನು ಎಲ್ಲರ ಹೃದಯದಲ್ಲಿ ನೆಲಸಿ, ಎಲ್ಲಾ ಜೀವಿಗಳನ್ನು ತನ್ನ ಮಾಯಾಶಕ್ತಿಯಿಂದ ತಿರುಗಿಸುತ್ತಿರುವನು.

ಬೀರ್ಬಲನ ಮಾತನ್ನು ಕೇಳಿ ಏನನ್ನೂ ಹೇಳದೆ ಪಕ್ಕನೆ ಅಕ್ಬರನು ಸಿಂಹಾಸನದಿಂದ ಎದ್ದುಹೋಗಿಯೇ ಬಿಟ್ಟನು. ಆ ದಿನದ ದರ್ಬಾರು ಹೀಗೆ ಕೊನೆಗೊಂಡಿತು.

ನಮ್ಮ ಧರ್ಮವು ಒಂದೇ ಒಂದಾದ ದೇವರ ವಿಚಾರವನ್ನು ಬೋಧಿಸುತ್ತದೆ. ಆ ದೇವರನ್ನು ಈಶ್ವರ, ಆತ್ಮಾ, ಪರಮಾತ್ಮಾ, ಬ್ರಹ್ಮ, ವಿಷ್ಣು, ಇಂದ್ರ, ಅಗ್ನಿ, ವರುಣ ಈ ಮೊದಲಾದ ಸಹಸ್ರಾರು ಹೆಸರುಗಳಿಂದ ಕರೆದಿದ್ದಾರೆ. ಈ ಹೆಸರುಗಳು ದೇವರ ಒಂದೊಂದು ಗುಣಶಕ್ತಿಯನ್ನು ವಿವರಿಸುತ್ತವೆ. ಇದೇ ನಮ್ಮ ಧರ್ಮದ ಬೋಧೆಯಾಗಿದೆ.

ಉಪಾಸನೆ ಎಂದರೆ ನಮ್ಮ ದೇವರನ್ನು ಪೂಜಿಸುವ ಕ್ರಮ ಅಥವಾ ನಮ್ಮ ದೇವರನ್ನು ತಿಳಿಯುವ ಮಾರ್ಗ. ನಮ್ಮ ಉಪಾಸನಾ ಕ್ರಮವು ಮೂರು ವಿಧವಾಗಿದೆ. ಕೆಲವರು ಜ್ಞಾನದಿಂದ ದೇವರನ್ನು ತಿಳಿಯುತ್ತಾರೆ. ಇದು ಜ್ಞಾನಮಾರ್ಗ. ಕೆಲವರು ದೇವರನ್ನು ಅನನ್ಯ ಭಕ್ತಿಯಿಂದ ಪೂಜಿಸುತ್ತಾರೆ. ಇದು ಭಕ್ತಿಮಾರ್ಗ. ಕೆಲವರು ಯಾವ ವಿಧದ ಫಲಾಪೇಕ್ಷೆ ಇಲ್ಲದೆ ಕರ್ಮ ಮಾಡುತ್ತಾರೆ. ಇದು ಕರ್ಮಮಾರ್ಗ. ಜ್ಞಾನ, ಕರ್ಮ ಮತ್ತು ಭಕ್ತಿ ಈ ಮೂರು ಮಾರ್ಗಗಳನ್ನು ಗೀತೆಯಲ್ಲಿ ಕೃಷ್ಣನು ವಿವರಿಸಿದ್ದಾನೆ. ಇವು ಮೂರು ಕೊನೆಯಲ್ಲಿ ದೇವರ ದರ್ಶನದಲ್ಲಿ ಸಮಾಪ್ತಿಯಾಗುತ್ತವೆ. ದೇವರ ದರ್ಶನವಾಗುವುದೇ ಮೋಕ್ಷ. ಸುಟ್ಟ ಬೀಜದಿಂದ ಮೊಳಕೆ ಬರುವುದಿಲ್ಲ. ಹೊಟ್ಟು ಕಳಚಿದ ಅಕ್ಕಿಯು ಸಸಿಯಾಗುವುದಿಲ್ಲ. ಹಾಗೆಯೇ ಜ್ಞಾನಾಗ್ನಿಯಿಂದ, ಭಕ್ತಿಯಿಂದ ಫಲಾಪೇಕ್ಷೆಯಿಲ್ಲದ ಕರ್ಮದಿಂದ ನಮ್ಮ ಎಲ್ಲಾ ಸಂಸ್ಕಾರಗಳು ನಾಶವಾಗುವುವು. ಇದೇ ಮೋಕ್ಷಾವಸ್ಥೆ. ಗರಗರನೆ ತಿರುಗುವ ನಮ್ಮ ಸಂಸಾರದಯಾತ್ರೆಯು ಆಗ ನಿರ್ಗತಿಗೊಳ್ಳುವುದು.

ಈಗ ನಮ್ಮ ಉಪಾಸನೆಯು ಕ್ರಮವು ಹಲವು ಬಗೆಯಾಗಿದೆ. ಶ್ರೀ ಕೃಷ್ಣ ಜಯಂತಿ, ನವರಾತ್ರಿ, ಶಿವರಾತ್ರಿ, ಶ್ರೀ ರಾಮ ಜಯಂತಿ ಮೊದಲಾದ ವ್ರತ ಮತ್ತು ಹಬ್ಬಗಳನ್ನು ಆಚರಿಸುತ್ತಿದ್ದೇವೆ. ಇವೆಲ್ಲವೂ ನಮ್ಮ ಉಪಾಸನೆಯ ವಿಧಾನಗಳಾಗಿವೆ.

■■■■■■■■

## ೬. ಅವತಾರ

ಪ್ರಚಲಿತ ನಮ್ಮ ಉಪಾಸನೆಗಳಿಗೆ ಅವತಾರ ಕಲ್ಪನೆಯೇ ಕಾರಣವೆನ್ನಬಹುದು. ಅವತಾರ ಎಂದರೆ ಕೆಳಗೆ ಇಳಿಯುವುದು ಎಂದರ್ಥ. ಕೃಷ್ಣನು ಅವತಾರದ ಕರ್ತವ್ಯಗಳನ್ನು ಈ ಪ್ರಕಾರ ವಿವರಿಸಿರುವನು.

ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್॥
ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ॥

ಗೀತಾ. ೪-೭ ಮತ್ತು ೮.

[ಭಾರತ--ಹೇ ಅರ್ಜುನನೇ, ಯದಾಯದಾ--ಯಾವಾಗ, ಹಿ--ನಿಶ್ಚಯವಾಗಿಯೂ, ಧರ್ಮಸ್ಯ--ಧರ್ಮದ, ಗ್ಲಾನಿ--ಅವನತಿ, ಅಧರ್ಮಸ್ಯ--ಅಧರ್ಮದ, ಅಭ್ಯುತ್ಥಾನಂ--ಅಭಿವೃದ್ಧಿಯು, ಭವತಿ--ಆಗುತ್ತದೆಯೋ, ತದಾ--ಆಗ, ಅಹಂ--ನಾನು, ಆತ್ಮಾನಂ--ನನ್ನನ್ನು, ಸೃಜಾಮಿ--ಕಳುಹಿಸುತ್ತೇನೆ.

ಸಾಧೂನಾಂ--ಸಾಧುಗಳ, ಸತ್ಪುರುಷರ, ಪರಿತ್ರಾಣಾಯ--ಸಂರಕ್ಷಣೆ, ಚ--ಮತ್ತು, ದುಷ್ಕೃತಾಂ--ದುಷ್ಟರ ವಿನಾಶ, ಧರ್ಮಸಂಸ್ಥಾಪನಾಯ--ಧರ್ಮವನ್ನು ಸಂಸ್ಥಾಪನೆ ಮಾಡುವ ಈ ಕಾರ್ಯಕ್ಕಾಗಿ, ಯುಗೆಯುಗೇ--ಯುಗಯುಗಗಳಲ್ಲಿ, ಸಂಭವಾಮಿ--ನಾನು ಅವತಾರವೆತ್ತುತ್ತೇನೆ.]

ಧರ್ಮಕ್ಕೆ ಗ್ಲಾನಿ ಬಂದೊದಗಿದಾಗ, ದುಷ್ಟರ ಸಂಹಾರ ಮಾಡುವುದಕ್ಕೂ, ಸತ್ಪುರುಷರ ಪರಿಪಾಲನೆ ಮಾಡುವುದಕ್ಕೂ, ಮತ್ತು ಧರ್ಮವನ್ನು ಸಂಸ್ಥಾಪನೆ ಮಾಡುವುದಕ್ಕೂ, ಪ್ರತಿ ಯುಗದಲ್ಲಿ ತಾನು ಅವತಾರ ಮಾಡುತ್ತೇನೆಂದು ಕೃಷ್ಣನು ವಚನವನ್ನು ಕೊಟ್ಟಿದ್ದಾನೆ. ಅವತಾರಿಗಳ ಜನ್ಮ ದಿವಸಗಳನ್ನು, ಜನ್ಮಾಷ್ಟಮಿಗಳನ್ನು ಆಚರಿಸುವ ಕ್ರಮವು ರೂಢಿಯಾಗಿ ಬಿಟ್ಟಿದೆ.

ಗೀತಾಚಾರ್ಯ ಕೃಷ್ಣನ ಜನ್ಮದಿವಸವನ್ನು ಆಚರಿಸುತ್ತಾರೆ. ಅಶ್ವೀಜ ಮಾಸದ ನವರಾತ್ರಿಗಳಲ್ಲಿ ಚಂಡಿಯನ್ನು ಉಪಾಸಿಸುತ್ತಾರೆ. ಮೊದಲನೆಯ ಮೂರು ರಾತ್ರಿಗಳಲ್ಲಿ ಕುಂಕುಮವರ್ಣಸ್ವರೂಪಿಣಿಯಾದ ಮಹಾಕಾಳಿಯನ್ನು ಪೂಜಿಸುತ್ತಾರೆ. ಮಧ್ಯದ ಮೂರು ರಾತ್ರಿಗಳಲ್ಲಿ ಶ್ವೇತಾಂಬರಿ ಮಹಾಲಕ್ಷ್ಮೀಯನ್ನು ಆರಾಧಿಸುತ್ತಾರೆ. ಸುವರ್ಣವರ್ಣ ಮಹಾಸರಸ್ವತಿಯನ್ನು ಕೊನೆಯ ಮೂರು ರಾತ್ರಿಗಳಲ್ಲಿ ಉಪಾಸನೆಮಾಡುತ್ತಾರೆ. ಹತ್ತನೆಯ ದಿನವೇ ವಿದ್ಯಾದಶಮಿ ಮಹೋತ್ಸವ.

ಏಳನೆ ದಿವಸ ಮೂಲಾನಕ್ಷತ್ರ. ಆ ದಿವಸ ಧರ್ಮಗ್ರಂಥಗಳನ್ನು ಇಟ್ಟು ಒಂದು ಅಥವಾ ಮೂರು ದಿವಸ ಪೂಜಿಸುತ್ತಾರೆ. ಇದನ್ನು ಶಾರದಾ ಪೂಜೆ ಎಂದು ಕರೆಯುತ್ತಾರೆ. ಅರಸರು ಮತ್ತು ಕೆಲಸಗಾರರು ತಮ್ಮ ಆಯುಧಗಳನ್ನು ಈ ದಿನಗಳಲ್ಲಿ ಪೂಜಿಸುತ್ತಾರೆ.

ಉತ್ತರ ಭಾರತದಲ್ಲಿ ನವರಾತ್ರಿಕಾಲದಲ್ಲಿ ರಾಮಲೀಲಾ ಪ್ರಸಂಗವನ್ನು ಆಚರಿಸುತ್ತಾರೆ. ತುಳಸಿದಾಸರ ರಾಮಾಯಣವನ್ನು ಓದುತ್ತಾ ರಾಮಾಯಣದ ವಿವಿಧ ಕಥಾಭಾಗಗಳನ್ನು ಅಭಿನಯಿಸುತ್ತಾರೆ. ರಾಮ, ಸೀತೆ, ರಾವಣ ಮೊದಲಾದವರ ದೊಡ್ಡ ದೊಡ್ಡ ಬೊಂಬೆಗಳನ್ನು ಮಾಡಿ ಅಲಂಕರಿಸುತ್ತಾರೆ. ಇವನ್ನು ನೋಡಲು ಊರ ಜನರು ಕಿಕ್ಕಿರಿದು ಸೇರುತ್ತಾರೆ. ಹತ್ತನೆ ದಿನ ರಾವಣವಧೆಯನ್ನು ಮಾಡುತ್ತಾರೆ. ಹನ್ನೊಂದನೆಯ ದಿವಸ ಸೀತಾರಾಮ ಲಕ್ಷ್ಮಣರು ಅಯೋಧ್ಯೆಯನ್ನು ಪ್ರವೇಶಿಸುವ ದೃಶ್ಯಗಳನ್ನು ಅಭಿನಯಿಸುತ್ತಾರೆ.

ಜೇಷ್ಠಮಾಸದಲ್ಲಿ ಬರುವ ನವಮಿದಿವಸ ರಾಮ ಜನ್ಮೋತ್ಸವವನ್ನು ಆಚರಿಸುತ್ತಾರೆ. ಶಿವರಾತ್ರಿ, ವಿನಾಯಕನ ಚೌತಿ, ನಾಗರಪಂಚಮಿ ಮೊದಲಾದ ಇನ್ನಿತರ ಉತ್ಸವ ಮತ್ತು ಹಬ್ಬಗಳನ್ನು ಆಚರಿಸುವ ಕ್ರಮವು ರೂಢಿಯಾಗಿದೆ. ಇವೆಲ್ಲವು ಧರ್ಮದ ಗೌಣರೂಪಗಳು.

ನಮ್ಮ ಧರ್ಮವೆಂದರೇನು, ನಮ್ಮ ಆಚರಣೆ ಮತ್ತು ಉಪಾಸನೆ ಹೇಗಿರಬೇಕೆಂಬುದು ನಾವು ತಿಳಿದು, ಆ ಪ್ರಕಾರ ಆಚರಿಸಿ ನಮ್ಮ ಜೀವನವನ್ನು ಬೆಳಗಬೇಕಾಗಿದೆ. ಇದು ನಮ್ಮ ಆದ್ಯ ಕರ್ತವ್ಯವಾಗಿದೆ. ಇದು ನಮ್ಮ ಮೂಲ ಅಧಿಕಾರವು.



# 55

# ಮೀರಾಬಾಯಿ

(ಏಕಾಂಕ ನಾಟಕ)



ರಚಯಿತರು:

ಶ್ರೀ| ಸಂ. ಜ. ರಾವ್.

1955.

ಮಂಗಳೂರು.




ಒಂದಾಣೆ ಮಾಲೆ

# ಒಂದಾಣೆ ಮಾಲೆಯಲ್ಲಿ ಈ ವರೆಗೆ ಪ್ರಕಟವಾದ ಪುಸ್ತಕಗಳು

೧. *ಕೆಪ್ಪಟಿರಾಯ (ವಿನೋದ ಕಥೆ)
೨. *ನಾರೀಶ್ವರರು (ಏಕಾಂಕ ಪ್ರಹಸನ)
೩. *ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು.
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ)
೫. *ಅದ್ಭುತತ್ಯಾಗ ಮತ್ತು ಇತರ ಕಥೆಗಳು
೬. ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ)
೭. *'ಬೀಡಿ ಸೇದಬೇಡಿ' ಮತ್ತು 'ಅ ಮಗು' (ವಿನೋದ ಕಥೆಗಳು)
೮. *ಇಂಗ್ಲಿಷ್-ಕನ್ನಡ ಅರ್ಥಕೋಶ
೯. *ಲಂಚಕ್ಕೆ ಸಂಚಕಾರ
೧೦. *ಟಿಶ್ಯೂ ಔಷಧಿಗಳ ಕೈಪಿಡಿ.
೧೧. *ಶ್ರೀಕ್ಷೇತ್ರಧರ್ಮಸ್ಥಳ (ದ್ವಿ. ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು
೧೪. ವೆಂಕಟನ ಸಂಕಟ (ಏಕಾಂಕ ಪ್ರಹಸನ)
೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ)
೧೬. ವೇಣೂರಿನ ಗತವೈಭವ.
೧೭. ಒಗಟುಗಳು [ದ್ವಿತೀಯ ಮುದ್ರಣ]
೧೮. ಜಗಳಗಂಟಿ ಮತ್ತು ಇತರ ಕಥೆಗಳು
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಪ್ಪ
೨೧. *ಭಾರತದ ಮಹಾನಗರಗಳು (ಭಾಗ ೧)
೨೨. ತಿರುಕ್ಕುರಲ್
೨೩. ಸೂರ್ಯನ ಸಂಸಾರ ಮತ್ತು ಇತರ ಕಥೆಗಳು.
೨೪. ಭಾರತದ ಮಹಾನಗರಗಳು (ಭಾಗ ೨)
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳು.
೨೬. *ಮಾರಾವತಾರ (ಏಕಪಾತ್ರ ಯಕ್ಷಗಾನ ಪ್ರಬಂಧ)
೨೭. ಹಾಸವಿಲಾಸ (ನಗೆಹನಿಗಳು)
೨೮. ಸತ್ಯವಂತ ಬಾಬಿ (ಏಕಾಂಕ ಪ್ರಹಸನ)
೨೯. ಜಾಣ್ಮೆಯ ಒಗಟುಗಳು
೩೦. ಜಾತಕ ಕಥೆಗಳು
೩೧. ಕಾರ್ಕಳದ ಚರಿತ್ರೆ
೩೨. ಮರ್ಜಿ (ಏಕಾಂಕ ಪ್ರಹಸನ)
೩೩. ದರ್ಶನದ ಕಥೆಗಳು
೩೪. ಅಳುವಿನ ಹೊಳೆ ಮತ್ತು ಕೇಶವಭೂಪ (ಮಕ್ಕಳ ಕಥೆಗಳು)
೩೫. ಶರಾಬಿನ ಸಿಪಾಯಿಗಳು
೩೬. ಉಪದೇಶ ಶತಕ
೩೭. ನಿಮಗೆ ಗೊತ್ತಿದೆಯೇ?
೩೮. ಚತುರ ಚಮತ್ಕಾರ
೩೯. ಸತೀ ಸಾವಿತ್ರಿ
೪೦. ಆಭರಣಗಳ ಪೆಟ್ಟಿಗೆ, ಇತರ ಕಥೆಗಳು
೪೧. ಭಾರತದ ಮಂತ್ರಿಮಂಡಲಗಳು
೪೨. ಕಾಲುಬಳೆಯ ಕಥೆ
೪೩. ಭಾರತದ ನಾಲ್ಕು ಕಲಶಗಳು
೪೪. ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು
೪೫. ಸುಭಾಷಿತ
೪೬. ೧೮೫೭ರ "ಸಿಪಾಯಿ ದಂಗೆ" ಅಥವಾ ಬ್ರಿಟಿಷರಿಗೆದುರಾಗಿ ಭಾರತೀಯರ ಸ್ವಾತಂತ್ರ್ಯಸಮರ
೪೭. ಅಕಾಂಡ ತಾಂಡವ (ರೇಡಿಯೋ ನಾಟಕ)
೪೮. ಸಾಹಸದ ಕಥೆಗಳು
೪೯. ಸಂಜ್ಞಾ ಜ್ಞಾನ ಕೋಶ
೫೦. ಪಂಡಿತನ ಪಿಟೀಲು
೫೧. ಭೋಗಯಾತ್ರೆ
೫೨. ಸಂಗ್ರಾಮಸಿಂಹ
೫೩. ಧರ್ಮ ಶಿಕ್ಷಾ
೫೪. ಮಹಾತ್ಮ
೫೫. ಮೀರಾಬಾಯಿ (ಏಕಾಂಕ ನಾಟಕ)

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಈ ವರೆಗೆ ಐವತ್ತೈದು ಪುಸ್ತಕಗಳಲ್ಲಿ, ಐವತ್ತೈದು ಆಣೆಗಳಿಗೆ,
'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, 1212 ಪುಟಗಳನ್ನು ಕೊಟ್ಟಿರುತ್ತದೆ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ, ಮಂಗಳೂರು-೧

# ಮೀರಾಬಾಯಿ

## (ಏಕಾಂಕ ನಾಟಕ)

---

### ದೃಶ್ಯ ೧. ಅರಮನೆ.

(ಬಾಲಕಿಯಾದ ಮೀರಾಬಾಯಿಯು, ಅಗತಾನೆ ಮುಳುಗುತ್ತಿರುವ ಸೂರ್ಯನ ರಮಣೀಯತೆಯನ್ನು ನೋಡುತ್ತಾ ನಿಂತಿರುವಳು.)

ಮೀರಾ: ಈ ಸಂಧ್ಯಾಕಾಲವು ಎಷ್ಟು ಮನೋಹರವಾಗಿದೆ! ದಿನ ಮಣಿಯಾದ ಸೂರ್ಯದೇವನೇ, ನಿನ್ನ ಕಿರಣಗಳಿಂದ ಈ ಪ್ರಪಂಚವನ್ನು ಪಾವನವನ್ನಾಗಿ ಮಾಡುವೆ. ವಿಶ್ವದ ಒಡೆಯನಾದ ಪರಮಾತ್ಮನ ತೇಜೋ ಮೂರ್ತಿಯಲ್ಲವೆ ನೀನು? ಭಜನೆಯಿಂದ ಶ್ರೀಕೃಷ್ಣ ಸ್ವಾಮಿಯನ್ನು ಒಲಿಸ ಬಹುದೆಂದು ಹೇಳುವರು. ನಾನು ಮಾಡುತ್ತಿರುವ ಭಜನೆಯು ಸಾಲದೆ? ಇಲ್ಲವಾದರೆ, ನನಗೆ ಒಲಿಯದಿರುತ್ತಿದ್ದನೆ? ಅಥವಾ ಬಾಲಕಿಯಾದ ನನ್ನ ಮನಸ್ಸು ದೃಢವಾಗಿಲ್ಲವೆಂದು ಅವನು ಬಾರದಿರಬಹುದೇ?

ಕಮಲ: (ಸಖಿ) ಮೀರಾ, ಒಬ್ಬಳೇ ಇಲ್ಲೇನು ಮಾಡುತ್ತಿರುವೆ? ಆಡಲು ಬರುವದಿಲ್ಲವೇ?

ಮೀರಾ: ಸಖೀ, ಶ್ರೀಕೃಷ್ಣ ಸ್ವಾಮಿಯ ಧ್ಯಾನಕ್ಕಿಂತಲೂ, ಉತ್ತಮ ವಾದ ಆಟವಾವುದು? ಆತನ ಲೀಲಾವಿನೋದದ ವಿನಹ, ನನಗೆ ಅನ್ಯ ಆಟ ಗಳೇ ಒಗ್ಗಲಾರವು.

ಕಮಲ: ಮೀರಾ, ಅಗೋಚರನಾದ ಕೃಷ್ಣನನ್ನು ಕುರಿತು, ಸದಾ ಕಾಲವೂ 'ಕೃಷ್ಣಾ ಕೃಷ್ಣಾ' ಎಂದು ಹಂಬಲಿಸುವೆಯೇಕೆ? ಅವನು ಏತ ಕ್ಕಾಗಿ? ಅರಮನೆಯಲ್ಲಿ ನಿನಗೇನು ಕೊರತೆಯಾಗಿದೆ?

ಮೀರಾ: ಶ್ಯಾಮಸುಂದರನಾದ ಕೃಷ್ಣನ ರೂಪವನ್ನು ಓದಿಯೂ ಕೇಳಿಯೂ ತಿಳಿದಿರುವೆ. ದಯಾಮಯನಾದ ಆತನನ್ನು ಕಾಣಬೇಕೆಂದು ನಿರಂತರವೂ ಮನಸ್ಸು ಹೊಯ್ದಾಡುತ್ತಿರುವುದು. ಆತನನ್ನು ಕಾಣದೆ ನನ್ನ ಮನಸ್ಸಿಗೆ ಶಾಂತಿಯಿಲ್ಲ. ನನ್ನ ಮನಸ್ಸು ನೆಮ್ಮದಿಯಾಗಿರಬೇಕಾ

ದರೆ ಆ ಭಗವಾನ್ ಮೂರ್ತಿಯ ಧ್ಯಾನದಿಂದ ಮಾತ್ರ ಸಾಧ್ಯ. ನಿಸ್ಸಾರ ವಾದ ಬೇರಾವ ಆಟವೂ ನನಗೆ ಬೇಕಿಲ್ಲ. ನಡೆ. ತರಳ ಧ್ರುವನಿಗೆ ಒಲಿದ ಕೃಷ್ಣನನ್ನು ತಿರಸ್ಕರಿಸಿದೆಯಾ? ಇರಲಾರದು; ಕೃಷ್ಣನಿಗೆ ಭೇದಭಾವನೆ ಎಲ್ಲಿ ಬಂತು? ದ್ವೇಷಾಸೂಯೆಗಳು ಮಾನವರಲ್ಲಿ ಮಾತ್ರವಲ್ಲವೇ!

ಕಮಲ: ಮೀರಾ, ನಿನ್ನ ಹಂಬಲವು ನಿಷ್ಪ್ರಯೋಜಕ. ನಿನ್ನ ಕೃಷ್ಣ ನಾದರೋ ಕಣ್ಣಿಗೆ ಗೋಚರಿಸಲಾರ! ಕೈಗೆ ಎಟಕಲಾರ! ಆದರೆ, ನಿನ್ನ ಹಂಬಲವಾದರೋ ದಿನೇ ದಿನೇ ಹೆಚ್ಚುತ್ತಿರುವುದು.

(ಭಜನೆಯ ಸ್ವರವು ಕೇಳಿಬರುವದು.)

ಮೀರಾ: ಕೇಳು, ಕಮಲ! ಸಂತರ ಗಾನವು ಕೇಳಿಬರುತ್ತದೆ. ಪರಮ ಪುರುಷ! ನಿನ್ನ ಧ್ಯಾನದಲ್ಲಿ ಎಂತಹ ಮಾಧುರ್ಯವು ತುಂಬಿದೆ! ಮಹಾ ತ್ಮರು ಇತ್ತಕಡೆ ಬರುವಂತಿದೆ. ಕರೆದು ಸತ್ಕರಿಸುವೆನು.

(ವೃಂದಾವನಕ್ಕೆ ಹೋಗುವ ಸಂತರ ಗುಂಪು ಭಜನೆಮಾಡುತ್ತಾ ಪ್ರವೇಶ.)

ಮೀರಾ: ಇವರನ್ನು ಸತ್ಕರಿಸುತ್ತ, ಭಜನೆಮಾಡುತ್ತ, ಇವರೊಡನೆ ನಾನೂ ಹೋಗುವೆನು. (ಹೊರಡುವಳು.)

ಕಮಲ: ಮೀರಾ, ರಾಜಕುಮಾರಿಯಾದ ನೀವು ಹೀಗೆ ಭಿಕ್ಷುಕ ರೊಡನೆ ಹೋಗುವದು ಸರಿಯಲ್ಲ. ನಿನ್ನ ಜನನೀ ಜನಕರು, ನಿನ್ನ ಮೇಲೆ ಕೋಪಗೊಳ್ಳುವರು. ಆ ದಿನ ನಿನ್ನಲ್ಲಿ ಆಗ್ರಹಮಾಡಿರುವದನ್ನು ಆಗಲೇ ಮರೆತೆಯಾ?

ಮೀರಾ: ಸಖೀ, ಪರಮಾತ್ಮನೆದುರಿನಲ್ಲಿ ಎಲ್ಲರೂ ಸಮಾನರೇ. ರಾಜ ಕುಮಾರ, ಭಿಕ್ಷುಕ ಎಂದು ಭೇದವೆಣಿಸುವವರು ಮೂರ್ಖರೇ ಸರಿ! ಈ ಸಂತರು, ನಿತ್ಯವೂ ಕೃಷ್ಣನನ್ನು ಭಜಿಸಿ ಪುನೀತರಾಗಿರುವರು. ಇವ ರೊಡನೆ ಭಜನೆಮಾಡುವುದರಿಂದ ಹಾನಿತಟ್ಟದು. ಪೂಜ್ಯರೇ, ನೀವೀ ಮಾರ್ಗವಾಗಿ ಎತ್ತ ಹೊರಟಿರುವಿರಿ?

ಸಂತ: ರಾಜಕುವರಿ, ನಿನಗೆ ಆ ಕೃಷ್ಣಸ್ವಾಮಿಯು ಶೀಘ್ರವಲ್ಲಿಯೇ ಒಲಿಯಲಿ! ನಾವು ವೃಂದಾವನಕ್ಕೆ ಹೊರಟಿರುವೆವು.

ಮೀರಾ: ವೃಂದಾವನಕ್ಕೆ ಏಕೆ?

ಸಂತ: ಶ್ರೀಕೃಷ್ಣ ಸ್ವಾಮಿಯ ದರ್ಶನಕ್ಕೆ.

ಮೀರಾ: ಪರಮಾತ್ಮ ದರ್ಶನವಾಗಬೇಕಾದರೆ ವೃಂದಾವನಕ್ಕೆ ಹೋಗಬೇಕೆ? ಇಲ್ಲಿಯೇ ನೋಡಲಾಗದೆ? ಆ ಭಗವಾನ್ ಶ್ರೀಕೃಷ್ಣ ಮೂರ್ತಿಯನ್ನು ನೋಡಬೇಕೆಂಬಾಸೆಯು ನನಗೆ ಬಹಳವಾಗಿರುವದು. ನನ್ನ ಜನಕನು ನನ್ನನ್ನು ವೃಂದಾವನಕ್ಕೆ ಕಳುಹಲಾರನು. ನಾನು ಸ್ವಾಮಿಯನ್ನು ಹೇಗೆ ತಾನೆ ಕಾಣಲಿ?

ಸಂತ: ಮಗಳೇ, ನೀನೆಂತಹ ಮಹನೀಯಳು! ಕೇವಲ ಈ ಚಿಕ್ಕ ವಯಸ್ಸಿನಲ್ಲಿಯೇ ಯೋಗಿಗಳಿಗೂ ನಿಲುಕದ ವೈರಾಗ್ಯಪಥವನ್ನರಸಿರುವೆ!

ಮೀರಾ: ಪೂಜ್ಯರೇ, ಆಶ್ಚರ್ಯವೇನು ಬಂತು? ಪರಮಾತ್ಮನನ್ನು ಬಯಸುವದು ಮಾನವರೆಲ್ಲರಿಗೂ ಸಹಜ ಗುಣವಲ್ಲವೇನು? ಕೃಷ್ಣನನ್ನು ಬಯಸಲಾಗದು ಎಂಬುದು ಮಾತ್ರ ಆಶ್ಚರ್ಯದ ಮಾತಲ್ಲವೇ? ಪೂಜ್ಯರೇ, ಈಗಲಾದರೂ ಹೇಳಿ—ಕೃಷ್ಣನನ್ನು ಕಾಣುವುದೆಂತು? ವೃಂದಾವನದಲ್ಲಿಯೆ ಕಾಣುವೆನೆಂದಾದರೆ ನನ್ನನ್ನೂ ಜತೆಯಲ್ಲಿ ಕರೆದುಕೊಂಡು ಹೋಗಿ.

ಸಂತ: ರಾಜಪುತ್ರಿ, ನೀನು ಹೀಗೆ ಹೇಳಲಾಗದು. ಜಗತ್ತಿಗೆ ಪತಿಯಾದ ಕೃಷ್ಣನನ್ನು ಎಲ್ಲಿ ಬೇಕಾದರೂ ಕಾಣಬಹುದು. ನೀನು ಇರುವೆಡೆಯಲ್ಲಿಯೇ ಆತನನ್ನು ಭಜಿಸು. ನಮ್ಮೊಡನೆ ಬರುವುದು ತರವಲ್ಲ.

ಮೀರಾ: ಸಂತರೇ, ಭಗವಂತನ ಧ್ಯಾನವನ್ನಾದರೂ ಏಕಕಂಠದಿಂದ ಎಲ್ಲರೂ ಭಜಿಸಿರಿ—ಕೇಳಿ ಕರ್ಣಾನಂದವನ್ನು ಉಂಟುಮಾಡಿಕೊಳ್ಳುವೆನು.

(ಮೀರಾ ಹಾಡುವಳು. ಅವಳ ಜತೆಯಲ್ಲಿ ಎಲ್ಲರೂ ಹಾಡುವರು.)

ಸಂತ: ಈ ಮಹಾತ್ಮಳು, ಪರಮ ಭಕ್ತಳು! ಚಿಕ್ಕ ವಯಸ್ಸಿನಲ್ಲಿಯೇ ಎಂಥ ಶ್ರದ್ಧೆ! ಅಮ್ಮಾ ಸುಕುಮಾರಿ, ಈ ಗಾನವನ್ನು ಎಲ್ಲಿ ಕಲಿತೆ?

ಮೀರಾ: ಇಲ್ಲಿಯೇ ಒಂದು ಕೃಷ್ಣ ದೇವಾಲಯವಿದೆ. ಅಲ್ಲಿ ಹಾಡುತ್ತಾ ಅವನಿಂದಲೇ ಈ ಗಾನವನ್ನು ಕಲಿತಿರುವೆ. ನೀವು ಅಲ್ಲಿಗೆ ಬಂದು ನನ್ನನ್ನು ಕೃತಾರ್ಥಳನ್ನಾಗಿ ಮಾಡಬೇಕೆಂದು ಆಶಿಸುವೆ.

ಸಂತ: ಮಗೂ, ನಿನ್ನ ಪ್ರಾರ್ಥನೆಯು ದೊಡ್ಡ ಅನುಗ್ರಹವೇ ಸರಿ. ಭಜನೆಗೆ ಎಲ್ಲ ಕಾಲವೂ ಒಂದೇ. ನಡೆ ಹೋಗೋಣ.

(ಭಜನೆಮಾಡುತ್ತಾ ಹೋಗುವರು.)

## ದೃಶ್ಯ ೧.

(ಅರಮನೆಯಲ್ಲಿ ಪುರೋಹಿತ ರಾಮಶಾಸ್ತ್ರಿ ಮುಂತಾದವರ ಪ್ರವೇಶ.)

ಕೃಷ್ಣಶಾಸ್ತ್ರಿ: ನಮಸ್ಕಾರ ಜೋಯಿಸರೇ! ಇತ್ತೀಚೆಗೆ ನಿಮ್ಮನ್ನು ಕಾಣಲೇ ಇಲ್ಲವಲ್ಲ! ಎಲ್ಲ ಕ್ಷೇಮ ತಾನೆ?

ರಾಮ: ಕ್ಷೇಮ, ಶಾಸ್ತ್ರಿಗಳೇ. ಎಲ್ಲಾ ಕ್ಷೇಮ. ಏಕೆ ಇಷ್ಟು ವಿಚಾರಣೆ?

ಕೃಷ್ಣ: ವಿಚಾರಣೆ ಏನೂ ಇಲ್ಲ. ಬೆಳಿಗ್ಗೆ ಎದ್ದೊಡನೆ 'ಎದ್ದಿರಾ?' ಮಧ್ಯಾಹ್ನವಾದಾಗ 'ಊಟವಾಯಿತೇ?' ಎಂದು ಕೇಳುವದು ಸ್ವಾಭಾವಿಕ.

ರಾಮ: ಏನೊ ಇದೆಯಲ್ಲ ಜೀವನೋಪಾಯ. ಸಂಪಾದನೆಗಾಗಿ ವರ್ಷದಿಂದ ಸುತ್ತುತ್ತಲಿದ್ದೇನೆ. ಊರಲ್ಲೆಲ್ಲ ಕ್ಷೇಮವಷ್ಟೆ?

ಕೃಷ್ಣ: ಎಲ್ಲರೂ ಕ್ಷೇಮ. ಆದರೆ, ಊರಿನಲ್ಲಿ ನಡೆಯುವ ಅನ್ಯಾಯ ಎಷ್ಟು ಅಂತ ಮಾತ್ರ ಹೇಳೋಹಾಗಿಲ್ಲ. ಕಾಲ ಕೆಟ್ಹೋಯ್ತು ಸ್ವಾಮಿ!

ರಾಮ: ಅದೇನು ಸ್ವಾಮಿ, ಹಾಗೆ ಹೇಳುತ್ತಾ ಇದ್ದೀರಿ?

ಕೃಷ್ಣ: ಕೇಳಿ ಸಂತೋಷಪಡಿ ಸ್ವಾಮಿ. ಎಲ್ಲಿ ನೋಡಿದರೂ ಸಂತರ ಗುಂಪು! ಪ್ರಾಪ್ತವಯಸ್ಕಳಾದ ರಾಜಕುಮಾರಿ ಅವರೊಡನೆ ಸೇರಿಕೊಂಡು ವಿಶೇಷ ನರ್ತನ! ಮಾನ ಬದಲಾಗಿದೆ, ಮರ್ಯಾದೆ ಎಲ್ಲಿಗೋ ಹೋಗಿದೆ. ಅಡಿಗೆಮನೇಲಿರೊ ಹೆಂಗಸಿಗೆ ಯಾಕೆ ಬೇಕು ಸ್ವಾಮಿ ಈ ಭಜನೆ, ಈ ಕುಣಿತ? ಕಾಲ ಕೆಟ್ಹೋಯ್ತು ಅಂದರೆ ತಪ್ಪೆ?

ರಾಮ: ನೀನು ಹೇಳೋದು ಹಳೇಕಾಲದ ವಿಚಾರ. ಈಗ ಹೆಂಗಸರು ಏಕೆ ಭಜನೆಮಾಡಬಾರದು? ಅಂತಾರೆ. ನನ್ನ ಮಗಳು ರಾಜಕುಮಾರಿ ಗುಂಪಿಗೆ ಸೇರಿದ್ದಾಳೆ. ಅರಮನೆ ಹುಡುಗಿಯ ಸ್ನೇಹ, ಏನಾದರೂ ಲಾಭವಾದೀತು, ಅಂತ ಸುಮ್ಮನೆ ಇದ್ದೀನಿ. ಆದರೆ, ಆ ಹುಡುಗಿ ಮಾತಿಗೆ ಸಾವ್ಯಾರು ಉತ್ತರ ಹೇಳೊ ಹಾಗೆ ಇಲ್ಲಾ ಸ್ವಾಮಿ!

ಕೃಷ್ಣ: ಆ ರಾಜಕುಮಾರಿಗೆ ಮದುವೆಮಾಡಿದ್ದರೆ ಈ ರಗಳೆ ಇದ್ದಿಲ್ಲ. ರಾಜಕುಮಾರಿಯು ಮದುವೆ ಬೇಡಾ ಅಂತಿದ್ದಾಳಂತೆ! ಏನು ಮಾಡೋದು ಹೇಳಿ. ಅದೋ, ಯಾರೊ ಬರುವಂತಿದೆ. (ಹೋಗುವರು.)

## ದೃಶ್ಯ ೩

(ಮೀರಾಬಾಯಿಯು ಉದ್ಯಾನವನದ ದೇವಸ್ಥಾನ. ಸಂತರೊಡನೆ ಮೀರಾಬಾಯಿಯು ಗಾನಮಾಡುತ್ತಿರುವಳು. ಕಮಲ ಓಡಿಬರುವಳು.)

ಕಮಲ: (ನಿಟ್ಟುಸಿರು ಬಿಟ್ಟು) ಮೀರಾ, ಮಹಾರಾಣಿಯವರು ಇತ್ತ ಬರುತ್ತಿರುವರೆಂದು ಸೇವಕಿಯು ಹೇಳಿದಳು. ಆದುದರಿಂದ ನೀನು ಇವರನ್ನು ಸತ್ಕರಿಸಿ ಬೇಗನೆ ಕಳುಹಿಸಿಕೊಡು.

ಮೀರಾ: ಕಮಲಾ, ನೀನೇಕೆ ಧ್ಯಾನಮಗ್ನಳಾಗಿದ್ದ ನನ್ನನ್ನು ಎಚ್ಚರಿಸಿದೆ? ಆ ಸುಂದರರೂಪನ ಧ್ಯಾನಿಸಿ ಆನಂದಿಸುತ್ತಿದ್ದೆನಲ್ಲವೇ?

ಕಮಲ: ಮೀರಾ, ನಿನಗೆ ನಿರಂತರವೂ ಈ ಒಂದೇ ಚಿಂತೆಯಲ್ಲವೇ? ಬೇರಾವ ಯೋಚನೆಯೂ ಇಲ್ಲ! ದಿನದಿನವೂ ಹೊಸ ಹಾಡುಗಳನ್ನು ಹಾಡುತ್ತಿರುವೆ. ನಿನಗೆ ಕಲಿಸಿದವರು ಯಾರು?

ಮೀರಾ: ಮತ್ತಾರೇ, ನನ್ನ ಹೃದಯೇಶ್ವರನು! ಆ ಮನಮೋಹನ ನನ್ನು ಪ್ರೀತಿಸುವದರ ಅತಿಶಯ ಸೌಭಾಗ್ಯವನ್ನು ನೀನರಿಯೆ. ಸಖೀ, ನೀನು ಕೂಡ ಆತನನ್ನು ಪ್ರೀತಿಸು. ಇದಕ್ಕಿಂತಲೂ ಅತಿಶಯವಾದ ಜ್ಞಾನವನ್ನು ಸಂಪಾದಿಸುವೆ. ಸಖೀ, ಕೃಷ್ಣನಲ್ಲಿ ಮನಸ್ಸಿಟ್ಟರೆ ಇನ್ಯಾವ ವಿಷಯಕ್ಕೂ ಮನಃಪರಿವರ್ತನೆಯಾಗದು.

ಕಮಲ: ಮೀರಾ, ನಿನ್ನ ಒಡನಾಡಿಯಾಗಿದ್ದರೂ ಇದನ್ನೆಲ್ಲಾ ನಾನರಿಯೆ. ನನಗೆ ನೀನಾಡುವ ಮಾತುಗಳ ಅರ್ಥವೇ ಆಗದು.

ಮೀರಾ: ಪ್ರಿಯ ಸಖೀ, ಇದೇನು? ಮೂಢ ಸ್ತ್ರೀಯಾದ ಮಾತ್ರಕ್ಕೆ ಕುಂದೇನು? ಸ್ವಭಾವತಃ ಪ್ರೇಮಮಯರಾದ ಸ್ತ್ರೀಯರಿಗೆ ಪರಮಾತ್ಮನನ್ನು ತಿಳಿಯುವದು ಸುಲಭವಲ್ಲವೇ? ಪರಮಾತ್ಮನನ್ನು ತಿಳಿಯುವುದಕ್ಕೆ ನಿಷ್ಕಲಂಕತೆ ಮಾತ್ರ ಸಾಕು. ಸ್ತ್ರೀಯರನ್ನು ಚಂಚಲೆಯರೆಂದು ಕರೆಯುವದು ಲೋಕದ ಉತ್ಪ್ರೇಕ್ಷೆ. ನಮಗಿರುವ ಮನೋದಾರ್ಢ್ಯವು ಪುರುಷರಿಗಿಲ್ಲ! ಸ್ತ್ರೀಯಾದ ಮಾತ್ರಕ್ಕೆ ಆತ್ಮ ತೇಜಸ್ಸು ಇಲ್ಲದವಳಾದಾಳೆ? ನಿನ್ನ ಹೃದಯ ಕಮಲದಲ್ಲಿಯೂ ಶ್ರೀಕೃಷ್ಣನನ್ನು ಧ್ಯಾನಿಸಿ ನೋಡು, ಆಗ ತಿಳಿಯುವೆ.

ಕಮಲ: ಮೀರಾ, ಪುನಃ ಹೇಳುತಿದ್ದೇನೆ—ನಿನ್ನ ಜನನಿಯು ಇತ್ತ ಬರುವಂತಿದೆ. (ರಾಣಿಯ ಪ್ರವೇಶ).

ರಾಣಿ: (ಬಂದು) ಇದೇನು ಹುಚ್ಚಳಂತೆ ಕುಣಿದಾಡುತ್ತಿರುವೆ ಮೀರಾ? ಇದು ನಿನ್ನ ಗೌರವಕ್ಕೆ ತಕ್ಕುದೇ? ನಿನ್ನ ಈ ನಡತೆಯು ಸರಿಯಲ್ಲ.

ಮೀರಾ: ಅಮ್ಮಾ, ನಮಸ್ಕರಿಸುವೆ! ಪರಮಾತ್ಮನ ಚಿಂತನೆಯಲ್ಲಿದ್ದ ನನಗೆ ನೀವು ಬಂದುದರ ಅರಿವಾಗಲಿಲ್ಲ. ಕ್ಷಮಿಸಿರಿ!

ರಾಣಿ: ಮೀರಾ, ಮುದ್ದುಕುವರಿ! ನೀನು ಹೀಗೆಲ್ಲಾ ಮೈಮರೆತು, ಕುಣಿಯಲಾಗದು. ಮಗೂ! ಜನ ಏನಂದಾರು! "ರಾಜಕುವರಿಯು ಭಿಕ್ಷುಕರೊಡನೆ ಭಜನೆ ಮಾಡುತ್ತಾ ತಿರುಗುವಳು" ಎಂದರೆ, ಎಂಥ ಅವಮಾನ ನೋಡು. ಧರ್ಮಪ್ರಭುವಿನ ಮಗಳೇ ಹೀಗಾದ ಮೇಲೆ, ದೇಶದಲ್ಲಿ ಧರ್ಮವೆಲ್ಲಿ ನಿಂತೀತು ಎಂದು ಮನನೋಯುವ ಮಾತುಗಳ ನ್ನಾಡುವರು. ನಿನಗೆ ತಿಳಿಯದೇ?

ಮೀರಾ: ಅಮ್ಮಾ, ಯಾವ ರಾಜನ ಕಾಲದಲ್ಲಿ ಜನರು ರಾಜನಿಂದೆ ಮಾಡದೆ ಇದ್ದರೆಂದು ಒಮ್ಮೆ ಹೇಳು. ಶ್ರೀರಾಮನ ರಾಜ್ಯದಲ್ಲಿಯೂ ಅಗಸರವನೊಬ್ಬ ಸ್ವಾಮಿನಿಂದೆಯನ್ನು ಮಾಡಿದ್ದನಂತೆ ಎಂದ ಮೇಲೆ ಇತಿಹಾಸಕಾಲದಿಂದಲೂ ನಿಂದೆಯನ್ನು ಮಾಡದೆ ಇದ್ದ ಪ್ರಜರಿಲ್ಲ. ಅವರ ಮಾತುಗಳಿಗೆ ಮನನೋಯಿಸಿಕೊಳ್ಳದ ರಾಜರು ಇರಲಾರರು. ಅಮ್ಮಾ ನೀನೆ ಹೇಳು. ಆಧಾರರಹಿತವಾದ ನಿಂದೆಯಿಂದ ನಮಗಾಗುವ ಕುಂದೇನು? ಪರಮಾತ್ಮನನ್ನು ಧ್ಯಾನಿಸುವ ನಾನು, ಪಾಪಿಯೋ? ಅಥವಾ ಪುಣ್ಯಶಾಲಿ ಎಂಬುದನ್ನು ಯೋಚಿಸಿ ಹೇಳು.

ರಾಣಿ: ನಿನ್ನ ಈ ವಾದವು ನನಗೆ ಬೇಕಿಲ್ಲ. ಜನಾಪವಾದವನ್ನು ನಾನು ಸಹಿಸಲಾರದಂತಾಗಿರುವೆ. ಶ್ರೀರಾಮನಾದರೂ ಅಪವಾದಕ್ಕೆ ಹೆದರಿ ಸೀತೆಯನ್ನು ಕಾಡಿಗೆ ಕಳುಹಲಿಲ್ಲವೇ? ಇಂತಹ ಮಹಾತ್ಮರುಗಳಿಂದ ಪವಿತ್ರವಾದ ಭಾರತಭೂಮಿಯಲ್ಲಿ ಜನ್ಮವೆತ್ತಿ ಅವರ ಕೀರ್ತಿಗೆ ಕಳಂಕ ವನ್ನುಂಟುಮಾಡುವುದು ವಿಹಿತವೇ?

ಮೀರಾ: ಅಮ್ಮಾ, ರಾಮಚಂದ್ರನು ಅಗಸನ ಮಾತಿಗಾಗಿ ಸೀತಾ ದೇವಿಯನ್ನು ಕಾಡುಪಾಲುಮಾಡಿರುವದು ನ್ಯಾಯವೆಂದೆನಿಸುವದೇ? ಆಕೆ ಯನ್ನು ನಗರದಿಂದ ಓಡಿಸುವದು ಜನಸಮ್ಮತವಾಗಿತ್ತೇ? ಆದಿರಲಿ. ನನ್ನೀ ನಡತೆಯಿಂದ ಪವಿತ್ರವಾದ ಭಾರತಭೂಮಿಗಾಗಲೀ ರಾಜಪುತ್ರಕುಲಕ್ಕಾ ಗಲೀ ಅಪವಾದವು ಬರಲಾರದು. ವಿಶ್ವರೂಪಿಯಾದ ಪರಮಾತ್ಮನನ್ನು

ಧ್ಯಾನಿಸಿದವರು ಯೋಗಿಗಳೆಂದು ಪೂಜಿಸಲ್ಪಡುತ್ತಿರುವಾಗ, ನನಗೆ ಮಾತ್ರ ಈ ಅಪವಾದವೇಕೆ?

ರಾಣಿ: ಸ್ತ್ರೀಯರಿಗೆ ವಿದ್ಯಾಜ್ಞಾನವು ಯಾವಾಗ ಉಂಟಾಗುವದೋ ಆಗ ಅವರು ಮಿತಿಮೀರಿ ನಡೆಯುವರು. ಇವಳೊಡನೆ ಚರ್ಚಿಸುವದು ಅಸಾಧ್ಯ! ಪ್ರೀತಿಯ ಒಬ್ಬಳೆ ಮಗಳಾದ ಇವಳ ನಡತೆಯನ್ನು ಹೇಗೆ ಸಹಿಸಲಿ? ನಾಲ್ಕು ಜನರ ಮುಂದೆ ಹೇಗೆ ಬಾಳಲಿ?

ಮೀರಾ: ಜನನೀ, ಏತಕ್ಕೆ ಚಿಂತಿಸುವೆ? ನಮ್ಮ ಕರ್ಮಗಳಿಗೆ ನಾವು ಅಧಿಕಾರಿಗಳು. ಈ ಜನ್ಮವನ್ನು ಸಾರ್ಥಕಪಡಿಸಲಾರದೆ, ನಾಲ್ಕಾರು ಜನರಂತೆ ನಾವೂ ಹೋಗಬೇಕೆನ್ನುವದು ಧರ್ಮವೇ? ಧರ್ಮಸೂಕ್ಷ್ಮವನ್ನರಿತು ಅದನ್ನು ಸಾಧಿಸುತ್ತಾ ಯಾವ ಆತಂಕಗಳು ಬಂದರೂ ಎದೆಗೆಡದೆ ಸತ್ಯ ಸಂಕಲ್ಪವನ್ನೇ ಸಾಧಿಸುವವರು ಸಾಧುಗಳಲ್ಲವೇ? ಪರಮಾತ್ಮನೆನ್ನುವಿರಿ! ಸಾಧುಗಳನ್ನು ಪೂಜಿಸುವಿರಿ! ಅವರ ದಾರಿಯಲ್ಲಿ ನಡೆವವರನ್ನು ದೂಷಿಸುವಿರಿ! ನಾನೇಕೆ ಯೋಗಿನಿಯಾಗಬಾರದು? ನಾನು ಕೃಷ್ಣನನ್ನು ಧ್ಯಾನಿಸುತ್ತಾ ಇದ್ದರೆ ಸಂಸಾರವೆಲ್ಲ ನಿಸ್ಸಾರವಾಗಿ ತೋರುವದು. ನಾನು ಆತನ ಧ್ಯಾನವನ್ನು ಬಿಡಲಾರೆ ಇದು ನನ್ನ ಸತ್ಯ ಸಂಕಲ್ಪ.

ರಾಣಿ: ಇದೋ ನಿನ್ನ ತಂದೆಯವರು ಬರುತ್ತಿರುವರು. ಅವರಿಗೂ ತಿಳಿಸಿಬಿಡು ನಿನ್ನ ಸಂಕಲ್ಪವನ್ನು.

(ರಾಜನ ಪ್ರವೇಶ; ಮೀರಾ ಆತನನ್ನು ಎದುರ್ಗೊಂಡು ನಮಸ್ಕರಿಸುವಳು.)

ರಾಜ: ಮಗೂ, ನಿನಗೆ ಭಗವಂತನು ಮಂಗಲವನ್ನುಂಟುಮಾಡಲಿ! ಇತ್ತ ಬಾ ಕಂದ! ನಮ್ಮ ಮಂತ್ರಿಗಳು ಭಾರತವನ್ನೆಲ್ಲಾ ಸಂಚರಿಸಿ ಅನೇಕ ರಾಜಪುತ್ರರ ಭಾವಚಿತ್ರಗಳನ್ನು ತಂದಿರುವರು. ಇವುಗಳಲ್ಲಿ ನಿನಗೊಪ್ಪುವ ರಾಜಕುಮಾರನನ್ನು ವರಿಸಬಹುದು.

ಮೀರಾ: (ನಕ್ಕು) ತಂದೆಯೇ, ನನ್ನ ಈ ಮನಸ್ಸು ಕೃಷ್ಣನಲ್ಲಿ ಸೇರಿ ಹೋಗಿರುವುದು. ಹೀಗಿರುವಲ್ಲಿ ಈ ಭಾವಚಿತ್ರಗಳಿಂದ ನನಗೆ ಪ್ರಯೋಜನವಾಗದು. ನನ್ನ ಹೃದಯದಲ್ಲಿ, ಮುರಲೀಧರನು ಸದಾ ಬೆಳಗುತ್ತಿರುವನು.

ರಾಜ: ಮೀರಾ, ಇದೇನು ಹೇಳುತ್ತಿರುವೆ? ವಿವಾಹ ವಯಸ್ಕಳಾದ ನಿನಗೆ ವಿವಾಹ ಬೇಡವೆ? ನಾಳೆ ಪ್ರಜೆಗಳೇನೆಂದಾರು! ಧರ್ಮಪ್ರಭುವಾದ ರಾಜನೇ ಕುಲಧರ್ಮಗಳನ್ನು ಮೀರಿ ನಡೆದರೆ ರಾಜ್ಯದಲ್ಲಿ ಧರ್ಮಸ್ಥಾಪನೆಯಾಗುವದೆಂತು?

ವೀರಾ: ಅಪ್ಪಾಜಿ, ಹುಟ್ಟಿದ ಹೆಣ್ಣುಮಕ್ಕಳೆಲ್ಲಾ ವಿವಾಹವಾಗಬೇಕೆಂದು ಯಾವ ಧರ್ಮವು ಸಾರಿದೆ? ನಿತ್ಯ ಬ್ರಹ್ಮಚಾರಿಗಳಾದ ಪುರುಷರು ಇಲ್ಲವೇ? ಅವರಂತೆ ನಾನೂ ಏಕೆ ಇರಲಾಗದು? ನನ್ನ ಹೃದಯವನ್ನು ಅರಿಯದವರು ನನ್ನನ್ನು ಪಾಪಿಯೆಂದು ದೂಷಿಸುತ್ತಿರಬಹುದು; ನನ್ನನ್ನು ಅರಿತವರು, ನಾನು ಭಾಗ್ಯವಂತಳೆನ್ನುವರು. ನನಗೆ ಈ ಜಗತ್ತೇ ನಿಸ್ಸಾರವಾಗಿ ತೋರುತ್ತಿರುವದು. ಆದುದರಿಂದ ನಾನು ಪರಮಾತ್ಮನನ್ನಾರಾಧಿಸುತ್ತಾ ಕಾಲ ಕಳೆಯುವೆ.

ರಾಜ: ವೀರಾ, ನೀನು ಶುದ್ಧ ಅವಿವೇಕಿ. ನಿನ್ನ ದೆಸೆಯಿಂದಾಗಿ ನಾನು ಜನಾನುರಾಗವನ್ನು ಕಳೆದುಕೊಂಡು ದೂಷಿತನಾಗಿರುವೆನು. ಯಾವಳಿಂದ ನನ್ನ ಮನೆಯು ಆನಂದಮಯವಾಗುವದೆಂದು ತಿಳಿದಿದ್ದೆನೊ, ಅವಳಿಂದಲೇ ನನ್ನ ರಾಜ್ಯವು ದೋಷದೃಷ್ಟಿಯಿಂದ ನೋಡಲ್ಪಡುವುದು! ನೀನು ಹಿರಿಯರ ಮಾತಿಗೆ ಅಲಕ್ಷ್ಯಮಾಡಿದೆಯಾದರೆ ನಿನ್ನನ್ನು ದೇಶಭ್ರಷ್ಟಳನ್ನಾಗಿ ಮಾಡಿಯೇ ನ್ಯಾಯಪರಿಪಾಲನೆಮಾಡಬೇಕಾಗುವುದಲ್ಲವೆ?

ವೀರಾ: ಅಪ್ಪಾ, ಕುಪಿತನಾಗಿ ನಿನ್ನನ್ನು ನೀನೆ ನೋಯಿಸಿಕೊಳ್ಳಬೇಡ! ಈ ಸಂತುಷ್ಟವಾದ ದೇಹಕ್ಕೆ ದೇಶವೇನು? ಅರಮನೆಯೇನು? ಅರಣ್ಯವೇನು? ಎಲ್ಲವೂ ಒಂದೇ. ನನ್ನನ್ನು ಹಾಗೆ ದೇಶಭ್ರಷ್ಟಳನ್ನಾಗಿ ಮಾಡಿಸುವದರಿಂದ ನಿನ್ನ ಮನಸ್ಸಿಗೆ ಶಾಂತಿಯು ಲಭಿಸುವದಾದರೆ, ಸಾವಕಾಶವೇಕೆ?

ರಾಜ: ನೀನು ಹೀಗೆ ವಾದಮಾಡುವದರಿಂದ ನನ್ನ ಕೋಪವು ಅಧಿಕವಾಗುತ್ತಿದೆ. ಇದರಿಂದ ನಿನಗೆ ಕೆಡುಕುಂಟಾಗುವದು ನಿಶ್ಚಿತ!

ವೀರಾ: ಜನಕ! ಜಗದ ಪ್ರತಿಯೊಬ್ಬ ಮಾನವನಿಗೂ ಒಂದೊಂದು ಮನೋಧರ್ಮವಿದೆ. ನೀನು, ನಿನ್ನಲ್ಲಿರುವ ರಾಜಧರ್ಮವನ್ನು ಪ್ರಯೋಗಿಸು. ನನ್ನ ಮನಸ್ಸಿನ ಧರ್ಮವನ್ನು ಮಾತ್ರ ಬದಲಿಸಲಾರೆ!

ರಾಜ: (ರಾಣಿಯ ಕಡೆ ತಿರುಗಿ) ದೇವಿ, ಈ ಮೂರ್ಖಳಿಂದ ನೀನು ಘಾಸಿಯಾಗಿರುವೆ. ಇವಳಿಂದ ನಮಗುಂಟಾಗಿರುವ ಅಪವಾದವನ್ನು ದೂರೀಕರಿಸಬೇಕಾದರೆ, ಇವಳಿಗೆ ವಿಷಪಾನವನ್ನು ಮಾಡಿಸುವುದೇ ಸರಿ.

ರಾಣಿ: ಪ್ರಾಣಪ್ರಿಯ, ಎಂಥ ಮಾತಿದು! ಇವಳು ನನ್ನ ನಿನ್ನ ಮಗುವಲ್ಲವೆ? ಇವಳ ಅಪರಾಧವನ್ನು ಕ್ಷಮಿಸು.

ರಾಜ: ಅದು ನ್ಯಾಯು. ಅದಕ್ಕೆ ಎಲ್ಲರೂ ತಲೆಬಾಗಲೇಬೇಕು. ಆಜ್ಞಾಭಂಗವನ್ನು ನಾನು ಸೈರಿಸಲಾರೆ. ಬೇಗನೇ ನನ್ನ ಆಜ್ಞೆಯುನ್ನು ನೆರವೇರಿಸು. ಯಾರಲ್ಲಿ? ಈ ಅವಿಧೇಯಳಿಗೆ ಕೊಡಲು ಉಗ್ರವಿಷವನ್ನು ತೆಗೆದುಕೊಂಡು ಬಾ! (ಸೇವಕನು ಬಂದು, ನಮಿಸಿ, ಹೋಗಿ, ವಿಷದ ಬಟ್ಟಲು ತರುವನು.)

ರಾಣಿ: ಭಗವಂತಾ, ಬಹುಕಾಲ ಮಕ್ಕಳಿಲ್ಲದೆ ಮಕ್ಕಳ ಸುಖಕ್ಕಾಗಿ ನಿನ್ನನ್ನು ಬೇಡಿ ಪಡೆದ ಮಗಳಿಗೆ, ಅವಳ ಹಟಕ್ಕಾಗಿ ವಿಷಪಾನವನ್ನು ತಾಯಿಯಾದ ನಾನೇ ಮಾಡಿಸಬೇಕಾಯಿತೇ? ಮೀರಾ, ನೀನಾದರೂ ನಿನ್ನನ್ನು ಹೊತ್ತು ಹೆತ್ತು ಸಾಕಿ ಸಲಹಿದ ಜನನಿಯ ಮಾತಿಗೆ ಮನ್ನಣೆ ಕೊಟ್ಟು ನಿನ್ನ ಸಂಕಲ್ಪವನ್ನು ತ್ಯಜಿಸು!

ಮೀರಾ: ಜನನೀ, ದುಃಖಿಸಬೇಡ! ಪರಮಪುರುಷನ ಸಂಕಲ್ಪವಿಲ್ಲದೆ ಜಗತ್ತಿನಲ್ಲಿ ಏನೂ ನಡೆಯಲಾರದು. ಆತನ ಲೀಲೆಗಳು ನಮಗೆ ಗೋಚರಿಸಲಾರವು. ನೀನೆ ಯೋಚಿಸು. ಆತನ ಚಿತ್ತವಿದ್ದಂತಾಗಲಿ! ಕೊಡು, ನಾನೇ ಕುಡಿಯುವೆನು. (ವಿಷದ ಬಟ್ಟಲನ್ನು ತೆಗೆದುಕೊಳ್ಳುವಳು.) ಕೃಷ್ಣ! ಪ್ರೇಮಸಾಗರ! ನನಗಿರುವ ಕೃಪೆಯು ನಿನ್ನ ದರ್ಶನವಿಲ್ಲವೆಂಬುದೇ ಆಗಿದೆ. ಆದ್ದರಿಂದ ನೀನು ವಿಷರೂಪಿಯಾಗಿ ನನ್ನ ಹೃದಯದಲ್ಲಿ ಸೇರಿ ನನ್ನ ದಾಹವನ್ನು ಅಡಗಿಸು. ಪ್ರಪಂಚವೆಲ್ಲಾ ನಿನ್ನದಾಗಿರುವದು. ಇದು ಪ್ರಪಂಚದ ಒಂದು ರೀತಿ ಪ್ರೀತನಾಗು! ಪಾಲಿಸು!

(ವಿಷಪಾನ ಮಾಡುವಳು. ಕೃಷ್ಣ ವಿಗ್ರಹದ ಕಂಠವೆಲ್ಲ ನೀಲವಾಗುವದು.)

ರಾಜ: (ಆಶ್ಚರ್ಯ) ಏನಿದು, ಈ ಕೃಷ್ಣವಿಗ್ರಹದ ಕಂಠವು ನೀಲವರ್ಣವಾಗಿರುವದು! ಬಾಲಕಿಯು ಧ್ಯಾನಮಗ್ನಳಾಗಿ ಪ್ರೇಮದಿಂದ ನಿಂತಿರುವಳು! ಇವಳ ಭಕ್ತಿಯೂ ಧೈರ್ಯವೂ ಅನಾದೃಶವಾದುದು! ಈಕೆಗಾಗಿ ಭಗವಂತನೇ ವಿಷಪಾನವನ್ನು ಮಾಡಬೇಕಾದರೆ ಈಕೆ ಭಗವತಿಯೇ ಸರಿ! ಇಂತಹಳನ್ನು ಮಗಳೆಂದು ಭ್ರಮಿಸಿದೆನಲ್ಲ! ದೇವ, ಪ್ರಪಂಚವನ್ನು ಉರಿಯುವ ವಿಷಜ್ವಾಲೆಯಿಂದ ಕಾಪಾಡುವದಕ್ಕಾಗಿ ಶಂಕರನು ವಿಷಪಾನಮಾಡಿದನು! ಕೃಷ್ಣಾ, ನೀನಾದರೂ ಒಬ್ಬ ಭಕ್ತಳ ಉದ್ಧಾರಕ್ಕಾಗಿ ವಿಷವನ್ನು ಧರಿಸಿದೆ! ನನ್ನ ಅಪರಾಧವನ್ನು ಕ್ಷಮಿಸು! ಮಗಳೇ, ಪ್ರೇಮಮಯವಾದ ಹೃದಯವನ್ನೊಳಗೊಂಡ ನೀನು ಕೂಡ ನನ್ನನ್ನು ಕ್ಷಮಿಸು!

ಮೀರಾ: (ಕಣ್ಣೀರು ತುಂಬಿ) ಅಪ್ಪಾಜಿ, ಈ ಕಣ್ಣೀರ ಹನಿಗಳು ಆನಂದಬಾಷ್ಪಗಳು! ಕರುಣಾಮಯನಾದ ಸ್ವಾಮಿಯು ವಿಷವನ್ನು ಅಮೃತವನ್ನಾಗಿ ಮಾಡಿ ನನ್ನಲ್ಲಿ ಅಮೃತರೂಪಿಯಾಗಿ ಸೇರಿಹೋದನು! ನೀನು ಆತನ ಮಹಿಮೆಯನ್ನು ತಿಳಿಯದಾದೆ. ಈ ದೇವಕಿಪ್ರಿಯ ಬಾಲನಲ್ಲದೆ ಮತ್ತಾರನ್ನು ತಾನೇ ಬಯಸೀತು.

## ದೃಶ್ಯ ೪. (ದೇವಸ್ಥಾನ.)

(ಪುರನಿವಾಸಿಗಳೆಲ್ಲಾ ಭಜನೆ ಮಾಡುತ್ತಾ ಪ್ರವೇಶಿಸುವರು. ಅಕ್ಬರ್–ತಾನಸೇನ ಇಬ್ಬರೂ ನಿಂತು ನೋಡುತ್ತಿರುವರು.)

ತಾರಾ: ಸಖೀ, ನೀರದೆ, ನೋಡಿದೆಯಾ? ಈ ಕೃಷ್ಣನ ವೈಭವ! ಚಿತ್ತೂರಿನ ಸೌಭಾಗ್ಯಲಕ್ಷ್ಮಿಯು ಇಲ್ಲಿಯೇ ಮೈವೆತ್ತು ಬಂದಂತೆ ತೋರುವುದು ನಿಜ! ಪರಮಭಾಗವತಳಾದ ಮೀರಾದೇವಿಗೆ ಪ್ರಿಯವಾಗಿರುವ ಈ ದೇವಾಲಯಕ್ಕೆ ಏನು ತಾನೆ ಕೊರತೆಯಿರಲು ಸಾಧ್ಯ? ದಿನನಿತ್ಯವೂ ಆಕೆಯ ಗಾನಸುಧೆಯನ್ನು ಸೇವಿಸಿ ಆನಂದದಿಂದ ಹೋಗುವೆನು. ಅವಳಲ್ಲಿರುವ ಅಪೂರ್ವ ತೇಜಸ್ಸು, ರೂಪ, ಗಾನಮಾಧುರ್ಯವನ್ನು ಕಂಡರೆ ಅವಳು ಮಾನವಳಲ್ಲ, ಭಗವತಿಯೇ ಸರಿಯೆಂದು ಖಚಿತವಾಗುವುದು.

ನೀರದೆ: ತಾರಾ, ಚೆನ್ನಾಯಿತು! ನೀನೂ ಮೀರಾದೇವಿಯ ಶಿಷ್ಯಳಾಗುತ್ತಲಿರುವೆ! ನೀನು ಕೂಡ ಅವಳಂತೆ ಉನ್ಮತ್ತಳಾಗುವಿಯೇನೋ ಕಾಣೆ! ಚಿತ್ತೂರೆಲ್ಲವೂ ಮೀರಾಬಾಯಿ ಗಾನಸೌಭಾಗ್ಯದಿಂದ ಬೆರಗಾಗಿ ವೈರಾಗ್ಯ ಮಾರ್ಗದಲ್ಲಿ ಹೊರಡುವುದಾದರೆ ಮನೆಮಕ್ಕಳ ಗತಿಯೇನು? ನಮ್ಮ ಮುಂದಿನ ರಾಣಿ ಮೀರಾಬಾಯಿಯು ವಿವಾಹವನ್ನೇ ಆಗುವುದಿಲ್ಲವೆನ್ನುತಿದ್ದವಳು,— ತಂದೆತಾಯಿಗಳು ಬಲಾತ್ಕಾರ ಪಡಿಸಿದುದರಿಂದ ರಾಣಾಕುಂಭನನ್ನು ನೆಪಮಾತ್ರಕ್ಕೆ ವರಿಸಿದಳಂತೆ. ಆಕೆ ಸದಾಕಾಲವೂ ದೇವಸ್ಥಾನದಲ್ಲಿಯೇ ಇರುತ್ತಾಳೆ. ರಾಜನಾದರೂ ಪ್ರಾರಂಭದಲ್ಲಿ ಆಕೆಯು ಹೇಳಿದ ನಿಬಂಧನೆಗಳಿಗೊಪ್ಪಿಕೊಂಡು ವಿವಾಹ ಮಾಡಿಕೊಂಡನು. ಯಾವಾಗಲೂ ಹೀಗೆಯೇ ನಡೆಯಲು ಸಾಧ್ಯವೇ? ಇದು ಎಲ್ಲರಿಗೂ ಸಾಧ್ಯವೇ? ನಮ್ಮ ಸಂಸಾರ ನಮಗೆ ಇದ್ದೇ ಇದೆ.

ತಾರಾ: ನೀರದೆ, ನಿನ್ನ ಪರಿಹಾಸವು ಸಾಕು. ಮಾನವ ಜನ್ಮಕ್ಕೆ

ಸುಹೃದಯವು ಸಾರ್ಥಕವಲ್ಲವೇ? ವೈರಾಗ್ಯವೆಂದರೆ ಶುದ್ಧ ಮಾನಸವುಂಟಾಗುವುದೇ? ದೇವಿ, ಗಾಯನವು ಶುದ್ಧಮಾನಸವನ್ನುಂಟು ಮಾಡುವುದು.

(ಮಂದಿರದಲ್ಲಿ, ಎಲ್ಲರೂ ಸೇರಿ ಭಜನೆ ಮಾಡುವರು.)

ಅಕ್ಬರ್: ಮಿತ್ರಾ, ಸುಪ್ರಸಿದ್ಧ ಚಿತ್ತೂರು ದೇವಾಲಯವಿದಲ್ಲವೇ? ಅದೋ, ಗುಂಪುಗುಂಪಾಗಿ ಜನರೆಲ್ಲಾ ಬರುತ್ತಿರುವರು. ಈ ನಗರವೆಲ್ಲವೂ ಮೀರಾದೇವಿಯ ಕೀರ್ತಿ ಕಾಂತಿಯಿಂದ ಪವಿತ್ರವಾಗಿದೆ. ನಗರವೆಲ್ಲವೂ ಸಂತೋಷಭರಿತವಾಗಿದೆ.

ತಾನಸೇನ: ಮಹಾಪ್ರಭು, ಭಾರತ ಸಾಮ್ರಾಜ್ಯದ ನಾಯಕರಾದ ತಾವು, ವೇಷಾಂತರದಿಂದ ಚಿತ್ತೂರಿಗೆ ಬರುವ ಕಾರಣವೇನೋ!

ಅಕ್ಬರ್: ನೀನು ಸಂಗೀತ ಕವಿಯಾಗಿರುವಿ. ಮಾನವಹೃದಯದಲ್ಲಡಗಿರುವ ದಿವ್ಯತೇಜಸ್ಸನ್ನು ಕಾಣಬಲ್ಲವನು. ನೀನೇ ಊಹಿಸು.

ತಾನ: ಭಾರತದ ಸೌಂದರ್ಯಾತಿಶಯಗಳನ್ನು ಕಾಣುವುದಕ್ಕಾಗಿ ಹೀಗೆ ಬಂದಿರಬಹುದಲ್ಲವೇ?

ಅಕ್ಬರ್: ಮಿತ್ರಾ, ಭಾರತದ ಸೌಂದರ್ಯವು ನೋಡತಕ್ಕದ್ದೇ ಸರಿ! ಆದರೂ ಅದಕ್ಕಿಂತಲೂ ಹೆಚ್ಚಿನ ಭಾಗ್ಯವನ್ನರಸುತ್ತಾ ಈ ಲಕ್ಷ್ಮೀನಿವಾಸಕ್ಕೆ ಬಂದಿರುವೆನು.

ತಾನ: ರಾಜಾ; ನಿನ್ನ ಅಭಿಪ್ರಾಯವನ್ನು ತಿಳಿದೆನು. ಮೀರಾಬಾಯಿಯ ಗಾನವನ್ನು ಅವಳ ಬಾಯಿಯಿಂದಲೇ ಕೇಳಿ ಆನಂದಿಸುವುದಕ್ಕಲ್ಲವೆ? ಮೊಗಲ ಬಾದಷಹನು, ಢಿಲ್ಲಿಯ ಸಿಂಹಾಸನವನ್ನಿಳಿದು, ಪಾದಾಚಾರಿಯಾಗಿ ಚಿತ್ತೂರಿಗೆ ಬಂದಿರುವರು. ಇದು ಆಶ್ಚರ್ಯವೇ ಸರಿ! ಯಾವ ರಾಜನ ಸಭೆಯು ಕವಿಶ್ರೇಷ್ಠರಿಂದಲೂ, ಗಾಯನ ಶಿರೋಮಣಿಗಳಿಂದಲೂ ಕೂಡಿರುವುದೊ, ಅಂಥ ಭಾರತೇಶ್ವರನು, ಓರ್ವ ಸ್ತ್ರೀಯ ಗಾನಕ್ಕಾಗಿ ಚಿತ್ತೂರಿಗೆ ಬರಬೇಕೆ? ಚಿತ್ತೂರಿನ ರಾಜನನ್ನು ಸೋಲಿಸಿ, ರಾಣಿಯನ್ನು ಢಿಲ್ಲಿಗೆ ಕರೆಯಿಸಬಹುದಿತ್ತಲ್ಲವೇ?

ಅಕ್ಬರ್: ಕವಿಶ್ರೇಷ್ಠನಾದಂತಹ ನೀನು, ಸಾಮಾನ್ಯನಂತೆ ಮಾತಾಡಬಹುದೇ? ಅಕ್ಬರನ ಮುಖ್ಯ ಉದ್ದೇಶವು—ಭಾರತಭೂಮಿಯನ್ನು ಶಾಂತಿರಸದಿಂದ ತುಂಬಿ, ಹಾಹಾಕಾರ ಮಾಡುವವರ ಹೃದಯಗಳಲ್ಲಿ ಶೀತವನ್ನು ಉಂಟುಮಾಡಬೇಕೆಂದಲ್ಲದೆ, ಸ್ವಾರ್ಥಪರವಾಗಿ ಹೋರಾಡಿ ಭಾರತವೀರ

ರಮಣಿಯರಿಗೆ ಅವಮಾನಪಡಿಸಬೇಕೆಂದಲ್ಲ. ಭಾರತಭೂಮಿಯ ಶ್ರೀಯ ಸ್ಸಿಗೆ ಕಾರಣರಾದವರು, ಇಲ್ಲಿನ ಶುದ್ಧಮಾನಸರಾದ ಮಹಿಳೆಯರಲ್ಲವೇ? ಮಾನಿನಿಯರಿಗೆ ಅವಮಾನಪಡಿಸಿದರೆ, ದೇವತೆಗಳೂ ಕುಪಿತರಾಗುವರು. ರಾಜನಿಗೆ ಸ್ತ್ರೀಪುರುಷರೆಂಬ ಭೇದವಿರಲಾಗದು. ಎಲ್ಲಿ ಆತ್ಮತೇಜಸ್ಸಿರುವದೊ ಅಲ್ಲಿ ಭಗವಂತನನ್ನು ಕಾಣುವುದು ಮಾನವಧರ್ಮ.

ತಾನ: ರಾಜಾ, ಪ್ರಪಂಚದ ನಡವಳಿಕೆಗಳಿಂದ ಭ್ರಾಂತನಾಗಿ ಆಡಿದ ತುಚ್ಛ ಮಾತುಗಳನ್ನು ಕ್ಷಮಿಸು. ಭಾರತದ ಸಿಂಹಾಸನವನ್ನು ಅಲಂಕರಿಸುವ ನಿನಗೆ ಧರ್ಮಬುದ್ಧಿಯು ಉಚಿತವಾದುದೇ ಸರಿ!

ಅಕ್ಬರ್: ಮಿತ್ರ, ರಾಜಾ ಎಂಬ ಪದವನ್ನು ಮೊದಲು ತ್ಯಜಿಸು. ನಮ್ಮ ವೇಷಕ್ಕನುಗುಣವಾಗಿ ಮಾತಾಡು. ಇದು ಹಿಂದೂ ದೇವಾಲಯ, ನಾವು ಹಿಂದುಗಳು.

ತಾನ: ಆಗಬಹುದು. ನನ್ನ ಮಾತಿಗಿಂತಲೂ, ನಿನ್ನ ನಡಿಗೆಯು ಗುರುತನ್ನು ಸುಲಭವಾಗಿ ಹೇಳುವುದು. ಇದರಲ್ಲಿ ನನ್ನ ಅಪರಾಧವೇನು? ಜೋಕೆ, ಈ ರಾಜಪುತ್ರ ಹುಲಿಗಳು ಯಾರೆಂಬುದನ್ನು ಬಲ್ಲೆಯಾ? ಅವರ ಸ್ತ್ರೀಯರಿಗೆ ಸ್ವಲ್ಪ ಅಪಮಾನವಾದರೆ ಶತ್ರುವಿನ ರಕ್ತವನ್ನು ಹೀರುವ ಸಾಹಸಿಗಳು. ಹಿಂದೆ ರಾಣಾ ಕುಂಭನ ಕುಲದ ಅರಸು, ತನ್ನ ರಾಣಿಯನ್ನು ನೋಡಬೇಕೆಂದು ಬಯಸಿದ ಮಹಮ್ಮದೀಯನನ್ನು ಸುಮ್ಮನೆ ಬಿಡಲಿಲ್ಲ. ಮಹಮ್ಮದೀಯನ ದೃಷ್ಟಿಯು ಸಹ ಆ ರಜಪೂತ ರಮಣಿಯ ಮೇಲೆ ಬಿದ್ದ ಮಾತ್ರಕ್ಕೆ ಕಲಂಕಿತವಾಗುವಳೆಂದು ನಂಬಿರುವ ಈ ರಜಪೂತ ರಾಜ್ಯಕ್ಕೆ ನೀನು ಹೀಗೆ ಬಂದಿರುವೆಯಲ್ಲಾ, ಎಂದು ಕಳವಳಪಡುತ್ತಿದ್ದೇನೆ!

ಅಕ್ಬರ್: ಮಿತ್ರಾ, ಭೀತನಾಗುವೆಯೇಕೆ? ಹೃದಯವು ಪರಿಶುದ್ಧವಾಗಿರುವಾಗ ಹೆದರಬೇಕೇ? ಎಲ್ಲಿ? ಮೀರಾಬಾಯಿಯ ಗಾನಗಳಲ್ಲಿ ಒಂದನ್ನು ಹಾಡು ನೋಡೋಣ.

(ತಾನಸೇನನು ಹಾಡುವನು.)

## ದೃಶ್ಯ ೫.

(ಇಬ್ಬರು ಪುರುಷರ ಪ್ರವೇಶ. ತಾನಸೇನನು ಹಾಡುತ್ತಿದ್ದಾನೆ. ಅಕ್ಬರನು ನಿಂತು ಕೇಳುತ್ತಿರುವನು.)

ಗಂಗಾಧರ: ನೋಡಿದೆ ಏನಯ್ಯ ನಾನು ಹೇಳಿದ ಮಾತು? ಇಲ್ಲಿಯೇ ನಿದರ್ಶನಕ್ಕೆ ಬಂತು. ಮಹಾರಾಣಿಯು ಸಾಮಾನ್ಯಳೇ? ಈ ದೇಶದವರಷ್ಟೇ

ಅಲ್ಲದೆ, ಇತರ ದೇಶದವರು ಕೂಡಾ ಅವಳ ಗಾನವನ್ನೇ ಹಾಡುವರು. ನೀನು ಆಕೆಯನ್ನು ನೋಡಿ ಜಿಗುಪ್ಸೆ ಪಡುವೆಯಲ್ಲ!

ರಾಮು: ಸಾಕಪ್ಪ ಸಾಕು! ನಿನ್ನ ಈ ಹಾಳು ಪುರಾಣ ಕೇಳಿ ಸಾಕಾಗಿದೆ. ಶೀಘ್ರದಲ್ಲಿಯೇ ನೀನು ಕೂಡಾ ಕಾವಿಬಟ್ಟೆಯನ್ನು ಧರಿಸುವಂತಿದೆ.

ಗಂಗಾಧರ: ಅಲ್ಲಪ್ಪ, ಕಾವಿ ಧರಿಸಿದ ಮಾತ್ರಕ್ಕೆ ಯೋಗಿಗಳಾದೆವೆಂದು ಭಾವಿಸಿದೆಯಾ? ವೈರಾಗ್ಯ,ಭಕ್ತಿರಸಗಳ ಬಣ್ಣ ಬರುವದೇ ಅಸಾಧ್ಯ.

ರಾಮು: ಮೀರಾಬಾಯಿಯ ಮುಖ್ಯಶಿಷ್ಯನಾದರೆ ಆಯಿತು. ಯಾರೊ ಬರುವಂತಿದೆ. ಯಾರು ಸ್ವಾಮಿ ತಾವು? ಚಿತ್ತೂರಿಗೆ ಹೊಸಬರಂತಿದೆ.

ತಾನ: ನಾವು ಮೊಗಲ ದೇಶದ ಯಾತ್ರಾರ್ಥಿಗಳು. ಇಲ್ಲಿಯ ಸೌಭಾಗ್ಯವನ್ನು ಕಾಣಲು ಬಂದೆವು.

ಗಂಗಾ: ಹಾಗಿದ್ದರೆ ಚಿತ್ತೂರು ಯಾತ್ರಾಸ್ಥಳವಲ್ಲ. ವೃಂದಾವನವು ಸಮೀಪದಲ್ಲಿದೆ.

ತಾನ: ನಿಜ. ಅಲ್ಲಿಯಾದರೋ ಶ್ರೀ ಕೃಷ್ಣನ ವೇಣುಗಾನವನ್ನು ಕೇವಲ ಊಹಿಸಿ ಧ್ಯಾನಿಸಿ ತಿಳಿಯಬೇಕಾಗಿದೆ. ಇಲ್ಲಿ ವೇಣುನಾದವು ಹೃದಯವನ್ನು ಹೊಕ್ಕು ಆನಂದವನ್ನುಂಟು ಮಾಡುತ್ತಿದೆ. ಜ್ಞಾನಸಾಮ್ರಾಜ್ಯವನ್ನು ಹೂಡುವಂತಿದೆ. ನಾನು ಬೇರೆ ಈ ಯಾತ್ರಾಸ್ಥಳವನ್ನು ನೋಡಲು ಬಂದಿಲ್ಲ. ನನ್ನ ಮಿತ್ರನ ಅಭಿಲಾಷೆಯನ್ನು ನೆರವೇರಿಸಲು ಬಂದಿರುವೆನು.

ಗಂಗಾ: ಈತನು ಬಲು ಗಂಭೀರ ಪುರುಷನು. ಈ ತೇಜಸ್ವಿಯು ಶಕ್ತಿಯುತನಾಗಿ, ರತ್ನಾಕರನಂತಿರುವನು.

ತಾನ: ಅಯ್ಯಾ, ನನ್ನೀ ಮಿತ್ರನು, ಪೂರ್ವಜನ್ಮದಲ್ಲಿ ಚಕ್ರವರ್ತಿಯಾಗಿದ್ದಿರಬಹುದು. ಇನ್ನೂ ಆ ಸಂಸ್ಕಾರವು ಆತನಲ್ಲಿ ಕಂಗೊಳಿಸುವದು. ಅದಿರಲಿ. ನಾನು ಚತುರನಾದ ಕವಿ. ನೀನು ಬರುತಿದ್ದಾಗ, ನಾನು ರಚಿಸಿದ ಕೆಲವು ಗೀತೆಗಳನ್ನು ಹಾಡುತಿದ್ದೆನು.

ರಾಮು: ನಿಲ್ಲಿಸಿಬಿಟ್ಟಿರಲ್ಲ. ಬೇಡವಯ್ಯಾ, ಬೇಡ! ಈ ದೇಶದಲ್ಲಿ ಇಬ್ಬರಿಂದ ಉಂಟಾಗಿರುವ ಮನೋವ್ಯಾಕುಲವು ಮತ್ತು ಅವುಗಳ ಅನುಭವವೂ ಸಾಕಾಗಿರುವದು. ನಮ್ಮ ರಾಜಸಿಗಾದರೋ ನಮ್ಮ ರಾಣಿಯು ನವೀನ ಗಾನಗಳನ್ನು ಕೇಳಿದಷ್ಟು ಕೋಪವೇ ಉಂಟಾಗುವದು. ರಾಜನು ರಾಣಿಯ ಪೂಜಾರಿಗಳನ್ನು ಸಹಕರಿಸುವ ಕಾಲವೂ ಒಂದಿತ್ತು. ಆದೊಂದು

ಕಾಲ; ಇಂದು ಹಾಗಿಲ್ಲ. ನೀವು ಮೊಗಲ ರಾಜ್ಯದಿಂದ ಬಂದವರೆಂದು ಹೇಳಿದಿರಾ? ಸರಿ. ಅಕ್ಬರ ಬಾದಷಹನು, ಮೀರಾದೇವಿಯ ಭಜನೆಗಳನ್ನು ಕೇಳಲು ಇಚ್ಛಿಸಿರುವನೆಂದು ಕೇಳಿರುವೆವು. ನಿಜವೆ? ನಿಮಗರಿತಿದೆಯೆ?

ತಾನ: ಒಂದು ವೇಳೆ ನಿಜವಾದರೆ?............?

ಗಂಗಾ: ಇಲ್ಲ. ಎಂದಿಗೂ ಸಾಧ್ಯವಾಗಲಾರದು. ಇದು ರಜಪೂತ ವೀರರ ದೇಶ. ಇಲ್ಲಿನ ರಾಜಪುತ್ರರ ಕುಲದ ಗೌರವದ ವಿಚಾರವನ್ನು ನೀವು ತಿಳಿದಿರಬಹುದು.

ತಾನ: ರಾಜನು ಕೇವಲ ಸಂಶಯಪರನೋ? ಒಂದು ವೇಳೆ, ಅಕ್ಬರನು ಬಂದು, ರಾಣಿಯ ದರ್ಶನ ಪಡೆದರೆ?

ರಾಮು: ಏನಾಗುವುದೋ ಹೇಳಲಾರೆ. ನಮ್ಮ ರಾಜನು ಸಾಮಾನ್ಯವೆಂದು ತಿಳಿದೆಯಾ? ರಾಣಾ ಕುಂಭನು ಕ್ಷತ್ರಿಯ ಸಿಂಹ. ಶತ್ರುಗಳ ರಕ್ತವನ್ನು ಚೆಲ್ಲಿ, ತನ್ನ ವಂಶದ ಕಳಂಕವನ್ನು ದೂರೀಕರಿಸುವ ವೀರಪುರುಷನೆಂದು ತಿಳಿ. ಕುಂಭನ ವಂಶಜರು ಗೌರವಪ್ರಿಯರು.

ಅಕ್ಬರ್: ಮಿತ್ರಾ, ಬರಿಯ ಚರ್ಚೆಯಿಂದ ಫಲವೇನು? ನಡೆ, ಮುಂದಿನ ಕೆಲಸವನ್ನು ಮಾಡುವ.

ಗಂಗಾ: ರಾಣಿಯು ದೇವಸ್ಥಾನಕ್ಕೆ ಬರುವ ಸಮಯವಾಯಿತು. ಆ ದೇವಿಯ ಮಾನಸ ಸರೋವರದಲ್ಲಿ ಅರಳಿರುವ ಗಾನವೆಂಬ ಪುಷ್ಪಗಳು ಶಾಂತಿ ಸುಗಂಧಗಳನ್ನು ಬೀರುವವು ಎಂಬುದರಲ್ಲಿ ಸಂದೇಹವಿಲ್ಲ. ಮಿತ್ರಾ, ನಡೆ, ಹೋಗುವ. ಯಾತ್ರಾರ್ಥಿಗಳೇ, ನಾವು ಇನ್ನೊಂದು ಬಾರಿ ತಮ್ಮ ದರ್ಶನವನ್ನು ಪಡೆವೆವು. (ಹೋಗುವರು)

ತಾನ: ಮಿತ್ರಾ, ನಾವು ಇಲ್ಲಿ ನಿಲ್ಲಕೂಡದು. ಪುರಜನರು—ನಿನ್ನ ಗುರುತು ಹಿಡಿಯುವರು ಎಂಬುದರಲ್ಲಿ ಸಂದೇಹವಿಲ್ಲ.

ಅಕ್ಬರ್: ಮಿತ್ರಾ, ಭೀತನಾದೆಯೇಕೆ? ನಾನು ಕೃತಕಾರ್ಯನಾಗದೆ ಇಲ್ಲಿಂದ ಹೊರಡಲಾರೆ.

ತಾನ: ನಮಗಾಗಿ ನಾನು ಹೆದರುತ್ತಿಲ್ಲ. ಆದರೆ ಸಂಶಯವೆಂಬ ಅಗ್ನಿಯು ನಿರಪರಾಧಿಯನ್ನು ದಹಿಸದೆ ಬಿಡದು. ಅದಕ್ಕಾಗಿ ಭೀತನಾಗಿರುವೆನು.

ಅಕ್ಬರ್: ಈ ಗಾನಮಾಧುರ್ಯವು ನನ್ನ ಮನಸ್ಸನ್ನು ಹೇಳಲಸದಳವಾದ ಆನಂದದಿಂದ ಉನ್ಮತ್ತನನ್ನಾಗಿ ಮಾಡಿರುವದು. ದೂರದಲ್ಲಿ ಕೇಳಿ

ಬರುವ ಗಾನವೇ ಇಂತಹ ಮಹಿಮೆಯಿಂದ ಕೂಡಿರುವಾಗ ಆಕಾರ ರೂಪ ಗಳು ಇನ್ನೆಂತಹ ಶಕ್ತಿಯನ್ನು ಒಳಗೊಂಡು ಹೇಗಿರಬಹುದು ಎಂದು ಆಶ್ಚರ್ಯಪಡುತಿದ್ದೇನೆ.

ತಾನ: ನಡೆ, ಹೊರಡುವ. ಇನ್ನು ಬಹಳ ಹೊತ್ತು ನಾವಿಲ್ಲಿದ್ದರೆ ವಿನೋದಕ್ಕೆ ಬದಲಾಗಿ ಪ್ರಮಾದವೇ ಉಂಟಾದೀತು.

ಅಕ್ಬರ: ಭೀತಿ ಪಡಬೇಡ! ಮೋಹವು ಅಕ್ಬರನನ್ನು ಮೋಸ ಪಡಿ ಸದು. ನಾನು ಇಲ್ಲಿಗೆ ಬಂದ ಉದ್ದೇಶವನ್ನು ಈ ವರೆಗೆ ನಿನ್ನಿಂದ ಮರೆ ಮಾಚಿದ್ದೆನು. ಪ್ರಪಂಚದಲ್ಲಿ ಏತಕ್ಕೆ ಶಾಂತಿಯಿಲ್ಲ? ಐಶ್ವರ್ಯದಿಂದ ತುಂಬಿ ದ್ದರೂ ಭಾರತದ ಬಾದಷಹನಾದ ಅಕ್ಬರನ ಮನಸ್ಸಿಗೆ ನೆಮ್ಮದಿ ಇಲ್ಲವೇಕೆ? ಯೋಚಿಸಿ ನೋಡಿದರೆ, ಚಿತ್ತೂರಿನಲ್ಲಿ ನನ್ನ ಸಂದೇಹಜನಕವಾದ ಯೋಚ ನೆಗೆ ಬೆಂಬಲ ದೊರೆಕೀತು. ಈ ಮಹಾನುಭಾವಳು ಈ ರಹಸ್ಯವನ್ನು ತಿಳಿದು, ಮಾಯೆಯೆಂಬ ಅಜ್ಞಾನವನ್ನು ಬೋಧಿಸಲು ಸರ್ವಶಕ್ತಳಾಗಿ ಸದಾನಂದದಿಂದಿರುವಳು. ಈ ಭಾಗ್ಯವಂತಳಿಂದ ದೇವರ ರಹಸ್ಯವನ್ನು ತಿಳಿಯುವದಕ್ಕಿಂತಲೂ ಬೇರೆ ಉದ್ದೇಶವೇನಿದೆ?

ತಾನ: ಮಿತ್ರಾ, ಇದುವರೆವಿಗೂ, ನಿನ್ನ ಹೃದಯವನ್ನೇಕೆ ಬಿಚ್ಚಿ ಮಾತಾಡದಾದೆ? ನಿನ್ನ ಶುದ್ಧ ಹೃದಯದಲ್ಲಿ ಶಂಕಿತನಾದ ನನ್ನನ್ನು ಕ್ಷಮಿಸು. ಹೀಗೆಯೆ ಅಲ್ಲವೆ, ಜನರು ಮಹಾತ್ಮರನ್ನು ದೂರಿ ಕಲುಷಿತರಾಗುವರು? (ಹೊರಡುವರು.)

ಅರಮನೆಯ ಸೇವಕ: (ಬರುತ್ತ, ಸ್ವಗತ) ಇತ್ತೀಚೆಗೆ–ಊರಿನಲ್ಲಿ ವಿಚಿತ್ರ ವಿದ್ಯಮಾನಗಳೇ ಕೇಳಿಬರುತ್ತಿವೆ. ಮೊದಲೇ ಮಹಾರಾಜನಿಗೆ ಕಾರಣವಿಲ್ಲದ ಆಗ್ರಹ. ಹೀಗಿರುವಲ್ಲಿ ಯಾರೊ ಯಾತ್ರಿಕನು ರಾಣಿಗೆ ರತ್ನಮಾಲಿಕೆಯನ್ನು ಕೊಟ್ಟು ಹೋಗಬಹುದೇ? ರಾಜನಾದರೂ ಕಂಡವರ ಮೇಲೆಲ್ಲಾ ಕಿಡಿಕಾರುತ್ತಿರುವನು. ಮಂತ್ರಿಗಳು ಕೂಡಾ ಕೇವಲ ಯೋಚನಾ ಪರರಾಗಿರುವರು. ಮಂತ್ರಿಯಾದರೊ ರತ್ನಪಡಿ ವ್ಯಾಪಾರಿಯನ್ನು ಆಸ್ಥಾ ನಕ್ಕೆ ಕರೆತರುವಂತೆ ಆಜ್ಞಾಪಿಸಿರುವನು. ಊರಲ್ಲಿ ಹುಡುಕುವೆನು. ಓಹೊ, ಚತುರಿಕೆ ಆತುರದಿಂದ ಬರುತ್ತಿರುವಳು!

ಚತು: ಅಯ್ಯಾ, ಮಹಾರಾಜರ ಸವಾರಿಯು ಎಲ್ಲಿರುವದು ಬಲ್ಲೆಯಾ?

ಸೇವಕ: ಖಂಡಿತವಾಗಿಯೂ ಹೇಳಬಲ್ಲೆ. ಮಂತ್ರಾಲೋಚನಾ ಗೃಹ

ದಲ್ಲಿ ಮಂತ್ರಿಯೊಡನೆ ಯೋಚನಾಪರರಾಗಿರುವರು. ಮಹಾರಾಣಿಯು ವರು ಕ್ಷೇಮವಷ್ಟೆ?

ಚತು: ನಿಷ್ಕಾಮಳೂ, ಪವಿತ್ರಳೂ ಆದ ನಮ್ಮ ದೇವಿಗೆ ಕ್ಷೇಮ ವಲ್ಲದೆ ಮತ್ತೇನು? ನಿರಂತರದಲ್ಲಿಯೂ, ಭಜಿಸುವಂತಹ ಭಗವಂತನೇ ಮಂಗಳವನ್ನುಂಟುಮಾಡುವನು. ಮಹಾರಾಜರ ಸಮಯವನ್ನು ತಿಳಿದು ಬರುವಂತೆ ದೇವಿಯ ಆಜ್ಞೆಯಾಗಿದೆ.

ಸೇವಕ: ಹಾಗಾದರೆ ಮಹಾರಾಜನ ಕೋಪವು ಕಡಿಮೆಯಾಗಿರು ವುದು. ಹೇಗಾದರೂ ಅವರಿಬ್ಬರೂ ಕ್ಷೇಮದಿಂದಿದ್ದರೆ ತಾನೆ ಮಿಕ್ಕವರ ಪಾಡು? ಚತುರಿಕೆ, ಮಹಾರಾಜರ ಆಗ್ರಹಕ್ಕೆ ಕಾರಣವೇನು?

ಚತು: ಕಾರಣವೇ? ಆತನ ಸಂಶಯಪೂರಿತವಾದ ಹೃದಯ. ಆ ಭಾಗವತೋತ್ತಮಳಲ್ಲಿ ದೋಷವನ್ನೆಣಿಸುವ ಮಹಾರಾಜನು ಸತ್ಯಸ್ವರೂಪ ವನ್ನರಿತವನಲ್ಲ. ಇನ್ನು ನಾನು ಸಾವಕಾಶಮಾಡುವಂತಿಲ್ಲ.

ಸೇವಕ: ನಾನು ರತ್ನಪುಡಿ ವ್ಯಾಪಾರಿಯನ್ನು ಕರೆತರಲು ಹೋಗುವೆ.

(ಹೋಗುವರು.)

## ದೃಶ್ಯ ೬.

(ರಾಣಾಕುಂಭನ ಮಂತ್ರಾಲೋಚನಾ ಗೃಹ. ಮಂತ್ರಿಗಳು ಮತ್ತು ಕುಂಭನು ಕುಳಿತಿರುವರು. ರಾಣಿ ಮೀರಾಬಾಯಿಯು ಪ್ರವೇಶಿಸುವಳು.)

ರಾಣಾ: ಮಂತ್ರಿ, ನೀನು ಈಗಲೇ ಹೋಗಿ ನಮಗೆ ವರ್ತಮಾನ ಕಳುಹಿಸಿದ ಪುರಜನರಿಬ್ಬರನ್ನು ಬರಮಾಡು.

ಮಂತ್ರಿ: ಅಪ್ಪಣೆ ಪ್ರಭೂ! (ಹೊರಡುವನು.)

ರಾಣಾ: ಹಾಗೆಯೇ, ನಮ್ಮ ಪುರದಲ್ಲಿ, ರತ್ನವ್ಯಾಪಾರ ಮಾಡುತ್ತಿರುವ ವೀರಸೇನನನ್ನು ಬರಮಾಡು.

ಮೀರಾ: ಆಹಾ! ಕಾಲ ಮಹಿಮೆಯೇ! ಮಹಾರಾಜನು ನನಗೆ ಎಂದೂ ಈ ರೀತಿ ಅಪಮಾನಪಡಿಸಿದ್ದಿಲ್ಲ! ಎಲ್ಲಿಯೋ ಇರಲಿ, ಅರ್ಧಾಂಗಿಯಾದ ನನಗೆ ಅರ್ಧಾಸನ ಮೀಸಲಾಗಿರುತಿತ್ತು. ಆದರೆ............ಇಂದು? ಇರಲಿ. ನಾನು ಗೌರವವನ್ನಪೇಕ್ಷಿಸುವುದೇ ತಪ್ಪು!

ರಾಣಾ: ನನಗೆ ವಿಶೇಷ ಮಾತನಾಡುವದಕ್ಕೆ ಸಮಯವಿಲ್ಲವಾದ ಕಾರಣ ನೀನು ಬಂದ ಕಾರಣವನ್ನು ಬೇಗನೆ ತಿಳಿಸು.

ವಿೂರಾ: ರಾಜ, ನನ್ನೊಡನೆ ಮಾತನಾಡಲು ಎಷ್ಟು ಜನ್ಮಗಳು ದೊರೆತರೂ ಕಾಲಾವಕಾಶವು ಸಾಲದೆಂದು ಹೇಳುತ್ತಿರಲಿಲ್ಲವೇ? ಇರಲಿ. ಭಕ್ತನೊಬ್ಬನಿಂದ ಕಾಣಿಕೆಯಾಗಿ ಬಂದ ರತ್ನಮಾಲಿಕೆಯನ್ನು ತರಿಸಿಕೊಂಡ ಕಾರಣವನ್ನು ತಿಳಿಯಲು ಬಂದಿರುವೆನು.

ರಾಣಾ: ಅದು ನನ್ನ ಇಷ್ಟ. ಆ ವಿಚಾರವಾಗಿ ನೀನು ಪ್ರಶ್ನೆ ಮಾಡಬೇಕಾದ ಪ್ರಮೇಯ ಬಂದಿಲ್ಲ.

ವಿೂರಾ: ಪ್ರಭೂ, ನಮ್ಮಿಬ್ಬರ ಮನಸ್ಸುಗಳು ಬೇರೆ ಬೇರೆ ರೂಪಗಳನ್ನು ಹೊಂದಿರುವವು. ಇದೇ ಮೊದಲಬಾರಿ ನಿಮ್ಮ ಮಾತುಗಳು ನನ್ನ ಹೃದಯವನ್ನು ಭೇದಿಸುವ, ಸೀಸದ ಗುಂಡುಗಳಂತಿರುವವು. ಇಷ್ಟು ಆಗ್ರಹಕ್ಕೆ ನಾನು ಪಾತ್ರಳೇಕೆ?

ರಾಣಾ: ತಡೆಯಿಲ್ಲದ ಮಾರ್ಗದಲ್ಲಿ, ಸ್ವೇಚ್ಛೆಯಾಗಿ ಹೋಗುವುದೇ ನಿನ್ನ ಮತವಾಗಿರುವಾಗ ನಾನೇಕೆ ಅಡ್ಡ ಬರಲಿ? ನಿನ್ನ ಮನ ಬಂದಂತೆ ವರ್ತಿಸಲು ಸರ್ವಸ್ವಾತಂತ್ರ್ಯವನ್ನೂ ಕೊಟ್ಟಿರುವೆನು. ಇದಕ್ಕಿಂತಲೂ ಹೆಚ್ಚಾಗಿ ನಾನೇನನ್ನು ತಾನೆ ಮಾಡಬಲ್ಲೆ?

ವಿೂರಾ: ಸ್ವಾಮಿ, ಇಂತಹ ಪ್ರೀತಿರಹಿತ ಸ್ವಾತಂತ್ರ್ಯದಿಂದ ಫಲವೇನು? ನಿಜವಾದ ಪ್ರೇಮವು ಬಂಧನವೆನಿಸಿಕೊಂಡರೂ, ಯಾತನಾ ರೂಪವಾದುದಲ್ಲ. ಆದುದರಿಂದ ನಿಮ್ಮ ಹೃದಯದಲ್ಲುಂಟಾದ ಕಾಠಿಣ್ಯಕ್ಕೆ ಪ್ರಬಲವಾದ ಮತ್ತಾವುದೋ ಕಾರಣವಿರಬೇಕು.

ರಾಣಾ: ನಿನಗೆ ರತ್ನಮಾಲಿಕೆಯನ್ನು ಕೊಟ್ಟವನಾರು?

ವಿೂರಾ: ಯಾರೂ ಅದನ್ನು ಕೇಳುವ ಅವಶ್ಯಕತೆಯೇ ಇಲ್ಲವಲ್ಲ? ಯಾವ ಪರಮಪುರುಷನು ಕಾಯರೂಪದಿಂದ ಈ ಪ್ರಪಂಚವನ್ನು ಕಾಪಾಡುವನೊ ಆ ಪರಮಾತ್ಮನು ಯಾತ್ರಿಕನ ರೂಪದಿಂದ ಬಂದು ನಿಮಿಷಮಾತ್ರದಲ್ಲಿ ದಾಸಿಗೆ ದರ್ಶನವಿತ್ತು ಮರೆಯಾಗಿ ಹೋದನು. ಮತ್ತೆ ಆ ಮಂಗಳಮೂರ್ತಿಯ ದರ್ಶನವು ನನಗಾಗಲಿಲ್ಲ!

ರಾಣಾ: (ಕೋಪದಿಂದ) ಮಾಯಾವಿನಿ! ನಿನ್ನ ಕಪಟ ನಾಟಕಕ್ಕೆ ಮುನ್ನುಡಿಯನ್ನಾರಂಭಿಸಿದೆಯಾ? ನಿನ್ನ ಇಂತಹ ಕಥೆಗಳನ್ನು ಕೇಳಿ ಬೇಸರವಾಗಿದೆ. ಆ ದಿನ ನಿನ್ನ ಶಯ್ಯಾಗಾರದಲ್ಲಿ ಮಾತಾಡುವ ಧ್ವನಿಯನ್ನು ಕೇಳಿ ಯಾರೆಂದು ವಿಚಾರಿಸಿದಾಗಲೂ ನೀನು ಕೊಟ್ಟ ಉತ್ತರ ಇದೇ ಯಲ್ಲವೇ? ಇಂತಹ ಮೋಸದಿಂದ ನೀನು ಹೆಚ್ಚು ಕಾಲ ಇನ್ನು

ವಂಚಿಸಲಾರೆ! ಎಲ್ಲರೆದುರಿಗೂ ನಿಷ್ಕಾಮ ಭಕ್ತಳೆಸಿಸಿಕೊಂಡು ವಿಷಯ ಸುಖಗಳನ್ನು ತೊರೆದವಳೆನಿಸಿಕೊಂಡ, ರಹಸ್ಯದಲ್ಲಿ ವಿಷಯಲಂಪಟಳಾಗಿರುವೆ! ಕಳಂಕಿತಳಾದ ನಿನ್ನ ದರ್ಶನಮಾತ್ರದಿಂದಲೇ ನನ್ನ ಕಣ್ಣುಗಳು ಉರಿಯುತ್ತಿರುವವು ಮೇವಾಡದ ರಜಪೂತ ರಾಜವಂಶಕ್ಕೆ ಕಳಂಕವನ್ನು ತಂದೊಡ್ಡಿದ ಪಾಪಿ! ಹೇಗೆ ಈ ಕಳಂಕವನ್ನು ಹೋಗಲಾಡಿಸಿಕೊಳ್ಳಲಿ!

ಮೀರಾ: ಪತಿದೇವಾ, ಬರಿಯ ಆಗ್ರಹವೇಕೆ? ಯಾವ ವಿಧದಲ್ಲೂ ನಾನು ಪಾಪಿಯಲ್ಲ! ನನ್ನ ಹೃದಯದಲ್ಲಿ ಕಳಂಕವಿಲ್ಲ. ನಾನು ನಿಮಗೆ ಎಂದಿಗೂ ಮೋಸವನ್ನು ಬಗೆದಿಲ್ಲ ಪವಿತ್ರವಾದ ಪ್ರೇಮದಿಂದ ತುಂಬಿರುವ ನಿಮ್ಮ ಹೃದಯವು ಕಾಠಿಣ್ಯವನ್ನು ತಾಳಬಹುದೇ? ಹೇಗೆ ನಿಮಗೆ ನಂಬಿಗೆಯನ್ನುಂಟುಮಾಡಲಿ? ಈ ತನುಮನಗಳು ನಿಮ್ಮ ಅಧಿಕಾರಕ್ಕೊಳಪಟ್ಟಿವೆ! ಸಂದೇಹವು ನಿಮ್ಮ ಹೃದಯದಲ್ಲಿ ನೆಲಸಿರುವದರಿಂದ ಹೇಗೆ ದೋಷವೆಣಿಸುವಿರಿ? ನಿಮ್ಮ ಪವಿತ್ರವಾದ ಪ್ರೇಮವು ಹೀಗೆ ಕಳೆಗುಂದಬಹುದೇ? ಕಾಠಿಣ್ಯವನ್ನು ತಾಳಬಹುದೇ?

ರಾಣಾ: ನಿನ್ನ ದಯವು ನನಗೆ ಬೇಕಿಲ್ಲ ನನಗೆ ಬೇಕಾದುದು, ಸತ್ಯ–ಸಂಕಲ್ಪ, ಅದನ್ನು ಹೇಳು.

ಮೀರಾ: ನಿಜವನ್ನೇ ಹೇಳಿರುವೆನಲ್ಲವೇ? ಇನ್ನು ಸಂಶಯವೇಕೆ?

ರಾಣಾ: ಪಾತಕೀ! ನಿನ್ನ ಹೃದಯವನ್ನೆಲ್ಲಾ ಶೋಧಿಸಿಬಿಡುತ್ತೇನೆ! ನೀನು ದೋಷರಹಿತಳಾಗಿದ್ದರೆ—

ಮೀರಾ: ಇದ್ದರೆ ಸಂಶಯವೇಕೆ? ನಿಮ್ಮ ಸಂಶಯಪಿಶಾಚಿಯು ಹೃದಯವನ್ನು ಭೇದಿಸುವ ಕಠಾರಿಯಂತಿರುವುದು.

ರಾಣಾ: ಹೃದಯ ಶುದ್ಧವಾಗಿದ್ದರೆ ಶಂಕಿಸುವದೇಕೆ? ಕಳಂಕವಿಲ್ಲದಲ್ಲಿ ಹೇಗೆತಾನೆ ನೋವಾದೀತು?

ಮೀರಾ: ಹಾಗಲ್ಲ. ಪ್ರೇಮಮಯನಾದ ಪತಿಯೇ ಸಂದೇಹ ದೃಷ್ಟಿಯನ್ನಿರಿಸಿದಾಗ ನೋವಾಗದೆ ಇರಲು ಸಾಧ್ಯವೆ?

ರಾಣಾ: ರಾಜನಾದವನು ಧರ್ಮ ತಪ್ಪಿದವರಿಗೆ ಶಿಕ್ಷೆಯನ್ನು ವಿಧಿಸಿ ಧರ್ಮವನ್ನುಳಿಸುವದು ಸೂಕ್ತವಾಗಿದೆ. ಈ ರತ್ನಮಾಲಿಕೆಯೇ ನಿನ್ನನ್ನು ದೋಷಿಯನ್ನಾಗಿರಿಸಿರುವದು. ಹೀಗಿರುವಾಗ ಹೇಗೆತಾನೆ ನೀನು ಪರಿಶುದ್ಧಳೆಂದು ನಂಬಲಿ? ನನ್ನ ಕಾರ್ಯವನ್ನು ನಾನು ಮಾಡಿಯೇ ತೀರಬೇಕು.

ಮೀರಾ: ನಿಮ್ಮ ಕರ್ತವ್ಯವು ಈ ರೀತಿಯಾಗಿ ನಿಮ್ಮಲ್ಲಿ ಕಾಠಿಣ್ಯವನ್ನು ತುಂಬಿದ್ದರೂ ನಿಮ್ಮ ಹೃದಯದಲ್ಲಿರುವ ಪ್ರೇಮಜ್ಯೋತಿಯನ್ನು ನಾನು

ಬಲ್ಲೆ ಆದರೆ, ನಿಮ್ಮ ಹೃದಯದಲ್ಲಿ ಸಂಶಯವೆಂಬ ಸರ್ಪಕ್ಕೆ ಆಕಾರವನ್ನು ಕಲ್ಪಿಸಿರುವಿರಿ. ನಿಮ್ಮ ಪ್ರೇಮಕ್ಕೆ ಪಾತ್ರಳಾಗಿ ಶೀತಲ ಚಂದ್ರಕಾಂತಿಯಲ್ಲಿ ಪರಮಾತ್ಮನನ್ನು ಧ್ಯಾನಿಸುತ್ತ ಇದ್ದ ದಿನವನ್ನು ಜ್ಞಾಪಿಸಿಕೊಳ್ಳಿ. ಅಂದಿನ ಪವಿತ್ರ ಪ್ರೇಮಕ್ಕೆ ಇಂದು ಕಳಂಕವು ತಟ್ಟೀತೆ? ಇಲ್ಲ, ಇದೆಲ್ಲ ಮಾಯೆಯೆಂದೂ, ವಿನೋದವೆಂದೂ ತಿಳಿಯುವ ಕಾಲವು ಬಂದೀತು.

ರಾಣಾ: (ಕೋಪದಿಂದ) ನಿನ್ನ ಕಪಟ ಮಾತುಗಳನ್ನು ಏಕೆ ವೃಥಾ ಬೆಳೆಸುತ್ತಿರುವೆ? ನೀನು ಈಗಲೇ ಇಲ್ಲಿಂದ ಹೊರಡು. ನಿನ್ನೊಡನೆ ಹರಟೆ ಯಾಡಲು, ನನಗೆ ಬಿಡುವಿಲ್ಲ.

ಮೀರಾ: ಆಹಾ! ನನ್ನೊಡನೆ ಮಾತನಾಡಲು ಸಮಯವಿಲ್ಲ! ಸತ್ಯ ಮೂರ್ತಿಯಾದ ಪರಮಾತ್ಮನನ್ನು ತಿಳಿಯುವ ಶಕ್ತಿ ಇಲ್ಲದವರಿಗೆ ದೋಷ, ಕಳಂಕಗಳೇ ಕಾಣಬರುವವು. ದೇವಾ, ನನ್ನ ಪತಿಯಲ್ಲಿ ಹೆಡೆಯಾಡುತ್ತಿ ರುವ ವಿಷಸರ್ಪವನ್ನು ಹೊಡೆದೋಡಿಸು! (ಹಾಡುವಳು)

(ಮಂತ್ರಿಗಳೂ ಪುರಜನರೂ ಬಂದು ಗಾನಮಾಧುರ್ಯವನ್ನು ಕಂಡು ಮೀರಾ ದೇವಿಗೆ ವಂದಿಸಿ ನಿಲ್ಲುವರು.)

ರಾಣಾ: ಇಲ್ಲಿ ಎಲ್ಲರೂ ಬಂದಿರುವರೇ?

ಮಂತ್ರಿ: ಎಲ್ಲರೂ ಸಿದ್ಧರಾಗಿ ಪ್ರಭುವಿನಾಜ್ಞೆಯನ್ನು ಸಲಿಸಲು ತವಕದಿಂದಿರುವೆವು ಆ ರತ್ನಮಾಲಿಕೆಯನ್ನು ಅಕ್ಬರ್ ಬಾದಷಹನಿಗಾಗಿ ಮಾಡಿರುವುದಾಗಿ ವೀರಸೇನನು ಹೇಳುತ್ತಿರುವನು.

ರಾಣಾ: ಪ್ರಜೆಗಳೇ, ನಿಮಗೆ ತಿಳಿದ ವಿಷಯಗಳನ್ನು ಮರೆಮಾಚ ದಂತೆ ಕೂಲಂಕಷವಾಗಿ ವಿವರಿಸಿ ಹೇಳಿರಿ.

ಗಂಗಾಧರ: ಪ್ರಭು! ಧ್ಯಾನಾಸಕ್ತಳಾಗಿರುವ ದೇವಿಯವರು, ಹೂವು ಗಳೇ ಆ ರತ್ನಮಾಲಿಕೆಯಾಗಿ ಪರಿವರ್ತನೆ ಹೊಂದಿರುವರಾಗಿ ತಿಳಿದಿರು ವರು. ಆದರೆ ಮೊಗಲದೇಶದ ಯಾತ್ರಿಕನು ಕೊಟ್ಟುಹೋಗಿರುವುದಾಗಿ ನಾನು ತಿಳಿದಿರುವೆನು.

ರಾಣಾ: ಅವನು ಮೊಗಲದೇಶದವನೆಂದು ಹೇಗೆ ಬಲ್ಲಿರಿ?

ರಾಮು: ಅವರಾಗಿಯೇ ಹೇಳಿದರು ಪ್ರಭು! ಗಾಂಭೀರ್ಯದಲ್ಲಿ, ಮಾತಿನಲ್ಲಿ ಅವನೇ ಅಕ್ಬರನಾಗಿರಬಹುದೆಂದು ಸಂದೇಹಬಲವಾಗುತ್ತಿದೆ ಮಹಾ ಪ್ರಭೂ!

ರಾಣಾ: ಏನು, ನಿಮಗೆ ಸಂದೇಹ ಉಂಟಾಗಿರುವುದುಂಟೆ? ಅಕ್ಬ ರನು ಕಳ್ಳನಂತೆ ವೇಷಧಾರಿಯಾಗಿ ಬಂದು, ರಜಪೂತ ರಮಣಿಯನ್ನು....?

ಮಂತ್ರಿ: ಪ್ರಭೂ, ಇದಕ್ಕೆ ಚಿಂತಿಸಲಾಗದು. ನಿಮಗೆ ಅಪಮಾನ

ಮಾಡಿದ ಅಕ್ಬರನು ಕ್ಷಣಕಾಲವೂ ಬದುಕಿರಬಾರದು. ನಾನು ಇದಕ್ಕಾಗಿ ಒಂದು ಪರಿಹಾರವನ್ನು ಸೂಚಿಸುವೆ.

ರಾಣಾ: ಏನು, ಅಕ್ಬರನ ಪ್ರಾಣಹಾನಿಯಿಂದ ರಜಪೂತವಂಶಕ್ಕೆ ಬಂದಿರುವ ಕಲಂಕವು ತೊಲಗುವದೇ? ಅವನಿಂದ ಕಾಣಿಕೆಯನ್ನು ಸ್ವೀಕರಿಸಿದ ಕುಲಘಾತಕಿಯನ್ನು ಮೊದಲು ಶಿಕ್ಷಿಸಬೇಕು.

ಮಂತ್ರಿ: ಅಂದರೆ ರಾಣಿಯನ್ನೇ........?

ರಾಣಾ: ಅಹುದು, ಚಿತ್ತೂರಿನ ಧವಳ ಕೀರ್ತಿಗೆ ಕಳಂಕವನ್ನುಂಟು ಮಾಡಿದ ಅವಳು ಕ್ಷಣಕಾಲವೂ ಬದುಕಲಾಗದು. ಅದಕ್ಕಾಗಿ ಸರ್ವಸಿದ್ಧತೆಗಳನ್ನೂ ಮಾಡು.

ಮಂತ್ರಿ: ಸ್ವಾಮಿಾ! ಆಲೈಸಬೇಕು. ಮಹಾರಾಣಿಯವರ ಶೀಲವನ್ನು ಶಂಕಿಸುವದು ಸರ್ವಥಾ ಸರಿಯಲ್ಲ. ಪರಿಶುದ್ಧಾತ್ಮರಾದ ಮಿಾರಾದೇವಿಯವರ ನಾಮವನ್ನು ಉಚ್ಚರಿಸಿದ ಮಾತ್ರಕ್ಕೆ ಎಲ್ಲ ಆಪತ್ತುಗಳೂ ಪರಿಹಾರವಾಗುತ್ತಿರುವಲ್ಲಿ, ಈ ತರದ ಘೋರ ಆಜ್ಞೆಯನ್ನು ಮಾತ್ರ........

ರಾಣಾ: ಏನು, ನನ್ನ ಆಜ್ಞೆಯನ್ನು ನೆರವೇರಿಸುವದಿಲ್ಲವೇ?

ಮಂತ್ರಿ: ನಿಮ್ಮ ಹಿತಕ್ಕಾಗಿಯೇ ಈ ಆಜ್ಞೆಯನ್ನು ನೆರವೇರಿಸಲಾರೆ!

ರಾಣಾ: ಆಜ್ಞಾಭಂಗದಿಂದ ಉಂಟಾಗುವ ಶಿಕ್ಷೆ ತಿಳಿದಿರಲಿ!

ಮಂತ್ರಿ: ವಿಶ್ವಾಸಘಾತಕನಾಗಿ ಈ ಪ್ರಾಣವನ್ನು ಧರಿಸಿರುವದಕ್ಕಿಂತಲೂ ಶಿಕ್ಷೆಯನ್ನನುಭವಿಸುತ್ತಾ ಸಾಯುವುದು ಬಹಳ ಸಂತೋಷವಾಗಿದೆ!

ರಾಣಾ: ವೀರಸೇನಾ, ನಿರ್ಜೀವವಾದ ಕಲ್ಲುಗಳನ್ನು ಚಿನ್ನದಲ್ಲಿ ಸೇರಿಸಿ, ಅತಿಶಯ ಕಾಂತಿಯುಕ್ತ ಕಲ್ಲುಗಳನ್ನಾಗಿಸುವ ನೀನು ಪ್ರಪಂಚವಲ್ಲಿ ದೋಷವೆಂದು ಆತ್ಮಕಾಂತಿಯನ್ನು ಅಚ್ಛಾದಿಸುವದನ್ನು ಶುದ್ಧಿಗೊಳಿಸಲು ಸಹಕಾರಿಯಾಗುವೆಯಾ?

ವೀರಸೇನ: ಮಹಾರಾಜ, ಯಾವ ಪೂಜ್ಯಳು ಚಿತ್ತೂರಿನ ಪ್ರಜೆಗಳ ಹೃದಯಗಳನ್ನೇ ಕಳಂಕರಹಿತವನ್ನಾಗಿಸಿ ಭಕ್ತಿರಸದಿಂದ ತುಂಬಿರುವಳೋ ಅಂತಹಳಲ್ಲಿ ದೋಷವೆಣಿಸಲು ನಾನು ಎಷ್ಟರವನು?

ರಾಣಾ: ಈಗ ಅವಳ ಪರಿಶುದ್ಧತೆಯೂ ಓರ್ವ ಯುವನನಿಂದ ಕಳಂಕಿತವಾಗಿರುವದು.

ವೀರ: ರಾಜ, ಲೋಕವನ್ನೇ ಬೆಳಗುವ ಸೂರ್ಯನ ಕಾಂತಿಯ ಎದುರು ಕತ್ತಲೆಯು ನಿಲ್ಲಲಾರದು. ಅಂತೆಯೇ ಮಿಾರಾಬಾಯಿಯು ಧ್ಯಾನದಲ್ಲಿರುವಾಗ ಕಲಂಕವೆಲ್ಲಿ ಬಂತು?

ರಾಣಾ: ಆಜ್ಞಾಭಂಗದ ಶಿಕ್ಷೆಯನ್ನನುಭವಿಸಲು ಸಿದ್ಧನಾಗಿರು!

ವೀರಸೇನ: ಆಗಲಿ ಮಹಾಪ್ರಭು! ನಿಮ್ಮ ಆಜ್ಞೆಯನ್ನು ಸಂತೋಷದಿಂದ ಎದುರು ನೋಡುತ್ತಿರುವೆನು!

ರಾಣಾ: ಪುರಜನರೇ, ನನ್ನ ಪರಿವಾರವೇ ನನ್ನನ್ನು ತ್ಯಜಿಸುವಂತಾದರೂ ಚಿತ್ತೂರಿನ ಪ್ರಜೆಗಳಿಗೆ ನನ್ನ ರಾಣಿಯು ಭಕ್ತಶ್ರೇಷ್ಠಳಾಗಿ ತೋರಿದರೂ, ನ್ಯಾಯನಿಷ್ಠನಾದ ರಾಣಾಕುಂಭನು ಕೇವಲ ಕಾಮುಕನೂ ದ್ರೋಹಿಯೂ ಆಗಿ ಪರಿಣಮಿಸಬೇಕಾದೀತು. ಈ ಹಾನಿಯಿಂದ ವಂಶಕ್ಕೆ ಬಂದಿರುವ ಕಳಂಕವನ್ನು ಹೋಗಲಾಡಿಸದೆ ಮನಸ್ಸಿಗೆ ನೆಮ್ಮದಿ ದೊರೆಯದು. ನೀವೆಲ್ಲರೂ ಧರ್ಮಬುದ್ಧಿಯಿಂದ ನನ್ನ ಆಜ್ಞೆಯನ್ನು ನೆರವೇರಿಸಿರಿ! ನನ್ನ ಆಜ್ಞೆಯನ್ನು ಬರೆದಿಟ್ಟಿರುವೆನು. ರಾಣಿಯು ನನ್ನ ಆಜ್ಞೆಯಂತೆ ತನ್ನನ್ನು ತಾನೆ ನಾಶಮಾಡಿಕೊಳ್ಳಲಿ!

ಗಂ: ನ್ಯಾಯಪರಳಾದ ರಾಣಿಯು ಧರ್ಮಸಮ್ಮತವಾದುದನ್ನು ನಿರ್ಣಯಿಸಲಿ!

ರಾಣಾ: (ಚಿಂತಿಸುತ್ತಾ) ಮನಸ್ಸಿಗೆ ನೆಮ್ಮದಿಯಾಯಿತು. ನನ್ನ ಕೋಪಾಗ್ನಿಗೆ ನನ್ನ ಪ್ರಿಯಳನ್ನು ಬಲಿಕೊಟ್ಟುದಾಯಿತು. ಆದರೆ ಮಾಡುವದೇನು? ರಾಜ್ಯದಲ್ಲಿ ಶಾಂತಿಯಿಲ್ಲ ಮೀರಾಳನ್ನು ಈಗ ಕ್ಷಮಿಸುವೆ. ಆದರೆ ಮೊಗಲನು ರಜಪೂತ ರಮಣಿಯನ್ನು ಅಪವಿತ್ರಳನ್ನಾಗಿ ಮಾಡಿದನಲ್ಲ! ಏನೋ ಮನಸ್ಸಿಗೆ ಕಳವಳ, ಸಂತಾಪ! ಸಮಾಧಾನವಿಲ್ಲ! (ಪರದೆ)

## ದೃಶ್ಯ ೭.

ಮೀರಾಬಾಯಿಯು ಶ್ರೀ ಕೃಷ್ಣನ ವಿಗ್ರಹದ ಮುಂದೆ ಆವೇಶದಿಂದ ಹಾಡುತ್ತಿರುವಳು. ಹಲವು ಸಂತರೂ ಭಕ್ತರೂ ನೆರೆದಿರುವರು. ಘಂಟಾನಾದವಾಗುತ್ತಿರಲು, ಮೀರಾ ಆವೇಶದಿಂದ ಹಾಡುತ್ತ ಹಾಡುತ್ತ, ದೇಹಬಲವುಡುಗಿ, ಮಾಲಿ, ಬಿದ್ದುಬಿಡುವಳು. ಘಂಟಾನಾದವು ಸ್ವಲ್ಪ ಕಡಿಮೆಯಾಗುವುದು. "ಮೀರಾ ಶ್ರೀ ಕೃಷ್ಣನಲ್ಲಿ ಐಕ್ಯಳಾದಳು" ಎಂಬ ಘೋಷವೇಳುವುದು.

ಮೆಲ್ಲನೆ ತೆರೆ ಇಳಿಯುತ್ತಿರಲು, ಘಂಟಾನಾದವು ನಿಂತು, "ಜನ ಗಣ ಮನ ಗೀತ" ಹಾಡಲ್ಪಡುವುದು.



Edited, Printed & Published by K. V. Shenoy

# 56

ವೀರರಮಣಿ

# ಕರ್ಮದೇವಿ

(ಐತಿಹಾಸಿಕ)



ಕತೆಗಾರರು:

ಶ್ರೀ| ಕೆ. ಎಸ್. ಶರ್ಮ, ವಿಶಾರದ,

ಕಾಸರಗೋಡು.

1955.



ಒಂದಾಣೆ ಮಾಲೆ

# ಒಂದಾಣೆ ಮಾಲೆಯಲ್ಲಿ

## — ಈ ವರೆಗೆ ಪ್ರಕಟವಾದ ಪುಸ್ತಕಗಳು —



(17ನೇ ಪುಟಕ್ಕೆ ಮುಂದುವರಿದಿದೆ.)

# ವೀರ ರಮಣಿ–ಕರ್ಮದೇವಿ

## ಎರಡು ಮಾತು.

ಆದರ್ಶ ವೀರಮಹಿಳೆಯೊಬ್ಬಳ ಜೀವನೇತಿವೃತ್ತವಿದು. ಭಾರತದ ವೀರನಾರಿಯರ ಧೈರ್ಯ, ಶೌರ್ಯ-ತ್ಯಾಗಗಳೆಂದರೆ ಅನ್ಯಾದೃಶವು. ವೇದ ಕಾಲದಿಂದಲೇ ಸಂಸ್ಕೃತಿಯ ಪುರೋಗಮನದಲ್ಲಿ ದತ್ತಚಕ್ಷುಷಿಯರಾದ ಮಹಿಳೆಯರು ಸಾರಿದ ನೀತಿ, ನಡೆದ ದಾರಿ ಸ್ತ್ರೀ ಸಮಾಜವೆಂದಲ್ಲ ಪುರುಷ ಸಮಾಜವೂ ಕಣ್ಣರಳಿಸಿ ಕಾಣಬೇಕಾದ ಸತ್ಯ ಚಿತ್ರ. ಭಾರತದ ಚರಿತ್ರೆ, ವೀರನಾರಿಯರ ಪಾತಿವ್ರತ್ಯ, ಶೀಲಸಂರಕ್ಷಣೆ ಇವು ಸಾರ್ವಕಾಲಿಕವಾಗಿ, ಸಾರ್ವದೇಶಿಕವಾಗಿ ನೆಲೆನಿಲ್ಲುವ ಆಣಿಮುತ್ತುಗಳು.

ಅಂತಹ ಆಣಿಮುತ್ತುಗಳಲ್ಲಿ—ಇತಿಹಾಸಯುಗದಲ್ಲಿ ಬೆಳಗಿ—ತೊಳಗಿದ ಒಂದನ್ನಾರಿಸಿ ಇಲ್ಲಿ ರೂಪಿಸಲಾಗಿದೆ. ಐದು ಪರಿಚ್ಛೇದಗಳ ಒಗ್ಗೂಟದಲ್ಲಿ ಕಾಣಿಸಿದ ಈ ಚಿತ್ರ ಒಂದೇ ಮಾಲೆಯಲ್ಲಿ ಕಂಗೊಳಿಸುವ ಜೀವ ಕುಸುಮಗಳು.

ವಾಣೀಮಂದಿರ,<br>ಕಾಸರಗೋಡು.

ಕೆ. ಎಸ್. ಶರ್ಮ, ವಿಶಾರದ.

ವೀರರಮಣಿ—

# "ಕರ್ಮದೇವಿ"

೧

ಶೀಲಸಂವರ್ಧನೆಯೆ ಜೀವನದ ಪರಮೋನ್ನತಿ!
ಮನೋದಾರ್ಢ್ಯ—ಆತ್ಮಕಲ್ಯಾಣಗಳೇ ಅದರ ನೆಲೆಗಟ್ಟು!!
ಇವು ಮೃತ್ಯುವಿನ ಮುಂದೆಯೂ ಬೆರಗಿ ಬೆದರಲಾರವು!!!

"ಬದುಕು ಶಾಶ್ವತವಲ್ಲ ಆದರೆ ಬದುಕಿನಲ್ಲಿ ಉಳಿಸಿಕೊಂಡ ಸತ್ಸೇವೆ, ಬಲಿದಾನ, ಚರಿತ್ರಶುದ್ಧಿ ಇವು ನೆಲೆನಿಲ್ಲುವ ನಂದಾದೀಪದ ಉಜ್ವಲ ಜ್ವಾಲೆಗಳು. ಸಮಾಜದೊಡನೆ ಜನ್ಮಭೂಮಿಯನ್ನೇ ಬೆಳಗುವ ದೀಪವರ್ತಿಕೆ; ಹೆಚ್ಚೇನು? ಜನಿಸಿದ ನಾಡಿನೊಡನೆ ಜನನವಿತ್ತ ವಂಶವನ್ನು ತುಂಬುವ, ತುಂಬಿ ಬೆಳಗುವ ಜ್ಯೋತಿರ್ಮಾಲೆ. ಇಂತಹ ಭಾಗ್ಯವನ್ನು ದೊರಕಿಸಿಕೊಳ್ಳಬೇಕಾದರೆ ಕರ್ಮಾನುಬಂಧಿಯಾಗಿ ಪ್ರವಹಿಸುವ ಜೀವಭಾವ ಲಹರಿ ತೇಲಬೇಕು. ಹಾಗಿದ್ದರೆ ಮಾತ್ರ ಸತ್ಯದ ಮುಂದೆ, ಜೀವನಸಾಫಲ್ಯದ ಮುಂದೆ, ಚರಿತ್ರೋದ್ಧಾರದ ಮುಂದೆ—ಕ್ಷಣಿಕವಾದ ಮರಣವನ್ನು ಎದುರಿಸುವ ಮನೋದಾರ್ಢ್ಯ ಬರಬಹುದು. ಇದರ ಗತಿ ಏಕಮುಖವಾಗಿ ಹರಿದಾಗ ಸ್ವಜೀವನ ಕಲ್ಯಾಣವೂ, ಬಹುಮುಖವಾಗಿ ಹರಿದಾಗ ಸಮಾಜ ಕಲ್ಯಾಣವೂ ಸಾಗುವುದು. ಈ ಉಭಯ ಗತಿಯಲ್ಲೂ ಹಿರಿತನವಿದೆ.

ಪವಿತ್ರ ಭಾರತದ ಅಮರೇತಿಹಾಸವೆಂದರೆ, ಅದು ವೀರಜನನಿಯರ ವೀರರಮಣಿಯರ ಉದಾತ್ತಚರಿತ್ರೆಯಿಂದ ಅಲಂಕೃತವಾದ ಶುಭ ಸಂಧಿಗಳ ಒಗ್ಗೂಟವು. ನಾಮಮಾತ್ರದಿಂದ ಅಬಲೆಯರಾದರೂ—ಕಾರ್ಯರಂಗದಲ್ಲಿ, ಪಾತಿವ್ರತ್ಯ ಪರಿಪಾಲನೆಯಲ್ಲಿ, ಸ್ವಚಾರಿತ್ರ್ಯ ಮಹೋನ್ನತಿ ಸಾಧನೆಯಲ್ಲಿ—ಸಬಲೆಯರೆನ್ನಿಸಿಕೊಂಡು ಮೆರೆದ ಭಾರತ

ರಮಣಿಯರು ಇಡಿಯ ಭಾರತವನ್ನು ಲೋಕಾದರ್ಶವನ್ನಾಗಿ ನೀಡಿ ಅಳಿವಿರದ ಉಳಿವಿನಲ್ಲಿ ನೆಲೆಗೊಳಿಸಿರುವರೆನ್ನಬೇಕು. ಈ ವೀರ ಮಹಿಳೆಯರ ಅಸಾಮಾನ್ಯ ಜೀವನನಿಷ್ಠೆಯನ್ನು ನಿಟ್ಟಿಸಿದ ಸಮಾಜ—ಬೆರಗಾದಂತೆ—ಸ್ತ್ರೀ ಸಮಾಜವನ್ನು ಅಲ್ಲಗಳೆವ, ಅವಮತಿಯೆಸಗುವ ಷಂಗಡವನ್ನು ನಿಟ್ಟಿಸಿ ಅವರ ಅಜ್ಞತೆಗಾಗಿ ಮರುಗಬೇಕು. ಅಂತೂ ಅದೊಂದು ಸುವರ್ಣ ಯುಗ. ಮಾನನೀಯ ಯುಗ. ವಂದನೀಯ ಶುಭಪರ್ವ ಸಂಧಿ! ಇಂತಹ ಒಂದು ಅಪೂರ್ವ ಯೋಗಕ್ಕೆ ಕಾರಣಳಾಗಿ ಭಾರತ ಚರಿತ್ರೆಯಲ್ಲಿ ಸ್ವನಾಮಧೇಯವನ್ನು ಸುವರ್ಣಾಕ್ಷರಗಳಲ್ಲಿ ಖಚಿತಗೊಳಿಸಿದ ವಳೇ ವೀರರಮಣಿ ಕರ್ಮದೇವಿ!—

o o o o o o o o

ಅದೊ, ಅದೇ ಆ ಪವಿತ್ರಭೂಮಿಯಲ್ಲಿ ಕಾಣಿಸುವ 'ಕರ್ಮಸರೋವರ'. ಗುಂಪು ಗುಂಪಾಗಿ ಭಯಭಕ್ತಿಯಿಂದ ತುಂಬಿಕೊಂಡು ಸುವಾಸಿನಿಯರು ಹೂಗಳಿಂದ ತುಂಬಿದ ಹರಿವಾಣವನ್ನು ಕೈಯಲ್ಲೆತ್ತಿಕೊಂಡು ಸಾಗುತ್ತಿರುವರೆಲ್ಲಿಗೆ? ಅದುವೆ ಸರೋವರದ ದಿವ್ಯಸನ್ನಿಧಿಗೆ—ನೆನಹಿನಿಂದ ಮರೆಯಾಗದ, ನೆನಹಿನೊಡನೆ ಜೀವನವನ್ನು ಪವಿತ್ರಗೊಳಿಸುವ, ಪಾವಿತ್ರ್ಯದೊಡನೆ ಪಾತಿವ್ರತ್ಯವನ್ನೂ ಬೆಳಗುವ—ಆ ಸರೋವರದ ಪುಣ್ಯ ಜಲವನ್ನು ಪುಷ್ಪಗಳಿಂದರ್ಚಿಸಿ, ಮಿಂದು ಪುನೀತರಾಗಿ, ಆ ಪುಣ್ಯ ವ್ಯಕ್ತಿಯನ್ನು ವಂದಿಸಿ ಹಿಂತಿರುಗುವ ಆ ಮಹಿಳೆಯರ ಭಕ್ತಿಪೂರಿತ ಹೃದಯವೇ ಅದರ ಇತಿವೃತ್ತವನ್ನು ಸಾರುವುದು. ಆ ಇತಿವೃತ್ತಕ್ಕೆ ಸಾಕ್ಷಿಯಾಗಿ ಅದೋ ಅಲ್ಲಿ ನೆಲೆನಿಂತ ದಿವ್ಯ ಸಮಾಧಿಯಿದೆ. ಅದುವೆ ತನ್ನ ಪತಿದೇವನೊಡನೆ ಅಸಾಮಾನ್ಯ ಮನೋದಾರ್ಢ್ಯತೆಯಿಂದ ವೀರಚಿತೆಯನ್ನೇರಿದ ಕರ್ಮದೇವಿಯ ಭವ್ಯ—ಇತಿವೃತ್ತ.

೨

ರಾಜಪುತ್ರಸ್ಥಾನದ, ದೃಢನಿಶ್ಚಯವಿಭೂಷಿತವಾದ ಪವಿತ್ರವಾದೊಂದು ರಾಜವಂಶ. ಈ ರಾಜವಂಶವನ್ನು ಅಪೂರ್ವ ಸುಗಣಗಳಿಂದ ಲಂಕರಿಸಿ, ಹೆತ್ತೊಡಲ ಕೀರ್ತಿಯೊಡನೆ, ಹೊಕ್ಕಮನೆತನದ ಹಿರಿತನ ವನ್ನೂ ಕಾದು ಮೆರೆದ ಕರ್ಮದೇವಿ – ಮಾಣಿಕ್ಯರಾಜ – ಶೀಲಾದೇವಿ

ಯುವರ ಒಲವಿನ ಕುವರಿಯಾಗಿ ಅದೊಂದು ಶುಭದಿನದಲ್ಲಿ ಜನಿಸಿದಳು. ಬಹುಕಾಲದ ಪ್ರಾರ್ಥನೆಯಿಂದ, ದಂಪತಿಗಳ ನಿರಂತರವಾದ ವ್ರತೋಪಾಸನೆಯಿಂದ ಜನಿಸಿದ ಆ ಕುವರಿಯು, ತಾನು ಜನಿಸುತ್ತಿರುವಾಗಲೆ ಮನೆಯ ಬೆಳಕನ್ನು ಬೆಳಗಿಯೆ ರೂಪುದೋರಿದಳು. ಅರ್ಥಾತ್ ಆ ಹೆತ್ತೊಡಲ ದುಃಖ ಮರೆಯಾಗಿ—ಜೀವನೋಲ್ಲಾಸವು ಬದುಕಿನ ನಾನಾ ಭಾಗಗಳಲ್ಲಿ ನುಸುಳಿ ನುಸುಳಿ ಹೊರಹೊಮ್ಮಿತು. ಹೆತ್ತೊಡಲು ಧನ್ಯವಾಯಿತು. ಚಂದ್ರಲೇಖೆಯಂತೆ ದಿನದಿಂದ ದಿನಕ್ಕೆ ಬಳೆಯುತ್ತಿರುವ ಕರ್ಮದೇವಿಯ ಬಾಲಹೃದಯವನ್ನು ಆ ತಂದೆತಾಯಿಗಳು ತಮ್ಮ ವಂಶಕ್ಕನುಗುಣವಾದ ವೀರಚರಿತ್ರೋಪದೇಶದಿಂದ ದೃಢತೆಗೆರವಾಗಿಸಿದರು. ಪುಣ್ಯಫಲಸ್ವರೂಪಿಣಿಯಾಗಿ ಬಳೆಯುತ್ತಿರುವ ಆ ಬಾಲೆ ತಂದೆತಾಯಿಗಳೀಯುವ ವೀರಕಥೆಗಳನ್ನೂ, ಪುರಾಣ ಕಥೆಗಳನ್ನೂ ಮನಬಂದಂತೆ ಹೀರಿ ದೃಢಮನಸ್ಸನ್ನು ಸಂಪಾದಿಸಿದಳು. ಸ್ವದೇಹದ ಪೂರ್ಣ ವಿಕಾಸವನ್ನು ಪ್ರಕೃತಿಯ ವಿಲಾಸದಿಂದ ತುಂಬಿಕೊಂಡು ನಲಿದಾಡುತ್ತಿದ್ದ, ಉದಾತ್ತ ಚರಿತ್ರೆಗಳನ್ನು ಮಾನಸಿಕ ಸಂಸ್ಕಾರಕ್ಕೆರವಾಗಿಸಿ ಮುಂದಡಿಯಿಡುತ್ತಿದ್ದ, ಆ ಭಾಗ್ಯಶಾಲಿನಿ, ಸೌಂದರ್ಯ ಪೀಯೂಷವಾಹಿನಿ—ಕರ್ಮದೇವಿ ಯೌವನದ ಮೊದಲಹಂತವನ್ನೇರಿ ನಿಂತಳು! ಮಗಳ ಭವ್ಯಭಾವಿಯನ್ನಾಶಿಸುತ್ತಿದ್ದ ಆ ದಂಪತಿಗಳು ತಾವು ಬೆಳಸಿ ಸಾಕಿದ ಆ ಲತೆಯನ್ನು ಉಚಿತವಾದೊಂದು ವೃಕ್ಷಕ್ಕೆ ಹೊಂದಿಸಿಕೊಳ್ಳಲು, ಆಶಿಸಿದರು. ಆಶೆಯು ಕುಡಿಯಿರಿಸಿ ಮುಂದೆ ಸಾಗಿತು.

ಅದೊಂದು ಪೂರ್ಣಿಮಾ ರಾತ್ರಿ. ಕರ್ಮದೇವಿ ಎಂದಿನಂತೆ ತನ್ನ ಮಾತೆಯುಸುರಿದ ವೀರಕಥೆಯನ್ನು ಕೇಳಿ, ತನ್ನ ಶಯನ ಮಂದಿರಕ್ಕೆ ತೆರಳಿ ನಿದ್ರಾಂಗನೆಯ ವಶವಾಗಿದ್ದಳು. ಆ ಸುಖನಿದ್ರೆಯ ಒಂದು ಸಂಧಿಯಲ್ಲೇ ಆಕೆ ಮನೋಜ್ಞವಾದೊಂದು ಸ್ವಪ್ನರಾಜ್ಯಕ್ಕೆ ಕಾಲಿರಿಸಿದ್ದಳು. ಕರ್ಮದೇವಿ ತಾನೀವರೆಗೆ ತಿಳಿದ ವೀರಕಥೆಗಳ ವೀರನಾಯಕ ಚರಿತ್ರೆಗಳ ಸಮಗ್ರತೆಯ ಎರಕವಾಗಿ ನಿಂತ ಯಾವನೋ ಒಬ್ಬ ಉದಾತ್ತ ಗಂಭೀರ ಯುವಕನ ಸುಂದರ ರೂಪವನ್ನು ನಿಟ್ಟಿಸಿದಳು. ತನ್ನೆದುರು ನಿಂತು—ತಾನೇ ತಾನಾಗಿ ಮುಂದೆ ಬಂದು ಅಂಜಲಿಯನ್ನೊಡ್ಡಿ ತನ್ನ ಹೃದಯವನ್ನು ಕೇಳಿಕೊಳ್ಳುವುದನ್ನರಿತು ದಿಙ್ಮೂಢೆಯಾದಳು. ಆದರೇನು? ತನಗರಿಯದೇನೇ

ಮುಂದೆ ಸಾಗಿ ಆ ಯುವಕನ ಪಾದತಲದಲ್ಲಿ ಮಣಿದಳು; ತುಂಬಿದ ಕೈಗಳಿಂದ ಮೇಲಕ್ಕೆತ್ತಿದ ತರುಣನು ಆಕೆಯನ್ನೊಮ್ಮೆ ನಿಟ್ಟಿಸಿ—ತನ್ನನ್ನು ಧನ್ಯನಾದೆನೆಂದು ಹೇಳಿಕೊಳ್ಳುವುದನ್ನು ಕೇಳಿದಳು. ರೋಮಾಂಚಿತ ಶರೀರದಿಂದ, ಅನವರತ ಸ್ರವಿಸುವ ಸ್ನೇಹ ಜಲದಿಂದ ಒದ್ದೆಯಾದ ಆಕೆ ಆ ಯುವಕನ ಮುಖವನ್ನು ನಿಟ್ಟಿಸುತ್ತಿರುವಂತೆಯೆ—ಸಿಡಿದ ಸಿಡಿಲೊಂದು ಕರ್ಮದೇವಿಯನ್ನು ಆ ಸುಂದರ ಸ್ವಪ್ನಲೋಕದಿಂದ ಈಚೆಗೆ ತಂದು ಕಣ್ತೆರೆಯಿಸಿತು. ಎಚ್ಚೆತ್ತ ಕರ್ಮದೇವಿ, ಕೆಲವು ಎಣಿಕೆಗಳ ವರೆಗೆ ನಿಶ್ಚಲಳಾಗಿದ್ದು—ಪುನಃ ಜಾಗೃತಲೋಕದ ಭಾವನೆಗೆ ಬಂದು ಯಾವುದೋ ಒಂದು ಪರಿಚಿತ ರೂಪದ ಹುಡುಕಾಟಕ್ಕೆ ತೊಡಗಿದಳು. ಎಷ್ಟು ಪ್ರಯತ್ನಿಸಿದರೂ ವಿಚಾರವು ಬಗೆಹರಿಯದಿರಲು ತನ್ನ ಬಳಿಯಲ್ಲೇ ಸುಖ ನಿದ್ರೆಗೆರವಾಗಿ ಬಾಳಿನ ಜೀಸರಿಕೆಯನ್ನೇ ಮರೆತ ಸಖಿ ಅಮಲೆಯನ್ನೊಮ್ಮೆ ನಿಟ್ಟಿಸಿ—ಹೇಗೆ ಹೇಗೋ ಆ ರಾತ್ರಿಯನ್ನು ಬೆಳಗಾಗಿಸಿದಳು............

ಮರುದಿನದ ಮಾತು. ಕರ್ಮದೇವಿ ತನ್ನ ಗತ ರಾತ್ರಿಯ ಸ್ವಪ್ನವನ್ನೇ ಮೆಲುಕುಹಾಕುತ್ತ ಸಖಿ ಅಮಲೆಯೊಡನೆ ಮಹಡಿಯ ಮೇಲೆ ಕುಳಿತಿರಲು, ತನ್ನ ತಂದೆಯ ವಾಸಗೃಹದಿಂದ ಗಂಭೀರವಾದ ನಡೆಯೊಡನೆ ಸಾಗುವ ಒಬ್ಬ ವೀರಕುಮಾರನನ್ನೇ ನಿಟ್ಟಿಸಿದಳು. ಎಷ್ಟೋ ಕಾಲದಿಂದ, ಎಷ್ಟೋ ಬಾರಿ ಈ ರೀತಿ ಅನೇಕರು—ಇಲ್ಲವೆ ಅದೇ ವ್ಯಕ್ತಿ ಹಾದು ಹೋದುದನ್ನು ಆಕೆ ಕಂಡಿರಬಹುದಾದರೂ ಇಂದೇಕೋ ಆಕೆಯ ಹೃದಯದಲ್ಲಿ ಆ ನಡೆಯೊಂದು ವಿಚಿತ್ರ ಪರಿಸ್ಥಿತಿಯನ್ನುಂಟುಮಾಡಿತು. ಅಮಲೆ ರಾಜಕುಮಾರಿಯ ಅಲಂಕಾರಕ್ಕಾಗಿ ಪುಷ್ಪಮಾಲೆಯನ್ನು ರಚಿಸುತ್ತಿರುವುದನ್ನರಿತ ಕರ್ಮದೇವಿ ಕುಳಿತಲ್ಲಿಂದೆದ್ದು ಮಹಡಿಯ ಬದಿಗೆ ಸರಿಯುವುದೂ, ಆಗಲೇ ಅನಿರೀಕ್ಷಿತವಾಗಿ ಆ ಯುವಕ ಮೊಗವೆತ್ತಿ ಮೇಲೆ ನೋಡಿ ಒಡನೆ, ತಲೆಗುತ್ತಿ ಮುನ್ನಡೆದುದೂ ಕರ್ಮದೇವಿಯ ಹೃದಯವನ್ನೇ ಅಲುಗಾಡಿಸಿತು. ಮುಖವನ್ನು ಕಂಡ ಕರ್ಮದೇವಿ—ತನ್ನ ಸ್ವಪ್ನರಾಜ್ಯದ ಯುವಕನ ಪಡಿಯಚ್ಚನ್ನದರಲ್ಲಿ ನಿಟ್ಟಿಸಿದಳು. ಹೃದಯವೆಲ್ಲಾ ಅವುದೋ ಮಧುರ ರಸ ತರಂಗಿಣಿಯಿಂದ ತುಂಬಿ ಹರಿವಂತಾಯಿತು. ನಿಂತೆಡೆಯಿಂದ ಕಾಲನ್ನು ಕೀಳಲಾರದಾದಳು. ಆಂತರಿಕವಾದ ಯಾವುದೋ ಒಂದು ಧ್ವನಿ ಆಕೆಯನ್ನು ದನಿಗೂಡುತ್ತಿತ್ತು; ಹತ್ತಿರಕ್ಕೆ ಬರಸೆಳೆಯುತ್ತಿತ್ತು; ಮನವನ್ನು

ಪ್ರಶ್ನಿಸುತ್ತಿತ್ತು. ಇದೇ ಕಾಲದಲ್ಲೇ ತನ್ನೆಡೆಗೆ ಬಂದುನಿಂತ ಆಮಾಲೆಯನ್ನು ದಿಟ್ಟಿಸಿದ ಕರ್ಮದೇವಿ, ಒಮ್ಮೆ ಚಕಿತಳಾದರೂ ಸ್ವಾಭಾವಿಕವಾದ ತನ್ನ ಚಿತ್ತ ಸಂಯಮ ಬಲದಿಂದ ಗೆಲುವನ್ನು ಸಂಪಾದಿಸಿ—ಪ್ರಸಂಗಾಂತರದಿಂದ ಆ ಯುವಕನ ಪರಿಚಯವನ್ನು ಸಖಿಯಿಂದ ತಿಳಿದುಕೊಂಡಳು. ಪೂಗಲ್ ವಂಶೋದ್ಭವನಾದ ರಾಜಕುಮಾರ ಸಾಧುವಿನ ವೀರವೃತ್ತವನ್ನು ತನ್ನ ಮಾತೆಯಿಂದ ಆಗಾಗ ಕೇಳಿ ತಿಳಿದಿದ್ದ ಕರ್ಮದೇವಿ,—ಸಖಿನಿ ರೂಪಿಸಿದ ಯುವಕನನ್ನು—ಆ ವೀರಕುಮಾರನೆಂದೇ ತಿಳಿದಾಗ ಪರಮಾನಂದ ತುಂದಿಲೆಯಾದಳು. ತನ್ನ ಮನೋವಾಂಛಿತವು ಉತ್ತಮಿಕೆಯಲ್ಲೇ ರೂಪುದಾಳಿದುದನ್ನು ತಿಳಿದು ಆ ಹೊಂಗನಸನ್ನು ತಂದಿತ್ತ ದೈವವನ್ನು ಮನಸಾ ಪೂಜಿಸಿದಳು. ಕೃತಕೃತ್ಯೆಯಾದಂತೆ ಸಖಿಯೊಡನೆ ಮೆಲುನಡೆಯ ಸಂಭ್ರಮದಲ್ಲಿ ಪೂರ್ವಸ್ಥಾನವನ್ನೆ ಸೇರಿಕೊಂಡಳು.

## ೩

ಕರ್ಮದೇವಿಯ ವಿವಾಹ ಮಹೋತ್ಸವವನ್ನು ನೆರವೇರಿಸಲು ಅಹರ್ನಿಶ ವರಾನ್ವೇಷಣೆಯಲ್ಲಿ ಪ್ರವೃತ್ತರಾಗಿದ್ದ ಆ ರಾಜದಂಪತಿಗಳು, ತಮ್ಮ ಪುತ್ರಿಯ ಭವ್ಯಭಾವಿಯನ್ನಾಶಿಸುತ್ತ, ಕೊನೆಗೆ ಸತ್ಕುಲ ಪ್ರಸೂತನಾದ, ಕುಲಗೋತ್ರಗಳ ಎರಕದಲ್ಲಿ ಸರಿಹೊಂದುವವನಾದ ಮಂದರಾಧಿಪತಿ ರಾಜದಂಡನ ಪುತ್ರನಾದ ಅರಣ್ಯಕಮಲನನ್ನೇ ಪುತ್ರಿಯ ಮಾಂಗಲ್ಯ ಪದಕವನ್ನಾಗಿ ಆರಿಸಿದರು. ತಾವು ನಿಶ್ಚಯಿಸಿದ ಈ ಸಂತೋಷ ವಾರ್ತೆಯನ್ನು ಕುವರಿಗೆ ತಲಪಿಸಲು ಆ ಪ್ರೇಮಮಯ ದಂಪತಿಗಳು ಮರೆಯಲಿಲ್ಲ. ಆದರೆ ರಾಜಕುಮಾರ ಸಾಧುವನ್ನೇ ತನ್ನ ಹೃದಯಾಧಿ ದೇವತೆಯನ್ನಾಗಿ ಪಡೆದು, ಅನ್ಯಯುವಕ ಸಮಾಜದಲ್ಲೇ ಸೋದರ ಪ್ರೇಮವನ್ನು ಕಾಣುವ ಕರ್ಮದೇವಿ, ತನ್ನ ತಂದೆತಾಯಿಗಳ ಯೋಚನೆ ಯನ್ನು ಆಗಲೇ ತಡೆಯಲಸಾಧ್ಯಳಾಗಿ, ದುಃಖಭಾರದಿಂದ ತಲೆಗುಸಿದು ಅಂತಃಪುರಕ್ಕೆ ಸಾಗಿದಳು. ತಂದೆತಾಯಿಗಳನ್ನುಬಿಟ್ಟುಳಿಯುವ ಹೆಮ್ಮಕ್ಕಳಲ್ಲಿ ಸ್ವಾಭಾವಿಕವಾಗಿ ನೆಲಸುವ ದುಃಖದ ಮಿಡಿತವನ್ನೆ—ಆ ತಂದೆತಾಯಿಗಳು ಕರ್ಮದೇವಿಯಲ್ಲೂ ಕಂಡಿದ್ದರೆ ತಪ್ಪೇನಿದೆ? ಮಗಳ ಮೌನ ಸಮ್ಮತಿಯನ್ನೇ ಊಹಿಸಿದ ಆ ದಂಪತಿಗಳು ರಾಜಕ್ರಮಾನುಬಂಧಿಯಾದ

ನಿಯಮಗಳಂತೆ ವಿವಾಹದ ಪೂರ್ವಕರ್ಮವನ್ನು ಮುಗಿಸಿದರೆಂದರೆ— ಕರ್ಮದೇವಿಯು ಅನುರಾಗಧಾರೆಯನ್ನೇ ಪ್ರತೀಕ್ಷಿಸುತ್ತಿದ್ದ ಅರಣ್ಯಕಮಲನು ಆನಂದಿತನಾದುದರಲ್ಲಿ ಆಶ್ಚರ್ಯವೇನಿದೆ? ಅತುಲಸೌಂದರ್ಯ ಸಂಪನ್ನೆ— ಸದ್ಗುಣ ಸಂಪನ್ನೆ ರಾಜಕುಮಾರಿ ಕರ್ಮದೇವಿಯು ಪಾಣಿಗ್ರಹಣದ ಶುಭ ಸಂಧಿಯನ್ನೇ ಪ್ರತೀಕ್ಷಿಸುತ್ತಿದ್ದ ಅರಣ್ಯಕಮಲನು ರಾಜಕುಮಾರಿಯು ತನಗೆ ಪ್ರಸನ್ನಳಾದ ಬಗೆಗೆ ತನ್ನ ಪಾಲಿನ ದೈವವನ್ನೇ ನಂಬದಾದನು.

ಇತ್ತ, ಕರ್ಮದೇವಿ ತಂದೆ ತಾಯಿಗಳ ನಿರ್ಧಾರವನ್ನರಿತು, ದುಃಖ ಗರ್ತದಲ್ಲೇ ಮುಳುಗಾಡಿದಳು. ನಿವೃತ್ತಿಯನ್ನು ಕಾಣದೆ ಚಡಪಡಿಸಿದಳು. ನಿಮಿಷದಂತೆ ಸುಖ ನಿದ್ರೆಯಲ್ಲಿ ತೇಲಿ ಹೋಗುತ್ತಿದ್ದ ಆ ಗತಮಧುರ ರಾತ್ರಿಗಳು ಗಂಭೀರವಾದ ಸಮಸ್ಯೆಯ ತಾಕಲಾಟದಲ್ಲಿ ಭೀಕರವಾದ— ಉದ್ವಿಗ್ನವಾದ ಸುಳಿವನ್ನು ತಂದುವು.

ಚಿತ್ತಭ್ರಮೆಯು ಮೊದಲ ಹಂತವನ್ನೇರಿದ್ದ ಆ ರಾಜಪುತ್ರಿ ಒಂದು ದಿನ ರಾತ್ರಿ, ಮಹಡಿಯ ಹೊರನಿಂತು ಅಸ್ತಂಗತನಾಗುವ ಬಾಲಚಂದ್ರನನ್ನೇ ನಿಟ್ಟಿಸುತ್ತ ನಿಂತಿದ್ದಳು. ಆಗಲೇ ಅನಿರೀಕ್ಷಿತವಾಗಿ ಎಚ್ಚೆತ್ತ ಸಖಿ, ಅಮಲೆ ರಾಜಪುತ್ರಿಯನ್ನು ಕಾಣದೆ, ತಟ್ಟನೆ ಹೊರಬರಲು, ಕಂಬಕ್ಕೆ ದೇಹವನ್ನಾನಿಸಿ ನಿಂತು ಆಲೋಚನಾಮಗ್ನಳಾದ ರಾಜಪುತ್ರಿಯನ್ನು ಕಂಡಳು. ಅಮಲೆ—ಸಹಾನುಭಾವದಿಂದ ತುಂಬಿದವಳಾಗಿ ಆಕೆಯ ಬಳಿ ಬಂದು ಮೊಣಕಾಲೂರಿ, ಕಣ್ಣಿನಲ್ಲಿ ಅಶ್ರು ಹನಿಯಿಕ್ಕುತ್ತಿರಲು ಕರುಣಾ ಪೂರ್ಣ ಹೃದಯದಿಂದ ಯೋಚನೆಯ ಕಾರಣವನ್ನು ಕೇಳಿದಳು. ಕರ್ಮ ದೇವಿಯು ತುಂಬಿದ ಕಣ್ಣುಗಳಿಂದ ತನ್ನ ಇಂಗಿತವನ್ನು ತಿಳಿಯಲಪೇಕ್ಷಿಸು ತ್ತಿದ್ದ ನೆಚ್ಚಿನ ಗೆಳತಿಯನ್ನು ಮೇಲಕ್ಕೆತ್ತಿ—ತನ್ನ ದುಃಖವನ್ನು ಮರೆಯಿಸ ಲೆತ್ನಿಸುತ್ತ—

"ಸಖಿ, ನನಗೇನಿದೆ ದುಃಖ? ಸ್ನೇಹ ಪೂರ್ಣವಾದ ಈ ವಾತಾವರಣ ವನ್ನು ಬಿಡಬೇಕಾಗಿ ಬಂದುದೇ— ನನ್ನಿಂದಿನ ಯೋಚನೆಗೆ ಕಾರಣವಲ್ಲದೆ— ಮತ್ತೇನು?" ಎಂದಳು.

ರಾಜಕುಮಾರಿ ಕರ್ಮದೇವಿಯು ಮಾತನ್ನು ಕೇಳಿದ ಅಮಲೆ— ನಿಜವನ್ನು ಮರೆಯಿಸಿದ ಗೆಳತಿಯ ಮಾತನ್ನು ಕೇಳಿ ತಡೆಯಲಾರದ ದುಃಖದಿಂದ, ರಾಜಕುಮಾರಿಯನ್ನು ತಬ್ಬಿಕೊಂಡು ಬಿಕ್ಕಿ ಬಿಕ್ಕಿ ಅಳುತ್ತಾ

"ಅಕ್ಕಾ, ನನ್ನಲ್ಲೂ ವಿಚಾರವನ್ನು ಮರೆಸುತ್ತಿರುವೆಯಾ? ನಾನೇನು ಮಾಡಿದೆನು? ನನ್ನಲ್ಲಿಷ್ಟು ಮಾತ್ರವೂ ಮರೆಯಿಸಬೇಡ. ನೊಂದೆದೆಯ ದುಃಖವನ್ನು ನಿನ್ನ ಗೆಳತಿಯಲ್ಲಿ ಸುರಿ ಹೃದಯವನ್ನು ತುಸು ಸಡಿಲಾಗಿಸು. ಇದೇ ನನ್ನ ಪ್ರಾರ್ಥನೆ" ಎಂದಳು. ಸಖಿಯ ಕರುಣಾಪೂರ್ಣ, ಹಾಗೂ, ಸ್ನೇಹಾರ್ದವಚನಗಳನ್ನುಕೇಳಿದ ಕರ್ಮದೇವಿ–ಅಧೀರೆಯಾಗದೆ,ಆಕೆಯನ್ನು ತನ್ನ ಸಮೀಪಕ್ಕೆ ಬರಸೆಳೆದು, "ನನ್ನ ಪ್ರೀತಿಯ ಗೆಳತಿ, ನಿನ್ನಲ್ಲಿ ನಾನು ಅದೇಕೋ ಮರೆಯಲೆತ್ನಿಸಿದೆ. ನನ್ನನ್ನು ಮನಸಾ ಕ್ಷಮಿಸು. ನನ್ನ ಜೀವಿತದ ಪ್ರತಿ ಗಳಿಗೆಯನ್ನೂ ಅರಿತ ನಿನ್ನಲ್ಲಿ ಸಂಗೋಪನೆಯೇಕೆ? ನನ್ನ ಜೀವಿತದ ಜೀವಿತವು ನೀನಾಗಿದ್ದಿ. ನನಗಾಗಿ, ನಿನ್ನ ಬಾಳಿನ ಗೆಳತಿಗಾಗಿ ಒಂದು ಉಪಕಾರವನ್ನು ಮಾಡುವಿಯಾ?........

"ಗೆಳತಿ, ಇದೋ, ಇಂದು ಅಖಂಡ ವೈಭವದೊಡನೆ ವಿವಾಹ ಸಮಾರಂಭದ ಸಿದ್ಧತೆಯು ಜರಗುತ್ತಿದೆ. ಆದರೆ, ಇಂತಹ ಈ ಗಳಿಗೆಯಲ್ಲೂ ನಾನೇಕೆ ದುಃಖಿಸುತ್ತಿರುವೆನೆಂಬುದು ನಿನಗೆ ವಿಚಿತ್ರವಾಗಿ ಕಾಣಬಹುದು. ಮಾತಾ–ಪಿತರ ಮುಂದೆ ಹೇಳಲಾಗದ, ಅವರ ನಿಶ್ಚಯದ ಮುಂದೆ ವಿಚಾರಾಂತರವನ್ನು ತಂದೊಡ್ಡಲಾಗದ ನನ್ನ ಅಸಹನೀಯ ಹೃದಯ ಸಂತಾಪವನ್ನು, ಆ ಧರ್ಮಸಂಕಟವನ್ನು ನೀನೆಂತು ಅರಿಯಬಲ್ಲೆ?" ಎಂದೆನ್ನುತ್ತ ಕರ್ಮದೇವಿ ಅದೆತ್ತಲೋ ಶೂನ್ಯದೃಷ್ಟಿಯನ್ನು ಹಾಯಿಸಿ ಅಶ್ರುಪೂರ್ಣ ನಯನೆಯಾದಳು. ಅವಳೆ ಈ ಪರಿಸ್ಥಿತಿಯಲ್ಲಿ ಏನು ಮಾಡಲೂ ಅರಿಯದವಳಾದರೂ, ಒತ್ತಿಬರುವ ದುಃಖವನ್ನು ತಡೆಹಿಡಿದು, "ನನ್ನ ಪ್ರಾಣಸಖಿ, ಇದೋ ನಿನಗಾಗಿ ನಾನೆಂತಹ ದುರ್ಧರ ಪ್ರಸಂಗವನ್ನೂ ಹೋಗಬಲ್ಲೆ! ಜೀವಿತವೇ ನಿನ್ನ ಸುಖಕ್ಕಾಗಿ ಮೀಸಲಿದೆ. ದಯವಿರಿಸಿ ನನ್ನಂತರಂಗದ ಬಗೆಯನ್ನರಿತು, ವಿಚಾರವನ್ನು ತಿಳಿಸು" ಎಂದಂದು, ತನ್ನ ಉತ್ತರೀಯದಿಂದ ಕರ್ಮದೇವಿಯ ಕಣ್ಣಿಂದ ಆಗ ತಾನೆ ಇಳಿಯತೊಡಗಿದ ಕಣ್ಣೀರನ್ನು ಒರಸಿದಳು. ಅನ್ಯಾದೃಶವಾದ ಸಖಿಯೊಲವನ್ನು ಕಂಡು, ಕರ್ಮದೇವಿ "ಸಖಿ, ನಾನೇನು ಹೇಳಲಿ? ನನ್ನ ಹೃದಯವನ್ನು, ರಾಜಕುಮಾರ ಸಾಧುವಿನ ಪಾದತಲದಲ್ಲಿ ಸಮರ್ಪಿತವಾದೀ ಹೃದಯಕುಸುಮವನ್ನು—ನಾನೆಂತು ಆರಣ್ಯಕಮಲನಿಗೆ ಸಮರ್ಪಿಸಲಿ? ಮನಸಾ ಒಮ್ಮೆ ವರಿಸಿದ ತರುಣನನ್ನು —ಕ್ಷತ್ರಿಯ ಕನ್ಯೆಯಾದ ನಾನೆಂತು ಮರೆಯಲಿ? ನಿಷ್ಕಲ್ಮಷ ಪ್ರೇಮವನ್ನು

—ಪ್ರೇಮ ಪೀಯೂಷಧಾರೆಯೊಡನೆ ಮಿಲನವಾಗಿಸಿ, ಹೃದಯವನ್ನು ದಾನವಾಗಿಸಿದ ಈ ಸುಸಂಧಿಯಲ್ಲಿ— ನನ್ನ ಗಮನವನ್ನು ಸೆಳೆಯದೆ, ನನಗೆ ಹಿತವಾಗುವದೆಂದೇ ಬಗೆದು ಪಿತೃಗಳು ನಿಶ್ಚೈಸಿದ ಈ ವಿವಾಹ ಕಾರ್ಯದಲ್ಲಿ— ನಾನೆಂತು ಆ ರಾಜಕುಮಾರನನ್ನು ಮರೆಯಬೇಕು? ಅದೆಂತು ಅರಣ್ಯಕಮಲನನ್ನು ಒಪ್ಪಬೇಕು? ಅದು ಸಾಧ್ಯವಿಲ್ಲ. ಎಂದೆಂದೂ ಒಪ್ಪದ ಮಾತು. ಎಂತಹ ಇಕ್ಕಟ್ಟು ಬಂದರೂ, ಮರಣವನ್ನು ಸ್ವಾಗತಿಸುವೆ— ವಿನಹ ಈ ವಿವಾಹಕ್ಕೆ ಒಡಂಬಡಲಾರೆ. ಪ್ರಿಯಸಖಿ, ನನ್ನೀ ನಿಶ್ಚಿತವನ್ನು —ನನ್ನ ಮೇಲೆ ನಿನಗಿರುವ ಆದರಾತಿಶಯದಿಂದ, ನನ್ನ ಒಲವಿನ ಮಾತೆಗೆ ತಿಳಿಸುವೆಯಾ? ಇದುವೆ ನನ್ನ ಪರವಾಗಿ ನೀನು ಮಾಡಬೇಕಾದ ಕೆಲಸ. ಇದೊಂದು ಮಹೋಪಕಾರ. ಈ ಉದ್ಯಮದ ಪೂರ್ವಭಾವಿಯಾಗಿಯೆ, ನಿನಗಿದೋ ಕೃತಜ್ಞತೆಯನ್ನರ್ಪಿಸಿಕೊಳ್ಳುವೆನು" ಎಂದಂದು ನೇರಾಗಿ ತನ್ನ ಶಯನದ ಬಳಿ ಬಂದು, ತಲೆಗುತ್ತಿ ಕುಳಿತಳು. ತಳಮಳದ ಏರು-ತಗ್ಗುಗಳಲ್ಲಿ ಓಲಾಡುತ್ತಿದ್ದ ಅಮಲೆ ವಿಚಾರಾಂಧಳಾಗಿ, ಕರ್ಮದೇವಿಯ ಬಳಿ ಬಂದು ಕೆಲಹೊತ್ತು ಹಾಗೆಯೆ ಕುಳಿತಳು. ನಿಮಿಷಗಳು ನಿಮಿಷಗಳೊಡನೆ ಸೇರಿ ರಾತ್ರಿಯ ಭೀಕರತೆಯನ್ನೇರಿಸುತ್ತಿತ್ತು. ಈ ಗಳಿಗೆಯಲ್ಲಿ ಅಮಲೆ ಪುನಃ ಸಖಿಯ ಬಳಿ ಬಂದು ಆಕೆಯ ಮುಂಗುರುಳನ್ನು ನೇವರಿಸುತ್ತಾ, ರಾಜಕುಮಾರ ಸಾಧುವಿನ ಪರಾಕ್ರಮಕ್ಕಿಂತ ಯಾವ ಬಗೆಯಲ್ಲೂ ಕಡಿಮೆಯಿರದ ಅರಣ್ಯಕಮಲನ ರೂಪಸಂಪತ್ತನ್ನೂ, ನಡೆದ ವಾಗ್ದತ್ತಕ್ಕೆ ತೊಡಕು ಉಂಟಾದರೆ ಬರಬಹುದಾದ ಅನರ್ಥ ಪರಂಪರೆಗಳನ್ನು ಮನಂಬುಗುವಂತೆ ವಿವರಿಸಿದಳು. ಆದರೇನು? ಕರ್ಮದೇವಿ ರೂಪಲಾವಣ್ಯಗಳನ್ನು ನೆನಸುವಳೇ? ವೀರಕ್ಷತ್ರಿಯ ಕನ್ಯೆಯಾದ ಆಕೆ ಅನರ್ಥಗಳ ಮುಂದೆ ಕುಸಿಯುವಳೇ? ಆಂತರಿಕವಾದ ಹೃದಯದೊಲವನ್ನು ಮುರಿದು ನಿಶ್ಚಿತವನ್ನು ಮೀರಿನಡೆಯುವಳೆ? ಇಲ್ಲ! ಸಖಿಯ ಮಾತನ್ನು ತಡೆಗಟ್ಟುತ್ತಾ, "ಸಖಿ, ಇನ್ನಾ ಮಾತುಗಳನ್ನು ನನ್ನ ಮುಂದೆ ತರಬೇಡ. ನನಗಾಗಿ ನೀನಿದ್ದರೆ—ನೀನು ನನ್ನವಳಾಗಿದ್ದರೆ—ಇದೊ ಈಗಲೆ ನನ್ನ ಮಾತೆಯ ಬಳಿಗೆ ಹೋಗಿ ನನ್ನ ನಿಶ್ಚಯವನ್ನು ತಿಳಿಸಿ ಬಾ. ತೆರಳುವೆಯಾ?" ಎಂದು ಅಮಲೆಯನ್ನು ಹೃದಯದಿಂದಲೆ ಆಲಂಗಿಸಿ—ಮುಖವನ್ನೇ ನಿಟ್ಟಿಸಿದಳು. ಕರ್ಮದೇವಿಯ ದೃಢನಿಶ್ಚಯವನ್ನು ಕಂಡ ಅಮಲೆ ಮಾತಿಗೊಪ್ಪಿದಳು. ಸಖಿಯ ಒಪ್ಪಿಗೆಯ ಮುಂದೆ ಸಂತೋಷಭರಿತೆಯಾದ ಕರ್ಮದೇವಿ

ಕಲ್ಯಾಣಗುಣಸಂಪನ್ನೆಯಾದ ಜಗದಂಬಿಕೆಯ ಪಾದಕ್ಕಭಿನಮಿಸಿ ಪವಡಿಸಿ ದಳು. ಅಮಲೆಯೂ ತುಮುಲವಾಗಿ ಬರುತ್ತಿರುವ ವಿಚಾರಗಳ ತಾಕಲಾಟ ದಲ್ಲಿ ಬಸವಳಿಯುತ್ತಿರುವಾಗಲೇ ಅತ್ತ ಸೂರ್ಯೋದಯದ ಪೂರ್ವಭಾವಿ ಯಾಗಿ ಹೊಂಬೆಳಕನ್ನು ಚೆಲ್ಲುವ ಅರುಣನು ತಲೆದೋರಿದನು. ಅಮಲೆ ಮುಂದಿನ ಸಿದ್ಧತೆಗಾಗಿ ಮುನ್ನಡೆದಳು.

೪

ಅಮಲೆಯ ಮಾತುಗಳಲ್ಲಡಕವಾದ ಕರ್ಮದೇವಿಯ ದೃಢನಿಶ್ಚಯ ವನ್ನು ಕಂಡ ಆ ತಂದೆತಾಯಿಗಳು ದಿಙ್ಮೂಢರಾದರು. ಮಗಳ ಅಭಿಪ್ರಾ ಯುವನ್ನು ಮನ್ನಿಸಿ, ಅರಣ್ಯಕಮಲನಿಗಿತ್ತ ಮಾತನ್ನು ಮುರಿದರೆ, ಅಸಾ ಮಾನ್ಯ ಪರಾಕ್ರಮಿಯಾದ ಆತನಿಂದೊದಗಬಹುದಾದ ಮಹಾವಿಪತ್ತನ್ನು ನೆನೆದು, ತಮ್ಮ ಮಗಳ ಮತ್ತು ಅಳಿಯನ ಮುಂದಿರುವ ಮಹಾ ದುರಂತ ವನ್ನು ಸಹಿಸದಾದರು. ಈ ಇಕ್ಕಟ್ಟಿನಿಂದ ಪಾರಾಗಬಹುದಾದ ಉಪಾಯ ವನ್ನು ಕಾಣದೆ ಪರಿತಪಿಸಿದರು. ಕೊನೆಗಂತೂ ಶೀಲಾದೇವಿಯೆ ಮಗಳ ಬಳಿಗೆ ಬಂದು ಹಿತೋಕ್ತಿಗಳನ್ನಾಡಿದಳು. ಆದರೂ ಕರ್ಮದೇವಿ ತಾಯಿಯ ಪಾದಕಮಲದಲ್ಲಿ ತಲೆಯಿರಿಸಿ ತನ್ನ ನಿಶ್ಚಯಕ್ಕಾಗಿ ಕ್ಷಮೆಯನ್ನು ಯಾಚಿಸಿ ದಳಲ್ಲದೆ, ತನ್ನ ಮಾತನ್ನೂ ನೆರವೇರಿಸಲು ಬೇಡಿಕೊಂಡಳು. ಪುತ್ರೀ ಪ್ರೇಮದ ಸೆಲೆಯೇ ತುಂಬಿದ್ದ ಆ ಮಾತೃಹೃದಯ ಪುತ್ರಿಯ ಕಲ್ಯಾಣವನ್ನು ಆಶಿಸಿ, ಹಿಂದಿರುಗಿತು. ಮುಂಗಾಣದ ಆ ದಂಪತಿಗಳು ತಮ್ಮ ಅಭಿಪ್ರಾಯ ವನ್ನು ಅರಣ್ಯಕಮಲನಿಗೆ ತಿಳಿಸುವ ಮುನ್ನ, ಕರ್ಮದೇವಿಯ ವಿವಾಹದ ಕುರಿತು ಸಾಧುವನ್ನು ಕೇಳಲು ಮರೆಯಲಿಲ್ಲ. ಕರ್ಮದೇವಿಯಲ್ಲಿ ಮೊದಲೇ ಹೃದಯದ ಏರಿಕವನ್ನು ಹೊಂದಿಸಿದ್ದ, ರಾಜಕುಮಾರ, ತನ್ನ ಒಲವಿನ ಮುದ್ರಿಯನ್ನು ಮುಖದಲ್ಲೊತ್ತಿದನು. ಅದೇ ಸಂದರ್ಭದಲ್ಲೇ ಈ ವಿಚಾರ ವನ್ನು ದೈನ್ಯದಿಂದ ಅರಣ್ಯಕಮಲನಿಗೂ ಸೂಚಿಸಿ, ತಮ್ಮ ನಿಶ್ಚಯ ದಾನ ಕ್ಕಾಗಿ ಕ್ಷಮೆಯನ್ನೂ ಯಾಚಿಸಿ, ಯಾವ ದುರಂತಗಳೂ ಕಾಲಿಕ್ಕುವ ಮುನ್ನವೇ ಬಹು ವೈಭವದಿಂದ ರಾಜೋಚಿತ ಸಂಪ್ರದಾಯದಲ್ಲಿ ವಿವಾಹ ವನ್ನೂ ನೆರವೇರಿಸಿದರು. ಕರ್ಮದೇವಿಯ ಹಸನ್ಮುಖವನ್ನು ಕಂಡು,ರಾಜ ಕುಮಾರನ ಭವ್ಯತೆಯ ನಿಲುವನ್ನು ಕಂಡು ಆ ದಂಪತಿಗಳು ಹೃತ್ಪೂರ್ವಕ

ವಾಗಿ ಅವರಿಬ್ಬರಿಗೂ ಕಲ್ಯಾಣವನ್ನು ಬಗೆದು, ಒಂದು ವಿಧದಲ್ಲಿ ಆನಂದಿತ ರಾದರೂ, ದುರ್ದಮನಾದ ಅರಣ್ಯಕಮಲನ ಭೀಕರತೆಯನ್ನು ನೆನೆದು ತಮ್ಮುತ್ತರೀಯದಿಂದ ಕಣ್ಣಲ್ಲಿ ತುಂಬಿನಿಂತಿದ್ದ ಅಶ್ರುವನ್ನೊರೆಸಲು ಮರೆ ಯಲಿಲ್ಲ.

ತನಗಿತ್ತ ವಾಗ್ದಾನಕ್ಕೆ ವಿರುದ್ಧವಾಗಿ ನಡೆದ ವಿವಾಹದಿಂದ ಉರಿದೆದ್ದ ಆರಣ್ಯಕಮಲನು ಅವಮಾನಿತನಾಗಿ ಈ ವಿಚಾರವನ್ನು ಸಹಿಸದಾದನು. ಮೊದಲೆ ಕ್ಷಾತ್ರತೇಜದಿಂದ ಪ್ರಜ್ವಲಿಸುತ್ತಿದ್ದ ರಾಜಕುಮಾರ ಬಂದೊದಗಿದ ಅಪಮಾನ–ಖೇದಗಳಿಂದ ಸಂತಪ್ತನಾಗಿ, ಸೇನಾಸಮೇತನಾಗಿ, ವಿವಾಹಿತ ದಂಪತಿಗಳು ಸಾಗುವ ದಾರಿಯಲ್ಲಿ ಪ್ರತಿಭಟಿಸಲು ಸಿದ್ಧನಾಗಿ ಮುಂದೆ ಸಾಗಿ ದನು.—

ಇತ್ತ, ನವವಧೂವರರನ್ನು ರಾಜೋಚಿತವಾದ ಬಹುಮಾನಗಳಿಂದ ಸತ್ಕರಿಸಿದ ಆ ರಾಜದಂಪತಿಗಳು ವರನ ಪ್ರಯಾಣಕ್ಕನುಗುಣವಾದ ಸಕಲ ಸಿದ್ಧತೆಗಳನ್ನು ಮಾಡಿ, ಬೆಂಗಾವಲಿಗೆಂದು ಸಾಕಷ್ಟು ಸೈನ್ಯವನ್ನೂ ಒದಗಿಸಿ ಅತಿ ವೈಭವದಿಂದ ಬೀಳ್ಕೊಟ್ಟರು. ಕರ್ಮದೇವಿ ತಂದೆ ತಾಯಿಗಳ ಕಾಲನ್ನು ಮುಟ್ಟಿ ನಮಸ್ಕರಿಸಿ, ಅಮಲೆಯನ್ನು ಬರಸೆಳೆದಾಲಿಂಗಿಸಿ ಬಿಡುಗೆಯನ್ನು ಯಾಚಿಸಿ ಮುಂದೆ ಕಾಲಿರಿಸಿದಳು. ಅಗಲೆ ದಕ್ಷಿಣಾಕ್ಷಿಸ್ಪಂದನವಾದುದನ್ನು ಮನಗಂಡ ರಾಜಕುಮಾರಿ ಅದನ್ನಾರಿಗೂ ತಿಳಿಯಗೊಡಿಸದೆ—ದೈವವನ್ನು ಮನದಲ್ಲಿ ಪ್ರತಿಕೂಲ ಶಾಂತಿಗಾಗಿ ಕೋರಿ, ಪ್ರಿಯತಮನನ್ನು ಹಿಂಬಾಲಿಸಿ ದಳು. ರಾಜದಂಪತಿಗಳು ನಗರದ ಹೊರಭಾಗದ ವರೆಗೆ ಬಂದು, ಮತ್ತೊಮ್ಮೆ ಶುಭಾಶಂಸೆಯನ್ನು ಬಗೆದು, ಕಣ್ಣೀರುದುಂಬಿದರು. ಅತಿ ವೈಭವದೊಡನೆ ಸಾಧು ರಾಜಕುಮಾರ ತನ್ನ ನಗರಕ್ಕೆ ಅಭಿಮುಖನಾದನು.

೫

ನಡು ದಾರಿ. ವಿಶ್ರಾಂತಿಗಾಗಿ ರಾಜಕುಮಾರ ಒಂದು ಬಯಲಲ್ಲಿ ತಂಗಿದ್ದನು. ಸೇನೆಯೆಲ್ಲವೂ ಹಾಯಾಗಿ ನೆಲೆನಿಂತಿತ್ತು. ಆಗಲೇ ಭಯಂ ಕರವಾದ ಭೇರಿವಾದ್ಯಗಳೂ,ಸೇನಾಕೋಲಾಹಲವೂ ಮೊಳಗಿದುವು. ಒಡನೆ ರಾಜಕುಮಾರನು ಎದ್ದು ನಿಂತು ಸುತ್ತಲೂ ನೋಡಿದನು. ತನ್ನೆಡೆಗೇ ರಭಸದಿಂದ ಮುನ್ನುಗ್ಗುವ ಸೇನಾವೃಂದವನ್ನು ಕಂಡು ತನ್ನ ಸೈನ್ಯಕ್ಕೆ

ಎಚ್ಚರಿಕೆಯನ್ನಿತ್ತು ತಾನು, ಕರ್ಮದೇವಿಯನ್ನು ಸುರಕ್ಷಿತವಾದೊಂದೆಡೆಯಲ್ಲಿರಿಸಿ, ಪ್ರತಿಭಟಿಸಲು ಅಣಿಯಾದನು.

ಪ್ರತಿಭಟಿಸಲು ಮುನ್ನುಗ್ಗಿದ ಸೇನಾಸಮೂಹದ ಮುಂದಾಳಾಗಿ ಕಾಣಿಸಿದ ಅರಣ್ಯಕಮಲನನ್ನು ನೋಡಿದೊಡನೆ ಸಾಧುವು ಎಲ್ಲ ವಿಚಾರವನ್ನೂ ತಿಳಿದುಕೊಂಡನು. ಇನ್ನೇನು? ಅರಣ್ಯಕಮಲನ ಸೇನೆಯು ರಾಜಕುಮಾರ ಸಾಧುವಿನ ಸೈನ್ಯದೊಡನೆ ಕಾದಾಡಿ, ಜಯಭೇರಿಯನ್ನು ಮೊಳಗಿಸುತ್ತಿರುವಾಗಲೇ, ರಾಜಕುಮಾರ ಸಾಧುವು ತನ್ನ ಅಲ್ಪ ಸೈನ್ಯದ ಪರಾಭವದಿಂದ ದಿಙ್ಮೂಢನಾಗದೆ, ನೇರಾಗಿ ಅರಣ್ಯಕಮಲನನ್ನೇ ಪ್ರತಿಭಟಿಸಲನುವಾದನು. ಕರ್ಮದೇವಿ ನಿಂತೆಡೆಯಿಂದಲೇ ದೈವವನ್ನು ನೆನೆಯುತ್ತ, ತನ್ನ ಮಾಂಗಲ್ಯ ಕರಂಡಕದಿಂದ ಕುಂಕುಮವೆತ್ತಿ ಹಣೆಗಿರಿಸಿ ಮತ್ತೊಮ್ಮೆ ಪತಿಯ ವಿಜಯವನ್ನೇ ನೆನೆದಳು. ದೈವದಲ್ಲಿ ಮೊರೆಯಿಟ್ಟಳು. ತಂದೆ ತಾಯಿಗಳ ಆಶೀರ್ವಾದವನ್ನು ಮನಸಾ ಯಾಚಿಸಿದಳು. ಅರಣ್ಯಕಮಲನು ಸಾಧುವಿನ ಬರುವಿಕೆಯನ್ನು ಕಾಣುತ್ತಲೇ ವೀರಾವೇಶದಿಂದ ಮುನ್ನುಗ್ಗಿ, ತನ್ನೊಡನೆ ದ್ವಂದ್ವ ಯುದ್ಧಕ್ಕಾಗಿ ಸಾಧುವನ್ನಾಮಂತ್ರಿಸಿದನು. ದ್ವಂದ್ವಯುದ್ಧದ ಮರ್ಮವನ್ನರಿತೇಯಿದ್ದ ಸಾಧುವು ಒಂದಿಷ್ಟು ಅಳುಕದೆ ಮುಂದೆ ಬಂದು ಅರಣ್ಯಕಮಲನನ್ನು ಪ್ರತಿಭಟಿಸಿದನು. ಮದಗಜಗಳೆರಡು ಭೀಕರವಾಗಿ ಹೋರಾಡುವಂತೆ ಹೋರಾಡಿ ಮಗುಚುವಂತೆ, ಮಗುಚಿದಲ್ಲಿಂದಲೂ ರುದ್ರಭೀಕರ ನಾದವೆತ್ತಿ ಘೀಳಿಡುವಂತೆ,–ಆ ವೀರರೀರ್ವರೂ ಬಹುಕಾಲ ಕಾದಾಡಿದರು. ಕಾದಾಡಿ ದಣಿದರು. ದಣಿದು ದಣಿದು ಭೂಮಿಯಲ್ಲುರುಳಿದರು. ಯುದ್ಧದಿಂದಲೇ ಬಳಲಿ ಬೆಂಡಾದ ರಾಜಕುಮಾರ ಸಾಧು, ತಾನು ಬಿದ್ದೆಡೆಯಲ್ಲಿ ನೆಲೆನಿಂತಿದ್ದ ಶಿಲಾಫಲಕದ ಮೇಲೆ ಬೀಸಲ್ಪಟ್ಟು—ಅಲ್ಲೇ ಮರಣಕ್ಕೀಡಾದನು. ಕರ್ಮದೇವಿಯ ಕುಂಕುಮವನ್ನು ವಿಧಿಯು ಅಳಿಸಿತು. ಆದರೆ.....?

ಪತಿಯ ವೀರಮರಣವನ್ನು ಕೇಳಿದ ಕರ್ಮದೇವಿ ಅಬಲೆಯಾಗಲಿಲ್ಲ. ಆಕೆಯ ಧಮನಿಗಳಲ್ಲಿ ಅಡಕವಾಗಿದ್ದ ಪ್ರತಿಯೊಂದು ರಕ್ತಬಿಂದುವೂ ಬಿಸಿಯೇರಿತು. ಪಾತಿವ್ರತ್ಯದ ದಿವ್ಯಸ್ರೋತಸ್ಸು ಉಜ್ವಲ ಪ್ರವಾಹದಿಂದ ತುಂಬಿ ಮೊರೆಯಿತು. ನೇರಾಗಿ ಕರ್ಮದೇವಿ ತನ್ನ ಪತಿದೇವನ ಬಳಿ ಸಾರಿದಳು. ಭೂಶಾಯಿಯಾಗಿದ್ದ ಪತಿದೇವನನ್ನೊಮ್ಮೆ ಕಾಲ್ಮುಟ್ಟಿ ವಂದಿಸಿ—ಕಣ್ಣೀರಿಂದದನ್ನು ತೋಯಿಸಿ, ಒಡನೆಯೇ ವೀರಾವೇಶದಿಂದ ಎದ್ದು ನಿಂತು, ಗಂಡನ

ಸೊಂಟದಲ್ಲಿ ಸಿಲುಕಿಸಿದ್ದ ಖಡ್ಗವನ್ನು ಸೆಳೆದು, ಎರಡೂ ಕೈಗಳಿಂದದನ್ನು ಮುಟ್ಟಿ ಮೇಲೆತ್ತಿ, ಸೂರ್ಯದೇವನನ್ನು ವಂದಿಸಿ—ಖಡ್ಗವನ್ನು ಬಲಗೈಯಿಂದ ಅದುಮಿ ಹಿಡಿದು ಒಂದೇ ಏಟಿಗೆ ತನ್ನ ಎಡಗೈಯನ್ನು ತುಂಡರಿಸಿದಳು. ಉಕ್ಕಿ ಬರುತಿದ್ದ ರಕ್ತಧಾರೆಯನ್ನು ಅಳಿದುಳಿದು ಸೈನ್ಯ ನಿಟ್ಟಿಸುತ್ತಿರುವಂತೆಯೆ ಆಕೆ ಬಿದ್ದ ಹಸ್ತವನ್ನು ಕೈಯಿಂದೆತ್ತಿ ತನ್ನ ಸೈನಿಕನೊಬ್ಬನನ್ನು ಸಮೀಪಕ್ಕೆ ಕರೆದು "ಪ್ರಿಯ ಸಹೋದರಾ, ನೀನು ಇದನ್ನು ತೆಗೆದುಕೊಂಡು ಹೋಗಿ ನನ್ನ ಮಾವನವರಿಗಿತ್ತು ಹೀಗೆಂದು ಬಿನ್ನವಿಸು: "ನಿಮ್ಮ ಸೊಸೆಯನ್ನು ಕಾಣುವ ಹಂಬಲದಿಂದ ನೀವು ನಿಮ್ಮ ಸುಪುತ್ರನ ಬರವನ್ನು ಹಾರೈಸುತ್ತಿರಬಹುದು. ಆದರೆ ಇಲ್ಲಿ ನಡೆದ ವಿಚಾರ ನಿಮಗೀತನಕ ತಿಳಿಯದಾದರೂ, ಈ ಹಸ್ತ ದರ್ಶನವು ತಮಗೆಲ್ಲವನ್ನೂ ತಿಳಿಸುವುದು. ನಿಮ್ಮ ಮಗನೂ ಸೊಸೆಯೂ ವೀರಸ್ವರ್ಗದಲ್ಲಿ ನಲಿದಾಡುವ ಯೋಗವನ್ನು ಕಾಣುವಂತಾದರು" ಎಂದು ತಿಳಿಸು ಎಂದಳು. ಸೈನಿಕನು ಮರುಮಾತನಾಡದೆ ಅದನ್ನು ರೇಶ್ಮೆಯ ವಸ್ತ್ರದಲ್ಲಿ ಸುತ್ತಿ ಮುಂದಡಿಯಿರಿಸಿದನು. ಮರುಗಳಿಗೆಯಲ್ಲೇ ಕರ್ಮದೇವಿ ಮತ್ತೊಬ್ಬ ಸೈನಿಕನನ್ನು ಬರಹೇಳಿ, ಖಡ್ಗವನ್ನವನ ವಶವಿತ್ತು "ತಮ್ಮಾ, ವೀರಾಂಗನೆಯ ಮಾತನ್ನು ನಡೆಸು. ಇದರಿಂದ ನಿನ್ನ ಸ್ವಾಮಿ ಸೇವೆಯು ಕೃತಾರ್ಥವಾದಂತಾಗುವುದು. ತಡವರಿಸದಿರು. ಇದೇ ಖಡ್ಗದಿಂದ ಈ ನನ್ನ ಬಲಗೈಯನ್ನು ತುಂಡರಿಸು" ಎಂದಳು. ಆ ಭಟನು ತುಸು ಹೊತ್ತು ಅತ್ತಿತ್ತ ನೋಡಿ ಹಿಂಜರಿಯುತ್ತಿರಲು, ವೀರನಾರಿಯ ಆವೇಶವು ಅವನನ್ನು ಎಚ್ಚರಿಸಿತು. ಉಜ್ವಲವಾದ ಕಾಂತಿಯೊಡನೆ ಬೆಳಗುತಿದ್ದ ಆ ವದನಾರವಿಂದವು ಆತನಲ್ಲಿ ಭಕ್ತಿಯ ಹೊನಲನ್ನು ಹರಿಯಿಸಿತು. ಮಹಾಮಾತೆ ಕರ್ಮದೇವಿಯ ಮುಂದೆ ದೀರ್ಘದಂಡ ಪ್ರಣಾಮವನ್ನು ಮಾಡಿ, ಖಡ್ಗವನ್ನೆತ್ತಿ ತನ್ನ ಕರ್ತವ್ಯವನ್ನು ಪೂರೈಸಿದನು. ನೆಲಕ್ಕೆ ಸಿಡಿದ ಆ ಕೈಯನ್ನು ಭಕ್ತಿಯಿಂದೆತ್ತಿ ನಿಂತ ಭಟನನ್ನು ಆ ಸಾಕ್ಷಾತ್ ಪತಿವ್ರತಾದೇವಿ ಹತ್ತಿರ ಕರೆದು "ನನ್ನ ಪ್ರೀತಿಯ ತಮ್ಮಾ, ತಡವರಿಸದೆ ನನ್ನ ತಾಯಿಯ ಬಳಿ ತೆರಳು. ಮಗಳು ಸ್ವರ್ಗದಲ್ಲಿ ಪತಿದೇವನೊಡನೆ ಸೇರಿದಳೆಂದು ತಿಳಿಸು. ನನಗಾಗಿ ಎಳ್ಳಷ್ಟಾದರೂ ದುಃಖಿಸಬಾರದೆಂದೂ, ಕಣ್ಣೀರಿಡಬಾರದೆಂದೂ ತಿಳಿಸು. ಪುತ್ರಿಯನ್ನು ಪಡೆದ ಆ ಗರ್ಭ ಧನ್ಯವಾಯಿತೆಂದು ತಿಳಿಸು. ಇಷ್ಟೆ. ಇನ್ನು ನೀನು ತೆರಳು" ಎಂದಳು. ಸ್ವಾಮಿಸೇವಾ

ದುರಂಧರನಾದಾ ಭಟನು—ಭಕ್ತಿಯಿಂದದನ್ನು ಹೊತ್ತು ನಡೆದನು. ಈ ಪ್ರಸಂಗವನ್ನು ನಿಟ್ಟಿಸುತ್ತಿದ್ದ ಎಲ್ಲಾ ಜನರೂ ಬೆರಗಾಗಿದ್ದುದರಲ್ಲಿ ಆಶ್ಚರ್ಯ ವೇನಿದೆ? ಮೂರ್ಛೆ ತಿಳಿದೆದ್ದ ಅರಣ್ಯಕಮಲನೂ ಕರ್ಮದೇವಿಯ ಈ ಉಜ್ವಲಕೃತ್ಯವನ್ನು ಕಂಡು ಬಸವಳಿದು ಬಿದ್ದಲ್ಲಿಂದಲೇ ಪುನಃ ಕುಸಿದು ನೆಲ ಕ್ಕುರುಳಿದನು. ಉರುಳಿದಲ್ಲಿಂದಲೂ ತನ್ನ ತಪ್ಪನ್ನು ನೆನೆದು ಕ್ಷಮೆಯನ್ನು ಯಾಚಿಸುವಂತೆ, ಕಣ್ಣೀರಿಳಿಸಿದನು.

ಪತಿಗೃಹಕ್ಕೂ, ತವರಿಗೂ ತನ್ನತನವನ್ನು ಸಲ್ಲಿಸಿದ ಆ ವೀರರಮಣಿ ಪತಿದೇವನ ಬಳಿ ಬಂದು ಮೊಣಕಾಲೂರಿ ನಮಿಸಿ, ತನ್ನ ಸೈನಿಕರನ್ನು ವೀರ ಚಿತೆಯನ್ನೇರ್ಪಡಿಸಲು ಹೇಳಿದಳು. ಇಕ್ಕಡೆಯ ಸೈನಿಕರೂ ಆ ಮಹಾ ತಾಯಿಯ, ವೀರಸತಿಯ ಆಜ್ಞೆಗೆ ತಲೆಬಾಗಿದರು. ಗಂಭೀರವಾದ ಚಿತೆಯು ಸಿದ್ಧವಾಯಿತು. ತನ್ನ ಪತಿಯ ಕಳೇಬರದ ಬಳಿಯಲ್ಲೇ ಮಂಡಿಯೂರಿ ಬಾಗಿ ಕುಳಿತ ಕರ್ಮದೇವಿ, ಚಿತೆಯನ್ನು ಅಗ್ನಿಯಿಂದ ಬೆಳಗಲು ಕೇಳಿಕೊಂಡು ಎಲ್ಲರನ್ನೂ ತುಂಬಿದ ಕಣ್ಣುಗಳಿಂದ ನೋಡಿದಳು. ಜಯ ನಿನಾದದೊಡನೆ ವೀರಸತಿಯ ಸ್ತುತಿಯೊಡನೆ ಅಗ್ನಿದೇವನು ಆ ವೀರಸತಿಯ ಕಳೇಬರವನ್ನು ಆಹುತಿಗೊಂಡನು. ಉಜ್ವಲವಾಗಿ ಮೇಲಕ್ಕೆದ್ದ ಜ್ವಾಲೆ, ಸುತ್ತಲೂ ಕವಿದು ವ್ಯಾಪಿಸುತ್ತಿದ್ದ ಧೂಮವೃಂದ ಆ ಮಹಾಮಾತೆಯ ಕೀರ್ತಿಯನ್ನು ದಶದಿಕ್ಕುಗಳಲ್ಲಿ ಸಾಗಿಸಿ ತುಂಬಿಸಿತು.

ಪುತ್ರಶೋಕದಿಂದಲೂ, ವೀರನಾರಿ ಕರ್ಮದೇವಿಯ ಅನ್ಯಾದೃಶ ಪತಿ ಭಕ್ತಿ ಹಾಗೂ ಶೀಲ ಸಂರಕ್ಷಣಾ ಮಹಾತ್ಯಾಗ ಇವುಗಳಿಂದಲೂ ಉದ್ವಿಗ್ನ ನಾದ ರಣಾಂಗದೇವನೇ ಆ ದಿವ್ಯ ಸ್ಥಳಕ್ಕೆ ಬಂದು, ಕಣ್ಣೀರಿಳಿಸಿ ಶಾಂತ ತೆಯ ಕಡೆಗೆ ಸಾಗುತಿದ್ದ ಅಗ್ನಿದೇವನ ಉಡಿಯಲ್ಲಿ ತನ್ನ ಸೊಸೆಯ ಹಸ್ತ ವನ್ನಿರಿಸಿ ಆ ವೀರದಂಪತಿಗಳಿಗೆ ಶುಭವನ್ನು ಕೋರಿದನು. ಮಾತ್ರವಲ್ಲದೆ ಕೆಲವು ದಿನ ಅಲ್ಲೇ ತಂಗಿ, ಒಂದು ವೀರ ಸಮಾಧಿಯನ್ನು ಕಟ್ಟಿಸಿ, ತತ್ ಸಮೀಪದಲ್ಲೇ ಒಂದು ಸರೋವರವನ್ನು ತೋಡಿಸಿ, ಒಂದು ಪ್ರಾತಃಕಾಲ ದಲ್ಲಿ ನೀರು ತುಂಬಿದ ಸರೋವರದಲ್ಲಿ ಸ್ನಾನ ಮಾಡಿ, ಪವಿತ್ರ ಜಲವನ್ನು- ಮೃತರ ಆತ್ಮಕ್ಕೆ ಶಾಂತಿಯನ್ನು ಬಯಸಿ, ಸೂರ್ಯೋನ್ಮುಖನಾಗಿ ತರ್ಪಣ ವನ್ನಿತ್ತು, ಒಂದು ಅಭೂತಪೂರ್ವ ಪುಣ್ಯ ಸ್ಮರಣೆಯ ಶಾಂತಿಯಲ್ಲಿ ತನ್ನ ರಾಜ್ಯಕ್ಕೆ ತೆರಳಿದನು.

ಅದೋ, ಅದುವೆ ಆ ಕರ್ಮ ಸರೋವರ! ಅದುವೆ ಆ ದಿವ್ಯ ಸಮಾಧಿ!!

ಓಂ ಶಾಂತಿಃ ಶಾಂತಿಃ ಶಾಂತಿಃ

ವೀರ ಕ್ಷತ್ರಿಯ ಕನ್ಯೆ, ಆದರ್ಶ ಭಾರತ ಮಹಿಳೆ, ಆದರ್ಶ ಸತೀಮಣಿ, ಸ್ತ್ರೀ ಚಾರಿತ್ರ್ಯ ರತ್ನಪ್ರಾಯೆ ಕರ್ಮದೇವಿ ಭಾರತದ ಇತಿಹಾಸದಲ್ಲೊಂದು ಸುವರ್ಣರೇಖೆಯನ್ನೆಳೆದು ಸಾಗಿದಳು. ಭಾರತವಿರುವ ವರೆಗೆ ಇಂತಹ ವೀರನಾರಿಯರ ಇತಿವೃತ್ತಕ್ಕೆ ಚ್ಯುತಿಯಿಲ್ಲ. ಮರೆಯಿಲ್ಲ ಸದಾ ಪ್ರಜ್ವಲಿಸುವ ತೇಜಃಕಿರಣಗಳಿವು. ಈ ತೇಜಃಕಿರಣಗಳು ಇಂದಿನ ಮಹಿಳೆಯರ ಮುನ್ನಡೆಗೆ ಕೈದೀವಿಗೆಯಾಗಲಿ. ಆ ವೀರ ಪರಂಪರೆಯಲ್ಲಿ ಬಂದ ನಮ್ಮ ಸಾಗು ದಾರಿಯಲ್ಲಿ ಶುಭ್ರತೆ, ನೆಲೆ, ಕೀರ್ತಿಗಳನ್ನವು ತುಂಬಲಿ!

ಭದ್ರಂ. ಶುಭಂ. ಮಂಗಳಂ.



## "ಒಂದಾಣೆ ಮಾಲೆ"ಯ ಲೇಖಕರ ಬಳಗ.

"ಒಂದಾಣೆ ಮಾಲೆ"ಯಲ್ಲಿ, ನಾಡಿನ ಪ್ರಸಿದ್ಧ ಲೇಖಕರು ಬರೆಯುತ್ತಿರುವರು. ಎಲ್ಲ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. ವಾರಕ್ಕೊಂದು ಪುಸ್ತಕ; ಪ್ರತಿ ಶನಿವಾರ ಪ್ರಕಟಣೆ; ಪ್ರತಿಯೊಂದಕ್ಕೆ ಒಂದಾಣೆ.

"ಒಂದಾಣೆ ಮಾಲೆ"ಯ ಲೇಖಕರಲ್ಲಿ ಕೆಲವು ಹೆಸರುಗಳನ್ನು ಇಲ್ಲಿ ಕೊಟ್ಟಿರುವೆವು:

ಶ್ರೀ|ಗಳಾದ ರಾಷ್ಟ್ರಕವಿ ಗೋವಿಂದ ಪೈಯವರು, ಕೆ. ಎಸ್. ಶರ್ಮ-ವಿದ್ವಾನ್, ಕೆ. ಎಸ್. ಪದ್ಮನಾಭ ಆಚಾರ್ಯ--ವಿದ್ವಾನ್, ಎಮ್. ಸುಬ್ರಾಯನ್-ವಿದ್ವಾನ್, ಬಿ. ಶಂಕರ ಭಟ್-ವಿದ್ವಾನ್, ಬಿ. ಎಮ್. ಶರ್ಮ-ವಿದ್ವಾನ್, ಬಳ್ಕೂರು ಸುಬ್ರಾಯ ಅಡಿಗ-ವಿದ್ವಾನ್, ಅಮ್ಮೆಂಬಳ ಅನಂತಯ್ಯ ನಾವಡ-ವಿದ್ವಾನ್, ಡಿ. ಪುಟ್ಟಸ್ವಾಮಿ-ಎಡ್ವೊಕೇಟ್, ಕೋ. ಶ. ಕಾರಂತ-ಎಡ್ವೊಕೇಟ್, ಪಿ ಎಸ್. ವೆಂಕಟಕೃಷ್ಣರಾವ್, ಎಂ.ಎ.,ಬಿ.ಟಿ, ಟಿ. ಚಂದ್ರರಾಜ ಸೆಟ್ಟಿ, "ನವಗಿರಿನಂದ", ಪಿ. ವೆಂಕಟರಮಣ ಭಟ್, ಬಿ. ದಾಮೋದರ ಬಾಳಿಗ, ಬಿ ಎ., ಅ. ಗೌ. ಕಿನ್ನಿಗೋಳಿ-ವಿದ್ವಾನ್, ಸಂ. ಜ. ರಾವ್, ಕೆ. ಸುಭಾಷಚಂದ್ರ ಶೆಣೈ, ಜಿ. ಆರ್. ಪಾಂಡೇಶ್ವರ್ (ಸಂಪಾದಕ: 'ಜಯ ಕರ್ನಾಟಕ'), ಎಲ್. ಎಸ್. ನಾಯಕ್, ಡಾ| ವಿ. ಆರ್. ಭಟ್, ಡಾ| ಎಸ್. ಪಿ. ಭಟ್, ವೈದ್ಯಗುರು ಎಂ. ಆರ್. ಭಟ್. ಕುಡ್ಪಿ ವಾಸುದೇವ ಶೆಣೈ, ಮೊದಲಾದವರು.

ದಿ| ಎಮ್. ಎನ್. ಕಾಮತರ ಪ್ರಹಸನಗಳು 'ಒಂದಾಣೆ ಮಾಲೆ' ಯಲ್ಲಿ ಪ್ರಕಟವಾಗಿವೆ. ಇನ್ನೂ ಕೆಲವು ಪ್ರಕಟವಾಗಲಿವೆ.

'ಒಂದಾಣೆ ಮಾಲೆ'ಯ ಯಾವ ಪ್ರಕಟಣೆಯೂ 16+4 ಪುಟಗಳಿಗಿಂತ ಕಡಿಮೆಯಾಗುವುದಿಲ್ಲ. ಕೆಲವು ಪ್ರಕಟಣೆಗಳಲ್ಲಿ 28, 32 ಅಥವಾ 36 ಪುಟಗಳಿರುವುವು.

ಎಲ್ಲ ನ್ಯೂಸ್ ಏಜಂಟರಲ್ಲೂ ಪುಸ್ತಕ ವ್ಯಾಪಾರಿಗಳಲ್ಲೂ ದೊರೆವುದು.

ಅಥವಾ

ಒಂದಾಣೆ ಮಾಲೆ,

ಪ್ರಭಾತ ಆಫೀಸು, ರಥಬೀದಿ, ಮಂಗಳೂರು-೧.

▪▪▪▪▪▪▪▪

59

# ಚುಟ್ಟ ಬಿಟ್ಟ ಧಿಟ್ಟ

(ಏಕಾಂಕ ಪ್ರಹಸನ)

•

ರಚಯಿತರು:

ಡಾ| ಎಸ್. ಪಿ. ಭಟ್,

ಮಂಗಳೂರು.

1955.

ಒಂದಾಣೆ




ಮಾಲೆ

# ಒಂದಾಣೆ ಮಾಲೆಯಲ್ಲಿ ಈ ವರೆಗೆ ಪ್ರಕಟವಾದ ಪುಸ್ತಕಗಳು

೧. *ಕೆಪ್ಪಟರಾಯ (ವಿನೋದ ಕಥೆ)
೨. *ನಾರೀಶ್ವರರು (ಏಕಾಂಕ ಪ್ರಹಸನ)
೩. *ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು.
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ)
೫. *ಅದ್ಭುತತ್ಯಾಗ ಮತ್ತು ಇತರ ಕಥೆಗಳು
೬. ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ)
೭. *'ಬೀಡಿ ಸೇದಬೇಡಿ' ಮತ್ತು 'ಅಮಗು' (ವಿನೋದ ಕಥೆಗಳು)
೮. *ಇಂಗ್ಲಿಷ್-ಕನ್ನಡ ಅರ್ಥಕೋಶ
೯. *ಲಂಚಕ್ಕೆ ಸಂಚಕಾರ
೧೦. *ಟಿಶ್ಯೂ ಔಷಧಿಗಳ ಕೈಪಿಡಿ.
೧೧. ಶ್ರೀಕ್ಷೇತ್ರ ಧರ್ಮಸ್ಥಳ (ತೃ. ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು
೧೪. ವೆಂಕಟನ ಸಂಕಟ (ಏಕಾಂಕ ಪ್ರಹಸನ)
೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ)
೧೬. ವೇಣೂರಿನ ಗತವೈಭವ.
೧೭. ಒಗಟುಗಳು [ದ್ವಿತೀಯ ಮುದ್ರಣ]
೧೮. ಜಗಳಗಂಟ ಮತ್ತು ಇತರ ಕಥೆಗಳು
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಹಪ್ಪ
೨೧. *ಭಾರತದ ಮಹಾನಗರಗಳು (ಭಾಗ ೧)
೨೨. ತಿರುಕ್ಕುರಲ್
೨೩. ಸೂರ್ಯನ ಸಂಸಾರ ಮತ್ತು ಇತರ ಕಥೆಗಳು.
೨೪. *ಭಾರತದ ಮಹಾನಗರಗಳು (ಭಾಗ ೨)
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳು.
೨೬. *ಮಾರಾವತಾರ (ಏಕಪಾತ್ರ ಯಕ್ಷಗಾನ ಪ್ರಬಂಧ)
೨೭. ಹಾಸವಿಲಾಸ (ನಗೆಹನಿಗಳು)
೨೮. ಸತ್ಯವಂತ ಬಾಬಿ (ಏಕಾಂಕ ಪ್ರಹಸನ)
೨೯. ಜಾಣ್ಮೆಯ ಒಗಟುಗಳು
೩೦. ಜಾತಕ ಕಥೆಗಳು
೩೧. ಕಾರ್ಕಳದ ಚರಿತ್ರೆ
೩೨. ಮರ್ಜಿ (ಏಕಾಂಕ ಪ್ರಹಸನ)
೩೩. ದರ್ಶನದ ಕಥೆಗಳು
೩೪. ಅಳುವಿನ ಹೊಳೆ ಮತ್ತು ಕೇಶವಭೂಪ (ಮಕ್ಕಳ ಕಥೆಗಳು)
೩೫. ಶರಾಬಿನ ಸಿಪಾಯಿಗಳು
೩೬. ಉಪದೇಶ ಶತಕ
೩೭. ನಿಮಗೆ ಗೊತ್ತಿದೆಯೇ?
೩೮. ಚತುರ ಚಮತ್ಕಾರ
೩೯. ಸತೀ ಸಾವಿತ್ರಿ
೪೦. ಆಭರಣಗಳ ಪೆಟ್ಟಿಗೆ, ಮತ್ತು ಇತರ [ಕಥೆಗಳು
೪೧. ಭಾರತದ ಮಂತ್ರಿಮಂಡಲಗಳು (ದ್ವಿ. [ಮುದ್ರಣ)
೪೨. ಕಾಲುಬಳೆಯ ಕಥೆ
೪೩. ಭಾರತದ ನಾಲ್ಕು ಕಲಶಗಳು
೪೪. ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು
೪೫. ಸುಭಾಷಿತ
೪೬. ೧೮೫೭ರ "ಸಿಪಾಯಿ ದಂಗೆ" ಅಥವಾ ಬ್ರಿಟಿಷರಿಗೆದುರಾಗಿ ಭಾರತೀಯರ ಸ್ವಾತಂತ್ರ್ಯಸಮರ
೪೭. ಅಕಾಂಡ ತಾಂಡವ (ರೇಡಿಯೋ ನಾಟಕ)
೪೮. ಸಾಹಸದ ಕಥೆಗಳು
೪೯. ಸಂಜ್ಞಾ ಜ್ಞಾನ ಕೋಶ
೫೦. ಪಂಡಿತನ ಪಿಟೀಲು
೫೧. ಭೋಗಯಾತ್ರೆ
೫೨. ಸಂಗ್ರಾಮಸಿಂಹ
೫೩. ಧರ್ಮಶಿಕ್ಷಾ
೫೪. ಮಹಾತ್ಮ
೫೫. ಮೀರಾಬಾಯಿ (ಏಕಾಂಕ ನಾಟಕ)
೫೬. ವೀರರಮಣಿ ಕರ್ಮದೇವಿ
೫೭. ಅರಳಿದ ನಗು
೫೮. ಸಚಿತ್ರ ಜಪಾನ್
೫೯. ಚುಟ್ಟಿ ಬಿಟ್ಟಿ ಧಿಟ್ಟಿ (ಏಕಾಂಕ ಪ್ರಹಸನ)

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಈ ವರೆಗೆ ಐವತ್ತೊಂಬತ್ತು ಪುಸ್ತಕಗಳಲ್ಲಿ, ಐವತ್ತೊಂಬತ್ತು ಅಣೆಗಳಿಗೆ, 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, 1292 ಪುಟಗಳನ್ನು ಕೊಟ್ಟಿರುತ್ತದೆ.

# ಒಟ್ಟೆ ಬಿಟ್ಟೆ ಧಿಟ್ಟೆ

---

## (ಏಕಾಂಕ ಪ್ರಹಸನ)

### ಪಾತ್ರಗಳು:

ಆನಂದ: ತರುಣ ಚಿತ್ರಗಾರ.
ಶಾಂತೆ: ಆನಂದನ ಪ್ರಣಯಿನಿ.
ದಾಮು: ಶಾಂತೆಯ ಹಿರೇ ಅಣ್ಣ.
ಸೋಧು: ಶಾಂತೆಯ ಕಿರೇ ಅಣ್ಣ.
ಭಾಗಮ್ಮ: ಶಾಂತೆಯ ತಾಯಿ.
ಬಾಳು: ಆನಂದನ ಆಳು.
ಬೀಡಿ ಭಕ್ತ: ದಾರಿಹೋಕ.

### ದೃಶ್ಯ ೧: ಆನಂದನ ಕಲಾಗಾರ

ಆನಂದ [ಶತಪಥ ಅಲೆಯುತ್ತ ಸ್ವಗತ]: ಅಬ್ಬ! ಏನಾಗಿದೆ, ಈ ಹುಡುಗಿಗೆ? ಇದೀಗ ಸಾವಿರದೊಂದನೆಯ ಸಲ ಅವಳನ್ನು ಮದುವೆಗೆ ಒಪ್ಪಿಸಲು ಪ್ರಯತ್ನಿಸಿದೆನು; ಶಾಂತೆ ಸಾವಿರದ ಒಂದನೆಯ ಸಲವೂ ನನ್ನನ್ನು ನಿರಾಕರಿಸಿದಳು! ನಾನೇನೂ ಸಾಮಾನ್ಯ ಮನುಷ್ಯನಲ್ಲ—ಕೀರ್ತಿಬಾಲೆಯಿಂದ ಇದೀಗಲೇ ಎತ್ತಿ ಹಿಡಿಯಲ್ಪಟ್ಟ ತರುಣ ಚಿತ್ರಗಾರ! ಶಾಂತೆಯ ತಂದೆಯ ಮನೆ ನನ್ನ ಕಲಾಗಾರಕ್ಕೆ ಬಹು ಸಮೀಪವೆಂದೇ ನನಗೆ ಸ್ವಲ್ಪ ವಿರಾಮ ದೊರೆಯುತ್ತಲೇ ಅವರ ಮನೆಗೆ ತಟ್ಟನೆ ನೆಗೆದು ಶಾಂತೆಯನ್ನು ಮದುವೆಗೆ ಒಪ್ಪಿಸಲು ಪ್ರಯತ್ನಿಸುವುದೇ ನನ್ನ ನಿತ್ಯದ ದಿನಚರಿ; ನನ್ನನ್ನು ನಿರ್ದಾಕ್ಷಿಣ್ಯವಾಗಿ ನಿರಾಕರಿಸುವುದೇ ಅವಳ ದಿನದಿನದ ರೂಢಿ! ಹೀಗಾಯಿತಲ್ಲ. [ಸಿಳ್ಳು ಹಾಕುತ್ತಾ ಯೋಚನಾಪರನಾಗಿ ಅತ್ತಿತ್ತ ಸುಳಿದಾಡುವನು; ಕಡೆಗೆ ಮೇಜಿನ ಮೇಲಿನ ಪೆಟ್ಟಿಗೆಯಿಂದ ಒಂದು ಚುಟ್ಟವನ್ನು ತೆಗೆದು ಬಾಯಿಗಿಟ್ಟುಕೊಂಡು ಹೊತ್ತಿಸಿ, ಕುರ್ಚಿಯಲ್ಲಿ ಕುಳಿತು, ಕಾಲುಗಳನ್ನು ಮೇಜಿನ ಮೇಲೆ ಚಾಚಿ, ಹೊಗೆಬಿಡುತ್ತಿರುವನು.] ನನ್ನನ್ನು ಅವಳ ಮನೆಯವರು ಅವಳ ವರನಾಗಿ ಆರಿಸಿರುವರಾದರೂ, ಇಷ್ಟೊಂದು ಉದ್ಧಟತನದಿಂದ ಪ್ರತಿಸಲವೂ ನಿರಾಕರಿಸುತ್ತಿರುವಳಲ್ಲ! ನನ್ನಲ್ಲಿ ಅವಳಿಗೆ ತಾತ್ಸಾರ ಉಂಟುಮಾಡುವಂತಹ ಯಾವ ಕುಂದು ಇರುವುದೋ, ಆಶ್ಚರ್ಯ! ಶಾಂತೆಯ ಉಪೇಕ್ಷೆಯ ಕಾರಣವು ನನ್ನ

ಉತ್ಪತ್ತಿಯಾಗಿರಲಿಕ್ಕಿಲ್ಲ,—ಅದು ತೃಪ್ತಿಕರವಾಗಿಯೇ ಇದೆ; ನನ್ನ ಗತಜೀವನವೂ ಆಗಿರಲಿಕ್ಕಿಲ್ಲ—ಅದು ನಿಷ್ಕಲಂಕವಾಗಿಯೇ ಇದೆ; ನನ್ನ ರೂಪವಂತೂ ಆಗಿರಲಿಕ್ಕೇ ಇಲ್ಲ,—ಅದು, ಸುಂದರರಾವಣನಂತೆ, ಮನೋಮೋಹಕವಾಗಿಯೇ ಇದೆ. ಅದೂ ಅಲ್ಲದೆ, ಅವಳ ಅಣ್ಣಂದಿರಾದ ನರಮೃಗವರ್ಗದ ಆ ದಾಮು, ಈ ಮಾಧು-ಇವರ ಸಂಗಡ ಬೆಳೆದಿರುವ ಶಾಂತೆ ಗಂಡಸರ ರೂಪಲಾವಣ್ಯದ ವಿಷಯ ದಲ್ಲಿ ಅಭಿಪ್ರಾಯ ಕೊಡಲು ಎಷ್ಟರ ಮಟ್ಟಿಗೆ ಶಕ್ತಳಾದಾಳು? ಆ ನರಪೇತಲ ದಾಮು ಇಂದ್ರಜಾಲದಿಂದ ಪ್ರಾಣ ಪಡೆದಿರುವ ಬೆರ್ಚಪ್ಪನೇ ಸೈ! ಅವನಿಗೆ ವಾರ ಪತ್ರಿಕೆಗಳಿಗೆ ಕಲಾವಿಮರ್ಶೆಗಳನ್ನು ಬರೆಯುತ್ತಿರುವ ಉದ್ಯೋಗವೊಂದು ಬೇರೆ! ಈ ಧಾಂಡಿಗ ಮಾಧು, ಅಂಗಾಂಗದಿಂದ ಬೊಜ್ಜು ಹೊರಹೊಮ್ಮುತ್ತಿರುವ ಪೆಡಂ ಭೂತನೇ ಸೈ! ಅವನಿಗೂ ತೀರ ಚಿಕ್ಕಂದಿನಿಂದಲೇ, ಸ್ನೇಹಿತರಿಂದ ಸಣ್ಣ ಸಾಲ ಗಳನ್ನು ಎತ್ತಿ ಹಾಕುವ ಕಸಬೊಂದು ಬೇರೆ! [ಸ್ವಲ್ಪ ಸಮಯ ಯೋಚಿಸುತ್ತ ಕಳೆದು] ಇರಲಿ, ಶಾಂತೆಯ ಉಪೇಕ್ಷೆಯ ಕಾರಣವು ಯಾವುದೆಂದು ಇವರಿಬ್ಬ ರಲ್ಲಿ ಯಾವನಿಗಾದರೂ ತಿಳಿದಿರಬಹುದೇ? ಇದನ್ನು ಪರೀಕ್ಷಿಸಿ ನೋಡು ವುದೇ ಉತ್ತಮ. ಮೊದಲು ದಾಮೂ ಬಳಿಗೆ ಹೋಗೋಣ. [ನಿಷ್ಕ್ರಮಣ.

## ದೃಶ್ಯ ೨: ಬೀದಿ.

[ಆನಂದ ಮತ್ತು ದಾಮು ಎದುರುಬದುರಾಗಿ ಪ್ರವೇಶಿಸುವರು]

ಆನಂದ: ಸರಿಯಾಯಿತು! ಯಾರೋ ಒಬ್ಬನಿಗೆ, ಕಾಶಿಗೆಂದು ಹೋಗು ವಾಗ ಭಾಗೀರಥಿಯೇ ಎದುರಿಗೆ ಬಂದಿದ್ದಳಂತೆ!—ಹಾಗಾಯಿತು ನನಗೆ, ಈ ಭಾಗೀರಥೀಪುತ್ರನ ದರ್ಶನ!

ದಾಮು: ಹೌದೇ? ಯಾಕೆ, ಏನಾಯಿತು?

ಆನಂದ: ದಾಮೂ, ನನಗೆ ನಿನ್ನೊಂದಿಗೆ ಸ್ವಲ್ಪ ರಹಸ್ಯವಾಗಿ ಮಾತಾಡಲಿದೆ.

ದಾಮು: ಸಾಗಲಿ, ನಿನ್ನ ಗೂಢ ಸಮಾಲೋಚನೆ ಇಲ್ಲಿ ಯಾರೂ ಕೇಳುವವ ರಿಲ್ಲವಷ್ಟೆ!

ಆನಂದ [ಬಹಳ ನಯವಾದ ಸ್ವರದಲ್ಲಿ]: ದಾಮೂ, ನಾನು ಶಾಂತೆಯನ್ನು ಪ್ರೇಮಿಸುತ್ತಿರುವೆ; ಬಲ್ಲೆಯಷ್ಟೆ?

ದಾಮು: ಅದು ನಿಮ್ಮನಿಮ್ಮೊಳಗಿನ ಪ್ರಸಂಗವಾಯಿತು. ಅದರಲ್ಲಿ ನನ್ನ ಪ್ರವೇಶವೇಕಯ್ಯ?

ಆನಂದ; ಅಲ್ಲ, ನಾನು ಅವಳನ್ನು ಮದುವೆಯಾಗಲಿಚ್ಛಿಸುತ್ತೇನೆ.

ದಾಮು: ಹಾಗಾದರೆ ಮದುವೆಯಾಗು! ಯಾಕಾಗದು?

ಆನಂದ: ಆದರೆ, ದಾಮೂ, ಅವಳು ಒಪ್ಪಬೇಕಲ್ಲ?

ದಾಮು: ಅವಳು ಒಪ್ಪೆನೆಂದಳೇ?

ಆನಂದ: ಹೌದು, ಮಹಾರಾಯ! ಸಾವಿರದ ಒಂದನೆಯ ಸಲವೂ ಒಪ್ಪೆನೆಂದಳು!

ದಾಮು [ಎಡ ಗಲ್ಲ ಮೀಸೆಯನ್ನು ಪಾಲೀಸುಮಾಡುತ್ತ]: ಒಬ್ಬನ ಅನುಭವವೇನೆಂದರೆ, ಒಬ್ಬಾರೆ ಹುಡುಗಿಗೆ ಒಬ್ಬನನ್ನು ಮದುವೆಯಾಗಲು ಮನಸ್ಸಿಲ್ಲ, ಅಲ್ಲವೇ?

ಆನಂದ: ಹೌದು, ಒಬ್ಬನ ಕ್ರೂರ ಅನುಭವವಾಗಿರುವುದು!

ದಾಮು: ಒಬ್ಬನು ತನ್ನ ಪ್ರಯತ್ನಗಳಲ್ಲಿ ಯಶಸ್ವಿಯಾಗುವುದಿಲ್ಲವೇಕೆಂದು ಒಬ್ಬನಿಗೆ ಆಶ್ಚರ್ಯವಾಗುವುದು, ಅಲ್ಲವೇ?

ಆನಂದ: ಹೌದು, ಒಬ್ಬನಿಗೆ ಮಹದಾಶ್ಚರ್ಯ!

ದಾಮು: ಒಬ್ಬನು ಇದರ ಕಾರಣವೇನೆಂದು ಕೇಳುವನು, ಅಲ್ಲವೇ?

ಆನಂದ: ಹೌದು, ಒಬ್ಬನು ತಿರುಗಿತಿರುಗಿ ಕೇಳುತ್ತಿದ್ದಾನೆ.

ದಾಮು: ಹಾಗಾದರೆ, ಕೇಳು. ನೀನು ಶಾಂತೆಗೆ ಮಾಧೂನನ್ನು ನೆನಪಿಗೆ ತರುವಿಯಂತೆ, ಅದಕ್ಕಾಗಿಯೇ ಅವಳು ನಿನ್ನನ್ನು ಉಪೇಕ್ಷಿಸುವಳಯ್ಯ!

ಆನಂದ [ಹೌಹಾರಿ, ಬಿದ್ದೆದ್ದು]: ಮಾಧೂನನ್ನು ನೆನಪಿಗೆ ತರುತ್ತೇನೆ!!!?

ದಾಮು: ಹೌದು, ಅವಳು ಹಾಗೇ ಹೇಳುವಳು.

ಆನಂದ: ಆದರೆ, ನಾನು ಅವನಂತೆ ಇಲ್ಲವೇ ಇಲ್ಲವಲ್ಲ! ಮಾಧೂವಿನಂತೆ ತೋರುವುದು ಮಾನವಸಾಧ್ಯವೇ ಅಲ್ಲ!

ದಾಮು: ಆದರೆ, ಒಬ್ಬನು ತಾನು ಕೇಳಿರುವುದನ್ನೇ ಹೇಳುವನು.

[ಆನಂದನು ಮಂಕು ಬಡಿದು, ತಬ್ಬಿಬ್ಬಾಗಿ, ತಪ್ಪುಹೆಜ್ಜೆ ಹಾಕುತ್ತ ನಿಷ್ಕ್ರಮಿಸುವನು ]

## ದೃಶ್ಯ ೩: ಮೋಹನ ವಿಲಾಸ

[ಮಾಧು ಒಬ್ಬನೇ ಒಂದು ಮೇಜಿನ ಬಳಿ ಕುರ್ಚಿಯಲ್ಲಿ ಕುಳಿತು ಕಪ್ಪಿನಿಂದ ಕಾಫಿ ಹೀರುತ್ತಲಿರುವನು.]

ಆನಂದ [ಮಾಧೂವಿನ ಬಳಿಗೆ ಸಾರುತ್ತ]: ಎಲ! ಮಾಧು!

ಮಾಧು: ಏನ್ಸೈ! ಏನ್ಸೈ!

ಆನಂದ: ಸ್ವಲ್ಪ ಗಂಟಲು ಪಸೆಮಾಡೋಣ ಎಂದು ಬಂದೆ. ಆದರೆ, ಇದೆಂತಹ ಅದ್ಭುತ!

ಮಾಧು: ಯಾವುದು ಅದ್ಭುತ? ಏನ್ಸೈ! ಏನ್ಸೈ!

ಆನಂದ: ಅಲ್ಲ, ನಿನ್ನನ್ನೂ ಒಮ್ಮೆ ನೋಡಬೇಕೆಂದಿದ್ದೆ!

ಮಾಧು: ನೋಡಿದೆಯಲ್ಲ!

ಆನಂದ: ಅದೇ ಅದ್ಭುತವೆಂದೆ!

ಮಾಧು: ನನ್ನನ್ನು ಯಾಕೆ ನೋಡುವುದು? ಏನಾಯಿತು?

ಆನಂದ: ಅಲ್ಲ, ನಿನ್ನೊಡನೆ ಒಂದು ವಿಷಯ ಮಾತಾಡುವುದಿತ್ತು.

ಮಾಧು: ಮಾತಾಡು, ಯಾರು ಬೇಡವೆಂಬರು!

ಆನಂದ [ಬಹಳ ಮೃದು ಸ್ವರದಿಂದ]: ಮಾಧೂ, ನಿನ್ನ ತಂಗಿ ನನ್ನಲ್ಲಿ ಅದೇಕೆ ಅಷ್ಟು ಉದಾಸೀನ ಮಾಡುವಳೆಂದು ಬಲ್ಲೆಯಾ?

ಮಾಧು: ಖಂಡಿತವಾಗಿ.

ಆನಂದ: ಹಾಗಾದರೆ, ಏಕೆಂದು ಹೇಳಲಾರಿಯಾ?

ಮಾಧು: ಏಕೆಂದು ಕೇಳುವಿಯಾ?

ಆನಂದ: ಹೌದು, ಕೇಳುವೆನು.

ಮಾಧು: ನಿನಗೆ ಕಾರಣ ತಿಳಿಯಬೇಕೇ?

ಆನಂದ: ಹೌದು, ತಿಳಿಯಬೇಕು.

ಮಾಧು: ಒಳ್ಳೆಯದು. ಹಾಗಾದರೆ, ಮೊತ್ತಮೊದಲಾಗಿ,—ನಿನಗೆ ಖಂಡಿತ ಮೇಲಿನ ಬುಧವಾರವೇ ಹಿಂದೆ ಕೊಡುತ್ತೇನೆ—ಒಂದು ಹತ್ತು ರೂಪಾಯಿ ಕಡ ಕೊಡುವಿಯಾ?

ಆನಂದ: ಇಲ್ಲ, ನನ್ನಿಂದಾಗದು.

ಮಾಧು: ಇಲ್ಲವೇ ಐದು ರೂಪಾಯಾದರೂ?

ಆನಂದ: ಐದು ರೂಪಾಯಿಯಾದರೂ ಇಲ್ಲ, ಐದು ಕಾಸಾದರೂ ಇಲ್ಲ. ದಯಮಾಡಿ ವಿಷಯಬಿಟ್ಟು ಅಲೆಯಬೇಡ. ಶಾಂತೆ ನನ್ನ ಕಡೆಗೆ ಯಾಕೆ ಕೃಪೆ ಯಿಂದ ನೋಡಲೊಲ್ಲಳು? ಹೇಳಲಾರಿಯಾ?

ಮಾಧು: ಇರಲಿ, ಹೇಳುವೆನು. ನೀನು ತುಚ್ಛನೂ ಲೋಭಿಯೂ ಆಗಿ ರುವಿ, ಅಲ್ಲದೆ, ಶಾಂತೆಗೆ ದಾಮೂನನ್ನು ನೆನಪಿಗೆ ತರುವಿಯಂತೆ!

ಆನಂದ [ಹಂಗುಬಡಿದು, ತಲೆತಿರುಗಿ, ಕಣ್ಣುಕತ್ತಲೆ ಬಂದು, ಮೂಲಿ ಬೀಳು ವಂತಾಗಿ ಹತ್ತಿರದ ಮೇಜನ್ನು ಆಧರಿಸಿ ನಿಂತು]: ದಾಮೂನನ್ನು ನೆನಪಿಗೆ ತರು ವೆನೇ?

ಮಾಧು: ಹೌದು, ಅವಳು ಹಾಗೇ ಎನ್ನುವಳು.

[ಆನಂದನು ತಲೆ ಬಗ್ಗಿಸಿ, ಯೋಚನಾಪರವಶನಾಗಿ, ಎಡವುತ್ತ ತಡವುತ್ತ, ಮೆಲ್ಲ ಮೆಲ್ಲನೆ ನಿಷ್ಕ್ರಮಿಸುವನು.]

## ದೃಶ್ಯ ೪: ಬೀದಿ

ಆನಂದ [ಸ್ವಗತ]: ಒಂದು ವೇಳೆ, ಪ್ರಕೃತಿಯ ವಿಚಾರ್ಯದಿಂದ, ಒಬ್ಬನು ಮಾಧೂನಂತಾಗುವುದು ಸಾಧ್ಯವೆಂದರೆ ನಂಬಬಹುದು; ಇಲ್ಲವೇ, ಕಾಲದ ದಾಳಿ ಯಿಂದ, ಅವನು ದಾಮೂನಂತಾದರೂ ಆಗುವುದು ಶಕ್ಯವೆಂಬರೂ ಹಿಡಿದೀತು.

ಆದರೆ ಒಂದೇ ಕಾಲದಲ್ಲಿ ನಾನು ಇವರಿಬ್ಬರನ್ನೂ ಹೋಲುವುದೂ, ಅಂತೂ ಬಿಡುತಿರುವುದೂ, ಹೇಗೆ ಸಂಭವನೀಯವಪ್ಪ? ಇರಲಿ, ಈ ಇಬ್ಬರೂ ಅಣ್ಣತಮ್ಮಂದಿರ ಗುಣವಿಶೇಷಣಗಳನ್ನು ಸಮಾಲೋಚಿಸೋಣ. [ಎಡಗೈ ಬೆರಳುಗಳನ್ನು ಬಲಗೈ ಬೆರಳಿಂದ ಒಂದೊಂದಾಗಿ ಮಡಚುತ್ತ] (೧) ದಾಮು—ಮುಖ ಒಂಟೆಯಂತೆ; ಮಾಧು—ಮುಖ ಹಂದಿಯಂತೆ. (೨) ದಾಮು—ಮುಖದಲ್ಲಿ ಗಲ್ಲಮೀಸೆಗಳು; ಮಾಧು—ಮುಖ ತುಂಬ ಮುದ್ದಣಗಳು. (೩) ದಾಮು—ಕಲಾವಿಮರ್ಶಕ; ಮಾಧು—ಅಚ್ಚ ಸುಲಿಗೆಗಾರ. (೪) ದಾಮು—'ಒಬ್ಬನ ಅನುಭವವೇನೆಂದರೆ,' ಎನ್ನುತ್ತಾನೆ; ಮಾಧು—''ಏನ್ನೈ! ಏನ್ನೈ!!' ಎನ್ನುತ್ತಾನೆ. (೫) ದಾಮು—ಮಿತಾಹಾರಿ; ಮಾಧು—ಶುದ್ಧ ತಿಂಡಿಪೋತ. (೬) ದಾಮು—ಹಾಡುತ್ತಾನೆ; ಮಾಧು—ವಿನೋದ ಕಥೆ ಹೇಳುತ್ತಾನೆ. (೭) ದಾಮು—ಕಡ್ಡಿಯಂತಹ ಕೈಗಳು; ಮಾಧು—ಆನೆಕಾಲಿನಂತಹ ಕೈಗಳು. ಇಬ್ಬರೊಳಗೆ ಹೋಲಿಕೆಯಿರುವ ಒಂದೇ ಒಂದಾದರೂ ಅಂಶ ಸೂಚಿಸದಲ್ಲ! [ತಲೆ ಕೆರೆದುಕೊಳ್ಳುತ್ತ ಥಕ್ಕನೆ] ಕಲಾಗಾರಕ್ಕೆ ಹೋಗಿ ಇವೆಲ್ಲದರ ಒಂದು ಪಟ್ಟಿ ತಯಾರಿಸಿ ಮತ್ತೆ ಯೋಚಿಸೋಣ! [ನಿಷ್ಕ್ರಮಣ

## ದೃಶ್ಯ ೫: ಆನಂದನ ಕಲಾಗಾರ

ಆನಂದ [ಕೈಯಲ್ಲಿರುವ ಪಟ್ಟಿಯಿಂದ ದಾಮೂ ಮಾಧೂರವರ ಗುಣವಿಶೇಷಣಗಳನ್ನು ಉಚ್ಚರಿಸುತ್ತ ಓದಿ ಪಠಿಸುವನು, ಮತ್ತೆ ತಲೆಯನ್ನು ಕೈಯಲ್ಲಿರುವ ಲೇಖನಿಯಿಂದ ಕೆರೆಯುತ್ತ ಸ್ವಗತ]: ಇವರಿಬ್ಬರೊಳಗೆ ಹೋಲಿಕೆಯಿರುವ ಯಾವುದಾದರೂ ಅಂಶ ಇರುವುದೇ? ಹಾಂ! ಹೂಂ! ಓಃ! ತಿಳಿಯಿತು! [ಪಟ್ಟಿಯಲ್ಲಿ ಬರೆಯುತ್ತ] ದಾಮು—ಮಿತಿಮೀರಿ ಚುಟ್ಟ ಸೇದುತ್ತಾನೆ! ಮಾಧು—ಮಿತಿಮೀರಿ ಚುಟ್ಟ ಸೇದುತ್ತಾನೆ! ಕಡೆಗೂ ಇಬ್ಬರಲ್ಲಿಯೂ ಸಮಾನವಾಗಿರುವ ಒಂದು ಗುಣ ದೊರೆಯಿತಲ್ಲ! ............ ಸಾಧ್ಯವೇ? ......... ... ಆಗಿದ್ದಿರಬಹುದೇ? .......... ಇನ್ನು ಸಂಶಯವೇ ಬೇಡ, ಆದರೆ ನನಗೆ ಚುಟ್ಟದ ಮೇಲಿನ ಪ್ರೀತಿ ಶಾಂತೆಯ ಮೇಲಿನ ಪ್ರೀತಿಗೆ ಸಮತೂಕವೇ ಎಂಬಂತಿರುವುದಲ್ಲ! ಇದೇನು, ನಿಜವಾಗಿಯೂ ನಾನು ಇವೆರಡರಲ್ಲಿ ಒಂದನ್ನು ಮಾತ್ರವೇ ಆರಿಸಬೇಕೆ?......... ........ಇಷ್ಟೊಂದು ದೊಡ್ಡ ಆತ್ಮಯಜ್ಞ ಮಾಡಬೇಕಾಗಿ ಬಂತೇ? [ಗೋಡೆಯ ಮೇಲಿಂದ ತನ್ನನ್ನೇ ದಿಟ್ಟಿಸುತ್ತಿದ್ದ ಶಾಂತೆಯ ಹಲವು ಹನ್ನೊಂದು ನಕ್ಷೆಗಳ ಕಡೆಗೆ ಸಿಳ್ಳುಹಾಕುತ್ತಾ ದೃಷ್ಟಿಹಾಯಿಸುತ್ತ] ಸರಿ, ಶಾಂತೆಯ ಮೋಹಕವಾದ ಮುಗುಳ್ನಗು ನನ್ನ ಸಂದೇಹವನ್ನೇ ನಿವಾರಿಸಿಬಿಡುತ್ತಿದೆ. ಇನ್ನು ಮನಸ್ಸನ್ನು ಗಟ್ಟಿಮಾಡೋಣ. [ಸ್ವರವೆತ್ತಿ ಕರೆಯುವನು] ಬಾಳೂ, ಓ ಬಾಳೂ!

ಬಾಳು [ಎಡದಲ್ಲಿರುವ ಒಳಬಾಗಿಲಿನಿಂದ ಓಡಿಬರುತ್ತ]: ಬಂದೆ ರಾಯರೇ! ಏನಪ್ಪಣೆ?

ಆನಂದ [ಮೇಜಿನ ಮೇಲಿದ್ದ ಚುಟ್ಟದ ಪೆಟ್ಟಿಗೆಯನ್ನು ತೆಗೆದುಕೊಡುತ್ತ]: ಇಗೋ, ನಿನಗೆ ಒಂದು ತಾಜಾ ಇನಾಮು!

ಬಾಳು [ಪೆಟ್ಟಿಗೆ ತೆಗೆದುಕೊಳ್ಳುತ್ತ]: ನಮಸ್ಕಾರ, ಬಹಳ ಉಪಕಾರವಾಯಿತು, ರಾಯರೇ! [ನಿಷ್ಕ್ರಮಿಸುತ್ತ, ಸಭೆಯನ್ನು ಉದ್ದೇಶಿಸಿ] ಯಾವನೋ ಒಬ್ಬನು ಅತ್ತೆಯನ್ನು ಮಾವನಿಗೆ ದಾನಮಾಡಿದ್ದನಂತೆ! ನನಗೂ ಈ ರಾಯರ ಈ ಇನಾಮು ಅಷ್ಟೇ ತಾಜಾ! ಹ ಹ್ಹ ಹ್ಹ!

[ಎಡಬಾಗಿಲಿನ ಮೂಲಕ ನಿಷ್ಕ್ರಮಣ.

## ದೃಶ್ಯ ೬: ಬೀದಿ

(ಕೆಲವರು ಬೀಡಿ, ಸಿಗರೇಟ್, ಚುಟ್ಟ ಇತ್ಯಾದಿಗಳನ್ನು ಸೇದುತ್ತ ಸಂಚರಿಸುತ್ತಿರುವರು.)

ಆನಂದ (ಸಿಳ್ಳು ಹಾಕುತ್ತ, ಬೀದಿಹೋಕರ ಕಡೆಗೆ ಜುಗುಪ್ಸೆಯಿಂದ ನೋಡುತ್ತ, ಸ್ವಗತ): ಆಃ! ಮೂಢರು! ಶುದ್ಧ ಪುಟ್ಟಾಳರು! (ಬೀಡಿ ಸೇದುತ್ತ ಬರುವ ಒಬ್ಬ ದಾರಿಗನನ್ನು ಕುರಿತು) ಒಹೊಯ್, ಹೌದಯ್ಯ! ನಿನಗೆ ಧೂಮಪಾನದಿಂದಾಗುವ ಹಾನಿದೋಷಗಳ ವಿಷಯವಾಗಿ ಒಂದಿಷ್ಟೂ ತಿಳಿಯದೇ?

ಬೀಡಿ ಭಕ್ತ: ಯಾರಯ್ಯ ನೀನು? ಒಬ್ಬ ದೊಡ್ಡ ಮಹಾತ್ಮನಂತೆ ನನಗೆ ಬೋಧಿಸುವವನು?

ಆನಂದ: ನಿಜವಾಗಿಯೂ ಒಬ್ಬ ದೊಡ್ಡ ಮಹಾತ್ಮನೇ ಎನ್ನು!

ಬೀಡಿಭಕ್ತ: ಹೌದೇ? ಸ್ವರ್ಗಲೋಕದಿಂದಲೇ ನೆಟ್ಟಗೆ ಇಳಿದು ಬಂದವನೇ?

ಆನಂದ: ಧೂಮಪಾನದಂತಹ ದುರಭ್ಯಾಸಗಳಲ್ಲಿ ಹೊರಳುವವರ ನರಕದಿಂದ ಮುಕ್ತನಾಗಿ ಅವುಗಳನ್ನು ಜಯಿಸಿದ ಪರಾಕ್ರಮಿಗಳು ಮೆರೆಯುವ ಸ್ವರ್ಗಲೋಕವನ್ನು ಹೊಂದಿದವನಾದುದರಿಂದ ಹಾಗೂ ಎನ್ನಲು ಅಡ್ಡಿಯೇನು?

ಬೀಡಿಭಕ್ತ: ಹಾಗಾದರೆ ಮತ್ತೇಕೆ ಪುನಃ ಈ ನರಕಕ್ಕೆ ಬಂದಿರುವಿ?

ಆನಂದ: ನಿನ್ನಂತಹ ಪಾಪಿಗಳನ್ನು ನೋಡುವಾಗ ತಾತ್ಸಾರ ಹುಟ್ಟುತ್ತಿದೆ; ಆದರೂ ನೀವು ಅರಿಯದೆ ಈ ನರಕದಲ್ಲಿ ನರಳುತ್ತಿರುವಿರಿ! ಆದುದರಿಂದ ನಿಮಗಾಗಿ ನನ್ನಲ್ಲಿ ಸಹಾನುಭೂತಿ ಉಂಟಾಗುತ್ತಿದೆ. ನಿಮ್ಮಲ್ಲಿ ಬೋಧನೆಯಿಂದ ಸರಿಯಾದ ಅರಿವು ಹುಟ್ಟಿಸಿ, ನಿಮ್ಮನ್ನು ಉದ್ಧರಿಸಬೇಕೆಂಬುದೇ ನನ್ನ ಈಗಿನ ಉದ್ದೇಶ! ಈ ದುಶ್ಚಟವನ್ನು ಈಗಲೇ ಬಿಟ್ಟುಬಿಡಯ್ಯ! ಅದರಿಂದ ನಿನಗೆ ಎಂತಹ ಅಸೌಖ್ಯದ ಅನುಭವವೂ ಆಗಲಾರದು; ಅಲ್ಲದೆ, ಒಂದು ತರದ ಪಾರಮಾರ್ಥಿಕ ಗರ್ವದಿಂದ ಉತ್ತೇಜನ ಹೊಂದುವಿ, ನೋಡು!

ಬೀಡಿಭಕ್ತ: ಒಹೊ? ಯಾರಿಗೆ ಬೇಕಯ್ಯ, ನಿನ್ನ ಪಾರಮಾರ್ಥಿಕ ಗರ್ವ?

ಆನಂದ: ಅಷ್ಟೇ ಅಲ್ಲ; ಹೊಗೆಸೊಪ್ಪಿನ ಹೊಗೆಯಲ್ಲಿ ಸೇಕಡಾ ಎಂಟಂಶ 'ಕಾರ್ಬನ್ ಮೊನೊಕ್ಸಾಯ್ಡ್' ಎಂಬ ಅನಿಲ ಇದೆ, ಗೊತ್ತೆ?

ಬೀಡಿಭಕ್ತ: ಇದ್ದರೇನು? (ಹೊಗೆಯ ದಮ್ಮು ಬಿಡುತ್ತ ಕೆಮ್ಮುವನು.)

ಆನಂದ: ಅದು ವಿಷವಯ್ಯ, ಘೋರ ವಿಷ! ಪ್ರಾಣಕ್ಕೆ ಅಪಾಯಕರ! ನೋಡು, ನಿನ್ನ ಈ ಕೆಮ್ಮು ಅದರ ಫಲವೇ ಆಗಿರುವುದು! ಅಲ್ಲದೆ, ಧೂಮಪಾನದಿಂದ ಕ್ರಮೇಣ ಅರ್ಬುದ, ಎಂದರೆ 'ಕೆನ್ಸರ್' ಎನ್ನುವರಲ್ಲ, ಆ ಮಹಾ ವ್ಯಾಧಿ ಕೂಡ ಉಂಟಾಗಬಹುದೆಂಬುದು ಇತ್ತೀಚೆಯ ತಜ್ಞರ ಅಭಿಪ್ರಾಯ! ತಿಳಿಯಿತೇ? ಇನ್ನಾದರೂ ಈ ಖೋಡಿ ಬೀಡಿಯನ್ನು ಬಿಡಯ್ಯ!

ಬೀಡಿಭಕ್ತ: ಅದೆಲ್ಲ ಸರಿ, ಆದರೆ ನಾನು ಈ ಬೀಡಿಯನ್ನು ಬಿಡುವುದು ಒಂದೇ ಸಲ!

ಆನಂದ (ಅತಿ ವಿನಯದಿಂದ): ಹಾಗೇಕೆ ಎನ್ನುವಿ? ಮನಸ್ಸನ್ನು ಮಾತ್ರ ಗಟ್ಟಿಮಾಡು. ಅತ್ಯಲ್ಪ ಮನೋಬಲದ ಮೂಲಕ ಈ ಚಟವನ್ನು ಒಂದೇ ಒಂದು ಕ್ಷಣದಲ್ಲಿ ಬಿಟ್ಟು ಬಿಡಬಹುದು. ಧೈರ್ಯಮಾಡಿ ಈಗಲೇ ಬಿಟ್ಟುಬಿಡು ಆ ಸುಟ್ಟ ಬೀಡಿಯನ್ನು!

ಬೀಡಿಭಕ್ತ: ಇರಲಿ! ಇಗೋ ಈಗಲೇ, ಈ ಕ್ಷಣವೇ ಬಿಟ್ಟುಬಿಟ್ಟೆ. (ಸೇದಿ ಮುಗಿದ ಬೀಡಿಯ ತುಂಡನ್ನು ಬಿಸಾಡಿ ನಗುವನು)

ಆನಂದ (ಬೀಡಿ ಭಕ್ತನ ಬೆನ್ನು ತಟ್ಟುತ್ತ): ಭಲಾ! ನೀನೇ ಈಗ ಮಹಾ ತ್ಯಾಗಿ! ಮಹಾ ವಿರಾಗಿ! ನೀನಿನ್ನು ಅಗಲಾರೆ ರೋಗಿ! ಧನ್ಯ! ಧನ್ಯ! ಪವಿತ್ರ ಭಾರತಮಾತೆಯ ಸತ್ಪುತ್ರ! ಜೈ!

ಬೀಡಿಭಕ್ತ: ಇನ್ನೊಂದು ಬೀಡಿ ಹಚ್ಚುವ ವರೆಗೆ ಹಾಗೇ ಸೈ!

(ಸಿಳ್ಳುಹಾಕುತ್ತ ನಿಷ್ಕ್ರಮಣ.)

## ದೃಶ್ಯ ೭: ಆನಂದನ ಕೆಲಾಗಾರ

ಆನಂದ (ಸಿಳ್ಳುಹಾಕುತ್ತ ಶತಪಥ ಅಲೆಯುತ್ತ): ಬಾಳೂ, ನಿನ್ನ ಊಟ ನಾಯಿತೇ?

ಬಾಳು (ಆನಂದನು ಉಂಡುಬಿಟ್ಟ ಪ್ಲೇಟ್, ಕಪ್ ಮುಂತಾದುವನ್ನು ಎತ್ತುತ್ತ): ತಮ್ಮ ಊಟ ಈಗತಾನೇ ಮುಗಿಯಿತಷ್ಟೆ! ಇಷ್ಟರಲ್ಲೇ ಹೇಗೆ ನನ್ನ ಊಟವಾಗುವುದು, ರಾಯರೇ?

ಆನಂದ: ಹೌದು, ಹೌದು! ಮರೆತೆ! ನನ್ನ ಮನಸ್ಸು ಚಂಚಲವಾಗಿ ಎಲ್ಲೆಲ್ಲಿಯೊ ಅಲೆಯುತ್ತಿದೆಯಪ್ಪ!

ಬಾಳು: ಅದನ್ನು ಚಲಿಸದಂತೆ ಮಾಡಲು ಏನಾದರೂ ತರಬೇಕೇ?

ಆನಂದ: ಬೇಡ, ಬೇಡ! ಏನೂ ಬೇಡ. ಆದರೂ ಏನೋ ಒಂದು ತರದ ಮನಸ್ಸಿನ ಕ್ಷೋಭೆಯು ನನ್ನನ್ನು ಪೀಡಿಸುತ್ತಿದೆಯಲ್ಲ!

ಬಾಳು: ಹಾಗಾದರೆ, ಎಲ್ಲಿಯಾದರೂ ತಿರುಗಾಡಿಕೊಂಡು ಬರಬಾರದೇಕೆ? ಸಿನೆಮಗಿನೆಮ...?

ಆನಂದ: ಛೆ! ಬೇಡ, ಬೇಡ! ಒಂದೂ ಬೇಡ!

ಬಾಳು: ಹಾಗಾದರೆ, ಏನಾದರೂ ಕೆಲಸಗಿಲಸ...?

ಆನಂದ: ಸಾಯಲಿ! ಕೆಲಸಗಿಲಸ! ಮನಸ್ಸು ಹೀಗೆ ಅಸ್ವಸ್ಥವಾಗಿರುವಾಗ ಎಂತಹ ಕೆಲಸ ಸಾಧ್ಯವಿದೆ? ನನಗೆ ಜೀವನವೇ ನಿಸ್ಸಾರವಾಗಿ ತೋರುತ್ತಿದೆ! ಆದರೂ, ಏನೋ ಒಂದು ಕೆಲಸ ಬಾಕಿ ಉಳಿದಿದ್ದಂತೆ ಭಾಸವಾಗುತ್ತಿದೆಯಪ್ಪ!

ಬಾಳು: ಚೆನ್ನಾಗಿ ಆಲೋಚಿಸಿ ನೋಡಿ, ರಾಯರೇ. ಆಗ ಏನೆಂತ ನೆನಪಾದೀತು! [ನಿಷ್ಕ್ರಮಿಸುತ್ತ, ಸಭೆಯನ್ನು ಉದ್ದೇಶಿಸಿ] ಹೌದು, ಬಾಕಿಯಿದೆ, ಚುಟ್ಟಿ ಸೇದುವ ಕೆಲಸ! ಇವರು ನಿನ್ನೆಯಿಂದ ಪಡುತ್ತಿರುವ ಪಾಡು ನಾಯಿಗೂ ಬೇಡ. ಆದರೂ ಬಾಯಿಬಿಟ್ಟು ಹೇಳಲು ಸಂಕೋಚ! ನನಗೆ ಕೈಯೆತ್ತಿ ಕೊಟ್ಟ ಚುಟ್ಟಿದ ಪೆಟ್ಟಿಗೆಯನ್ನು ನಾನು ಹಿಂದೆ ಕೊಟ್ಟಿರಾಗಬಹುದೆಂದಿದೆಯೋ ಏನೋ! ನಾನು ಕೊಡುವ ಮಗನೇ? (ಎಡಬಾಗಿಲಿನ ಮೂಲಕ ನಿಷ್ಕ್ರಮಣ)

ಆನಂದ (ಸ್ವಲ್ಪ ಸಮಯ ಸಿಳ್ಳುಹಾಕುತ್ತ ಶತಪಥ ಅಲೆದಾಡಿ, ಬಳಿಕ): ಹಾ! ಭಯಂಕರ! ಈ ಯಾತನೆ ಏನುಮಾಡಿದರೂ ಕುಗ್ಗದಲ್ಲ, ಜಗ್ಗದಲ್ಲ! ಇದರ ಕಾರಣವೇನಿರಬಹುದು?—ಆಃ! ಸರಿ, ತಿಳಿಯಿತು! ನಾನು ಪ್ರಪಂಚದಲ್ಲಿ ಸಾಕಷ್ಟು ಒಳ್ಳೆಯದನ್ನು ಮಾಡಿಲ್ಲ! ಇದರಿಂದಲೇ ಹೀಗಾಗಿದ್ದಿರಬೇಕು. ಇದು ಖಂಡಿತ. ಹಾಗಾದರೆ ಇನ್ನಾದರೂ ನಾನೇಕೆ ಉದಾರಹೃದಯದಿಂದ ದಾನಧರ್ಮಗಳನ್ನು ಮಾಡಬಾರದು? ಸರಿ. ಏನೇನೆಲ್ಲ ಮಾಡಬರುವುದೋ, ಏನೇನೆಲ್ಲ ಮಾಡಲು ಹಿಂಜರಿದಿದ್ದೆನೋ ಅದನ್ನೆಲ್ಲ ಈಗಿನಿಂದಲೇ ಮಾಡುತ್ತೇನೆ.

(ಬಲಗಡೆಯಲ್ಲಿರುವ ಹೊರಬಾಗಿಲಿನ ಮೂಲಕ ಸಿಳ್ಳುಹಾಕುತ್ತ ನಿಷ್ಕ್ರಮಣ)

## ದೃಶ್ಯ ೮: ಬೀದಿ

ಆನಂದ (ಮುಂದಿನಿಂದ ಹೋಗುವವನನ್ನು ಉದ್ದೇಶಿಸಿ): ದಾಮೂ ಗೆಳೆಯಾ!

ದಾಮು (ಹಿಂದಿರುಗಿ ನೋಡಿ ತಿರುಗಿ ನಿಂತು): ಎಲ! ಇನೇನಿದು? ಒಬ್ಬನು ಈಗತಾನೇ ನಮ್ಮ ಮನೆಯಿಂದ ಬಂದಂತೆ ತೋರುವುದು, ಸರಿಯೇ?

ಆನಂದ: ಸರಿ, ಸರಿ! ಸತ್ಯವಾದುದನ್ನೇ ಹೇಳಿದೆ.

ದಾಮು: ಸಾವಿರದ ಎರಡನೆಯ ಸಲಕ್ಕೇ?

ಆನಂದ: ಇಲ್ಲ, ಮಹಾರಾಯ! ಭಾಗಮ್ಮನು ಶಾಂತೆಯ ತೈಲಚಿತ್ರ ವೊಂದನ್ನು ಬರೆಯಬೇಕೆಂದಿದ್ದಳು, ಮರೆತೆಯಾ?

ದಾಮು: ಒಬ್ಬನಿಗೆ ಬರೆಯುವ 'ಒರ್ಡರ್' ಸಿಕ್ಕಿತೇ?

ಆನಂದ: ನಾನೇ, ನನ್ನ ಸ್ವಂತ ಖುಷಿಯಿಂದ, ಬರೆಯುವೆನೆಂದೆ. ಅದಕ್ಕಾಗಿ ನಾಳೆ ಅವರನ್ನು ಬರಲು ಹೇಳುವುದಕ್ಕಾಗಿಯೇ ನಾನು ಹೋದದ್ದು.

ದಾಮು: ಪುಕ್ಕಟೆಯಾದರೆ ಮಾತ್ರ ಬರೆಯಿಸುವ ಆಲೋಚನೆ ಅಮ್ಮನದಿತ್ತು. ಈಗ ಹಣ ಬಿಚ್ಚಲು ಒಪ್ಪಿದರೇ?

ಆನಂದ: ಶಾಂತೆಯಂತಹ ಅಪ್ಸರೆಯ ಚಿತ್ರ ಬರೆಯುವುದೇ ಒಂದು ಆನಂದ! ಹಾಗಿರುವಾಗ ಅದರಲ್ಲಿ ಹಣದ ಮಾತಿಗೆ ಅವಕಾಶವೆಲ್ಲಿದೆ, ಮಹಾರಾಯ?

ದಾಮು: ನಿನಗೆ ಯಾರ ಕೆಲಸವನ್ನೂ ಧರ್ಮಾರ್ಥ ಮಾಡುವುದೆಂದರೆ ಸಂಕಟ! ಆದರೆ, ಈ ಚಿತ್ರವನ್ನು ಬಿಡಿಸಬೇಕೆಂಬ ಲವಲವಿಕೆ ಹೇಗೆ ಉಂಟಾಯಿತೋ!

ಆನಂದ: ಈ ಪ್ರಪಂಚದಲ್ಲಿ, ಇದ್ದಾಗಲೇ ದಾನಧರ್ಮ ಮಾಡೆಂದು ದಾಸರು ಬೋಧಿಸಿಲ್ಲವೇ? ಅದಿರಲಿ, ನಿನ್ನೊಡನೆ ನನ್ನದೊಂದು ಬಯಕೆಯಿದೆ.

ದಾಮು: ಒಬ್ಬನು ಏನನ್ನು ಬಯಸುವನು?

ಆನಂದ: ಒಬ್ಬನು ಬಯಸುವನೇನೆಂದರೆ, ನಾಳೆ ಬೆಳಿಗ್ಗೆ ನೀನು ಒಬ್ಬನ ಕಲಾಗಾರದಲ್ಲಿ ಬಂದಿಣಿಕಿ, ಒಬ್ಬನ ಸ್ಪರ್ಧಾಚಿತ್ರವನ್ನು ನೋಡಿ, ಅದನ್ನು ಕುರಿತು ಒಬ್ಬನಿಗೆ ಒಂದೆರಡು ಸಲಹೆಗಳನ್ನು ಕೊಡಲಾರೆಯಾ?

ದಾಮು: ಏನು! ಒಬ್ಬನು ನಿಜವಾಗಿಯೂ ಬಯಸುವನೇ?

ಆನಂದ: ಹೌದು, ಒಬ್ಬನು ನಿಜವಾಗಿಯೂ ಬಯಸುವನು.

ದಾಮು: ಹಾಗಾದರೆ ಒಬ್ಬನು ನಾಳೆ ಬೆಳಿಗ್ಗೆ ಹನ್ನೊಂದು ಘಂಟೆಗೆ ತಪ್ಪದೆ ಹಾಜರಾಗುವನು.

(ದಾಮು ಹಿಂದಕ್ಕೆ ತಿರುಗಿ ನಿಷ್ಕ್ರಮಿಸುವನು. ಆನಂದನು ಸಿಳ್ಳುಹಾಕುತ್ತ ಎದುರುದಿಕ್ಕಿಗೆ ತಿರುಗಿ ಹೆಜ್ಜೆಹಾಕುವಾಗ ಆನೆಯ ಮರಿಯಂತೆ ದೃಢವಾದ ಹೆಜ್ಜೆಯಿಡುತ್ತ ಸಿಳ್ಳುಹಾಕುತ್ತ ಬರುವ ಮಾಧೂನಿಗೆ ಢಿಕ್ಕಿಬಡಿಯುವನು.)

ಮಾಧು: ಏನ್ಸೈ! ಏನ್ಸೈ!

ಆನಂದ (ಸಾವರಿಸಿಕೊಳ್ಳುತ್ತ): ಎಲ, ಎಲ, ಮಾಧು! ನಾನು ನಿನ್ನನ್ನೇ ಹುಡುಕುತ್ತಿದ್ದೆ.

ಮಾಧು: ಏನ್ಸೈ, ಏನ್ಸೈ, ಯಾಕೆ, ಏನಾಯಿತು?

ಆನಂದ (ಮೃದುಸ್ವರದಲ್ಲಿ): ಮಾಧೂ, ಮಿತ್ರಾ! ನಿನಗೆ ಸಾಕಷ್ಟು ಹಣ ದೊರೆಯಿತೋ ಇಲ್ಲವೆಂಬ ಚಿಂತೆಯಿಂದ ನನಗೆ ನಿನ್ನೆ ರಾತ್ರಿಯೆಲ್ಲಾ ನಿದ್ದೆ ಬರಲಿಲ್ಲ. ನೀನು ಆರ್ಥಿಕಸಂಕಷ್ಟದಲ್ಲಿ ಬಿದ್ದಿರಬಹುದೆಂಬ ಭಯವು ನನ್ನ ಎದೆಯನ್ನು ಚೂರಿಯಂತೆ ಇರಿಯಿತು. ಬಂದು, ನಿನಗೆ ಬೇಕಾದಷ್ಟು ತೆಗೆದುಕೊಂಡು ಹೋಗು.

ಮಾಧು (ಕಣ್ಣು ಕಿವಿಗಳನ್ನು ಸವರಿಕೊಳ್ಳುತ್ತ): ಇದೇನು, ನಾನು ಕನಸು ಕಾಣುತ್ತಿರುವೆನೇ? ನನ್ನ ಕಿವಿಗಳು ಕೆಟ್ಟಿವೆಯೋ?

ಆನಂದ: ಇಲ್ಲ, ಇದು ಕನಸಲ್ಲ; ನಿನ್ನ ಕಿವಿಗಳು ನೆಟ್ಟಗೇ ಇವೆ.

ಮಾಧು: ನನಗೆ ನಂಬಲು ಅಸಾಧ್ಯವಾಗಿ ತೋರುವುದು. ನೀನು ಹಣ ಕೊಡುವ ಭರವಸೆ ಕೊಡುತ್ತಿರುವಂತೆ ಕೇಳಿದಂತಾಯಿತು.

ಆನಂದ: ಮಾಧೂ, ನಿಜವಾಗಿಯೂ ಭರವಸೆ ಕೊಟ್ಟೆ.

ಮಾಧು: ಹೌದೇ? ನಿಶ್ಚಯವಾಗಿಯೂ, ನಾನಾಗಿ ಬೇಡದೆಯೇ,—ಖಂಡಿತ ವಾಗಿ ನಾಡದು ಶುಕ್ರವಾರದ ವರೆಗೆ—ಸ್ವಲ್ಪ ಹಣ ಕಡವಾಗಿ ಕೊಡುವೆನೆಂದಿಯಾ?

ಆನಂದ: ಹೌದು, ಎಂದೆನು.

ಮಾಧು: ಕಲಿಯುಗದಲ್ಲಿ ಪವಾಡಗಳು ಸಂಭವಿಸುವುದಿಲ್ಲವೆನ್ನುವುದು ತಪ್ಪು. ಇರಲಿ, ಎಷ್ಟರ ಮಟ್ಟಿಗೆ ಕೊಡಬಲ್ಲೆ, ಹತ್ತು ರೂಪಾಯಿಯೇ?

ಆನಂದ: ಮಾಧೂ, ಹತ್ತು ರೂಪಾಯೆಂದರೆ ಎಷ್ಟು ಸ್ವಲ್ಪ!

ಮಾಧು: ಹದಿನೈದೇ?

ಆನಂದ: ಅದೇಕೆ ಸಂಕೋಚ? ಮುಕ್ತಹೃದಯನಾಗಿ ಕೇಳು.

ಮಾಧು: ಇಪ್ಪತ್ತು ರೂಪಾಯಲ್ಲವಷ್ಟೆ?

ಆನಂದ: ನಾನು ಇಪ್ಪತ್ತೈದು ರೂಪಾಯೆನ್ನುವುದರಲ್ಲಿದ್ದೆ.

ಮಾಧು: ಏನ್ಹೈ!

ಆನಂದ: ಅಷ್ಟರಿಂದ ಸುಧಾರಿಸಿಕೊಳ್ಳಬಹುದೇ? ನಿನಗೆ ಖರ್ಚು ವಿಪರೀತ ಇರುವುದೆಂದು ಬಲ್ಲೆ.

ಮಾಧು: ಏನ್ಹೈ!

ಆನಂದ: ಒಳ್ಳೆಯದು. ನಾಳೆ ಬೆಳಿಗ್ಗೆ ನನ್ನ ಕಲಾಗಾರಕ್ಕೆ ಬಂದುಬಿಡು. (ಮಾಧೂನಿಗೆ ಬೆನ್ನುಮಾಡಿ ನಿಷ್ಕ್ರಮಿಸುತ್ತ ಸ್ವಗತ): ಈಗಲಾದರೆ ಮಹತ್ಕಾರ್ಯಗಳನ್ನು ಸಾಧಿಸಿದಷ್ಟು ಆತ್ಮಸಂತುಷ್ಟಿಯಾಗುತ್ತಿದೆ.

(ಸಿಳ್ಳುಹಾಕುತ್ತ ನಿಷ್ಕ್ರಮಣ.)

## ದೃಶ್ಯ ೯: ಆನಂದನ ಕಲಾಗಾರ

ಆನಂದ (ಹಾಸಿಗೆಯಲ್ಲಿ ಹೊರಳಾಡುತ್ತ): ಏನು ಮಂಡೆಮಾರಿ ಇದು, ಆಗಿನಿಂದ ಕರಕರೆ ಮಾಡುತ್ತಿದೆ? ಹಾಂ, ಈ ಸೊಟ್ಟಮುಸುಡಿನ ಪುಸ್ಸಿಯೇ? (ಎತ್ತಿದ ಸ್ವರದಲ್ಲಿ) ಬಾಳೂ ...............(ಎಡಗಡೆಯ ಬಾಗಿಲು ಫಕ್ಕನೆ ತೆರೆಯುವುದು. ಬಾಳು ನೀರಿನ ಕಪ್ಪನ್ನು ಹಿಡಿದುಕೊಂಡು ಪ್ರವೇಶಿಸುವನು.)

ಆನಂದ (ಅಕಸ್ಮಾತ್ತಾಗಿ ಬೆಚ್ಚಿಬಿದ್ದು): ಅಬ್ಬಬ್ಬ! (ಎನ್ನುತ್ತ ಹೌಹಾರಿ, ಮಂಕುಬಡಿದು, ಹೊದ್ದುಕೊಂಡ ವಲ್ಲಿಯ ಸುರುಳಿಯೊಂದಿಗೇ ಸಟಕ್ಕನೆ ಎದ್ದು, ನಡುಗುತ್ತ ಧಡಮ್ಮನೆ ಹಾಸಿಗೆಯ ಮೇಲೆ ಬೀಳುವನು. ಅವನ ಹೃದ

ಯಕೋಶವು ಗಂಟಲಿಗೆ ಬಂದಂತಿರುವುದು; ಕಣ್ಣಾಲಿಗಳು ಅಂತರಾಳಕ್ಕೆ ಹೋಗಿಬಿಟ್ಟಿರುವುವು.) ಬೊ.........ಬೊ..............ಬೋಽಂಬು ಹಿಡಿಯಿತೇ? ಇನ್ನೆಷ್ಟು ಮಂದಿ ನನ್ನಂತೆ ನುಚ್ಚುನೂರಾಗದೆ ಬದುಕಿರುವರೊ. (ಅತ್ತಿತ್ತ ನೋಡುತ್ತ ಮುಂದಿರುವ ಬಾಳೂನನ್ನು ಕಂಡು) ಥೂ! ನಿನ್ನ ಪ್ರೇತವೇ? ಕರ್ಮ! ಬಡಿದು ಎಚ್ಚರಿಸದೆ ಬಾಗಿಲು ನೂಕಬಾರದೆಂದು ನಿನಗೆ ಎಷ್ಟು ಸಲ ಹೇಳಲಿ!

ಬಾಳು: ನಿಮಗೆ ಮುಖಕ್ಷೌರಕ್ಕಾಗಿ ನೀರು ತೆಗೆದುಕೊಂಡು ಬಂದಿದ್ದೆ.

ಆನಂದ: ಖಬರ್‌ದಾರ್! ನಡಿ, ಹೊರಗೆ, ಸುಮ್ಮನೆ ಜೀವ ಹಿಂಡಬೇಡ.

(ಕಪ್ಪನ್ನು ಮೇಜಿನ ಮೇಲಿರಿಸಿ, ಎಡಬಾಗಿಲಿನ ಮೂಲಕ ನಿಷ್ಕ್ರಮಣ.)

ಆನಂದ: ನನ್ನಬುದ್ಧಿ ನನ್ನನ್ನು ವಂಚಿಸಿ ಎಲ್ಲಿಗೆ ಹೋಗುತ್ತಿದೆ? ಒಮ್ಮೆ ಚೆನ್ನಾಗಿ ಅಳಲೇ ಎಂದೆನಿಸುವುದಲ್ಲ! ಆದರೆ, ಆಗದು, ಅಳುವುದು ಪುರುಷಲಕ್ಷಣವಲ್ಲ.

(ಎದ್ದು ಬದಿಯ ಕೋಣೆಗೆ ಹೋಗಿ ನಿತ್ಯಕರ್ಮಗಳನ್ನು ಮುಗಿಸಿ ಐದು ನಿಮಿಷಗಳಲ್ಲಿ ಹಿಂದೆಬರುವನು. ಸಿಳ್ಳುಹಾಕುತ್ತಾ ಮುಖಕ್ಷೌರ ಮುಗಿಸುವಷ್ಟರಲ್ಲಿ ಬಾಳು ಫಲಾಹಾರ ತಂದಿಡುವನು. ಅದನ್ನು ತೀರಿಸುತ್ತಲೇ ಆನಂದನ ಕೈ ಮೇಜಿನ ಮೇಲೆ ಚುಟ್ಟದ ಪೆಟ್ಟಿಗೆ ಇರುತ್ತಿದ್ದಲ್ಲಿ ಹೋಗುವುದು.)

ಆನಂದ (ಕೈಯನ್ನು ಥಕ್ಕನೆ ಹಿಂದೆ ಸರಿಸಿಕೊಂಡು): ಥುತ್! ಎಂತಹ ಕೆಟ್ಟ ದುರಭ್ಯಾಸ! ಮನಸ್ಸನ್ನು ಗಟ್ಟಿಮಾಡಿದರೂ ಕೈ ತಾನಾಗಿ ಮುಂದುವರಿಯುವುದಲ್ಲ! ಥೂ! ನರಕ, ನರಕ! (ಸ್ವಲ್ಪ ಸಮಯ ಮುಖವನ್ನು ಕೈಬೊಗಸೆಯಿಂದ ಮುಚ್ಚಿ ಸುಮ್ಮನೆ ಕುಳಿತುಕೊಳ್ಳುವನು; ಬಳಿಕ) ಪ್ರಪಂಚವೇ ಮಹಾ ನರಕ! ಇಲ್ಲಿ ಎಂತೆಂತಹಯಾತನೆಗಳು ನನ್ನನ್ನು ಕಾಡುತ್ತಿವೆ! ಎಲೈ ಮಾನವಕೋಟಿಯೇ! ನಿನ್ನನ್ನು ನಾನು ದ್ವೇಷಿಸುತ್ತೇನೆ! ಸೃಷ್ಟಿಯೇ, ನನಗೆ ಎಂತಹ ಜುಗುಪ್ಸೆ ಹುಟ್ಟಿಸುತ್ತಿರುವಿ! ಎಲ್ಲಿ ಹೋಯಿತು, ಆ ಪಾಪಿ ಬೆಕ್ಕು? ಇನ್ನೊಮ್ಮೆ ಅದಿಲ್ಲಿ ಬರಲಿ,—ಅದನ್ನು ಕಾಲಿಂದ ಒದ್ದು ನುಚ್ಚುಗುಜ್ಜು ಮಾಡಿಬಿಡುತ್ತೇನೆ, ನೋಡು! ಆ ಮೂಳ ಬಾಳು ಎಲ್ಲಿ ಹೋದ? ಇನ್ನೊಮ್ಮೆ ಅವನಿಲ್ಲಿ ಬರಲಿ,—ಅವನ ಮಂಡೆಯನ್ನು ದೊಣ್ಣೆಯಿಂದ ಬಡಿದು ಚೂರುಚೂರು ಮಾಡುತ್ತೇನೆ, ನೋಡು!

ದಾಮು (ಕೊಠಡಿಯ ಬಲಗಡೆಯ ಹೊರಬಾಗಿಲು ತೆರೆದು ತನ್ನ ಒಂಟಿ ಮೊಗದಿಂದ ಒಳಗೆ ಇಣಿಕುತ್ತ): ಒಬ್ಬನು ಒಳಗೆ ಬರಬಹುದೇ?

ಆನಂದ: ನೆಟ್ಟಗೆ ಒಳಗೆ ಬಾ! (ಮೇಜಿನ ಡ್ರಾವರಿನಲ್ಲಿದ್ದ ಒಂದು ಚೂಪಾದ ಚೂರಿಯನ್ನು ಕೈಯಲ್ಲೆತ್ತಿ, ಧಾರೆಯನ್ನು ಪರೀಕ್ಷಿಸತೊಡಗುವನು.)

ದಾಮು (ಪ್ರವೇಶಿಸಿ ಆನಂದನ ಕಡೆಗೆ ಬೆನ್ನು ಮಾಡಿನಿಂತು ಅವನ ಸ್ಪರ್ಧಾ ಚಿತ್ರವನ್ನು ಭೂತಗನ್ನಡಿಯ ಮೂಲಕ ಅವಲೋಕಿಸುತ್ತ): ಹಾಂಽಽಽಂ, ಹೂಂಽಽಽಂ, ಚಿಂತೆಯಿಲ್ಲ. ಚಿತ್ರದಲ್ಲಿ ಛಂದೋಬದ್ಧತೆ ಉಂಟು; ರೇಖಾಗುಣವೂ ಸಾಧಾರಣ್ಣ ಮಟ್ಟಿಗೆ ಇದೆ. ಆದರೂ ಒಬ್ಬನು ಇದನ್ನು ಮೆಚ್ಚಲಾರನೇ?

ಆನಂದ (ಚೂರಿಯನ್ನು ಅಂಗೈಯ ಮೇಲೆ ಮಸೆಯುತ್ತ): ಮೆಚ್ಚಲಾರನೇ?

ದಾಮು (ಗಲ್ಲವಿೂಸೆ ತೀಡುತ್ತ): ಇಲ್ಲ. ಒಬ್ಬನಿಗೆ ತಪ್ಪದೆ ಅನುಭವಕ್ಕೆ ಬರುವುದೇನೆಂದರೆ, ಚಿತ್ರದಲ್ಲಿ ಜೀವವೇ ಕಾಣುವುದಿಲ್ಲ!

ಆನಂದ: ಹೌದೇ?

ದಾಮು (ಕಣ್ಣನ್ನು ಅರೆಮುಚ್ಚುತ್ತಲೂ, ತೆರೆಯುತ್ತಲೂ, ಹಿಂದೆ ಹೋಗುತ್ತಲೂ, ಮುಂದೆ ಬರುತ್ತಲೂ ಚಿತ್ರವನ್ನು ದಿಟ್ಟಿಸುತ್ತ): ನಿರ್ವಿವಾದವಾಗಿ ಈ ಚಿತ್ರದಲ್ಲಿ ಒಬ್ಬನಿಗೆ ನಿರ್ಜೀವತೆಯೇ ಅನುಭವಕ್ಕೆ ಬರುತ್ತಿದೆ. ಚಿತ್ರದಲ್ಲಿ ಜೀವವನ್ನು ಎಂದೂ ಬಲಿಕೊಡಬಾರದು. ಸಂಗೀತಗಾರನು ರಾಗಗಳನ್ನು ನುಡಿಸುವಂತೆ, ಚಿತ್ರಗಾರನು ಬಣ್ಣಗಳನ್ನು ಬಳಿಯಬೇಕು. ಹೀಗೆ ಮಾಡಿದರೆ ಮಾತ್ರ ಚಿತ್ರವು ಸಜೀವವಾಗುತ್ತದೆ. ಈ ಚಿತ್ರದಲ್ಲಾದರೋ.................(ಫಕ್ಕನೆ ತಿರುಗುತ್ತಾನೆ. ಆನಂದನು ಹಲ್ಲು ಕಿರಿದು, ಕೈಯಲ್ಲಿ ಚೂರಿ ಹಿಡಿದು ತನ್ನ ಮೇಲೆ ಬೀಳಲು ಬರುತ್ತಿರುವುದು ಕಂಡುಬರುತ್ತದೆ. ಕ್ಷಣಾರ್ಧದಲ್ಲಿ ಎತ್ತರವಾದ ಆ ಚಿತ್ರದ ಹಿಂಭಾಗಕ್ಕೆ ಓಡುವನು. ಇಬ್ಬರೂ ಕೆಲವು ನಿಮಿಷಗಳ ವರೆಗೆ ಆಚಿತ್ರದ ಸುತ್ತಲೂ ಓಡಾಡುವಾಗ ಆನಂದನಕಾಲು ಚಾಪೆಯ ಮೇಲೆ ಜಾರುವುದು. ದಾಮು ಹತ್ತಿರದಲ್ಲಿರುವ ಒಂದು ಕಪಾಟನ್ನು ಹೊಕ್ಕು ಬಾಗಿಲು ಎಳೆದುಕೊಳ್ಳುತ್ತಾನೆ. ಇಬ್ಬರೂ ಸ್ವಲ್ಪ ಸಮಯ ಕಪಾಟಿನ ಬಾಗಿಲಿನೊಡನೆ ಹೆಣಗಾಡುತ್ತಾರೆ. ಕಟ್ಟಕಡೆಗೆ ಆನಂದನು ನಿರಾಶನಾಗಿ ಈಚೆಗೆ ಬಂದು ಸಿಳ್ಳುಹಾಕುತ್ತಾ ಕೊಠಡಿಯ ಉದ್ದಳತೆಯನ್ನು ಹೆಜ್ಜೆಗಳಿಂದ ಅಳೆಯತೊಡಗುತ್ತಾನೆ. ಸ್ವಲ್ಪ ಸಮಯದಲ್ಲಿ ಇನ್ನೊಮ್ಮೆ ಕೊಠಡಿಯ ಹೊರಬಾಗಿಲು ತೆರೆದುಕೊಳ್ಳುವುದು. ಮಾಧು ಪ್ರವೇಶಿಸುವನು.)

ಮಾಧು: ಏನ್ಕೆ!

ಆನಂದ (ಮುಂದೆಬರುತ್ತ): ಆಃ!

ಮಾಧು: ಇದೇನೆನ್ನುವಿ—'ಆಃ!'?

ಆನಂದ: 'ಆಃ!'—ಇಷ್ಟೆ.

ಮಾಧು: ನಾನು ಆ ಹಣಕ್ಕಾಗಿ ಬಂದೆ.

ಆನಂದ: ಆಃ!

ಮಾಧು: ಆ ಐವತ್ತು ರೂಪಾಯೋ, ಎಷ್ಟೋ, ನೀನು ಕೊಡುವೆನೆಂದು ಉದಾರ ಹೃದಯದಿಂದ ಮಾತುಕೊಟ್ಟಿದ್ದೆಯಷ್ಟೆ? ಇವತ್ತು ಬೆಳಗ್ಗೆ ಹಾಸಿಗೆಯಲ್ಲಿ ಮಲಗಿದ್ದು ಯೋಚಿಸುವಾಗ, ಅದನ್ನು ನೂರು ರೂಪಾಯಾಗಿ ಯಾಕೆ ಮಾಡಬಾರದೆಂದು ನನಗೆ ಹೊಳೆಯಿತು. ಅಗ್ಗ ಒಂದು ಪೂರ್ಣಸಂಖ್ಯೆಯೇ ಆಗುತ್ತದೆ.

ಆನಂದ: ಆಃ!

ಮಾಧು: ಕೇಳಿದ್ದಕ್ಕೆಲ್ಲಾ ನೀನು 'ಆಃ!' ಎನ್ನುವಿ. ಇದೇಕೆ ಹೀಗಾಗಿರುವಿ?

ಆನಂದ (ಬುಸುಗುಟ್ಟುತ್ತಾ ಉರಿದುಬಿದ್ದು): ಇದು ನನ್ನ ಕಲಾಗಾರ. ಬೇಕಾದಷ್ಟು ಸಲ 'ಆಃ!' ಎನ್ನುವೆನು. ನನ್ನನ್ನು ಯಾರು ಕೇಳುವರು?

ಮಾಧು: ಅದು ಸರಿ, ಅದು ಸರಿ! ಹೌದೈ, ಹೌದೈ! ಅದು ಸರಿ! (ಮುಖ ಬೆವರುತ್ತಿರಲು ಕರವಸ್ತ್ರದಿಂದ ಗಾಳಿ ಹಾಕಿಕೊಳ್ಳತೊಡಗುವನು; ಆಗ ಅದು ಹಾರಿ ಕೆಳಗೆ ಬೀಳುವುದು. ಅದನ್ನು ಎತ್ತಿಕೊಳ್ಳಲು ಬಾಗಿದಾಗ, ಆನಂದನು ಅವನನ್ನು ಹಿಂದೆ ಒದೆಯುವನು: ಮಾಧು ಕೊಠಡಿಯಿಂದ ಹಾರಿ, ಮಾಯವಾಗುವನು. ಆಗಲೇ ಭಾಗಮ್ಮ, ಶಾಂತೆಯರು ಹೊರಬಾಗಿಲಿನಿಂದ ಪ್ರವೇಶಿಸುವರು )

ಭಾಗಮ್ಮ: ಅದೇನೇ, ಶಾಂತೂ, ನಾವು ಮೆಟ್ಟಿಲು ಹತ್ತುತ್ತಿದ್ದಂತೆಯೇ ಏನೋ ರೊಯ್ಯನೆ ಮೇಲಿಂದ ಕೆಳಕ್ಕೆ ಬೀಸಿ ಹೋಯಿತು?

ಶಾಂತೆ: ಒಂದು ಭಾರವಾದ ವಸ್ತುವಿನಂತೆ ಭಾಸವಾಯಿತಪ್ಪ!

ಆನಂದ (ಸಿಳ್ಳುಹಾಕುತ್ತ ಎಡಗಾಲಿನ ಮೇಲೆ ನಿಂತಿದ್ದು ಬಲಗಾಲಿನ ಬೆರಳುಗಳನ್ನು ಸವರಿಕೊಳ್ಳುತ್ತಿದ್ದಂತೆಯೇ, ಅಭ್ಯಾಗತರನ್ನು ಆದರಿಸುವ ಬದಲಿಗೆ ಕಾತ್ಸಾರ ಪ್ರದರ್ಶಿಸುತ್ತ ಅವರನ್ನೇ ದಿಟ್ಟಿಸುತ್ತಿದ್ದು ಕಡೆಗೆ ಶಾಂತೆಯ ಕಡೆಗೆ ದೃಷ್ಟಿ ಹಾಯಿಸಿ, ಸ್ವಗತ): ಆಃ! ನನಗೆ ಎಂತಹ ಹುಚ್ಚು! ನಾನು ಈ ಬಣ್ಣದ ಬೀಸಣಿಗೆಯಿಂದ ಹೇಗೆ ಆಕರ್ಷಿಸಲ್ಪಟ್ಟಿದ್ದೆನೋ!

ಭಾಗಮ್ಮ (ಆನಂದನನ್ನು ಉದ್ದೇಶಿಸಿ): ನಾವು ಬಂದುದು ಸರಿಯಾಯಿತಷ್ಟೆ?

(ಕಪಾಟಿನ ಬಾಗಿಲು ನಿಶ್ಶಬ್ದವಾಗಿ ತೆರೆದುಕೊಂಡು ಒಂದು ವಿವರ್ಣವಾದ ಮುಖವು ಹೊರಗೆ ಇಣಿಕಿನೋಡುವುದು. ಮರುಕ್ಷಣದಲ್ಲಿ ಕೊಠಡಿಯೊಳಗಿಂದ ಗಾಳಿಯು ಬೀಸಿದಂತೆ ದಾಮು ಪಾರಾಗಿ ಹೋಗುವನು. ಹೊರ ಮೆಟ್ಟಲುಗಳನ್ನು ಮೂರುಮೂರರಂತೆ ಇಳಿದುಹೋದ ಶಬ್ದವಾಗುವುದು )

ಭಾಗಮ್ಮ: ಅದೇನದು?

ಶಾಂತೆ: ಸ್ವಲ್ಪ ಮಸುಕಾಗಿ ಕಂಡಿತು, ಆದರೆ ದಾಮೂ ಅಣ್ಣನೋ ಅಂತ!

ಆನಂದ (ನಿರಾಶೆಯಿಂದ): ಆಹಾ! (ಎಂದು ಮೆಟ್ಟಿಲ ಕಡೆಗೆ ಓಡುವನು. ಒಡನೆ ಹಿಂದೆ ಬಂದು) ಜಾರಿಯೇ ಬಿಟ್ಟನಲ್ಲ!

ಶಾಂತೆ (ತಾಯಿಯೊಡನೆ): ಇದೇನು, ಇವರಿಗೆ ಭ್ರಮೆ ಹಿಡಿದಿದೆಯೇ?

ಭಾಗಮ್ಮ (ಮಗಳೊಡನೆ): ಹೇಗೋ ನಿನ್ನ ಚಿತ್ರಕ್ಕೆ ಚಿತ್ತಾಸು ಕೊಡುವ ಅಗತ್ಯವಿಲ್ಲವಲ್ಲ!—ಅವರಿಗೆ ಭ್ರಮೆ ಹಿಡಿದರೇನು, ಬಿಟ್ಟರೇನು? (ಆನಂದನನ್ನು ಉದ್ದೇಶಿಸಿ) ಅದಿರಲಿ. ಶಾಂತೆಗೆ ಈ ದಿನ ಬೆಳಿಗ್ಗೆ ಏನೂ ಕೆಲಸವಿಲ್ಲ. ನಿಮಗೆ ಬಿಡುವಿದೆಯಾದರೆ ಕೆಲಸವನ್ನು ಈಗಲೇ ಪ್ರಾರಂಭಿಸುವಿರಾ?

ಆನಂದ (ಯೋಚನೆಯಲ್ಲಿ ಮಗ್ನನಾಗಿದ್ದವನು ಫಕ್ಕನೆ ಎಚ್ಚರಕ್ಕೆ ಬಂದವನಂತೆ): ಕೆಲಸ?

ಭಾಗಮ್ಮ: ಹೌದು, ಚಿತ್ರದ ಕೆಲಸ.

ಆನಂದ: ಎಂತಹ ಚಿತ್ರ?

ಭಾಗಮ್ಮ: ಶಾಂತೆಯ ಚಿತ್ರ.

ಆನಂದ: ಶಾಂತೆಯ ಚಿತ್ರವನ್ನು ಬಿಡಿಸಬೇಕೆ?

ಭಾಗಮ್ಮ: ಹೌದು, ನೀವು ನಿನ್ನೆ ಹೇಳಿದ್ದಿರಲ್ಲ!

ಆನಂದ: ಹೇಳಿದ್ದೆನೋ? ಇರಬಹುದು. ರೂಪಾಯಿ ತಂದಿರುವಿರಾ, ನೂರು ರೂಪಾಯಿ?

ಭಾಗಮ್ಮ: ನೂರು ರೂಪಾಯಿ! ಏಕೆ?

ಆನಂದ: ಚಿತ್ರಮಾಡಲು ಹಣವನ್ನು ಮುಂಗಡಪಡೆಯುವುದೇ ನನ್ನ ರೂಢಿ.

ಭಾಗಮ್ಮ: ಆದರೆ, ನಿನ್ನೆ ನೀವು ಅದನ್ನು ಧರ್ಮಾರ್ಥವಾಗಿಯೇ ಮಾಡುವೆನೆಂದಿದ್ದಿರಿ!

ಆನಂದ: ಒಳ್ಳೆಯದು, ಇರಬಹುದು. ಆದರೆ ತಮಾಷೆಗೆ ಹೇಳಿದ್ದನ್ನು ನೀವು ಹೆಂಗಸರೆಲ್ಲಾ ನಿಜವೆಂದೇ ನಂಬಬಹುದೇ? ಅದೂ ಅಲ್ಲದೆ, ಸ್ವಲ್ಪವೂ ಸುರೂಪವಿಲ್ಲದ, ಈ ಹುಡುಗಿಯ ತೈಲಚಿತ್ರವನ್ನು ಬಿಡಿಸಲು ನೀವು ಏಕೆ ಆತುರಪಡುವಿರೋ ದೇವರೇ ಬಲ್ಲ; ಇವಳ ಮುಖವು ತೆಳ್ಳಗಿದ್ದು ಚಪ್ಪಟೆಯಾಗಿದೆ; ಕಣ್ಣುಗಳಲ್ಲಿ ಬುದ್ಧಿಚಾತುರ್ಯದ ಕಿಡಿಯೇ ಹೊಳೆಯುವುದಿಲ್ಲ; ಕಿವಿಗಳು ಎತ್ತರವಾಗಿದ್ದು ಗಲ್ಲಗಳು ಬತ್ತಿಹೋಗಿವೆ! ನೀವು ನನ್ನನ್ನು ವಚನಪಾಲನೆಗಾಗಿ ಒತ್ತಾಯಮಾಡುವಿರಾದರೆ, ನನಗೆ ಇವಳ ಮುಂದೆ ಕುಳಿತು ಇವಳನ್ನು ದಿಟ್ಟಿಸುವುದರಿಂದ ಆಗಬಹುದಾದ ನೈತಿಕ ಮತ್ತು ಬೌದ್ಧಿಕ ಹಾನಿನಷ್ಟಗಳಿಗಾಗಿ ಇನ್ನೂ ಹೆಚ್ಚಿನ ಪರಿಹಾರದ್ರವ್ಯ ಕೊಡಬೇಕಾದೀತು, ನೆನಪಿರಲಿ!

(ಮಾತಾಡುತ್ತಾ ಒಂದು ಚುಟ್ಟಕ್ಕಾಗಿ ಮೇಜಿನ ಒಳಗೆ ಹೊರಗೆಲ್ಲಾ ಹುಡುಕಾಡುವನು.)

ಭಾಗಮ್ಮ: (ಬೆಪ್ಪಾಗಿ ಮಂಕುಬಡಿದು): ಏನು? (ಎನ್ನುತ್ತ ಅಲ್ಲೇ ಹತ್ತಿರವಿರುವ ಕುರ್ಚಿಯಲ್ಲಿ ಹೋಗಿ ಕುಳಿತು ಪ್ರಜ್ಞೆ ತಪ್ಪಿ ತಿರುಗಿ ಪ್ರಜ್ಞೆಗೆ ಬರುವಳು.)

ಆನಂದ (ಕಪಾಟಿನೊಳಗೆಲ್ಲಾ ಚುಟ್ಟದ ಬೇಟೆಯಾಡಿ ಸೋತು): ನನ್ನ ಯಥಾರ್ಥವಾದ ಈ ಮಾತುಗಳಿಂದ ನಿಮಗೆ ಮನ ನೊಂದಿರುವುದಾದರೆ ನಾನು ವ್ಯಸನಪಡುವೆನು. ಆದರೆ, ಈ ಮಾನವವರ್ಗದಿಂದಲೇ ನನಗೆ 'ಹಹಹರಾ!' ಎನಿಸಿದೆ. ಅದರಲ್ಲಿಯೂ ನಿಮ್ಮ ಮನೆತನವು ಈ ಮಾನವಕೋಟಿಗೆಲ್ಲಾ ಕಲಂಕಪ್ರಾಯವಾಗಿದೆ. ನನಗೆ ಬೇಕಾದುದೇ ಅದರ ಶಕ್ತಿವು! ದಾಮು ಸ್ವಲ್ಪದರಲ್ಲೇ ತಪ್ಪಿಸಿಕೊಂಡನು. ಆದರೆ ಮಾಧೂನ ವಿಷಯದಲ್ಲಾದರೆ ನನ್ನ ಅದೃಷ್ಟವು ಚೆನ್ನಾಗಿತ್ತು: ಅವನಿಗೆ ಅತ್ಯಂತ ರುಚಿಕರ ಲತ್ತೆ ಕೊಟ್ಟುಬಿಟ್ಟೆ! ಫಿರಂಗಿಯಲ್ಲಿ ಹಾಕಿ ಸಿಡಿಸಿದ್ದರೂ ಅವನು ಅಷ್ಟು ವೇಗವಾಗಿ ಹಾರುತ್ತಿದ್ದಿಲ್ಲ! ಬಹುಶಃ ಅವನು ನಿಮ್ಮನ್ನು ಮೆಟ್ಟಲಿನಲ್ಲಿ ಹಾದುಹೋಗಿರಬಹುದಲ್ಲವೇ?

ಶಾಂತೆ: ಹಾಗಾದರೆ, ನಮ್ಮನ್ನು ಹಾದುಹೋದದ್ದು ಮಾಧೂ ಅಣ್ಣನೇ!

ಭಾಗಮ್ಮ (ಎದ್ದು ನಿಂತು): ನೀವು ನನ್ನ ಮುದ್ದುವನ್ನು ಒದ್ದಿರಾ?

ಆನಂದ: (ವಿನೀತನಾಗಿ): ವಾರಗಟ್ಟಳೆ ಅಭ್ಯಾಸಮಾಡಿದಷ್ಟು ಚುರುಕಿನಿಂದ ಸೊಂಟದ ಮೇಲೆಯೇ ಒದ್ದೆನಮ್ಮ!

ಭಾಗಮ್ಮ: ಅಯ್ಯೋ, ನನ್ನ ಬಡ ಕಂದಾ! (ಎನ್ನುತ್ತಾ ಮಗನ ದೇಹಾವಶಿಷ್ಟವನ್ನು ಹುಡುಕಿಕೊಂಡು ಮೆಟ್ಟಿಲ ಬಳಿಗೆ ಓಡಿಹೋಗುವಳು.)

ಶಾಂತೆ(ಕಣ್ಣುಗಳನ್ನು ವಿಶಾಲವಾಗಿ ತೆರೆದು): ನೀವು ಇಷ್ಟು ದೊಡ್ಡ ವಾಗ್ಮಿಯಾಗಿದ್ದೀರೆಂದು ನಾನೆಂದೂ ಎಣಿಸಿರಲಿಲ್ಲ! ನನ್ನ ವರ್ಣನೆಯನ್ನು ಎಷ್ಟು ರಂಜಿತವಾಗಿ ಮಾಡಿದಿರಿ! ಅದೊಂದು ಗದ್ಯಕವಿತೆಯೇ ಸರಿ!

ಆನಂದ: ಸರಿ, ಸರಿ.

ಶಾಂತೆ: ನೀವು ನಿಜವಾಗಿಯೂ ನಾನು ಹಾಗಿರುವೆನೆಂದು ಭಾವಿಸುವಿರಾ?

ಆನಂದ: ನಿಜವಾಗಿ.

ಶಾಂತೆ: ನನ್ನ ಕಣ್ಣುಗಳು.....................?

ಆನಂದ: ನೀಲಿ ಚಿಪ್ಪುಗಳಂತೆ.

ಶಾಂತೆ: ನೀವು ನಿಜವಾಗಿಯೂ ನನ್ನ ರೂಪವನ್ನು ಮೆಚ್ಚುವುದಿಲ್ಲವೇ?

ಆನಂದ: ಮೆಚ್ಚುವಲ್ಲಿಂದ ಬಹುದೂರ.

ಶಾಂತೆ: ಹಾಗಾದರೆ... ..........(ಎನ್ನುತ್ತ ಮೆಲ್ಲಗೆ ಬಡಬಡಿಸುತ್ತಿರುವಳು)

ಆನಂದ (ಶಾಂತೆಯ ಮಾತುಗಳ ಕಡೆಗೆ ಗಮನಕೊಡದೆ ಕಪಾಟಿನ ಬಳಿ ಸಾರುತ್ತ ಸ್ವಗತ): ಸರಿ, ನೆನಪಾಯಿತು! ಕೆಲವು ದಿನಗಳ ಹಿಂದೆ ನಾನು ಅರೆ ಸೇದಿದ ಒಂದು ಚುಟ್ಟವನ್ನು ಈ ಕಪಾಟಿನ ಹಿಂದೆ ಎಸೆದುಬಿಟ್ಟಿದ್ದೆ! (ಅತ್ಯಪರಿಮಿತ ಆವಸರದಿಂದ ಕಪಾಟನ್ನು ಮುಂದಕ್ಕೆ ಎಳೆಯಲು ಆ ತುಂಡು ಅವನಿಗೆ ಸುಲಭವಾಗಿ ಕಾಣಸಿಕ್ಕುತ್ತದೆ. ಆದನ್ನು ಸಂತೋಷಾಧಿಕ್ಯದಿಂದ ಎತ್ತಿಕೊಂಡು) ಉಸ್ಸಪ್ಪ! ಬದುಕಿದೆ! ಇದರ ಕೊನೆಯು ಕಚ್ಚಿ ನಜ್ಜುಗುಜ್ಜಾಗಿದೆಯಾದರೂ, ಇದನ್ನು ಇಲಿಗಳು ಕಚ್ಚಿಕೊಚ್ಚಿವೆಯಾದರೂ, ಇದು ಸೇಕಡಾ ಎಂಟಂಶ ಕಾರ್ಬನ್ ಮೊನೊಕ್ಸಾಯಿಡ್ ಅನಿಲಪೂರಿತವಾಗಿ ಉಪಯೋಗಾರ್ಹವಾದ ಶುದ್ಧ ಚುಟ್ಟವೇ ಆಗಿದೆ!(ಕೂಡಲೇ ಅದನ್ನು ಬಾಯುಯಿಲ್ಲಿಟ್ಟು ಬೆಂಕಿ ಹಚ್ಚಿ ಹೊಗೆಯನ್ನು ಬುಸಬುಸನೆ ಸೇದಿ ಹೊರಬಿಡಲಾರಂಭಿಸುವನು.) ಆಃ, ಎಂತಹ ಆನಂದ! ಪ್ರಪಂಚವು ನಿಜವಾಗಿಯೂ ಸ್ವರ್ಗವೇ ಆಗಿದೆ. ಇಲ್ಲಿ ನಾವು ಒಬ್ಬರ ಮೇಲೊಬ್ಬರು ಕರುಣೆ, ಪ್ರೀತಿ ಔದಾರ್ಯಗಳನ್ನು ತೋರಿಸಬೇಕಲ್ಲದೆ, ಸ್ವಲ್ಪವೂ ದ್ವೇಷ ಸಾಧಿಸಲೇ ಬಾರದು! (ಶಾಂತೆಯ ಕಡೆಗೆ ನೋಡುತ್ತ ಸ್ವಗತ:) ಎಲ! ಎಲ! ಇವಳ ಕಮಲದಳದಂತಹ ಕಣ್ಣುಗಳಲ್ಲಿ ಎಂತಹ ಕಾಂತಿ! ಇವಳ ಚಂದ್ರಮುಖದಲ್ಲಿ ಎಂತಹ ಸೌಂದರ್ಯ! ಛೆ! ಈ ಮೋಹಿನಿಯನ್ನು ಕುರಿತು ನನ್ನ ಅಭಿಪ್ರಾಯವು ಎಷ್ಟು ತಪ್ಪಾಗಿತ್ತು! ಇವಳು ಎಷ್ಟು ಮಾತ್ರಕ್ಕೂ ಮಾನವಪರ್ಗದ ಪ್ರಾಣಿವಾಗಿರದೆ ಎಂದಿನಂತೆಯೇ ಅತ್ಯಂತ ಲಾವಣ್ಯಮಯಿಯಾಗಿಯೇ ಇರುವಳಲ್ಲ!

ಶಾಂತೆ (ಯಾವುದೋ ಪ್ರಶ್ನೆಗೆ ಉತ್ತರ ಕಾಯುತ್ತಿದ್ದಂತೆ ಆನಂದನನ್ನೇ ನೋಡುತ್ತ): ಆಂ?

ಆನಂದ: ಕ್ಷಮಿಸು, ಏನೆಂದಿ?

ಶಾಂತೆ: ಹಾಗಾದರೆ, ನೀವು ನನ್ನನ್ನು ...........?

ಆನಂದ: ಏನು?

ಶಾಂತೆ (ತಡವರಿಸುತ್ತ): ಮ ... ದು ... ವೆ ಆಗುವುದಿಲ್ಲವೇ?

ಆನಂದ (ತಲೆತಿರುಗಿ ಹೋಲುವಂತಾಗಿ): ಯಾರು, ನಾನು? ನಿನ್ನನ್ನು ಮದುವೆಯಾಗುವುದು?

ಶಾಂತೆ: ಹೌದು.

ಆನಂದ: ಆದರೆ,—ನೀನು ನನ್ನನ್ನು ಬಯಸುವಿಯಾ?

ಶಾಂತೆ: ನಿಶ್ಚಯವಾಗಿ.

ಆನಂದ: ನಾನು ಇಷ್ಟೆಲ್ಲ ಹೇಳಿದ ಮೇಲೆ........?

ಶಾಂತೆ(ಆಶ್ಚರ್ಯದಿಂದ): ನಾನು ಹೇಳಿದ್ದು ಯಾವುದನ್ನೂ ನೀವು ಕೇಳಲಿಲ್ಲವೇ?

ಆನಂದ: ಇಲ್ಲ. ನಾನೇನೋ ಯೋಚನೆಯಲ್ಲಿದ್ದೆ. ನೀನೇನು ಹೇಳಿದಿ?

ಶಾಂತೆ: ನಾನು ಹಾಗಿರುವೆನೆಂದು ಅಭಿಪ್ರಾಯಪಡುವಿರಾಗಿ, ನೀವು ನನ್ನನ್ನು ರೂಪಕ್ಕಾಗಿ ಪ್ರೀತಿಸದೆ ಬುದ್ಧಿಚಾತುರ್ಯಕ್ಕಾಗಿಯೇ ಪ್ರೀತಿಸುತ್ತಿರುವಿರೆಂದು ಹೇಳಿದೆ. ನಾನು ಯಾವಾಗಲೂ ಹಾಗೆಯೇ ಆಶಿಸುತ್ತಿದ್ದೆ.

ಆನಂದ: ಅದಿರಲಿ. ನಿಶ್ಚಯವಾಗಿ ನನ್ನನ್ನು ವರಿಸುವಿಯಾ?

ಶಾಂತೆ: ನಿಶ್ಚಯವಾಗಿ! ಈ ಮೊದಲು ನೀವು ನನ್ನನ್ನು ಬರಿಯ ಬಣ್ಣದ ಬೀಸಣಿಗೆಯಂತೆ ಎಣಿಸಿದ್ದಿರೆಂದು ನಂಬಿದ್ದೆ.

ಆನಂದ: ಬಣ್ಣದ ಬೀಸಣಿಗೆ! (ತನ್ನ ಚುಟ್ಟವನ್ನು ಒಮ್ಮೆ ಬಿರುಸಾಗಿ ಸೇದಿ, ಮೇಜಿನ ಮೇಲಿರಿಸಿ) ಈ ಬುದ್ಧಿಚಾತುರ್ಯದ ಗಣಿಯನ್ನು ಬಣ್ಣದ ಬೀಸಣಿಗೆ ಎಂದೇನೇ?

ಶಾಂತೆ (ನಾಚುತ್ತ): ಅದೂ ಅಲ್ಲದೆ, ಅಣ್ಣ ಮಾಧೂನನ್ನು ಒಂದೇ ಒದೆತಕ್ಕೆ ಅಷ್ಟು ದೂರಕ್ಕೆ ಕಳುಹಬಲ್ಲವರನ್ನು ಯಾವಳಾದರೂ ಹೇಗೆ ಪ್ರೀತಿಸದಿದ್ದಾಳು?

ಆನಂದ (ಮುಖದಲ್ಲಿ ಕಳೆಗುಂದುತ್ತ): ಹೌದು, ನೆನಪಾಯಿತು. ನಾನು ನಿನಗೆ ಮಾಧೂನನ್ನು ನೆನಪಿಗೆ ತರುತ್ತೇನೆಂದು ನೀನು ದಾಮೂನೊಡನೆ ಹೇಳಿದ್ದಿಯಂತೆ!

ಶಾಂತೆ: ಆದರೆ, ನೀವಿಬ್ಬರೂ ಒಂದೇ ರೀತಿಯಲ್ಲಿ ಸದಾ ಸಿಳ್ಳು ಹಾಕುತ್ತಿರುವಿರೆಂಬುದಕ್ಕಾಗಿಯೇ ನಾನು ಹಾಗೆಂದಿದ್ದೆ. ನನಗೆ ಸಿಳ್ಳು ಕೇಳುವುದೆಂದರಾಗದು.

ಆನಂದ: ಇಗೋ, ಭಾಷೆ ಕೊಡುವೆನು; ಈಗಿನಿಂದ ನಾನು ಸಿಳ್ಳುಹಾಕುವುದೇ ಇಲ್ಲ. ಇನ್ನೊಂದು ವಿಷಯ: ನಾನು ನಿನಗೆ ದಾಮೂನ ನೆನಪು ಉಂಟು ಮಾಡುತ್ತೇನೆಂದು ಮಾಧು ಹೇಳಿದನಲ್ಲ—ಅದೇಕೆ?

ಶಾಂತೆ: ಓ, ಅದು ಪೋಷಾಕಿನ ವಿಷಯದಲ್ಲಿ: ನೀವಿಬ್ಬರೂ ಒಂದೇ ತರನಾಗಿ, ಥಳಕಾಗಿ ವಿದೇಶೀ ಪೋಷಾಕು ಧರಿಸುವಿರಿ. ಅಷ್ಟೆ!

ಆನಂದ: ಅಷ್ಟೇ ತಾನೆ! [ಇನ್ನೊಂದು ಸಲ ಚುಟ್ಟವನ್ನು ಮೇಜಿನ ಮೇಲಿರಿಸಿ ಶಾಂತೆಯ ಕೈಗಳನ್ನು ತನ್ನ ಕೈಗಳಲ್ಲಿ ಎತ್ತಿಕೊಳ್ಳುತ್ತ] ಇಗೋ, ಇಂದಿನಿಂದಲೇ ನಿನಗೆ ಮೆಚ್ಚುಗೆಯಾಗುವ ರೀತಿಯ ಪೋಷಾಕನ್ನೇ ಧರಿಸುವೆನೆಂದು ಪ್ರತಿಜ್ಞೆ ಮಾಡಿ ಹೇಳುವೆನು ನಾನೆಣಿಸಿದ್ದೆ, ನಾನು ಅವರಿಬ್ಬರಂತೆ ಚುಟ್ಟವನ್ನು ಸೇದುತ್ತಿರುವುದಕ್ಕಾಗಿಯೇ ನೀನು ನನ್ನನ್ನು ಉಪೇಕ್ಷಿಸುತ್ತಿದ್ದೀಯೆಂದು! ಚುಟ್ಟದ ಮೇಲಿನ ನನ್ನ ಪ್ರೀತಿಯು ಅಪಾರ! ಆದರೂ ನಿನ್ನ ಮೇಲಿನ ನನ್ನ ಪ್ರೀತಿಯು ಅದಕ್ಕಿಂತಲೂ ಸಹಸ್ರಪಾಲು ಅಧಿಕ! ಆದುದರಿಂದ ನಿನ್ನನ್ನು ಒಲಿಸಿಕೊಳ್ಳುವ ಸಲುವಾಗಿ ನಾನು ಮೂರು ದಿನಗಳ ಹಿಂದೆ ನನ್ನ ಅಕ್ಕರೆಯ ಚುಟ್ಟವನ್ನು ದೃಢ ನಿರ್ಧಾರಮಾಡಿ ಬಿಟ್ಟುಬಿಟ್ಟೆ. ಆದರೆ, ಅದರಿಂದ ನಾನು ಪಟ್ಟ ಯಾತನೆ ನರಕಯಾತನೆಗೂ ಕಡೆ! ಹೊಗೆಬತ್ತಿ ಸೇದುವ ಚಟವು ನಿಜವಾಗಿಯೂ ಎಂತಹ ದುರಭ್ಯಾಸವೆಂಬುದು ಈಗತಾನೇ ನನಗೆ ಮನದಟ್ಟಾಗುತ್ತಿದೆ. ಒಬ್ಬನು ಕುಡಿತವನ್ನಾದರೂ ಕಾರಣಾಂತರಗಳಿಂದ ಬಿಟ್ಟುಬಿಡಬಹುದು; ಆದರೆ ಈ ಚಟವನ್ನು ಬಿಡುವುದು ಮಸಣದಲ್ಲೇ ಎಂಬುದಕ್ಕೆ ಅನುಮಾನಬೇಡ. ಈ ಅಭ್ಯಾಸವಿದ್ದವರು ಕ್ರಮೇಣ ಆರೋಗ್ಯವನ್ನು ಕಳೆದುಕೊಳ್ಳಬಹುದು; ಆದರೆ ಇದ್ದ ಅಭ್ಯಾಸ ಬಿಟ್ಟವನು ಬುದ್ಧಿಯನ್ನೇ ಕಳೆದುಕೊಂಡು ರಾಕ್ಷಸನಿಗಿಂತಲೂ ಕ್ರೂರನಾಗುವನೆಂಬುದಕ್ಕೆ ನನ್ನ ದೃಷ್ಟಾಂತವೇ ಸಾಕು! ಇದನ್ನು ಲಕ್ಷಿಸಿ ಯಾರೂ ಈ ಅತ್ಯಂತ ನೀಚ ಅಭ್ಯಾಸಕ್ಕೆ ಕೈ ಹಾಕದಿರಲಿ!

[ಪರದೆ]

[ವೋಡ್‌ಹೌಸರ ಒಂದು ಕಥೆಯ ಆಧಾರದಿಂದ]



Edited, Printed and Published by K. V. Shenoy
at The Prabhat Printers, Ltd, Mangalore-1.

# 61

# ಭಕ್ತವಾಣಿ

●

ರಾಷ್ಟ್ರಕವಿ
ಶ್ರೀ। ಗೋವಿಂದ ಪೈ.

ರಚಯಿತಾ:
ಗೋವಿಂದ ಪೈ,
ಮಂಜೇಶ್ವರ.

1955.




ಒಂದಾಣೆ ಮಾಲೆ

# ಒಂದಾಣೆ ಮಾಲೆಯಲ್ಲಿ ಈ ವರೆಗೆ ಪ್ರಕಟವಾದ ಪುಸ್ತಕಗಳು

೧. *ಕೆಪ್ಪಟಿರಾಯ (ವಿನೋದ ಕಥೆ)
೨. *ನಾರೀಶ್ವರರು (ಏಕಾಂಕ ಪ್ರಹಸನ)
೩. *ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು.
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ)
೫. *ಅದ್ಭುತತ್ಯಾಗ ಮತ್ತು ಇತರ ಕಥೆಗಳು
೬. ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ)
೭. *'ಬೀಡಿ ಸೇದಬೇಡಿ' ಮತ್ತು 'ಅ ಮಗು' (ವಿನೋದ ಕಥೆಗಳು)
೮. *ಇಂಗ್ಲಿಷ್-ಕನ್ನಡ ಅರ್ಥಕೋಶ
೯. *ಲಂಚಕ್ಕೆ ಸಂಚಕಾರ
೧೦. *ಟಿಶ್ಯೂ ಔಷಧಿಗಳ ಕೈಪಿಡಿ.
೧೧. ಶ್ರೀಕ್ಷೇತ್ರ ಧರ್ಮಸ್ಥಳ (ತೃ. ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು
೧೪. ವೆಂಕಟನ ಸಂಕಟ (ಏಕಾಂಕ ಪ್ರಹಸನ)
೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ)
೧೬. ವೇಣೂರಿನ ಗತವೈಭವ.
೧೭. ಒಗಟುಗಳು [ದ್ವಿತೀಯ ಮುದ್ರಣ]
೧೮. ಜಗಳಗಂಟಿ ಮತ್ತು ಇತರ ಕಥೆಗಳು
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಪ್ಪ
೨೧. *ಭಾರತದ ಮಹಾನಗರಗಳು (ಭಾಗ ೧)
೨೨. ತಿರುಕ್ಕುರಲ್
೨೩. ಸೂರ್ಯನ ಸಂಸಾರ ಮತ್ತು ಇತರ ಕಥೆಗಳು.
೨೪. *ಭಾರತದ ಮಹಾನಗರಗಳು (ಭಾಗ ೨)
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳು.
೨೬. *ಮಾರಾವತಾರ (ಏಕಪಾತ್ರ ಯಕ್ಷಗಾನ ಪ್ರಬಂಧ)
೨೭. ಹಾಸವಿಲಾಸ (ನಗೆಹನಿಗಳು)
೨೮. ಸತ್ಯವಂತ ಬಾಜಿ (ಏಕಾಂಕ ಪ್ರಹಸನ)
೨೯. ಜಾಣ್ಮೆಯ ಒಗಟುಗಳು
೩೦. ಜಾತಕ ಕಥೆಗಳು
೩೧. ಕಾರ್ಕಳದ ಚರಿತ್ರೆ
೩೨. ಮರ್ಜಿ (ಏಕಾಂಕ ಪ್ರಹಸನ)
೩೩. ದರ್ಶನದ ಕಥೆಗಳು
೩೪. ಅಳುವಿನ ಹೊಳೆ ಮತ್ತು ಕೇಶವಭೂಪ (ಮಕ್ಕಳ ಕಥೆಗಳು)
೩೫. ಶರಾಬಿನ ಪೀಪಾಯಿಗಳು
೩೬. ಉಪದೇಶ ಶತಕ
೩೭. ನಿಮಗೆ ಗೊತ್ತಿದೆಯೇ?
೩೮. ಚತುರ ಚಮತ್ಕಾರ
೩೯. ಸತೀ ಸಾವಿತ್ರಿ [ಕಥೆಗಳು
೪೦. ಆಭರಣಗಳ ಪೆಟ್ಟಿಗೆ, ಮತ್ತು ಇತರ
೪೧. ಭಾರತದ ಮಂತ್ರಿಮಂಡಲಗಳು (ದ್ವಿ.
೪೨. ಕಾಲುಬಳೆಯ ಕಥೆ [ಮುದ್ರಣ)
೪೩. ಭಾರತದ ನಾಲ್ಕು ಕಲಶಗಳು
೪೪. ವ್ಯಸನದಿಂದ ಲಾಭ ಮತ್ತು ಇತರ
೪೫. ಸುಭಾಷಿತ [ಕಥೆಗಳು
೪೬. ೧೮೫೭ರ "ಸಿಪಾಯಿ ದಂಗೆ" ಅಥವಾ ಬ್ರಿಟಿಷರಿಗೆದುರಾಗಿ ಭಾರತೀಯರ ಸ್ವಾತಂತ್ರ್ಯ ಸಮರ
೪೭. ಅಕಾಂಡ ತಾಂಡವ (ರೇಡಿಯೋ ನಾಟಕ)
೪೮. ಸಾಹಸದ ಕಥೆಗಳು.
೪೯ ಸಂಜ್ಞಾ ಜ್ಞಾನ ಕೋಶ
೫೦. ಪಂಡಿತನ ಪಿಟೀಲು
೫೧ ಭೋಗಯಾತ್ರೆ
೫೨. ಸಂಗ್ರಾಮಸಿಂಹ
೫೩. ಧರ್ಮ ಶಿಕ್ಷಾ
೫೪. ಮಹಾತ್ಮ
೫೫. ಮಿರಾಬಾಯಿ (ಏಕಾಂಕ ನಾಟಕ)
೫೬. ವೀರರಮಣಿ ಕರ್ಮದೇವಿ
೫೭. ಅರಳಿದ ನಗು
೫೮. ಸಚಿತ್ರ ಜಪಾನ್
೫೯. ಚುಟ್ಟಿ ಬಿಟ್ಟಿ ಛಟ್ಟಿ (ಏಕಾಂಕ ಪ್ರಹಸನ)
೬೦. ನಿರಪರಾಧಿ
೬೧. ಭಕ್ತವಾಣಿ

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಈ ವರೆಗೆ ಅರ್ವತ್ತೊಂದು ಪುಸ್ತಕಗಳಲ್ಲಿ, ಅರ್ವತ್ತೊಂದು ಆಣೆಗಳಿಗೆ, 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, 1332 ಪುಟಗಳನ್ನು ಕೊಟ್ಟಿರುತ್ತದೆ.

# ಎರಡು ಮಾತು.

ಇಂದಿಗೆ ಹೆಚ್ಚುಕಡಮೆ ೨೭–೨೮ ವರ್ಷಗಳ ಹಿಂದೆ ನನ್ನ ಮಿತ್ರರಾದ ಶ್ರೀ। ಸಿ. ಆರ್. ಕಾಮತರು ಕೆಲವು ಸೂಕ್ತಿಗಳನ್ನು ಸಂಗ್ರಹಿಸಿ, ಇಲ್ಲವೆ ರಚಿಸಿ ಕಳುಹಿಸಿ ಕೊಡಬೇಕೆಂದು ನನ್ನೊಂದಿಗೆ ಅಪೇಕ್ಷಿಸಿದ ಮೇರೆಗೆ ನಾನು ಅವರಿಗೆ ಬರೆದು ಕಳುಹಿಸಿದ ಸೂಕ್ತಿಗಳಲ್ಲಿ ಅವರ ಪುಸ್ತಕದ ಆಯದಲ್ಲಿ ಒಳಗೊಳ್ಳುವಷ್ಟುಗಳನ್ನು ಅವರು ಅಚ್ಚುಹಾಕಿಸಿದರು. ಅದು 'ಭಕ್ತವಾಣಿ' ಎಂಬ ಹೆಸರಿನಿಂದ ೧೯೨೮ರಲ್ಲಿ ಪ್ರಕಟವಾಯಿತು. ಆದರ ಪ್ರತಿಗಳಾದರೆ ಹಲವು ವರ್ಷಗಳಿಂದ ದೊರೆಯುತ್ತಿಲ್ಲ.

ಇದೀಗ ನನ್ನ ಮಿತ್ರ ಶ್ರೀ। ಕುಡ್ವಿ ವಾಸುದೇವ ಶೆಣ್ಯೆಯವರು ತಾವದನ್ನು ಮರಳಿ ಪ್ರಕಟಿಸುತ್ತೇವೆ ಎಂದು ನನ್ನೊಡನೆ ಕೇಳಿದರು. ಅದಕ್ಕೆ ಅನುಮತಿಸಿ ಇವರು ಕೋರಿದಂತೆ ಇವರ 'ಒಂದಾಣೆ ಮಾಲೆ'ಯ ಆಯಕ್ಕೆ ಸರಿಗೂಡುವಂತೆ ಮತ್ತೂ ೩೨ ಸೂಕ್ತಿಗಳನ್ನು ಇಲ್ಲಿ ಕೂಡಿಸಿರುತ್ತೇನೆ.

ಇತಿ ಶಮ್.

ಮಂಜೇಶ್ವರ,
೩೧—೧೦—೧೯೫೫

ಗೋವಿಂದ ಪೈ.





|| ಶ್ರೀ ಪರಮಾತ್ಮನೇ ನಮಃ ||

# ಭಕ್ತವಾಣಿ

೧. ಅಹಂಕಾರವಿಲ್ಲವೇ? ಅಂಧಕಾರವೂ ಇಲ್ಲ.

೨. ಶಿಷ್ಯರಿಲ್ಲದಾತನೇ ನಿಜವಾದ ಗುರು.

೩. ಚಿಕ್ಕ ಗುಡ್ಡಗಳು ದೊಡ್ಡ ಬೆಟ್ಟಗಳನ್ನು ಮರೆಮಾಡುತ್ತವೆ.

೪. ನಾವು ಒಲ್ಲದ ಒಳ್ಳಿತನ್ನು ಕೆಡುಕು ಎನ್ನುತ್ತೇವೆ.

೫. ದೇವರ ನಿಜವಾದ ಆರಾಧನೆ ಎಂದರೆ ನಾವೂ ಆತನಂತೆ ಆಗೋಣ.

೬. ಮನುಷ್ಯನು ತನ್ನ ಭಾಷೆಯಲ್ಲಿ ದೇವರನ್ನು ದೇವಾ ಎಂದು ಕರೆಯುತ್ತಾನೆ. ಆತನು ಕೊಲ್ಲುವ ಪ್ರಾಣಿಯೂ ತನ್ನ ಭಾಷೆಯಲ್ಲಿ ಅದೇ ಹೆಸರಿನಿಂದ ದೇವರನ್ನು ಕರೆಯುತ್ತದೆ.

೭. ಕೆಡುಕಿನಿಂದ ತಾನೆ ಒಳಿತು ಮೊಳೆಯುತ್ತದೆ.

೮. ಸೊಗಸಾದ ಪಾತರಗಿತ್ತಿಯಾಗುವುದು ಚಲೋದಾದ ಕಂಬಳಿ ಹುಳವಲ್ಲ.

೯. ಸ್ವರ್ಗದ ದಾರಿ ನರಕದಿಂದ ಹಾದುಹೋಗುತ್ತದೆ.

೧೦. ನಿಜವಾದ ಮತಕ್ಕೆ ಬೇರೆ ದೇವಾಲಯವಿಲ್ಲ. ಅದರ ದೇವಾಲಯ ಮನುಷ್ಯನ ಹೃದಯದಲ್ಲಿದೆ.

೧೧. ದೇವರು ಈ ವಿಶ್ವವನ್ನು ತನ್ನ ದೇವಾಲಯವಾಗಿರಿಸಿರುತ್ತಾನೆ, ಮನುಷ್ಯರು ತಂತಮ್ಮ ದೇವಾಲಯಗಳನ್ನು ತಮ್ಮ ವಿಶ್ವವಾಗಿಸುತ್ತಾರೆ.

೧೨. ತಾನು ಇಂಥಾ ಋತುವಿನಲ್ಲಿ ಮಾತ್ರ ಹೂಬಿಡುತ್ತೇನೆ, ಇಂಥಾ ಋತುವಿನಲ್ಲಿ ಮಾತ್ರ ಹಣ್ಣುಬಿಡುತ್ತೇನೆ ಎಂದು ವೃಕ್ಷವೇನು ಗುಣುಗುಟ್ಟುತ್ತಿದೆಯೇ?

೧೩. ಮನೆಕಟ್ಟುವವರು ಬೇಡವೆಂದು ಬಿಸುಟ ಕಲ್ಲೇ ಮುಂದೆ ಅದರ ಮೂಲೆಗಲ್ಲಾಗುತ್ತದೆ.

೧೪. ತಾನು ದೇವರಂತೆ ಆಗುವುದೇ ದೇವರ ನಿಜವಾದ ಆರಾಧನೆ.

೧೫. ಮನುಷ್ಯನು ಮಗುವಾಗುತ್ತ ಬರುವಂತೆ ದೇವರಿಗೆ ಹತ್ತಿರವಾಗುತ್ತಾನೆ.

೧೬. ಜೀವಂತ ಬುಗ್ಗೆಗಳಿಲ್ಲದ ಹಳ್ಳಗಳು ಮಳೆಗಾಲ ದಾಟುತ್ತಲೇ ಮುಂಚಿನಂತೆ ಬತ್ತುತ್ತವೆ.

೧೭. ಮಗು ಎಂದಿತು:–'ಅಮ್ಮಾ, ನನಗೆ ಹಸಿವಾಗುತ್ತಲೇ ನನ್ನನ್ನು ಎಚ್ಚರಿಸು.' ತಾಯಿ ಎಂದಳು—'ಮುದ್ದೇ, ನಿನ್ನ ಹಸಿವೆಯೇ ನಿನ್ನನ್ನು ಎಚ್ಚರಿಸುತ್ತದೆ.'

೧೮. ಜ್ಞಾನವು ಗಂಡಸು, ಭಕ್ತಿ ಹೆಂಗಸು. ಜ್ಞಾನವು ದೇವರ ನಡುಮನೆಯ ವರೆಗೆ ಹೋಗಬಲ್ಲುದು. ಭಕ್ತಿಯಾದರೆ ನೆಟ್ಟಗೆ ಒಳಮನೆಯೊಳಗೆ.

೧೯. ಹಿಂಸಿಸಲ್ಪಡದೆ ಹಿರಿಯನಾಗನು.

೨೦. ಕೆಳಕ್ಕೆ ಇಳಿವ ದಾರಿಯೇ ಮೇಲಕ್ಕೂ ಏರುವ ದಾರಿ.

೨೧. ದೂರಕ್ಕೆ ಕಾಣಬೇಕಾದರೆ ಎತ್ತರದಿಂದ ನೋಡಬೇಕು.

೨೨. ಹೊಳೆಯ ಆಚೆಯೂ ಹಾದಿ ಇದೆ, ಈಚೆಯೂ ಹಾದಿ ಇದೆ.

೨೩. ಒದ್ದೆ ಸವುದೆ ಒಲೆಯನ್ನು ಹೊತ್ತಿಸದು.

೨೪. ಗಾಳಿಯಲ್ಲಿ ಬೆರೆವನಕಾ ಹೊಗೆ ಬೇರೆ, ಗಾಳಿ ಬೇರೆ.

೨೫. ಹರಿದದ್ದೇ ತೀರ್ಥ, ಮಿಂದದ್ದೇ ಗಂಗೆ.

೨೬. ಕಣ್ಣಿನಲ್ಲಿ ಬೆಳಕಿದೆಯಾದರೆ ನೇಸರಿನಲ್ಲೂ ಬೆಳಕಿನೆ.

೨೭. ಮಣ ಮಾತಿಗಿಂತ ತೊಲೆ ಕೆಲಸ ಲೇಸು.

೨೮. ಏತ ಬಾಗದೆ ಪಾತಾಳದ ನೀರನ್ನು ತೂಗದು.

೨೯. ಒಳ್ಳಿತು ಬಂದೇ ತೀರಬೇಕು; ಅದು ಯಾವಾತನ ಮೂಲಕ ಬರುತ್ತದೊ, ಆತನು ಭಾಗ್ಯವಂತನು.

೩೦. ಸೋಲದೆ ಗೆಲುವಾಗದು.

೩೧. ಪಡೆವುದಕ್ಕಿಂತ ಕೊಡುವುದು ಮೇಲು.

೩೨. ರಾಮನಿಗಿಂತ ಆತನ ನಾಮ ದೊಡ್ಡದು.

೩೩. ಇರುವುದೆಂಬುದು ಒಂದೇ; ಜ್ಞಾನಿಗಳು ಅದೊಂದನ್ನೇ ಹಲಹೆಸರುಗಳಿಂದ ಕರೆವರು.

೩೪. ಪರಮಾತ್ಮನಿಗೆ ಇದೊಂದೇ ತಕ್ಕುದೆಂಬ ಹೆಸರಿಲ್ಲ; ಆದ್ದ ರಿಂದ ಆತನ ಹೆಸರುಗಳಿಗಾಗಿ ಜಗಳಾಡುವವರು ಮೂರ್ಖರು.

೩೫. ಪರಮಾತ್ಮನಿಲ್ಲದ ಎಡೆಯೇ ಇಲ್ಲದಿರುವಲ್ಲಿ ಆತನು ಇರುವ ಎಡೆಯನ್ನು ಹೇಗೆ ತಾನೇ ಅರಿಯಲಿ?

೩೬. ಆತನನ್ನು ಹೆಸರಿಸುವುದರಿಂದ ನಾವು ಆತನನ್ನು ಕಿರಿದು ಮಾಡುತ್ತೇವೆ.

೩೭. 'ಮಗುವೇ, ಸಂತಯಿಸಿಕೋ; ನಾನು ನಿನಗೆ ಮುಂಚಿತ ವಾಗಿಯೇ ದೊರೆತಿಲ್ಲವಾದರೆ, ನೀನು ನನ್ನನ್ನು ಎಂದಿಗೂ ಹುಡುಕಲಾರೆ.'

೩೮. ಪರಮಾತ್ಮನೊಡನೆ ಮಾತನಾಡಲಿಕ್ಕಿರುವ ಭಾಷೆಯೊಂದೇ— ಮೌನವು; ಆದ್ದರಿಂದ ಮುಂಚೆ ಅದನ್ನು ಸಾಧಿಸು.

೩೯. ಪರಮಾತ್ಮನು—ಆತ್ಮವು, ತೇಜವು, ಮತ್ತು ಪ್ರೇಮವು

೪೦. 'ನನ್ನಲ್ಲಿ ಎಲ್ಲವನ್ನು ಕಾಣು; ಎಲ್ಲವಲ್ಲಿ ನನ್ನನ್ನು ಕಾಣು.'

೪೧. 'ಇದೆಲ್ಲವೂ ಆತನನ್ನು ಪ್ರತಿಬಿಂಬಿಸುತ್ತದೆ. ಆತನ ತೇಜ ದಿಂದಲೇ ಹೊಳೆಯುತ್ತದೆ.'

೪೨. ನೀನು ಆತನನ್ನು ಕಾಣಲಾಪೆಯಾದರೆ ಜ್ಞಾನದೃಷ್ಟಿಯಿಂದ ತಾನೇ ಕಾಣುವೆ; ಏಕೆಂದರೆ ಸಮಸ್ತ ವಿಶ್ವದ ಎಡೆಯೆಡೆಯಲ್ಲಿ ತನ್ನ ಮಹಿಮೆ ಯನ್ನು ಪ್ರಕಾಶಿಸಿರುವಾತನಲ್ಲಿ ಔದಾರ್ಯವಲ್ಲದೆ ಕಾರ್ಪಣ್ಯವಿರಬಲ್ಲುದೇ?

೪೩. 'ಸೃಷ್ಟಿಯಲ್ಲಿ ಎಲ್ಲವರ ಹೃದಯದಲ್ಲಿ ವಾಸಿಸುವ ಆತ್ಮ ವೆಂಬುದು ನಾನೇ.'

೪೪. 'ನೀನು ಯಾವಾತನನ್ನು ಹುಡುಕುತ್ತೀಯೋ ಆತನು ನೀನೇ.'

೪೫. ಪರಮಾತ್ಮನ ಧಾಮವು ನಮ್ಮಲ್ಲಿಯೇ ಇದೆ.

೪೬. 'ಗೆಳೆಯಾ, ನೀನೇ ಶ್ರೀಹರಿಯು ಆಟದ ಗಿರುಗಟಿ; ನೀನೇ ಆತನೂದುವ ಕೊಳಲು!'

೪೭. 'ಅಗೋ, ಆ ಕಲ್ಲನ್ನು ಎತ್ತು—ಅಲ್ಲಿ ನನ್ನನ್ನು ಕಾಣುವೆ; ಆ ಕೊರಡನ್ನು ಸಿಗಿ—ಅದರಲ್ಲಿ ನಾನಿರುವೆನು.'

೪೮. 'ನನಗೆ ನಿನ್ನ ಹೃದಯವನ್ನೇ ಬಲಿಕೊಡು; ಇತರ ಯಾವ ಬಲಿಯನ್ನಾದರೂ ನಾನೊಲ್ಲೆನು.'

೪೯. 'ಕಂಬನಿಗಳ ಕಣ್ಣಿಂದ ತಾನೇ ನೀನು ನನ್ನನ್ನು ಕಾಣಲಾಪೆ.'

೫೦. ನಿನ್ನ ಬಯಕೆಯಲ್ಲಿ ಸ್ವಾರ್ಥವಿಲ್ಲದಿದ್ದರೆ, ಅದು ನೆಟ್ಟಗೆ ದೇವರ ಅಡಿಗಳನ್ನು ತೊಳೆಯಬಲ್ಲುದು.

೫೧. ನಿನ್ನನ್ನು ಲೋಕವು ಕೈಬಿಟ್ಟಿತೆಂದರೆ, ದೇವರು ಕೈಗೊಟ್ಟ ನೆಂದು ತಿಳಿ.

೫೨. ಸ್ವಾರ್ಥತ್ಯಾಗವೆಂಬ ಮರಣದಿಂದ ಸತ್ತು ದೇವರ ಜ್ಞಾನಕ್ಕೆ ಕಣ್ಣು ತೆರೆದಾತನೇ ದ್ವಿಜನು.

೫೩. ವ್ರತಗಳ ಡಂಭಾಚಾರದಿಂದ ದೇವರನ್ನು ಕಾಣಲಾರೆ; ಸಂಸಾರಸುಖಗಳ ತ್ಯಾಗವೆಂಬ ಏಕಾದಶೀ ವ್ರತವನ್ನು ಸಾಧಿಸು—ಮರು ದಿನವೇ ಆತನು ನಿನ್ನ ಅತಿಥಿಯಾಗುವನು.

೫೪. ಪರಮಾತ್ಮನು ಸರ್ವರಲ್ಲಿಯೂ ಏಕರೀತಿಯಿಂದಿರುವಲ್ಲಿ ನಮ್ಮೊಳಗೆ ಜಾತಿಭೇದಗಳನ್ನು ಕಲ್ಪಿಸಿಕೊಳ್ಳುವುದಕ್ಕಿಂತ ಆತನಿಗೆ ದಾರುಣ ವಾದ ಬೇರೆ ತಿರಸ್ಕಾರವಿದೆಯೇ?

೫೫. ನಿನ್ನ ಹೃದಯವನ್ನು ದೇವರಿಗೆ ಮೂಲಗೇಣಿಗೆ ಕೊಟ್ಟುಬಿಡು.

೫೬. ಲೋಕ ಹೆಚ್ಚಿದಂತೆ ದೇವರು ಕಡಿಮೆ.

೫೭. ಏಕಾಂತದಲ್ಲಿ ಮನೆಮಾಡಿಕೊಂಡವನಿಗೆ ಜಗ ತುಂಬಾ ಏಕಾಂತ.

೫೮. ಕಿತ್ತುಹಾಕಲಾರದ ಅಳಲಿಂದ ಬಳಲುವೆಯಾದರೆ ಉಪವಾಸ ಮಾಡಿ ದೇವರನ್ನು ಪ್ರಾರ್ಥಿಸು.

೫೯. ಸೇವಕನಾಗದೆ ನಾಯಕನಾಗಲಾರೆ.

೬೦. ಲೋಕದ ಏಣಿಯನ್ನೇರುವೆಯಾ? ನೆಟ್ಟಗೆ ನರಕದಲ್ಲಿ ಇಳಿದಿ.

೬೧. ಸಂಸಾರದ ದುಃಖವನ್ನೂ ಶತ್ರುವಿನ ಪೀಡೆಯನ್ನೂ ವೈದ್ಯನ ಶಸ್ತ್ರವೆಂದು ಭಾವಿಸಿ ಸಂತೋಷದಿಂದ ಅಂಗೀಕರಿಸು.

೬೨. ಜನರಿಂದ ಅತ್ಯಂತವಾಗಿ ಹಿಂಸಿಸಲ್ಪಡುವಾತನೇ ದೇವರ ಪರಮಪ್ರಿಯ ಪುತ್ರನು.

೬೩. ದೇವರ ಮಗನಿಗೆ ಲೋಕದಲ್ಲಿ ಅಡಿದಾಣಕ್ಕಾದರೂ ಎಡೆ ಸಿಗದು.

೬೪. ದೇವರು ಶಾಶ್ವತ ದಾರಿಗನು; ನೀನೂ ದಾರಿಗನಾದರೆ ಹೇಗೆ ತಾನೇ ಆತನನ್ನು ಕಂಡುಹಿಡಿವೆ?

೬೫. ನಿನ್ನಲ್ಲಿಯ ಪಾಪವನ್ನು ಜಯಿಸುವ ಮುಂಚೆ ಇತರರ ಪಾಪಕ್ಕೆ ಬೆರಳು ತೋರಿಸಬೇಡ.

೬೬. ನಿನ್ನಲ್ಲಿಯೇ ನೆಲಸಿರುವವನನ್ನು ಅನ್ಯತ್ರ ಹುಡುಕಿದರೆ ಆತನು ಸಿಗುವನೇ?

೬೭. ತನ್ನಲ್ಲಿಯೇ ದೇವರನ್ನು ಕಾಣಲಾರದಾತನಿಗೆ ದೇವರೇ ಇಲ್ಲ.

೬೮. ನೀನು ಆತನನ್ನೇ ನೋಡುತ್ತೀ; ಆದರೂ ನೋಡುತ್ತಿಯೆಂಬುದನ್ನು ಮಾತ್ರ ನೀನರಿಯೆ.

೬೯. ಮನುಷ್ಯರಲ್ಲಿಯೇ ದೇವರನ್ನು ಹುಡುಕು.

೭೦. ಈ ವಿಶ್ವವು ಸರ್ವಾದ್ಭುತಮಯವು; ಇವುಗಳಲ್ಲಿ ಮನುಷ್ಯನೇ ಅತ್ಯದ್ಭುತ.

೭೧. ಜ್ಞಾನತೃಷೆಯಿಂದ ನೀರಡಿಸುವಾತನಿಗೆ ಈ ಜಗತ್ತೇ ನೀರಿನ ಬುಗ್ಗೆಯು.

೭೨. ಯಾವಾತನು ಆತನನ್ನು ಹುಡುಕುತ್ತಾನೋ ಆತನು ಹೊಂದುತ್ತಾನೆ.

೭೩. ಅಪರೀಕ್ಷಿತವಾದ ಜೀವನವನ್ನು ಜೀವಿಸಿ ಫಲವಿಲ್ಲ.

೭೪. ದೇಹದಿಂದ ಆತ್ಮವು ಮುಸುಕಿದೆ; ಆತ್ಮದಿಂದ ಪರಮಾತ್ಮನು ಮುಸುಕಿರುವನು.

೭೫. ಮಗುವಾಗದೆ ತಾಯ ಹಾಲನ್ನು ಕುಡಿಯಲಾರೆ.

೭೬. ಜ್ಞಾನಿಯು ತನ್ನಲ್ಲಿಯೇ ಶೋಧಿಸುವನು. ಅಜ್ಞಾನಿಯು ತನ್ನನ್ನು ಮಾತ್ರ ಬಿಟ್ಟು ಪರರಲ್ಲಿ ಶೋಧಿಸುವನು.

೭೭. ತನ್ನನ್ನು ತಾನರಿತವನೇ ಜ್ಞಾನಿಯು.

೭೮. ಸತ್ಯವನ್ನೇ ಅನ್ವೇಷಿಸು—ಅದನ್ನೇ ಸಾಧಿಸು; ಆ ಬಗ್ಗೆ ಎಷ್ಟು ಪೇಚಾಡಲಿಕ್ಕಿರುವುದಾದರೂ ಲೆಕ್ಕಿಸಬೇಡ.

೭೯. ಜ್ಞಾನಕ್ಕಿಂತಲೂ ಭಕ್ತಿಯು ಎಷ್ಟೋ ಮೇಲು.

೮೦. ಶುದ್ಧವಾದ ಜ್ಞಾನವೂ ಶುದ್ಧವಾದ ಭಕ್ತಿಯೂ ಇವೆರಡೂ ಒಂದೇ.

೮೧. ರಾಧೆಯಾಗದೆ ಕೃಷ್ಣನನ್ನು ಸೇರಲಾರೆ; (ಮಗ್ದಲದ) ಮರಿಯಳಾಗದೆ ಕ್ರಿಸ್ತನನ್ನು ಹೊಂದಲಾರೆ.

೮೨. ನೀನು ಹಿಡಿದ ದಾರಿಯಲ್ಲಿ ಮುನ್ನಡೆದವರನ್ನು ಕಾಣದಿದ್ದರೆ ನೀನು ಒಬ್ಬಂಟಿಗನಾಗಿಯೇ ಅದರಲ್ಲಿ ನಡೆ.

೮೩. ನಿನ್ನ ದಾರಿಗೆ ನಿನ್ನ ಬೆಳಕನ್ನೇ ಒಯ್ಯು; ಇತರರ ಬೆಳಕು ನಿನಗೆ ಎಲ್ಲಿ ತನಕ ಬಂದೀತು?

೮೪. ಅನ್ಯರು ಹಿಡಿದರೆಂದೇ ಯಾವುದೊಂದಾದರೂ ಹಾದಿಯನ್ನು ಹಿಡಿಯಬೇಡ—ನಿನಗೆ ಮನವಂತ ಹಾದಿಯನ್ನೇ ಹಿಡಿ.

೮೫. ಮುಳ್ಳಿನ ಹಾದಿಯೇ ದೇವರ ಹಾದಿ.

೮೬. ಮನುಷ್ಯನ ಜೀವನವು ಇರುಳಿನ ಕಾರ್ಗತ್ತಲೆಯಲ್ಲಿಯ ಪಯಣವು.

೮೭. ಮುಚ್ಚುಂಜೆಗಳ ಏಕಾಂತದಲ್ಲಿ ದೇವರನ್ನು ನೆನೆ.

೮೮ ಸಂತೋಷದಿಂದ ಸಹಿಸಿದ ದುಃಖವು ಪರಮ ಸುಖವಾಗಿ ಪರಿಣಮಿಸಬಲ್ಲದು.

೮೯. ಯಾವುದನ್ನೂ ಆಶಿಸಬೇಡ—ಅಂದರೆ ಇತರರು ಆಶಿಸುವು ದೆಲ್ಲವೂ ನಿನ್ನನ್ನು ಸೇರುವುದು.

೯೦. ದುಃಖದ ಚಿಪ್ಪಿನೊಳಗೆ ಸುಖದ ಮುತ್ತು ಇದೆ.

೯೧. ನಿನ್ನ ಹೊಟ್ಟೆಬಾಕತನವೇ ಇತರರ ಉಪವಾಸ.

೯೨. ಧನವೇ ಆತ್ಮದ ಬೂದಿ.

೯೩. ಬಡತನವನ್ನು ತಾಳಿಕೊಳ್ಳಬಹುದು; ಸಂಪತ್ತನ್ನು ತಾಳಿ ಕೊಳ್ಳುವುದು ಕಷ್ಟ.

೯೪. ಹಣದ ಹೊಳಪನ್ನು ಮಿಗುವ ಕತ್ತಲೆ ಇಲ್ಲ.

೯೫. ಹಣವಂತನ ಹಾದಿ ಉದ್ದ.

೯೬. ಕೊಡದಾತನ ಕೈ ಬಾಯಿಗೆ ಬಾರದು.

೯೭. ಹಣವಿದ್ದವನಷ್ಟು ಬೇರೆ ಬಡವನಿಲ್ಲ.

೯೮. ಲಾಭದಾಸೆ ಮುಗಿವಲ್ಲಿಂದಲೇ ಮಾನುಷತೆಯು ಆರಂಭವು.

೯೯. ಯಾವಾಗಲೂ ನಿನ್ನ ಮನಸ್ಸಿನ ಕಾವಲುಗಾರನಾಗಿರು.

೧೦೦. ಪ್ರೇಮವೇ ಬದುಕಿನ ತಿರುಳು.

೧೦೧. ನೀನು ಇತರರನ್ನು ಎಂದಿಗೂ ವಂಚಿಸದೆ, ಇತರರು ನಿನ್ನನ್ನು ಎಷ್ಟು ಸಾರಿ ವಂಚಿಸುವರೋ ಅಷ್ಟು ಹೆಚ್ಚಿಗೆ ನಿನ್ನ ಸಂತೋಷವೂ ಅವ ರಲ್ಲಿಯ ನಿನ್ನ ಪ್ರೀತಿಯೂ ಹೆಚ್ಚುವುದಾದರೆ, ಅಂದೇ ನಿನ್ನ ಆತ್ಮದಲ್ಲಿ ಶಾಂತಿಯು ದೃಢವಾಗಿ ಬೇರೂರಿತೆಂದು ತಿಳಿ.

೧೦೨. ಮನುಷ್ಯನ ದೌರ್ಬಲ್ಯವೆಲ್ಲಿಂದ? ಆತನ ಮನೋವಿಕಾರ ಗಳಿಗೂ ಶಕ್ತಿಗೂ ಇರುವ ವೈಷಮ್ಯದಿಂದಲೇ. ನಮ್ಮ ಮನೋವಿಕಾರಗ ಳಿಂದಲೇ ನಮ್ಮ ಮನಸ್ಸು ಬಡವಾಗಿ ಅದರ ಶಕ್ತಿಯು ಕುಂದುತ್ತದೆ; ನಾವು ಎಷ್ಟರಮಟ್ಟಿಗೆ ನಮ್ಮ ಮನೋವಿಕಾರಗಳನ್ನು ಕಿತ್ತುಹಾಕುವೆವೋ ನಮ್ಮ

ಶಕ್ತಿಯು ಅಷ್ಟರಮಟ್ಟಿಗೆ ಹೆಚ್ಚುತ್ತದೆ; ಮನೋವಿಕಾರಗಳಿಲ್ಲದ ತ್ಯಾಗಿಯ ಶಕ್ತಿಗೆ ಎಲ್ಲೆಯಿರದು.

೧೦೩. ಪ್ರೇಮಕ್ಕೂ ದ್ವೇಷಕ್ಕೂ ಒಂದೇ ಬಾಗಲಿನ ಅಂತರವು; ಪ್ರೇಮವೆಂಬ ಕಸೂತಿಯ ಹಿಂಬದಿಯೇ ದ್ವೇಷವು.

೧೦೪. ಕಾಮದ ನಿಃಸ್ವಾರ್ಥರೂಪವೇ ಪ್ರೇಮವು; ಪ್ರೇಮದ ಸ್ವಾರ್ಥರೂಪವೇ ಕಾಮವು; ತಾನೆಂಬುದಿಲ್ಲದ ಕಾಮವೇ ಪ್ರೇಮವು; ತಾನೆಂಬುದರಿಂದ ತುಂಬಿದ ಪ್ರೇಮವೇ ಕಾಮವು.

೧೦೫. ದುರಾಲೋಚನೆಗಿಂತ ಬೇರೆ ಭಯಂಕರನಾದ ಕನ್ನಗಳ್ಳನಿಲ್ಲ.

೧೦೬. ಮನುಷ್ಯನ ಮನಃಶಕ್ತಿಗೆ ಮೇರೆ ಇಲ್ಲ; ಆದ್ದರಿಂದ ಅದನ್ನು ಚದರಗೊಡದೆ ಏಕಾಗ್ರತೆಯಿಂದ ಹೆಚ್ಚಿಸು.

೧೦೭. ನಿನ್ನ ಮನಸ್ಸು ಎಂದಿಗೆ ಏಕಾಗ್ರತೆಯಿಂದ ನಿಶ್ಚಲವಾಗಿ ದೃಢವೂ ಸ್ಥಿರವೂ ಆಗುವುದೋ, ಅಂದಿಗೇ ನೀನು ಪರಮಾತ್ಮನನ್ನು ಸೇರುವೆ.

೧೦೮. ಇತರರೊಂದಿಗೆ ಸಲ್ಲಾಪಿಸುವುದಕ್ಕಿಂತ ತನ್ನೊಂದಿಗೇ ಸಲ್ಲಾಪಿಸುವುದರಿಂದ ಹೆಚ್ಚಿನ ಪ್ರಯೋಜನವನ್ನು ಪಡೆಯುವೆ.

೧೦೯. ವೃಥಾಲಾಪದಿಂದ ದೇವರು ಸದುಪಯೋಗಕ್ಕೆಂದು ನಿನಗಿತ್ತ ನಾಲಗೆಯನ್ನು ಹೊಲಸು ಮಾಡಬೇಡ.

೧೧೦. ನಿನ್ನ ಹೃದಯವನ್ನು ಸದಾ ಶುದ್ಧವಾಗಿಟ್ಟರೆ ನೀನು ಪರಮಾತ್ಮನನ್ನು ನೋಡುವೆ.

೧೧೧. ನಿನ್ನ ಹಗೆಯವನನ್ನು ನೀನು ಪ್ರೀತಿಸಿದರೆ ನೀನು ಆತನನ್ನು ಜಯಿಸಿದೆ.

೧೧೨. ನಿನ್ನ ಹಗೆಯವರೆಲ್ಲರನ್ನು ನೀನು ಪ್ರೀತಿಸುತ್ತೀ ಎಂದರೆ ನಿನಗೆ ಶತ್ರುಗಳೇ ಇಲ್ಲ.

೧೧೩. ಶತ್ರುವಾದರೂ ದೇವರು ನಮಗೆ ಕೊಟ್ಟ ವರವೇ ಸರಿ.

೧೧೪. ದೇವರು ನಿನ್ನ ಶತ್ರುರೂಪದಿಂದ ನಿನ್ನ ಮುಂದೆ ಬಂದಾಗ ತಾನೇ ಆತನ ಚಾಚಿದ ವರದ ಹಸ್ತವನ್ನು ನೀನು ಕಾಣುವೆ.

೧೧೫. ಹಗೆಯುವನಲ್ಲಿ ದೇವರೆಂಬ ನಿನ್ನ ಗೆಳೆಯುನನ್ನು ನೋಡು.

೧೧೬. ಇತರರ ಪಾಪವನ್ನು ನೆನಸಿದೊಡನೆಯೇ ಆತನಿಂದ ಅದನ್ನು ನೀನು ಪಡೆದುಕೊಂಡಿರುವೆ.

೧೧೭. ಪ್ರೇಮದಿಂದ ನಾವು ಇತರರ ತಪ್ಪುಗಳನ್ನು ತಿದ್ದಿಸಬೇಕಲ್ಲದೆ ಶಿಕ್ಷೆಯಿಂದಲ್ಲ.

೧೧೮. 'ತಾನು ತನ್ನದು' ಎಂಬುದನ್ನು ಮನಸ್ಸಿಂದ ಕಿತ್ತುಬಿಟ್ಟು, 'ಹೆರರು, ಹೆರರದು' ಎಂದು ಮನಃಪೂರ್ವಕವಾಗಿ ಭಾವಿಸಿ ನಡೆಯುವುದೇ ಅಹಿಂಸೆಯು.

೧೧೯. ಯಾವಾತನು 'ದೇಹಿ' ಎಂದು ನಿನ್ನನ್ನು ಬೇಡುವನೋ ಆತನೇ ನಿನ್ನ ದೇವರು.

೧೨೦. ನಿನಗಿಟ್ಟು ನೀನು ಇಲ್ಲದವಂಗೆ ಕೊಟ್ಟಲ್ಲಿ ನೀನು ದೇವರ ದಾಸನಾದೆ; ನಿನಗಿದದೆ ನೀನು ಕೊಟ್ಟಲ್ಲಿ ದೇವರು ನಿನ್ನ ದಾಸನಾದನು.

೧೨೧. ಇತರರಲ್ಲಿ ದೇವರನ್ನು ಕಾಣುವಾತನು ದೇವರನ್ನು ಕಂಡನು.

೧೨೨. ಮೂರ್ತಿಯಲ್ಲಿ ದೇವರು ಅಡಗಿರುವನು; ಈ ಲೋಕದಲ್ಲಿರುವ ಅಸಂಖ್ಯ ಮೂರ್ತಿಗಳಲ್ಲಿ (ಜೀವಿಗಳಲ್ಲಿ) ಆತನು ವ್ಯಕ್ತವಾಗಿರುವನು.

೧೨೩. ದೇವರು ಮೂರ್ತಿಯಲ್ಲಿ ಮಾತ್ರ ಇರುವನಲ್ಲದೆ ಅದರ ಹೊರಗಿಲ್ಲವೆಂದು ನೀನು ಭಾವಿಸಿದೊಡನೆಯೇ ಆ ಮೂರ್ತಿಯಿಂದ ದೇವರನ್ನು ನೀನು ಹೊರಗಟ್ಟಿದೆ.

೧೨೪. ದೇವರ ಯಥಾರ್ಥವಾದ ಆರಾಧನೆಯೆಂದರೆ ಆತನು ಸಕಲ ಮತಗಳಲ್ಲಿಯೂ ಏಕರೀತಿಯಿಂದ ಇರುವನೆಂದು ಭಾವಿಸುವುದೇ.

೧೨೫. ದೇವರು ನಿನ್ನ ಮತದಲ್ಲಿ ಮಾತ್ರ ಇರುವನಲ್ಲದೆ ಇತರ ಮತಗಳಲ್ಲಿಲ್ಲವೆಂದೂ, ಇತರ ಮತಗಳ ಆಚರಣೆಯು ಪಾಪಾಚರಣೆಯೆಂದೂ, ಇತರ ಮತಾನುಯಾಯಿಗಳಿಗೆ ಸ್ವರ್ಗವೆಂದಿಗೂ ಸಿಗಲಾರದೆಂದೂ ನೀನು ಭಾವಿಸಿದೊಡನೆಯೇ ನೀನು ನಿನ್ನ ಹೃದಯದಿಂದ ದೇವರನ್ನು ಹೊರಗೆ ತಳ್ಳಿದೆ.

೧೨೬. ಹೊಲೆಯರೆಂದು ಇತರರನ್ನು ಕರೆವವನಿಗಿಂತ ಹೊಲಸಾದ

ಬೇರೆ ಹೊಲೆಯುನಿಲ್ಲ; ಅವರನ್ನು ಮುಟ್ಟಲಾಗದು ಎಂದೊಡನೆಯೇ ನಿನ್ನ ಆತ್ಮಕ್ಕೆ ನೀನು ಮುಟ್ಟುಗೋಲು ಹಾಕಿಕೊಂಡಿ.

೧೨೭. ಇತರ ಎಲ್ಲಾ ವಸ್ತುಗಳಿಂದ ಹಸಿದ ವಿನಾ ನೀನು ದೇವರ ಬುತ್ತಿಯನ್ನು ಉಣ್ಣಲಾರೆ.

೧೨೮. ಸಂಸಾರದ ಪಾಲಲ್ಲಿ ಏನನ್ನೂ ಅಪೇಕ್ಷಿಸದೆ ಅವನ್ನು ಬಿಟ್ಟು ಕೊಟ್ಟ ವಿನಾ ನಿನ್ನೊಡನೆ ದೇವರು ಪಾಲುಗಾರನಾಗನು.

೧೨೯. ಬಂದೊದಗಿದ ದುಃಖವಾವುದೇ ಆಗಲಿ, ಅದನ್ನು ದೇವರನ್ನು ದೂರದೆ ಮನಃಪೂರ್ವಕವಾಗಿ ಸಹಿಸಿಕೊಳ್ಳುವುದೇ ಎಲ್ಲಾ ಸದ್ಗುಣಗಳ ತವರ್ಮನೆಯು.

೧೩೦. ನಿನ್ನ ಮನಸ್ಸಿನಲ್ಲಿ ನೀನು ಎಂದಿಗೂ ಏಕಾಂಗಿಯಾಗಿದ್ದರೆ ನೀನು ದೇವರನ್ನು ಹೊಂದಲಿಕ್ಕೆ ಯೋಗ್ಯನಾಗುವೆ.

೧೩೧. ನಮ್ಮ ಅಕೃತ್ಯಗಳಿಂದ ನಾವು ದಿನೇ ದಿನೇ ಯೇಸುವನ್ನು ಎಷ್ಟೋ ಸಾರಿ ಸಿಲುಬೆಗೆ ಹಾಕುತ್ತಿರುತ್ತೇವೆ.

೧೩೨. ಲೋಕದ ಕಷ್ಟಗಳಿಂದ ನೀನು ಬಳಲುವಿಯಾದರೆ, ಸ್ವರ್ಗದ ಸುಖದಿಂದಲಾದರೂ ನೀನು ಬಳಲುವೆ.

೧೩೩. ದೇವಾ, ಇತರರಿಂದ ನನಗೆ ಯಾವ ಕಷ್ಟಗಳಾದರೂ ಬರಲಿ; ನನ್ನಿಂದ ಇತರರಿಗೆ ಯಾವುದೊಂದು ಕಷ್ಟವಾದರೂ ಬಾರದಂತೆ ಮಾಡು.

೧೩೪. ವೈದ್ಯನು ಆರೋಗ್ಯವುಳ್ಳವರಿಗಲ್ಲ, ಆರೋಗ್ಯವಿಲ್ಲದವರಿಗೆ; ದೇವರು ಪುಣ್ಯವಂತರಿಗಲ್ಲ, ಪಾಪಿಗಳಿಗ.

೧೩೫. ವಜ್ರವು ಬಹಳ ಕತ್ತಲಾದ ಕಲ್ಲುಗಣಿಯಿಂದ; ಯಥಾರ್ಥ ಭಕ್ತಿಯು ಅಗಾಧವಾದ ಪಾತಕರಾಶಿಯಿಂದ.

೧೩೬. ನಿನ್ನಲ್ಲಿ ಪಾತಕಗಳಿಲ್ಲವಾದರೆ, ನಿನಗೆ ದೇವರೇಕೆ?

೧೩೭. ಚಂದ್ರನು ಕತ್ತಲಾದ ರಾತ್ರಿಯನ್ನು ಬೆಳಗಿಸುವವನಲ್ಲದೆ, ಹಗಲನ್ನಲ್ಲ; ತನ್ನ ಪಾತಕಗಳಿಗೆ ಅನುತಾಪ ಪಡುವ ಪಾಪಿಯ ಹೃದಯದಲ್ಲಿ ದೇವರು ಬೆಳಕನ್ನು ಸುರಿಯುವನಲ್ಲದೆ, ತಾನು ಪುಣ್ಯವಂತನೆಂದು ಹೆಚ್ಚಳ ಪಡುವವನೊಳಗಲ್ಲ.

೧೩೮. 'ದೇವಾ, ನೀನೇಕೆ ನನ್ನ ಈ ಹರಕು ಹೊಲಸು ಹೃದಯಕ್ಕೆ ಬಂದೆ?'

'ಪಾಪಿಯೇ ಪುಣ್ಯವಂತರೆಂದುಕೊಳ್ಳುವವರ ಅತ್ಯಾದರದಿಂದ ಹಸಿದು, ಒಂದಗುಳು ತಂಗಳಾದರೂ ನಿನ್ನಲ್ಲಿ ಸಿಕ್ಕೀತೇ ಎಂಬ ಆಸೆಯಿಂದ ಬಂದೆ.'

೧೩೯. 'ಪಾಪಿಯೇ, ನಿನ್ನ ಪಾಪದ ಭಾರಕ್ಕೆ ನೀನೊಂದೇ ಕೈಗೊಟ್ಟು ಅದನ್ನು ನನ್ನ ಹೆಗಲಿಗೆತ್ತಿ ಕೊಟ್ಟು ನನ್ನನ್ನು ಹಿಂಬಾಲಿಸಿದರಷ್ಟೇ ಸಾಕು. ಅದನ್ನು ನಾನೇ ಹೊತ್ತುಕೊಳ್ಳುವೆನು.'

'ದೇವಾ, ನನ್ನ ಪಾಪದ ಭಾರವನ್ನು ನಾನೆ ಹೊರಬೇಕಲ್ಲದೆ, ನಿನ್ನಿಂದ ಹೊರಿಸಲೇ?'

'ಮರುಳೇ, ಹಾಗೆನ್ನದಿರು. ಅನುತಾಪ ಪಡುವ ಪಾಪಿಗಳ ಭಾರವನ್ನು ನಾನು ಹೊರುವೆನೆಂದಲ್ಲವೇ ನಾನು ಪಾಪವನ್ನಾದರೂ ಉಂಟು ಮಾಡಿದೆನು?" ನೀನು ಅನುತಾಪವನ್ನು ಪಟ್ಟಂದಿನಿಂದ ನಿನಗೂ ಪಾಪಕ್ಕೂ ಸಂಬಂಧವೇನು?'

೧೪೦. ಕೋಳಿ ಕೆಲೆಯುತ್ತಲೇ ಪೇತ್ರನು ಅತ್ತನು; ನಾವಾದರೊ ಕೋಳಿಯು ಕತ್ತನ್ನೇ ಮುರಿದಿರುವೆವು.

೧೪೧. ದೇವಾಲಯುಗಳ ಹೊರತಾಗಿ ದೇವರು ಇತರತ್ರವ್ಯಾಪಿಯು; ದೇವಾಲಯುವೆಂಬುದು ದೇವರ ಸೆರೆಮನೆ.

೧೪೨. ಮನುಷ್ಯನ ಹೃದಯುವೇ ದೇವರ ಯುಥಾರ್ಥವಾದ ಆಲಯುವು; ದೇವಾಲಯುಗಳಿಲ್ಲದ ಮತವೇ ಯುಥಾರ್ಥವಾದ ಮತವು.

೧೪೩. ಗಂಧದಂತೆ ನಿನ್ನನ್ನು ತೇದಷ್ಟು ಹೆಚ್ಚಿನ ಪರಿಮಳವನ್ನು ಬೀರು.

೧೪೪. ಸತ್ತ ಬಳಿಕಲೂ ಕೀರ್ತಿಯಿಂದ ಬಾಳುವಂತೆ ನಡೆ.

೧೪೫. ನೀನು ಸುಖವನ್ನು ಹೇಗೆ ಸಾಧಿಸುತ್ತಿರುವಿಯೋ ಹಾಗೆಯೇ ಅದು ನಿನ್ನಿಂದ ದೂರ ಸರಿಯುತ್ತಿದೆ; ಯಾಕೆಂದರೆ ಸಂಸಾರ ಸುಖವು ಬರೇ ಬಿಸಿಲುಕುದುರೆಯೇ.

೧೪೬. ನುಡಿದಂತೆಯೇ ನಡೆ; ನಿನ್ನ ನುಡಿಯು ನಡೆಯಿಂದ ತಿಳಿಯುಬರಲಿ.

೧೪೭. ಮನೆಯಲ್ಲಿ ಕಾಮಧೇನುವನ್ನು ಕಟ್ಟಿ ಅಳೆಯ ನೀರನ್ನು ಎರವಾಗಿ ಕೇಳುವುದುಂಟೇ?

೧೪೮. ಕ್ರಿಯೆಯಲ್ಲಿ ಪರಿಣಮಿಸದ ಮಾತುಗಳು ಬಂಜೆ.

೧೪೯. ದೇವರೇ ಅನಾಥರ ನಾಥನು.

೧೫೦. ತನ್ನಲ್ಲಿ ಮಾತ್ರ ಚಂದ್ರನು ಹೊಳೆಯುತ್ತಾನೆಂಬುದು ಪ್ರತಿಯೊಂದು ಕೊಳದ ಹೆಚ್ಚಳವು; ತಾವು ನಂಬುವ ಮತದಿಂದಲ್ಲದೆ ದೇವರನ್ನು ಹೊಂದುವರೆ ಬೇರೆ ದಾರಿಯಿಲ್ಲವೆಂಬುದು ಪ್ರತಿಯೊಂದು ಮತಾನುಯಾಯಿಗಳ ಹೆಚ್ಚಳವು.

೧೫೧. ಅನೇಕ ಮತಗಳೊಳಗಣ ಪರಸ್ಪರ ಅನೇಕ ಭೇದಗಳು ದೇವರ ಪಕ್ಕೆಯನ್ನು ಇರಿವ ಅನೇಕ ಭಲ್ಲೆಗಳಷ್ಟೇ.

೧೫೨. ನೀನು ಕೋಪಕ್ಕೆ ಎಡೆಕೊಡದೆ ಇತರರ ಕೋಪವನ್ನು ಜಯಿಸು; ನಿನ್ನ ಒಳ್ಳೆತನದಿಂದಲೇ ಇತರರ ಕೆಟ್ಟತನವನ್ನು ಜಯಿಸು; ಕೊಡುಗೈಯನ್ನು ನೀಡುತ್ತಲೇ ಲೋಭವನ್ನು ಜಯಿಸು; ಸತ್ಯದಿಂದಲೇ ಅಸತ್ಯವನ್ನು ಜಯಿಸು.

೧೫೩. ಬೇರೆ ಬೇರೆ ಮತಗಳು ಶಿಖರವನ್ನು ಸೇರುವರೆ ಇರುವ ಬೇರೆ ಬೇರೆ ದಾರಿಗಳಷ್ಟೇ. ಶಿಖರವನ್ನು ಸೇರಲು ಸೊಂಟಕಟ್ಟಿದಾತನಿಗೆ ಯಾವ ದಾರಿಯಾದರೂ ಒಂದೇ. ಶಿಖರದಲ್ಲಿ ಯಾವ ದಾರಿಯೂ ಇಲ್ಲ.

೧೫೪. ದೇವಾ, ಅಸತ್ಯದಿಂದ ನನ್ನನ್ನು ಸತ್ಯಕ್ಕೆ ನಡೆಯಿಸು; ಕತ್ತಲೆಯಿಂದ ಬೆಳಕಿಗೆ ನಡೆಯಿಸು; ಮೃತಿಯಿಂದ ಅಮೃತತ್ವಕ್ಕೆ ನಡೆಯಿಸು.

೧೫೫. ನಿನಗೆ ಕರ್ಮವನ್ನು ಮಾಡುವುದರಲ್ಲಿಯೇ ಅಧಿಕಾರವಿದೆಯಲ್ಲದೆ, ಕರ್ಮದ ಫಲದಲ್ಲಿ ಎಂದಿಗೂ ಅಧಿಕಾರವಿಲ್ಲ; ಆದ್ದರಿಂದ ಫಲಾಪೇಕ್ಷೆಯಿಂದ ಎಂದಿಗೂ ಕರ್ಮವನ್ನು ಉಜ್ಜುಗಿಸದಿರು; ಕರ್ಮವನ್ನು ಮಾಡದವನೂ ಆಗದಿರು.

೧೫೬. ಕರ್ಮವನ್ನು ಮಾಡದಿರುವುದಕ್ಕಿಂತ ಕರ್ಮವನ್ನು ಮಾಡುತ್ತಿರುವುದೇ ಮೇಲು; ಆದ್ದರಿಂದ ನಿನ್ನ ನಿಯತ ಕರ್ಮವನ್ನು ಮಾಡು.

೧೫೭. 'ತಾನು ಪರಮಾತ್ಮನ ಅಂಶವಾಗಿರುವೆನು, ಆತನೇ ನನ್ನಿಂದ ಕರ್ಮವನ್ನು ಮಾಡಿಸಿಕೊಳ್ಳುತ್ತಾನೆಂಬುದನ್ನು ಚೆನ್ನಾಗಿ ಭಾವಿಸಿ, ಎಲ್ಲಾ ಕರ್ಮವನ್ನು ನನ್ನಲ್ಲಿ ಸಮರ್ಪಿಸಿ, ನಿಷ್ಕಾಮನಾಗು; ಮತ್ತು ಈ ಕರ್ಮವು ತನ್ನದು ಅದು ತನ್ನದಲ್ಲವೆಂಬ ಅಭಿಮಾನವನ್ನು ತೊರೆದು, ಭೇದಾಭೇದದ ನಡುಕವನ್ನು ತೊರೆದು (ಈ ಜೀವನ ಸಂಗ್ರಾಮದಲ್ಲಿ) ಯುದ್ಧವನ್ನು ಮಾಡು.'

೧೫೮. ಆತ್ಮದಲ್ಲಿ ಪುನರ್ಜನ್ಮವೆತ್ತಿದ ವಿನಾ ನೀನು ದೇವಧಾಮವನ್ನು ಸೇರಲಾರೆ.

೧೫೯. ಆಚಾರವೇ ಭಕ್ತಿಯು ಕವಚವು.

೧೬೦. ದೇವರ ಭಯವೇ ಜ್ಞಾನದ ಮೂಲವು.

೧೬೧. ತಾನು ಕೆಟ್ಟವನೆಂದೇ ನಂಬಿ ಮರುಗಿದರೆ ನೀನು ಒಳ್ಳೆಯವನಾಗುವೆ.

೧೬೨. ಯಾವ ಹೆಂಗುಸಾದರೂ ತನ್ನ ಮಗುವಿನ ತಾಯಿಯಾಗಬಲ್ಲಳು; ಹೆರರ ಮಗುವಿನ ತಾಯಿಯಾಗುವುದೇ ಶ್ರೇಷ್ಠವಾದ ನಾರೀಧರ್ಮವು.

೧೬೩. ಹಣದಲ್ಲಿ, ಸ್ವಸುಖದಲ್ಲಿ, ಹೆಸರನ್ನು ಗಳಿಸಿಕೊಳ್ಳುವುದರಲ್ಲಿ ಆಸಕ್ತನಾದವನು ತನ್ನ ದೇಶವನ್ನಾಗಲೀ ಸಮಾಜವನ್ನಾಗಲೀ ಪ್ರೀತಿಸಲೊಲ್ಲನು; ದೇಶಸೇವೆಯಾಗಲೀ ಸಮಾಜಸೇವೆಯಾಗಲೀ ಸದ್ಗುಣಗಳನ್ನು ಗಳಿಸಿಕೊಳ್ಳುವಾತನಿಂದಲೇ ಮಾಡಲ್ಪಡುವುವು.

೧೬೪. ತನಗೆ ಇಲ್ಲದವುಗಳ ಬಗ್ಗೆ ದುಃಖಿಸದೆ, ಇರುವವುಗಳಲ್ಲಿಯೇ ಸುಖಿಸುವವನು ಬುದ್ಧಿವಂತನು.

೧೬೫. ಶತ್ರುವನ್ನು ಜಯಿಸುವುದು ಹೇಗೆ? ಆತನು ನಿನಗೆ ಮಾಡುವ ಪ್ರತಿಯೊಂದು ಅಪಕಾರಕ್ಕೆ ಬದಲಾಗಿ ಆತನಿಗೆ ಉಪಕಾರವನ್ನು ಮಾಡುತ್ತಲೇ ಇರು.

೧೬೬ 'ದೇವಾ, ನೀನು ಕೊಡತಕ್ಕ ಸಂಪತ್ತೇ ಮೊದಲಾದ

ಸಕಲಭಾಗ್ಯಗಳನ್ನು ಯಾರಿಗೆ ಬೇಕೋ ಅವರಿಗೆ ಕೊಡು; ನನಗಾದರೋ, ನೀನೇ ಸಾಕು; ನಿನ್ನನುಳಿದು ಬೇರೆ ಯಾವುದಾದರೂ ನನಗೆ ಬೇಡ.'

೧೬೭. ನಿನ್ನೊಳಗೆನೇ ಮುಳುಗಿ ಹುಡುಕಾಡು; ನೀನು ಅರಿತು ಕೊಳ್ಳತಕ್ಕುದೆಲ್ಲವನ್ನು ಅಲ್ಲಿಯೇ ಕಾಣುವೆ.

೧೬೮. ನಿನ್ನ ಹೃದಯಗನ್ನಡಿಯಲ್ಲಿಯೇ ನಿರೀಕ್ಷಿಸು; ಅಲ್ಲಿ ತಾನೇ ಆತನ ಮೋರೆಯನ್ನು ಕಾಣುವೆ.

೧೬೯. ನೀನು ಆತನನ್ನು ಹುಡುಕಾಡುವುದಾದರೆ, ಆ ಹುಡುಕೋ ಣವೂ ನೀನೂ ಒಂದಾಗಿ, ಇವೆರಡೂ ಮರೆತು ಹೋಗುವ ತನಕ ಹುಡುಕು.

೧೭೦. ಕಬ್ಬಿಣದಲ್ಲಿ ಹುಟ್ಟಿದ ತುಕ್ಕಿಂದಲೇ ಕಬ್ಬಿಣದ ನಾಶ; ಪಾಪಿಯ ಮನಸ್ಸಿನಲ್ಲಿ ಹುಟ್ಟಿದ ಪಾಪಗಳಿಂದಲೇ ಆತನ ನಾಶ.

೧೭೧. ಕೋಪಬಾರದಂತೆ ಯಾವಾಗಲೂ ಎಚ್ಚರವಿರು; ವಿಕಾರ ಗಳಿಗೆ ಎಡೆಸಿಗದಂತೆ ದೇಹವನ್ನು ದಮಿಸು; ದುಷ್ಕೃತ್ಯಗಳನ್ನು ಮೊಳೆವೊಡ ನೆಯೇ ಜಾಡಿಸು; ಸನ್ಮಾರ್ಗದಲ್ಲಿಯೇ ನಡೆಯುತ್ತಿರು.

೧೭೨. ಇತರರು ನಿನಗೆ ಯಾವ ಬಗೆಯ ಒಳ್ಳೆಯದನ್ನು ಮಾಡ ಬೇಕೆಂದೂ ಆಶಿಸುತ್ತಿಯೋ, ಅವನ್ನೇ ನೀನು ಮುಂದಾಗಿ ಅವರಿಗೆ ಮಾಡು.

೧೭೩. ಕೆಟ್ಟವನ್ನು ಕೆಟ್ಟತನದಿಂದ ಎಂದಿಗೂ ಎದುರಾಯಿಸದಿರು.

೧೭೪. ನಿನ್ನಿಂದಲೇ ನಿನ್ನನ್ನು ಉದ್ಧರಿಸಿಕೊಳ್ಳು, ನಿನ್ನನ್ನೇ ನೀನು ಮುಳುಗಿಸದಿರು; ಯಾಕೆಂದರೆ, ನೀನೇ ನಿನ್ನ ಪರಮ ಬಂಧುವು, ನೀನೇ ನಿನ್ನ ಪರಮಶತ್ರುವು.

೧೭೫. 'ಎಲೇ, ಅರ್ಜುನನೇ, ತನ್ನಂತೆಯೇ ಇತರರೆಂದೂ ಅವರ ಸುಖದುಃಖಗಳೂ ತನ್ನ ಸುಖದುಃಖಗಳಂತೆಯೇ ಎಂದೂ ಸರ್ವತ್ರ ಸಮದೃಷ್ಟಿಯಿಂದ ಯಾವಾತನು ಭಾವಿಸುವನೋ, ಆತನೇ ಶ್ರೇಷ್ಠನಾದ ಯೋಗಿಯು.'

೧೭೬. 'ನೀನು ಯಾವುದನ್ನು ಮಾಡುವೆಯೋ, ಯಾವುದನ್ನು ಉಣ್ಣುವೆಯೋ, ಹೇಗೆ ಆರಾಧಿಸುವೆಯೋ, ಯಾವುದನ್ನು ಕೊಡುತ್ತಿರು

ವೆಯೋ, ಮತ್ತು ಹೇಗೆ ತಪಿಸುವೆಯೋ, ಇವೆಲ್ಲವನ್ನೂ ನನ್ನಲ್ಲಿ ಸಮರ್ಪಿಸಿರುವೆ ಎಂಬ ಮನೋನಿಶ್ಚಯದಿಂದಲೇ ಮಾಡು.'

೧೭೭. 'ನಿನ್ನ ಮನಸ್ಸು ಸದಾ ನನ್ನಲ್ಲಿಯೇ ನೆಲಸಿರಲಿ; ನನ್ನ ಭಕ್ತಿಯನ್ನೇ ಕೈಗೊಳ್ಳು; ನನ್ನನ್ನೇ ಆರಾಧಿಸು; ನನ್ನನ್ನೇ ಪ್ರಣಾಮಿಸು; ನನ್ನಲ್ಲಿಯೇ ನಿನ್ನ ಸಮಾಧಾನವನ್ನು ಸಾಧಿಸು; ಹೀಗೆ ಎಲ್ಲ ಬಗೆಗಳಲ್ಲಿಯೂ ನನ್ನಲ್ಲೇ ಆಸಕ್ತನಾಗು–ನೀನು ನನ್ನನ್ನೇ ಸೇರುವೆ.'

೧೭೮. 'ಯಾವ ಮತಗಳೂ ನಿನಗೆ ಬೇಡ, ಯಾವ ಧರ್ಮಗಳೂ ಬೇಡ–ಇವೆಲ್ಲವನ್ನೂ ಬಿಟ್ಟುಬಿಡು (ಯಾಕೆಂದರೆ ಇವುಗಳಿಂದ ನನ್ನನ್ನು ಸೇರುವೆಯಾದರೆ ಹಾದಿಯು ಬಹಳ ಉದ್ದವೂ ದುಸ್ಸಾಧ್ಯವೂ ಆಗುವುದು.) ನನ್ನನ್ನು ಒಬ್ಬನನ್ನೇ ಸಂಪೂರ್ಣವಾದ ಅನನ್ಯ ಮನಸ್ಸಿನಿಂದ ಮರೆಹೋಗು; ನಾನೇ ನಿನ್ನನ್ನು ಸಮಸ್ತ ಪಾತಕಗಳಿಂದ ಬಿಡುಗಡೆ ಮಾಡುವೆನು—ಶಂಕಿಸದಿರು, ಶೋಕಿಸದಿರು.'

೧೭೯. ಮಾತೃಭೂಮಿಯ ಸೇವೆಯಲ್ಲಿ ಯಾವಾತನು ಹೋರಾಡುವನೋ ಆತನ ನೆರಳನ್ನು ಬಿಟ್ಟು ದೇವರು ಅತ್ತಿತ್ತ ಕದಲನು; ಹಿಂದು ಹೆಜ್ಜೆ ಹಾಕದೆ ಆತನು ಎಂತೆಂತು ಮುಂದೊತ್ತುವನೋ, ಅಂತಂತು ದೇವರು ತಾನೇ ಆತನಾಗುವನು; ಇಂತಹ ಹೋರಾಟದಲ್ಲಿ ಆತನಿಗೆ ಮಡಿಯಲಿಕ್ಕೆ ಬಂದರೆ, ದೇವರು ಆತಗೆ ತನ್ನ ಎದೆಯಲ್ಲಿಯೇ ತೊಟ್ಟಿಲು ಕಟ್ಟುವನು.... ಮಾತೃಭೂಮಿಯ ಸೇವೆಯಿಂದ ಇಹದಲ್ಲಿ ಜನ್ಮವೆತ್ತಿದಾತಗೆ ಮಿಗಿಲಾದ ಧರ್ಮವಿಲ್ಲ.

೧೮೦. 'ಎಲೈ ಅರ್ಜುನನೇ, ಧರ್ಮವು ಎಂದೆಂದಿಗೆ ಕುಂದುವುದೋ, ಹಾಗೆಯೇ ಎಂದೆಂದಿಗೆ ಅಧರ್ಮವು ಹೆಚ್ಚುವುದೋ ಅಂದಂದು ನಾನು ಜನ್ಮವೆತ್ತುವೆನು; ಸಜ್ಜನರ ರಕ್ಷಣಕ್ಕಾಗಿಯೂ ದುರ್ಜನಸಂಹಾರಕ್ಕಾಗಿಯೂ ಧರ್ಮವನ್ನು ಸಂಸ್ಥಾಪಿಸುವುದಕ್ಕಾಗಿಯೂ ಅವಿನಾಶಿಯಾದ ನಾನು ಯುಗಯುಗದಲ್ಲಿ ವಿನಾಶಿಯಾದ ಶರೀರಗಳನ್ನಾಂತು ಇಳಿತರುವೆನು.'

॥ ಶ್ರೀಮದ್ಭಗವದರ್ಪಣಮಸ್ತು ॥

# 63

# ಡಾಕ್ಟರ್ ಆರೋಗ್ಯನ್

●

(ರಾಜಾಜಿಯವರ ಕಥೆ)


ಮೂಲಲೇಖಕರು:

ಚಕ್ರವರ್ತಿ ಶ್ರೀ॥ ರಾಜಗೋಪಾಲಾಚಾರ್.

ಅನುವಾದಕರು:

ಶ್ರೀ॥ ಕೆ. ಎಸ್. ಭಟ್, ಶಿರಾಡಿಪಾಲ್.



**1955.**


ಒಂದಾಣೆ 

ಮಾಲೆ

# ಒಂದಾಣೆ ಮಾಲೆಯಲ್ಲಿ ಈ ವರೆಗೆ ಪ್ರಕಟವಾದ ಪುಸ್ತಕಗಳು

೧. *ಕೆಪ್ಪಟಿರಾಯ (ವಿನೋದ ಕಥೆ)
೨. *ನಾರೀಶ್ವರರು (ಏಕಾಂಕ ಪ್ರಹಸನ)
೩. *ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು.
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ)
೫. *ಅದ್ಭುತತ್ಯಾಗ ಮತ್ತು ಇತರ ಕಥೆಗಳು
೬. ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ)
೭. *'ಬೀಡಿ ಸೇದಬೇಡಿ' ಮತ್ತು 'ಆ ಮಗು' (ವಿನೋದ ಕಥೆಗಳು)
೮. *ಇಂಗ್ಲಿಷ್-ಕನ್ನಡ ಅರ್ಥಕೋಶ
೯. *ಲಂಚಕ್ಕೆ ಸಂಚಕಾರ
೧೦. *ಟಿಶ್ಯೂ ಔಷಧಿಗಳ ಕೈಪಿಡಿ.
೧೧. ಶ್ರೀಕ್ಷೇತ್ರ ಧರ್ಮಸ್ಥಳ (ತೃ. ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು
೧೪. ವೆಂಕಟನ ಸಂಕಟ (ಏಕಾಂಕ ಪ್ರಹಸನ)
೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ)
೧೬. ವೇಣೂರಿನ ಗತವೈಭವ.
೧೭. ಒಗಟುಗಳು [ದ್ವಿತೀಯ ಮುದ್ರಣ]
೧೮. ಜಗಳಗಂಟ ಮತ್ತು ಇತರ ಕಥೆಗಳು
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಪ್ಪು
೨೧. *ಭಾರತದ ಮಹಾನಗರಗಳು (ಭಾಗ ೧)
೨೨. ತಿರುಕ್ಕುರಲ್
೨೩. ಸೂರ್ಯನ ಸಂಸಾರ ಮತ್ತು ಇತರ ಕಥೆಗಳು.
೨೪. *ಭಾರತದ ಮಹಾನಗರಗಳು (ಭಾಗ ೨)
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳು
೨೬. *ಮಾರಾವತಾರ (ಏಕಪಾತ್ರ ಯಕ್ಷಗಾನ ಪ್ರಬಂಧ.
೨೭. ಹಾಸವಿಲಾಸ (ನಗೆಹನಿಗಳು)
೨೮. ಸತ್ಯವಂತ ಬಾಬಿ (ಏಕಾಂಕ ಪ್ರಹಸನ)
೨೯. ಜಾಣ್ಮೆಯ ಒಗಟುಗಳು
೩೦. ಜಾತಕ ಕಥೆಗಳು
೩೧. ಕಾರ್ಕಳದ ಚರಿತ್ರೆ
೩೨. ಮರ್ಜಿ (ಏಕಾಂಕ ಪ್ರಹಸನ)
೩೩. ದರ್ಶನದ ಕಥೆಗಳು
೩೪. ಅಳುವಿನ ಹೊಳೆ ಮತ್ತು ಕೇಶವಭೂಪ (ಮಕ್ಕಳ ಕಥೆಗಳು)
೩೫. ಶರಾಬಿನ ಪೀಪಾಯಿಗಳು
೩೬. ಉಪದೇಶ ಶತಕ
೩೭. ನಿಮಗೆ ಗೊತ್ತಿದೆಯೇ?
೩೮. ಚತುರ ಚಮತ್ಕಾರ
೩೯. ಸತೀ ಸಾವಿತ್ರಿ
೪೦. ಆಭರಣಗಳ ಪೆಟ್ಟಿಗೆ, ಮತ್ತು ಇತರ [ಕಥೆಗಳು
೪೧. ಭಾರತದ ಮಂತ್ರಿಮಂಡಲಗಳು (ದ್ವಿ.
೪೨. ಕಾಲುಬಳೆಯ ಕಥೆ [ಮುದ್ರಣ)
೪೩. ಭಾರತದ ನಾಲ್ಕು ಕಲಶಗಳು
೪೪. ವ್ಯಸನದಿಂದ ಲಾಭ ಮತ್ತು ಇತರ [ಕಥೆಗಳು
೪೫. ಸುಭಾಷಿತ
೪೬. ೧೮೫೭ರ "ಸಿಪಾಯಿ ದಂಗೆ"
೪೭. ಅಕಾಂಡ ತಾಂಡವ (ರೇಡಿಯೋ ನಾಟಕ)
೪೮. ಸಾಹಸದ ಕಥೆಗಳು.
೪೯. ಸಂಜ್ಞಾ ಜ್ಞಾನ ಕೋಶ
೫೦. ಪಂಡಿತನ ಪಿಟಿಲು
೫೧. ಭೋಗಯಾತ್ರೆ
೫೨. ಸಂಗ್ರಾಮಸಿಂಹ
೫೩. ಧರ್ಮ ಶಿಕ್ಷಾ
೫೪. ಮಹಾತ್ಮ
೫೫. ಮೀರಾಬಾಯಿ (ಏಕಾಂಕ ನಾಟಕ)
೫೬. ವೀರರಮಣಿ ಕರ್ಮದೇವಿ
೫೭. ಅರಳಿದ ನಗು
೫೮. ಸಚಿತ್ರ ಜಬಾನ್
೫೯. ಚುಟ್ಟಿ ಬಿಟ್ಟಿ ಛಿಟ್ಟಿ (ಏಕಾಂಕ ಪ್ರಹಸನ)
೬೦. ನಿರಪರಾಧಿ
೬೧. ಭಕ್ತವಾಣಿ
೬೨. ಜಾನಪದ ಸಾಹಿತ್ಯ
೬೩. ಡಾಕ್ಟರ್ ಆರೋಗ್ಯವರ್

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಈ ವರೆಗೆ ಅರ್ವತ್ತಮೂರು ಪುಸ್ತಕಗಳಲ್ಲಿ, ಅರ್ವತ್ತಮೂರು ಆಣೆಗಳಿಗೆ, 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, 1372 ಪುಟಗಳನ್ನು ಕೊಟ್ಟಿರುತ್ತದೆ.

# ಲೇಖಕನ ಎರಡು ಮಾತು.

ಮಾನ್ಯ ಚಕ್ರವರ್ತಿ ರಾಜಗೋಪಾಲಾಚಾರ್ಯರು, ಭಾರತದ ಪ್ರಥಮ ಮತ್ತು ಕೊನೆಯ ಗವರ್ನರ ಜನರಲರಾಗಿದ್ದವರು. ಅರ್ಧ ಶತಮಾನಕ್ಕೂ ಹೆಚ್ಚಿನ ಕಾಲವನ್ನು—ಈ ವರೆಗೆ—ದೇಶ ಸೇವೆಯಲ್ಲಿ, ಜನತಾ ಸೇವೆಯಲ್ಲಿ ವಿನಿಯೋಗಿಸಿದವರು. ಎರಡು ಬಾರಿ ಮದ್ರಾಸು ರಾಜ್ಯದ ಮುಖ್ಯಮಂತ್ರಿಯಾಗಿದ್ದವರು. ರಾಜತಂತ್ರ ಪ್ರವೀಣರು; ಕುಶಾಗ್ರಮತಿಗಳು; ಭಾರತದ ಮಹಾಗ್ರಂಥಗಳನ್ನೂ, ಜಗತ್ತಿನ ಶ್ರೇಷ್ಠ ಸಾಹಿತಿಗಳ ಮಹಾಕೃತಿಗಳನ್ನೂ ಅಭ್ಯಸಿಸಿದವರು. "ಕಂಬನ್ ರಾಮಾಯಣ"ವನ್ನು ಸುಲಲಿತವಾಗಿ ತಮಿಳಿಗೆ ಭಾಷಾಂತರಿಸಿದವರು. ರಾಮಾಯಣ-ಮಹಾಭಾರತ ಗ್ರಂಥಗಳನ್ನು ಇಂಗ್ಲಿಷಿಗೂ ತರ್ಜುಮೆ ಮಾಡಿದವರು. ಶ್ರೀ ಶಂಕರಾಚಾರ್ಯಕೃತ "ಭಜಗೋವಿಂದಂ" ಸ್ತೋತ್ರದ ವ್ಯಾಖ್ಯಾನಕಾರರೂ ಆಗಿರುವರು.

ಹಲವು ಸಾಮಾಜಿಕ ಕಥೆಗಳನ್ನೂ ಬರೆದು ಪ್ರಸಿದ್ಧರಿರುವರು.

ಅವರ ಕೆಲವು ಗ್ರಂಥಗಳೂ ಸಣ್ಣ ಕತೆಗಳೂ ಅನೇಕ ಭಾಷೆಗಳಿಗೆ ಅನುವಾದಿಸಲ್ಪಟ್ಟಿವೆ. ಅವುಗಳಲ್ಲಿ "ದುಃಖಿತ ಜಗತ್ತು" ಮತ್ತು "ಕುಬ್ಜಾ ಸುಂದರಿ" ಎಂಬ ಎರಡು ಕಥಾಸಂಕಲನಗಳು ಸುಪ್ರಸಿದ್ಧವಾಗಿವೆ.

ರಾಜಾಜಿಯವರ ಕಥೆಗಳಲ್ಲಿ ವಿನೋದವಿದೆ; ನೀತಿಯೂ ಬೆರೆತಿದೆ. ಅವರ ಕಥಾತಂತ್ರವು ಮೇಲ್ಮಟ್ಟದ್ದು. ಅವರ ಕಥಾಸಂಗ್ರಹದಿಂದ ಒಂದನ್ನು ಅನುವಾದಿಸಿ, ಕನ್ನಡಿಗರ ಮುಂದಿರಿಸಿರುವೆನು.*

ಮುಖ್ಯಮಂತ್ರಿ ಪದವಿಯಿಂದ ನಿವೃತ್ತರಾದ,— ವಯೋವೃದ್ಧರೂ ಜ್ಞಾನವೃದ್ಧರೂ ಆಗಿರುವ ಪೂಜ್ಯ ರಾಜಾಜಿಯವರು, ಎಪ್ಪತ್ತಾರರ ಗಡಿ ದಾಟುತ್ತಿರುವರಾದರೂ, ಕರ್ಮಯೋಗಿಯಾಗಿಯೇ ಇದ್ದು, ಸದಾ ಸಾರ್ವಜನಿಕ ಸೇವೆಗೇ ತಮ್ಮನ್ನರ್ಪಿಸಿಕೊಂಡಿರುವರು. ಮಾನ್ಯರಾದ ಅವರಿಂದ, ಜನತೆಗೆ ಇನ್ನೂ ಬಹುಕಾಲ ಮಾರ್ಗದರ್ಶನ ಲಭಿಸುವಂತೆ ಪರಮಾತ್ಮನು ಅನುಗ್ರಹಿಸಲಿ!

—ಲೇಖಕ.

---

*ರಾಜಾಜಿಯವರ "ನಿರಪರಾಧಿ" ಎಂಬ ಕಥೆಯು 'ಒಂದಾಣೆ ಮಾಲೆ'ಯಲ್ಲಿ ಈ ಮೊದಲು, ೬೦ನೇ ಪುಸ್ತಕವಾಗಿ ಪ್ರಕಟವಾಗಿದೆ.

# ಡಾಕ್ಟರ್ ಆರೋಗ್ಯಮ್

▪▪▪▪▪▪▪▪▪

ಸಾಹುಕಾರ್ ಸೇಠ್ ಬನ್ಸಿಲಾಲರು ಕೆಂಗಣ್ಣುಗಳನ್ನರಳಿಸಿಕೊಂಡು ದುರದುರನೆ ನೋಡುತ್ತ ಹೊರಗೆ ಬಂದರು. ಅವರೆದುರಿಗೇ ನಿಂತುಕೊಂಡಿದ್ದ ಡಾಕ್ಟರ್ ಆರೋಗ್ಯಮ್‌ರವರು ಭಯಭೀತರಾದವರಂತೆ ತಲೆತಗ್ಗಿಸಿದರು. "ಇನ್ನು ಒಂದೇ ಒಂದು ದಿನದ ಮಟ್ಟಿಗೂ ಅವಕಾಶಕೊಡಲಾರೆ" ಸೇಠಜೀಯವರು ಕೋಪಗೊಂಡು ಗರ್ಜಿಸಿದರು.

"ಸ್ವಾಮಿ! ತಮಗಾಗಿ ನಾನು ಎಷ್ಟೋ ಕಷ್ಟಪಟ್ಟಿದ್ದೇನೆ; ಅನುಭವಿಸಿದ್ದೇನೆ. ಹೀಗಿರುವಾಗ ಒಂದೇ ಗಂಟೆನಿಂದ ಸಾವಿರಾರು ರೂಪಾಯಿಗಳನ್ನು ಕೊಡುವುದೆಂದರೆ ನಾನು ಎಲ್ಲಿಂದ ತಂದುಕೊಡಲಿ?'' ಡಾ| ಆರೋಗ್ಯಂರವರು ದೈನ್ಯತೆಯೊಡನೆ ಹೇಳಿದರು; ಪಶ್ಚಾತ್ತಾಪದೊಡನೆ ಮತ್ತೂ ಹೇಳತೊಡಗಿದರು-—"ಅಯ್ಯೋ! ನಾನೇಕೆ ಮೋಸಹೋದೆ! ನನ್ನ ಬುದ್ಧಿಯೇಕೆ ತಿರುಗಿತು? ಅಜ್ಞಾನವಶಾತ್ ಇಂತಹ ದುಷ್ಕಾರ್ಯದಲ್ಲಿ ಎಡವಿಬಿದ್ದೆ; ತಾವು ದೊಡ್ಡ ಮನಸ್ಸು ಮಾಡಿ ಕರುಣೆಗೊಂಡು ನನ್ನನ್ನು ಈ ಒಂದು ಬಾರಿಗೆ—ಕ್ಷಮಿಸಬೇಕು. ಪರಮಾತ್ಮನು ತಮಗೇನೂ ಕಡಿಮೆಮಾಡಿಲ್ಲ. ದೈವಾನುಗ್ರಹದಿಂದ ತಾವು ಲಕ್ಷಾಧಿಪತಿಗಳಾಗಿರುವಿರಿ. ನನ್ನ ಮೇಲೆ ದಯೆ ತೋರಬೇಕು ತಾವು ಮನಸ್ಸು ಮಾಡಿದರೆ, ಇದೇನು ತಮಗೆ ದೊಡ್ಡ ವಿಷಯವಲ್ಲ.'' ಗದ್ಗದಿತರಾಗಿ ಹೀಗೆ ಕೇಳಿಕೊಳ್ಳುತ್ತಿದ್ದ ಡಾ| ಆರೋಗ್ಯಂರವರಿಗೆ ಕಣ್ಣು ಕತ್ತಲೆ ಬಂದಂತಾಯಿತು. ಕಣ್ಣೀರು ತೊಟ್ಟಿಕ್ಕಿತು.

"ದೇವರಂತೆ, ದೈವವಂತೆ! ಅದೆಲ್ಲ ನನ್ನಲ್ಲಿ ಹೇಳಬೇಡಿ!'' ಎಂದೆನ್ನುತ್ತ ಸೇಠಜೀಯವರು ತೀಕ್ಷ್ಣಸ್ವರದಿಂದ ಗುಡುಗಿದರು: "ನನ್ನನ್ನು ಈ ರೀತಿಯಿಂದ ವಂಚಿಸಿ ವಿಶ್ವಾಸಘಾತ ಮಾಡುವಾಗ ಆ ನಿಮ್ಮ ಪರಮಾತ್ಮನು ಎಲ್ಲಿದ್ದನು? ಈಗ ಒಂದು ವರ್ಷದಿಂದಲೂ ಸತ್ಯವನ್ನು ಬಚ್ಚಿಟ್ಟು ಸುಳ್ಳಿನ ಕಂತೆಗಳನ್ನೇ ಜೋಡಿಸಿ, ಬೊಗಳುತ್ತಾ ನನ್ನ ಹಣವನ್ನು ಮೋಸದಿಂದ ಅಪಹರಿಸಿದ್ದೀರಿ. ಛೀ, ಈಗ ಪರಮಾತ್ಮನ ಹೆಸರನ್ನೆತ್ತಲು ನಿಮಗೆ ನಾಲಿಗೆ ಯೇಳುತ್ತಿದೆಯಲ್ಲ! ಮಾನವಿಲ್ಲ, ಮರ್ಯಾದೆಯಿಲ್ಲ! ಈ ನಿಮ್ಮ ಮೋಸ

ವಂಚನೆಗಳ–ದ್ರೋಹಕ್ಕಾಗಿ ಐದು ವರ್ಷಗಳ ಕಾಲ ಕಾರಾಗೃಹದಲ್ಲಿ ಸುಖವಾಗಿದ್ದುಕೊಂಡು, ಆ ನಿಮ್ಮ ಪರಮಾತ್ಮನನ್ನು ಪೂಜಿಸಿರಿ. ನಿಮಗೆ ಎಷ್ಟೋ ಸಲ ಸಾರಿ ಹೇಳಿದ್ದೇನೆ. ಎಚ್ಚರಿಕೆ! ಇದೊ, ಇದೀಗ ಕೊನೆಯ ಬಾರಿ ಹೇಳುತ್ತಿದ್ದೇನೆ; ಬರುವ ಶುಕ್ರವಾರ ಸಂಧ್ಯಾಕಾಲದೊಳಗೆ ನನ್ನ ಹಣವನ್ನು ಪೂರ್ತಿಯಾಗಿ ಸಂದಾಯಮಾಡಬೇಕು. ಇದಕ್ಕೆ ತಪ್ಪಿದರೆ, ಪೋಲೀಸಿನವರಿಂದ ತಕ್ಕ ಶಾಸ್ತಿ ಮಾಡಿಸಿಬಿಟ್ಟೇನು! ಜಾಗ್ರತೆ!'' ಎಂದೆನ್ನುತ್ತ ಸೇಠಜೀಯವರು ಹೊರಗೆ ಹೊರಟುಹೋದರು.

ಡಾಕ್ಟರ್ ಆರೋಗ್ಯಂರವರಿಗೆ ಅವರ ತಂದೆ ತಾಯಂದಿರು ಇರಿಸಿದ ಚಿಕ್ಕಂದಿನ ಹೆಸರು ವೈದ್ಯನಾಥನ್ ಎಂದು. ಆದರೆ, ಅವರು ವ್ಯಾಸಂಗ ಮಾಡುತ್ತಿದ್ದ ಈಸಾಯೀ ಶಾಲೆಯಲ್ಲಿ ಅಲ್ಲಿಯ ಪಾದರಿಗಳೊಬ್ಬರು, ಆ ಹೆಸರಿನಲ್ಲಿ ಸ್ವಲ್ಪ ಅದಲು ಬದಲು ಮಾಡಿದ್ದರು. ಮೂಲನಾಮಕ್ಕೆ ವಿರೋಧವಾಗದಂತೆ, ಎರಡನ್ನು ಸ್ವಲ್ಪ ಸ್ವಲ್ಪ ಸೇರಿಸಿ "ಪಾಲ್ ಆರೋಗ್ಯಂ" ಎಂಬ ಹೆಸರನ್ನಿಟ್ಟು ಹೊಸದಾಗಿ ನಾಮಕರಣ ಮಾಡಿದ್ದರು.

ಡಾ| ಪಾಲ್ ಆರೋಗ್ಯಂರವರು ಕಷ್ಟಪಟ್ಟು ಓದುತ್ತಿದ್ದರೂ ಮೆಟ್ರಿಕ್ ಪರೀಕ್ಷೆಯಲ್ಲಿ ಅವರು ಉತ್ತೀರ್ಣರಾಗಲಿಲ್ಲ. ಕೊನೆಗೆ, ಶಾಲೆಗೆ ಉದ್ದಂಡ ಪ್ರಣಾಮಗಳನ್ನರ್ಪಿಸಿ, ಬೊಂಬಾಯಿ, ಕಲಕತ್ತ, ಢಿಲ್ಲಿ ಮೊದಲಾದ ದೊಡ್ಡ ದೊಡ್ಡ ನಗರಗಳಲ್ಲಿ ನೌಕರಿಗಾಗಿ ಅವರು ಅಲೆದಾಡತೊಡಗಿದರು. ಎಲ್ಲಿಯೂ ಉದ್ಯೋಗ ದೊರೆಯಲಿಲ್ಲ ಆ ಬಳಿಕ ಅಲ್ಲಲ್ಲಿ ತಿರಗುತ್ತಲಿದ್ದು, ಅವರಿವರಲ್ಲಿ ಅಲ್ಪ ಸ್ವಲ್ಪ ಸೂಕ್ಷ್ಮ ಚಿಕಿತ್ಸೆಯನ್ನವರು ಅಭ್ಯಾಸ ಮಾಡಿಕೊಂಡರು. ಕೆಲವು ಪ್ರಯೋಗಗಳನ್ನೂ (ಹೋಮಿಯೋಪೆಥಿ) ಕಲಿತುಕೊಂಡರು. ಆ ತರುವಾಯ ಕಾಶಿಗೆ ಹೋಗಿ ತಮ್ಮ ಹೊಸವೃತ್ತಿಯನ್ನು ಆರಂಭಿಸಿದರು. ಅಂತೂ ಆ ವೈದ್ಯಕೀಯ ವೃತ್ತಿಯಲ್ಲೂ ಅವರಿಗೆ ಸಾಕಾಗುವಷ್ಟು ಸಂಪಾದನೆಯಾಗುತ್ತಿರಲಿಲ್ಲ. ಆದರೂ ಚಾಣಾಕ್ಷರಾದ ಅವರು ಧೈರ್ಯಗೆಡದೆ, ಆ ನಗರದ ಶ್ರೀಮಂತರಲ್ಲೊಬ್ಬರಾದ, ಸಿಲ್ಕು ಜವಳಿ ವ್ಯಾಪಾರಸ್ಥರೊಬ್ಬರ ಪರಿಚಯಮಾಡಿಕೊಂಡರು. ಆ ಪರಿಚಯ ಮುಂದೆ ಚೆನ್ನಾಗಿ ಬೆಳೆದು, ಡಾ| ಪಾಲ್ ಆರೋಗ್ಯಂರವರು ಆ ಜವಳಿ ವ್ಯಾಪಾರಿಗಳ ಪ್ರತಿನಿಧಿಗಳಾಗಿ ನೇಮಿಸಲ್ಪಟ್ಟು ಕೆಲಸಮಾಡತೊಡಗಿದರು. ಬೆಂಗಳೂರು ಮೈಸೂರುಗಳ ಕಡೆಯಿಂದ ಉತ್ತಮವಾದ ಜವಳಿಯನ್ನು ತರಿಸಿಕೊಡು

ವುದು, ಹೊಸ ಮಾಲು ಬಂದೊಡನೆಯೇ ಸ್ವತಃ ಹೋಗಿ ಅರಿಸಿ ವ್ಯಾಪಾರ ಮಾಡುವುದು, ಹಣಕೊಡುವುದು; ಇತ್ಯಾದಿ ಕಾರ್ಯಕ್ರಮಗಳಲ್ಲಿ ಕುಶಲತೆಯಿಂದ ಕೆಲಸಮಾಡತೊಡಗಿದರು. ಇದೇ ರೀತಿಯಲ್ಲಿ ನಾಲ್ಕಾರು ವರ್ಷಗಳ ತನಕ ವ್ಯವಹಾರ ಚೆನ್ನಾಗಿ ನಡೆಯುತ್ತಿರಲು, ಡಾ| ಪಾಲ್ ಆರೋಗ್ಯಂರವರು "ಸಭ್ಯರು,ವಿಶ್ವಾಸಾರ್ಹರು" ಎಂಬುದಾಗಿ ಎಲ್ಲರಿಂದಲೂ ಪ್ರಶಂಸಿಸಲ್ಪಟ್ಟರು. ಇದರಿಂದಾಗಿ, ಡಾ| ಆರೋಗ್ಯಂರವರಿಗೆ, ಸೇಠಜಿಯವರಿಂದ ಜವುಳಿಗಾಗಿ ಪಡೆಕೊಳ್ಳುತ್ತಿದ್ದ ಹಣವನ್ನು ತಮ್ಮ ಸ್ವಂತ ಸುಖಭೋಗಾದಿ ವಿಲಾಸಗಳಿಗೆ ಖರ್ಚು ಮಾಡಿಕೊಳ್ಳುವ ಸದವಕಾಶವು ಪ್ರಾಪ್ತವಾಯಿತು. ಕೆಲವೇ ತಿಂಗಳುಗಳಲ್ಲಿ ಮೈಸೂರು ಬೆಂಗಳೂರುಗಳ ವ್ಯಾಪಾರಸ್ಥರಲ್ಲಿ ಹಣ ತುಂಬಾ ಬಾಕಿಯಾಗಿ ಉಳಿಯಿತು. ಕಾಲಕ್ರಮೇಣ ಸಾಲದ ಮೊತ್ತ ಮಿತಿ ಮೀರುತ್ತಿರುವಾಗ ವ್ಯಾಪಾರಸ್ಥರ ಹಣದ ತಗಾದೆ ನೋಟೀಸುಗಳು, ಸೇಠ್ ಬನ್ಸಿಲಾಲರಿಗೂ ಬರತೊಡಗಿದವು. ತಮ್ಮ ಪ್ರತಿನಿಧಿಗಳು ಮಾಡುತ್ತಿದ್ದ ಈ ವಂಚನೆಯ ವಿವರಗಳನ್ನೆಲ್ಲ, ಸೇಠ್‌ಜೀಯವರು ಅರಿತುಕೊಂಡರು. ಮತ್ತು ಚಾತುರ್ಯದಿಂದ ತಕ್ಕ ಕಾರ್ಯಕ್ರಮ ಕೈಗೊಳ್ಳಲು ಅವರು ಸಿದ್ಧರಾದರು.

ಬನ್ಸಿಲಾಲ್ ಸೇಠ್‌ಜೀಯವರಿಗೂ, ಅಲ್ಲಿಯ ಪೋಲೀಸಿನವರಿಗೂ ಪರಸ್ಪರ ಚೆನ್ನಾಗಿ ಪರಿಚಯವಿದ್ದಿತು. ಸೇಠ್‌ಜೀಯವರು ಕಾಲಾಯಾಪನೆಗೆ ಅವಕಾಶಕೊಡದೆ, ಪೋಲೀಸು ಮುಖ್ಯಾಧಿಕಾರಿಗಳೊಡನೆ ಈ ಕುರಿತು ಆಲೋಚನೆ ನಡೆಸಿದರು,-"ಮೊಕದ್ದಮೆ ನಡೆಸಿ ಅಪರಾಧಿಯನ್ನು ಕೋರ್ಟಿಗೆಳೆದರೆ, ಹಣ ದೊರೆಯಲಾರದು. ಜೈಲಿಗೆ ಕಳುಹಿಸಬಹುದು ಅಷ್ಟೆ. ಆದುದರಿಂದ ಸಾಧ್ಯವಾದಷ್ಟು ಹೆದರಿಸಿ, ಗದರಿಸಿ, ವಸೂಲು ಮಾಡಿಕೊಳ್ಳುವುದೇ ಸರಿಯಾದ ಉಪಾಯ" ಎಂಬ ಪೋಲೀಸಿನವರ ಅಭಿಪ್ರಾಯಕ್ಕೆ ತಲೆದೂಗಿದರು. ಪೋಲೀಸು ಮುಖ್ಯಾಧಿಕಾರಿಗಳಿಗೆ ಸಂತೋಷವಾಯಿತು.

ಬುಧವಾರ ಬೆಳಿಗ್ಗೆ ಮತ್ತು ಸಂಜೆ ಈ ಎರಡು ಹೊತ್ತುಗಳಲ್ಲೂ ಕೂಡ, ಪೋಲೀಸು ಅಧಿಕಾರಿಗಳೊಬ್ಬರು ಡಾ| ಪಾಲ್ ಆರೋಗ್ಯಂರವರ ಮನೆಯ ಕಡೆಗೆ ಸವಾರಿ ಹೊರಟರು. "ಡಾಕ್ಟರರು ಮನೆಯಲ್ಲಿದ್ದಾರೋ? ಏನು ಮಾಡುತ್ತಾರೆ?" ಎಂದು ಮುಂತಾಗಿ ಸ್ವಲ್ಪ ಜಬರ್ದಸ್ತಿನಿಂದಲೇ ವಿಚಾರಿಸಿಕೊಂಡು, ಅವರು ಮರಳಿದರು. ಸಾಯಂಕಾಲ ಮನೆ ಸೇರಿದ

ಡಾ| ಆರೋಗ್ಯಂರವರಿಗೆ, ಈ ವರ್ತಮಾನ ತಿಳಿದೊಡನೆಯೇ ಜೀವವೇ ಹಾರಿ ಹೋದಂತಾಯಿತು. "ಇನ್ನು ನಾಳೆಯಿಂದ ಜೈಲುವಾಸ ಮಾಡ ಬೇಕಾಯಿತಲ್ಲ! ದೇವರೇ! ನನ್ನ ಗತಿ ಹೀಗಾಯಿತಲ್ಲ!'' ಎಂದು ಮನದಲ್ಲೇ ಮರುಗುತ್ತ ಚಿಂತಾಕ್ರಾಂತರಾದ ಅವರು, ಆರಾಮಕುರ್ಚಿಯೊಂದರಲ್ಲಿ ಒರ ಗುತ್ತ ಆಲೋಚನಾಮಗ್ನರಾದರು. ತಮ್ಮ ಜೀವನದ ಹಿಂದಿನ ಸಮಗ್ರ ಚಿತ್ರವೊಂದು ಅವರ ಅಂತಃಚಕ್ಷುಗಳೆದುರು ಮೂಡಿ ಬರುತ್ತಿರುವಂತೆ ತೋರಿತು. ಅವರ ಇಡಿ ಜೀವನವೆಲ್ಲ ಬಹುಕಷ್ಟಕರವಾಗಿ, ದುಃಖಮಯ ವಾಗಿ ಇದ್ದುದನ್ನು ಸ್ಮರಿಸಿಕೊಂಡ ಅವರಿಗೆ, ಗಂಟಲು ಬಿಗಿದಂತಾಗಿ ದುಃಖವು ಉಕ್ಕಿ ಉಕ್ಕಿ ಬಂದುಬಿಟ್ಟಿತು! ಅವರ ಬಾಲ್ಯದಿಂದ ಹಿಡಿದು ಅದುವರೆಗಿನ ಸಾಮಾನ್ಯ ಚಿಕ್ಕ ಪುಟ್ಟ ಘಟನೆಗಳೂ ಸಹ ಅವರ ಸ್ಮೃತಿಪಟಲದಲ್ಲಿ ಮೂಡಿಬಂದವು.

ಡಾ| ಆರೋಗ್ಯಂರವರು ಬಾಲ್ಯದಲ್ಲೇ ತಾಯಿಯನ್ನು ಕಳಕೊಂಡ ತಬ್ಬಲಿಯಾಗಿದ್ದರು. ಅವರ ತಂದೆ ಪುನರ್ವಿವಾಹ ಮಾಡಿಕೊಂಡು ಸುಂದ ರಿಯೊಬ್ಬಳನ್ನು ಮನೆಗೆ ಕರೆತಂದಿದ್ದರು. ತಬ್ಬಲಿಯಾದ ಬಾಲಕನಿಗೆ ತನ್ನ ತಾಯಿಯ ಸ್ಥಾನದಲ್ಲಿ ಮತ್ತೋರ್ವಳನ್ನು ಕಂಡು ಒಮ್ಮೆಗೆ ಸಂತೋಷವೇ ಆಗಿದ್ದಿತು. ಆದರೆ ಕೆಲವೇ ದಿನಗಳ ತರುವಾಯ ಆ ಮಲತಾಯಿಯಿಂದ ಪಡಬಾರದ ಪಾಡು ಪಡುವಂತಾಗಿ, ಬಹಳ ಕಷ್ಟದಲ್ಲಿ ಸಿಲುಕಿದ್ದರು. ಡಾ| ಆರೋಗ್ಯಂರವರು, ಕೊನೆಗೆ ಆ ಕಷ್ಟ ಕಿರುಕುಳಗಳನ್ನು ಸಹಿಸಲಾರದೆ, ಮನೆಬಿಟ್ಟು ಹೊರಟಿದ್ದರು.

ಚಿಕ್ಕ ವಯುಸ್ಸಿನಲ್ಲೇ ಮನೆ ಬಿಟ್ಟು ಹೊರಟ ಅವರು ಈಸಾಯಿ ಪಾದ್ರಿಗಳೊಬ್ಬರ ಕೈಗೆ ಸೇರಿದರು. ಆ ಪಾದ್ರಿಗಳೇನು ಅವರನ್ನು ಹಾಗೇ ಬಿಡಲಿಲ್ಲ; ಸಂತೋಷದಿಂದ ತಮ್ಮ ಸ್ವಜಾತಿಗೆ ಸೇರಿಸಿಬಿಟ್ಟರು. ಅವರ ಅಶನವಸನಗಳ ವ್ಯವಸ್ಥೆಯನ್ನೂ ಆ ಪಾದ್ರಿಗಳೇ ವಹಿಸಿಕೊಂಡು, ಅಲ್ಪ ಸ್ವಲ್ಪ ವಿದ್ಯಾಭ್ಯಾಸವನ್ನೂ ಮಾಡಿಸಿದ್ದರು. ಆ ಮೇಲೆ ಅವರು ವಯಸ್ಕ ರಾಗುತ್ತಿರಲು ಪಾದ್ರಿಗಳು ಅವರನ್ನು ಕೈಬಿಟ್ಟರು. ಅನಂತರ ಅವರಿಗೆಲ್ಲಿಯೂ ಆಶ್ರಯ ದೊರೆಯದೆ, ಕಲಕತ್ತ, ಬೊಂಬಾಯಿಗಳತ್ತ ಅವರು ತಿರುಗುತ್ತ ಇರುತ್ತಿದ್ದರು. ಆ ಸಂದರ್ಭಗಳಲ್ಲಿ ಹೊಟ್ಟೆಗಿಲ್ಲದೆ, ಬಟ್ಟೆಗಿಲ್ಲದೆ, ಮಲಗುವು ದಕ್ಕೂ ಸ್ಥಳವಿಲ್ಲದೆ, ಹೀಗೆ ಅನೇಕ ಸಂಕಷ್ಟಗಳನ್ನವರು ಅನುಭವಿಸಿದ್ದರು.

ಇಂತು ಈ ವಿಚಾರಗಳೆಲ್ಲ ಒಂದೊಂದಾಗಿ ಅವರ ಕಣ್ಣ ಮುಂದೆ ಹಾಯ್ದು ಹೋಗುತ್ತಿರಲು, ಕುರ್ಚಿಯಲ್ಲಿ ಒರಗಿದ್ದ ಅವರಿಗೆ, ಹಾಗೆಯೇ ನಿದ್ರೆಹಿಡಿಯಿತು. ಪಾಪ! ಹಿಂದಿನ ದಿನ ಹಾಸಿಗೆಯಲ್ಲೇ ಮಲಗಿ ಸುಖ ಪಡುತ್ತಿದ್ದ ಆ ಜೀವ, ಇಂದು ಯಾವುದರ ಪರಿವೆಯೂ ಇಲ್ಲದೆ, ಒರಗಿದ್ದ ಕುರ್ಚಿಯ ಮೇಲೆಯೇ ರಾತ್ರಿಯನ್ನು ಕಳೆಯುವ ಸ್ಥಿತಿಯಲ್ಲಿದ್ದಿತು. ಅಂತೆಯೇ ಅವರು ನಿದ್ರೆಯಲ್ಲೊಂದು ಸುಂದರಸ್ವಪ್ನವನ್ನು ಕಂಡರು:

"ಚಿಂತೆಯಿಂದ ಬೆಂದ ಅವರು ಅಳುತ್ತಿದ್ದಾರೆ. ಅಷ್ಟರಲ್ಲಿ ಪ್ರಸನ್ನ ವದನನಾದ ಗಜಮುಖನು ತನ್ನ ವಾಹನದ ಮೇಲೇರಿಕೊಂಡು, ಅವರ ಸಮ್ಮುಖಕ್ಕೆ ಬಂದಿದ್ದಾನೆ. ಅವರ ಸ್ಥಿತಿಯನ್ನು ನೋಡಿ ಮರುಕಗೊಂಡು, "ವತ್ಸಾ! ಅಳಬೇಡಪ್ಪ, ನೀನೇಕೆ ಹೀಗಿರುವೆ? ನಿನಗೇನು ಕಷ್ಟಬಂದಿದೆ? ಹೇಳಪ್ಪಾ!" ಎಂಬುದಾಗಿ ಆ ದಿವ್ಯಮೂರ್ತಿಯು ಕೇಳುತ್ತಿರಲು, ಡಾ| ಆರೋಗ್ಯಂರವರು ಸಂತಸಗೊಂಡು ನೋಡುತ್ತಾರೆ. ಆಗ ಅವರಿಗೆ ಇನ್ನೊಂದು ಚಮತ್ಕಾರ ತೋರಿದಂತಾಗಿ ಮತ್ತೂ ಆನಂದವಾಗುವುದು— ಎಷ್ಟೋ ವರ್ಷಗಳ ಹಿಂದೆ ತಾವು ಮನೆಬಿಟ್ಟು ಹೊರಟಾಗ ನೋಡಿದ್ದ ಅವರ ತಂಗಿ, ಬಾಲಂಬಾಲಳೂ, ಮಹಾ ಗಣಪನ ಹಿಂದೆಯೇ ಬರುತ್ತಿರುವಂತೆ ತೋರಿತು. ಹತ್ತಿರ ಬಂದು ಗಣೇಶನ ಪಕ್ಕದಲ್ಲೇ ನಿಂತಿದ್ದಾಳೆ; ಅಣ್ಣನ ಈ ಶೋಚನೀಯ ಅವಸ್ಥೆಯನ್ನು ನೋಡಿ ಅವಳಿಗೂ ಕಣ್ಣೀರು ಬಂದಿದೆ. ಡಾ| ಆರೋಗ್ಯಂರವರಿಗೆ ತಂಗಿಯ ಆಗಮನದಿಂದ ಒಮ್ಮೆ ಸಂತೋಷವಾಗಿದ್ದರೂ ತನ್ನ ತಂಗಿ ತನ್ನನ್ನೀ ಸ್ಥಿತಿಯಲ್ಲಿ ನೋಡಿದಳಲ್ಲ? ಎಂದು ಬೇಸರವೂ ಆಗುತ್ತಿದೆ. ಅಂತಹ ಆ ವಿಚಿತ್ರ ಸ್ವಪ್ನದಲ್ಲಿ, ವಿನಾಯಕನು ಅವರನ್ನು ಸಮಾಧಾನಪಡಿಸುತ್ತ "ಮಗು, ಅಳಬೇಡಪ್ಪ, ನಿನ್ನ ಕಷ್ಟಗಳೆಲ್ಲ ನಿವಾರಣೆಯಾಗುತ್ತವೆ. ಧೈರ್ಯವಾಗಿರು" ಎಂದು ಹೇಳುತ್ತಿರುವಂತೆ ಭಾಸವಾಯಿತು. ಅನಂತರ ತಂಗಿ ಬಾಲಂಬಾಲಳೂ ಕೂಡ "ಅಣ್ಣ! ಅಳಬೇಡಣ್ಣ! ಕಷ್ಟಬಂದಾಗ ಧೈರ್ಯವನ್ನು ಬಿಡಬಾರದು, ನಿನ್ನ ಎಲ್ಲಾ ದುಃಖದಾರಿದ್ರ್ಯಾದಿಗಳೂ ದೂರವಾಗುತ್ತವೆ, ಹೆದರಬೇಡಣ್ಣ" ಎಂಬುದಾಗಿ ಹೇಳುತ್ತಿರುವಂತೆ ಭಾಸವಾಯಿತವರಿಗೆ. ಈ ರೀತಿಯಿಂದ ಡಾ| ಆರೋಗ್ಯಂರವರು ಆರಿಯದ ಬಾಲಕರಂತೆ, ಸುಖಸ್ವಪ್ನದಲ್ಲಿ ವಿಹರಿಸುತ್ತ ತಮ್ಮ ಮನಸ್ಸನ್ನು ಕನಸಿನಲ್ಲೇ ಹಗುರಮಾಡಿಕೊಳ್ಳುತ್ತಿದ್ದರು.

"ಈ ವಿಧದಿಂದ ಕ್ಷಣಕಾಲ ಸಂತೋಷಗೊಂಡಿರುತ್ತಿರಲು, ಮತ್ತೆ ಒಂದೇ ನಿಮಿಷ! ನೋಡುತ್ತಾರೆ! ಬನ್ಸಿಲಾಲ್ ಸೇಠಜೀಯವರು, ವಿಕಾರ ರೂಪಧಾರಿಗಳಾಗಿ ಬಂದು, "ಏಯ್! ಎಲ್ಲಿದ್ದಿ? ಕೊಡು ನನ್ನ ಹಣ!" ಎನ್ನುತ್ತ ಗದರಿಸುತ್ತ ಹೊಡೆಯಲು ಕೈಯೆತ್ತಿಕೊಂಡು ಬರುತ್ತಿದ್ದಾರೆ ಎಂಬಂತೆ ತೋರುತ್ತಿರಲು, ಅವರು ಗಾಬರಿಗೊಂಡು ಥರಥರನೆ ನಡುಗ ತೊಡಗಿದರು. ಅದೇ ಸ್ಥಿತಿಯಲ್ಲೇ ಅವರಿಗೆ ಹೊಡೆದೆಬ್ಬಿಸಿದ್ದಂತೆ ಫಕ್ಕನೆ ಎಚ್ಚರವಾಯಿತು. ಸ್ವಪ್ನವನ್ನು ಕಂಡು ಗಾಬರಿಯಿಂದ ಎಚ್ಚರವಾದ ಅವರಿಗೆ ಒಂದು ಸಲ ಮೈಜುಂ ಎಂದಿತು. ಎದೆಯ ಬಡಿತದ ವೇಗ ತೀವ್ರ ಗತಿಗೇರಿತು. ಎದ್ದು ಕುಳಿತುಕೊಳ್ಳುವಷ್ಟು ಶಕ್ತಿಯು ತನ್ನಲ್ಲಿ ಉಳಿದಿಲ್ಲ ವೆಂಬಂತೆ ಅವರಿಗೆ ಭಾಸವಾಯಿತು. ಸ್ವಲ್ಪ ಹೊತ್ತು ಕಳೆದ ಬಳಿಕ ಹೇಗೋ ಮೆಲ್ಲನೆದ್ದು ಕುಳಿತುಕೊಂಡರು; ಸುತ್ತಲೂ ನೋಡಿದರು; ಬೆಳಗಾಗಿದೆ ಯೆಂಬುದು ಖಚಿತವಾಯಿತವರಿಗೆ. ಸುಪ್ರಭಾತದ ಸುಮಧುರ ಖಗಗಾನ ದೊಡನೆ, ತಣ್ಣನೆಯ ಗಾಳಿಬೀಸುತ್ತ ಜೀವಕೋಟಿಗಳಲ್ಲಿ ನವಚೈತನ್ಯ ವನ್ನು ತುಂಬುತ್ತಿರುವಂತೆ ತೋರುತ್ತಿತ್ತು. ಆದರೆ, ಭಾಗ್ಯಹೀನನಾದ ತನಗೆ ಆ ಸಂತೋಷವನ್ನು ಸವಿಯುವ ಸುಯೋಗವೆಲ್ಲಿದೆ? ಎಂದು ಯೋಚಿಸುತ್ತ ಡಾ| ಆರೋಗ್ಯಂರವರು ಖಿನ್ನವದನರಾಗಿ ಕುಳಿತುಕೊಂಡೇ ಇದ್ದರು.

"ಶುಕ್ರವಾರ.........! ಹೌದು ಅದೇ ಶುಕ್ರವಾರ!" ಹೀಗೆ ಅವರಿಗೆ ಶುಕ್ರವಾರದ ನೆನಪಾಗಿ ಮನದ ಕಳವಳ ಮತ್ತಷ್ಟು ಹೆಚ್ಚಿತು. ಅಷ್ಟರಲ್ಲೇ ಹೊರಗಡೆಯಿಂದ ಬಾಗಿಲು ತಟ್ಟಿದ "ಕಡ ಕಡ" ಶಬ್ದ!

"ಯಾರದು?" ಎಂದು ಕೇಳಲು ಬಾಯಿತೆರೆದರೂ, ನಾಲಿಗೆಯೇ ಚಲಿಸಲಿಲ್ಲ.

ಗಂಟಲೊಣಗಿ ತಲೆತಿರುಗುವಂತಾಗುತ್ತಿರಲು ಪುನಃ ಅದೇ "ಕಟ ಕಟ ಕಟ ಕಟ" ಶಬ್ದ ಜೋರಾಗಿ ಕೇಳತೊಡಗಿತು. ಆಗ ಅವರು, "ಇಡಿ ಮುಳುಗಿದ ಮೇಲೆ ಚಳಿಯಿಲ್ಲ"ಎಂಬ ಸ್ಥಿತಿಗೆ ಬಂದು, ಮೆಲ್ಲನೆ ಮೇಲೆದ್ದು, "ಇಲ್ಲಿಗೆ ನನ್ನ ಅವಸ್ಥೆ ಮುಗಿಯಿತು, ಬಾಗಿಲು ತಟ್ಟುತ್ತಿರುವವರು ಪೋಲೀ ಸಿನವರೇ ಆಗಿರಬೇಕು" ಎಂದುಕೊಂಡರು ಮನದಲ್ಲೇ. ಆದರೆ, ಮರು ಗಳಿಗೆಯಲ್ಲೇ ಅವರಿಗೆ ಇಂದು ಶುಕ್ರವಾರವಲ್ಲವೆಂಬುದು ನೆನಪಾದ ಮೇಲೆ, ತುಸು ಧೈರ್ಯವುಂಟಾಯಿತು; ಎದೆಯ ಮೇಲೆ ಕೈಯ್ಯನ್ನೊತ್ತಿ ಹಿಡಿದು

ಕೊಂಡೇ ಕಿಟಕಿಯ ಬಾಗಿಲು ತೆರೆದು, ನಡುಗುವ ಸ್ವರದಲ್ಲೇ ಕೇಳಿದರು- "ಯಾರದು?" ಎಂದು.

"ಸ್ವಾಮಿ! ತಾವು ನನಗೊಂದು ದೊಡ್ಡ ಉಪಕಾರಮಾಡಬೇಕು. ಒಂದು ಕಾಗದದಲ್ಲಿ—"ನಾನು ಚಿಕಿತ್ಸೆಮಾಡಿದೆ; ಆದರೆ, ರೋಗದ ಪ್ರಭಾವ ಹೆಚ್ಚಾದುದರಿಂದ, ಪ್ರಯೋಜನವಾಗದೆ, ಈ ರೋಗಿಯು ಈ ದಿನ ಮರಣ ಹೊಂದಿರುವನು'' ಎಂಬುದಾಗಿ ಬರೆದುಕೊಡಬೇಕು. ಇದಕ್ಕಾಗಿ ಇದೊ, ತಮಗೆ ರೂಪ್ಯಾ ಐದುಸಾವಿರ ಕೊಡುತ್ತೇನೆ" ಎಂದಿತು, ಹೊರಗಡೆಯಿಂದ ಒಂದು ವ್ಯಕ್ತಿ.

ಡಾ| ಆರೋಗ್ಯಂರವರು ಅಚ್ಚರಿಗೊಂಡರು. ಅದೇನೆಂಬುದೇ ಅವರಿಗೆ ಅರ್ಥವಾಗಲಿಲ್ಲ. ಕ್ಷಣಕಾಲ ಆಲೋಚಿಸಿ, ಚೇತರಿಸಿಕೊಂಡು, ಬಾಗಿಲು ತೆರೆದು "ನೀವು ಯಾರು?'' ಎಂದರು; ಗಂಭೀರಸ್ವರದಿಂದ. "ಸ್ವಾಮಿ! ನನ್ನ ಹೆಸರು ಶಿವ ಸುಬ್ರಹ್ಮಣ್ಯ ಅಯ್ಯರ್ ಎಂದು. ತಾವು ಇಷ್ಟೊಂದು ಉಪಕಾರಮಾಡಿದರೆ, ನಾನು ತಮಗೆ ಚಿರಋಣಿ'' ಎಂದರು; ಶಿವಸುಬ್ರ ಹ್ಮಣ್ಯ ಅಯ್ಯರರು.

ಡಾ| ಆರೋಗ್ಯಂರವರು ತಮ್ಮ ಕಣ್ಣು ಕಿವಿಗಳನ್ನೇ ಕ್ಷಣಕಾಲ ನಂಬ ದಾದರು. "ಇದೇನು ಕಷ್ಟದ ಮೇಲೆ ಮತ್ತೊಂದು ಕಷ್ಟ ಎರಗುತ್ತಿರು ವುದೋ? ಅಥವಾ..........ಏನು?'' ಎಂದು ದಿಗ್ಭ್ರಾಂತರಾದ ಅವರು ಹೇಳಿದರು —"ನೀವು ಹೇಳುತ್ತಿರುವುದು ಸತ್ಯವಿರಬಹುದು. ಆದರೆ, ನನಗೆ ನಿಮ್ಮ ಇಚ್ಛೆಯಂತೆ ಅದರಲ್ಲಿ ಭಾಗವಹಿಸಲು ದಿಗಿಲಾಗುತ್ತಿರುವುದು. ಇದರಿಂದಾಗಿ ನನಗೆ ಮುಂದೆ ವೃಥಾ ಕಷ್ಟನಷ್ಟಗಳುಂಟಾಗಬಹುದು. ಅದು ದರಿಂದ ನಿಮಗೆ ಹಾಗೆ ಬರೆದುಕೊಡಲು ನಾನು ಇಷ್ಟಪಡುವುದಿಲ್ಲ'' ಡಾಕ್ಟರರು ದೃಢತೆಯಿಂದ ಹೇಳಿದರು.

"ಡಾಕ್ಟರರೆ, ತಮಗೆ ಇದರಿಂದಾಗಿ ಸ್ವಲ್ಪವೂ ಕಷ್ಟ ಬರಲಾರದು. ನಷ್ಟವೂ ಉಂಟಾಗದು. ಈ ವಿಚಾರವಾಗಿ ತಾವು ಸ್ವಲ್ಪವೂ ಯೋಚಿಸು ವುದು ಬೇಡ. ನಾನು ಕೂಡಾ ತಮ್ಮವನೇ ಆಗಿದ್ದೇನೆ. ತಾವೂ ತಮಿಳು ನಾಡಿನವರು; ನಾನೂ ತಮಿಳುನಾಡಿನವನು. ಹೀಗಿರುವಾಗ ನಾನು ತಮ್ಮನ್ನು ಮೋಸದಿಂದ ಕಷ್ಟದಲ್ಲಿಂದೂ ಸಿಲುಕಿಸಲಾರೆ. ನಾನು ಈಗ ತಮ್ಮೊಡನೆ ಹೇಳಿದ—ತಾವು ಬರಕೊಡಬೇಕಾದ ವಿಷಯ, ಅಕ್ಷರಶಃ ಸತ್ಯ

ವಾದುದು. ಅದರಲ್ಲಿ ಮೋಸ-ವಂಚನೆಗಳಿಲ್ಲ. ತಾವು ದೊಡ್ಡ ಮನಸ್ಸು ಮಾಡಿ ಬರೆದುಕೊಟ್ಟು ನನಗೆ ಸಹಾಯಮಾಡಬೇಕು. ನಾನು ತಮ್ಮ ಈ ಉಪಕಾರವನ್ನು ಎಂದೂ ಮರೆಯಲಾರೆ'' ಎಂದರು; ಅಯ್ಯರರು.

ಅನಂತರ ಶಿವಸುಬ್ರಹ್ಮಣ್ಯ ಅಯ್ಯರರು ಡಾಕ್ಟರರಿಗೆ ತನ್ನ ಎಲ್ಲ ಪೂರ್ವವೃತ್ತಾಂತವನ್ನೂ ಸವಿಸ್ತಾರವಾಗಿ ಇಂತು ಹೇಳತೊಡಗಿದರು:— "ವಯೋವೃದ್ಧರಾದ ನನ್ನ ಮಾವ ಅಂದರೆ (ಹೆಂಡತಿಯ ತಂದೆ)ಯೊಡನೆ ತೀರ್ಥಯಾತ್ರೆಗಾಗಿ ನಾನು ಊರಿನಿಂದ ಹೊರಟಿದ್ದೆ. ವೃದ್ಧರಾದ ಅವರಿಗೆ ಜೊತೆಗೆ ನನ್ನ ಅಗತ್ಯವಿತ್ತು. ಹಾಗೆ ಹೊರಟ ನಾವುಗಳು, ರಾಮೇಶ್ವರ, ಬದರಿಕಾಶ್ರಮ, ಪ್ರಯಾಗ ಮೊದಲಾದ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ ಕಾಶಿಕ್ಷೇತ್ರಕ್ಕೆ (ಇಲ್ಲಿಗೆ) ಬಂದು ತಲಪಿದೆವು. ಇಲ್ಲಿಯ ಒಂದು ಧರ್ಮ ಛತ್ರದಲ್ಲಿ ನಾವು ಬಿಡಾರಮಾಡಿದೆವು. ಮಾವನವರಿಗೆ ಊರಿನಿಂದ ಹೊರಟ ಕೆಲವು ದಿನಗಳಲ್ಲೇ ಜ್ವರ ಪ್ರಾರಂಭವಾಗಿದ್ದಿತು. ಪ್ರಾರಂಭದಲ್ಲಿ ಅಷ್ಟೇನೂ ವಿಶೇಷವಾಗಿರಲಿಲ್ಲ. ಆದರೆ, ಮತ್ತೆ ಒಂದು ವಾರ ಕಳೆಯುತ್ತಿರಲು ಆ ಜ್ವರ ವಿಷಮಜ್ವರವಾಗಿ ಪರಿಣಮಿಸಿತು. ವೃದ್ಧಾಪ್ಯದಿಂದುಂಟಾದ ನಿಶ್ಶಕ್ತಿಯಿಂದಲೂ ಸಾಂಸಾರಿಕ ತಾಪತ್ರಯಗಳ ಯೋಚನೆಗಳಿಂದಲೂ ಅವರು ನಿನ್ನೆ ಬುಧವಾರ ರಾತ್ರೆ ಈ ಪುಣ್ಯಕ್ಷೇತ್ರದಲ್ಲಿ ಸ್ವರ್ಗಸ್ಥರಾದರು. ಈಗ ಒಂದು ವರ್ಷದಿಂದಲೂ, ಅವರು ಪೂರ್ಣ ಆರೋಗ್ಯವಾಗಿರಲಿಲ್ಲ. ಅವರು ಒಂದು ವೀಲ್‌ನಾಮೆಯನ್ನು ಬರೆಸಿ ಬಹಿರಂಗ ಪಡಿಸದೆ ರಿಜಿಸ್ಟ್ರಮಾಡಿಸಿದ್ದರು. ಅದರ ಒಂದು ಪ್ರತಿ ಇಂದು ನನಗೆ ಅವರ ಪೆಟ್ಟಿಗೆಯಲ್ಲಿ ಸಿಕ್ಕಿತು. ಅವರು ಮೃತಪಟ್ಟ ನಂತರವೇ ನನಗದು ಸಿಕ್ಕಿತು. ಅದರಲ್ಲಿ ಬರೆದ ಪ್ರಕಾರ ಅವರ ಆಸ್ತಿ ವ ಸ್ಥಿರಚರ ಸೊತ್ತುಗಳೆಲ್ಲವೂ ಕುಟುಂಬ ರಕ್ಷಣಾರ್ಥವಾಗಿ ಅವರ ಉತ್ತರಾಧಿಕಾರಿಯಾದವನಿಗೆ ಸೇರತಕ್ಕದ್ದಾಗಿವೆ. ನಗದಾಗಿ ಇರುವ ಹಣ, ಅವರ ಮಗಳಿಗಾಗಿ (ನನ್ನ ಹೆಂಡತಿಗಾಗಿ) ವಿಂಗಡಿಸಿ ಇಡಲ್ಪಟ್ಟದೆ. ಆದರೆ, ಅದರಲ್ಲಿ ಮತ್ತೊಂದು ಶರ್ತವಿದೆ. ಅದು ಹೀಗಿದೆ—"ತನ್ನ ಅಂದರೆ (ಮಾವನ) ಮರಣಕ್ಕೆ ಮೊದಲು ನನಗೆ (ನನ್ನ ಹೆಂಡತಿಯಲ್ಲಿ) ಗಂಡುಮಗು ಹುಟ್ಟಿದರೆ, ಸರ್ವಾಧಿ ಆಸ್ತಿ ವ ಸೊತ್ತುಗಳಿಗೂ ಆ ನನ್ನ ಪುತ್ರನೇ ಹಕ್ಕುದಾರನಾಗಿರತಕ್ಕದ್ದು. ಹಾಗೆ ಪುತ್ರ ಜನನವಾಗದಿದ್ದರೆ, ಅದರ ಸರ್ವಾಧಿಕಾರವೂ ಅವರ ಉತ್ತರಾಧಿಕಾರಿಗಳಿಗೆ

ಇರತಕ್ಕದ್ದು” ಹೀಗೆ ಬರೆದಿರುವುದು. “ವೈದ್ಯರೆ,ನಾನು ತಮ್ಮೊಡನೆ ಅಸತ್ಯವನ್ನಾಡುತ್ತಿಲ್ಲ. ಇದ್ದ ವಿಚಾರ ಅಂತೆಯೇ ಹೇಳುತ್ತಲಿದ್ದೇನೆ. ನನಗೆ ಒಂದರ ಹಿಂದೊಂದರಂತೆ ಜನಿಸಿದ ಮಕ್ಕಳು ಮೂವರೂ ಹೆಣ್ಣು ಮಕ್ಕಳು. ನಾನು ತೀರ್ಥಯಾತ್ರೆಗಾಗಿ ಮನೆಯಿಂದ ಹೊರಡುವಾಗ ನನ್ನ ಹೆಂಡತಿ ಏಳು ತಿಂಗಳ ಗರ್ಭಿಣಿಯಾಗಿದ್ದಳು. ಇಂದು ಪ್ರಾತಃಕಾಲ ಗಂಡುಮಗು ಹೆತ್ತಿದ್ದಾಳೆ. ಮಗು ಬಾಣಂತಿ ಕೂಡ ಸೌಖ್ಯದಲ್ಲಿದ್ದಾರೆ ಎಂಬುದಾಗಿ ಊರಿನಿಂದ ತಂತಿ ಬಂದಿರುವುದು. ಒಂದುವೇಳೆ ಈ ಮಗು ನನ್ನ ಮಾವನು ಮೃತಪಡುವ ಮೊದಲು ಹುಟ್ಟುತ್ತಿದ್ದರೆ, ಸರ್ವಾಧಿ ಆಸ್ತಿಯೂ ಉಳಿಯಬಹುದಿತ್ತು. ಈಗ ವೀಲ್‌ನಾಮೆಯ ಪ್ರಕಾರ ಆಸ್ತಿಯೆಲ್ಲವೂ ಅನ್ಯರಿಗೆ ಸೇರುವುದು. ಮಾವನವರು ನಮ್ಮೊಡನೆ, ಯಾವುದನ್ನೂ ಹೇಳದೆ ಕೇಳದೆ ಆಲೋಚಿಸದೆ, ಅವಸರದಲ್ಲಿ ಈ ವೀಲ್‌ನಾಮೆಯನ್ನು ಬರೆಸಿ ಗುಪ್ತವಾಗಿ ರಿಜಿಸ್ತ್ರಿಮಾಡಿಸಿ ಇರಿಸಿದ್ದರು. ಆದುದರಿಂದ ಈ ಕುರಿತು ಈಗ ಬೇರೇನೂ ಮಾಡಲಾಗುವುದಿಲ್ಲ’’ ಎಂದು ಹೇಳುತ್ತ ಅಯ್ಯರರು ಸ್ವಲ್ಪ ಹೊತ್ತು ತಡೆದು ಪುನಃ ಹೇಳಿದರು:

“ವೈದ್ಯರೆ, ಈಗ ಒಂದೇ ಒಂದು ಉಪಾಯವು ನಮ್ಮ ಮುಂದಿದೆ. ಅದು ಯಾವುದೆಂದರೆ, ತಾವು ದೊಡ್ಡ ಮನಸ್ಸುಮಾಡಬೇಕು. ಉಪಕಾರ ಮಾಡಬೇಕು. ಅನ್ಯಾಯವಾಗಿ ಅನ್ಯರ ವಶಕ್ಕೆ ಸೇರಲಿರುವ ಈ ಸಮೃದ್ಧವಾದ ಆಸ್ತಿಯನ್ನು ಉಳಿಸಿಕೊಡುವ ಸಮಸ್ತಭಾರವೂ ಈಗ ತಮ್ಮ ಕೈಯಲ್ಲಿದೆ. ಮುದುಕರು ಹೇಗೂ ತೀರಿಕೊಂಡರು. ಅವರು ನಿನ್ನೆ ರಾತ್ರೆ ಸತ್ತುಹೋದರು, ಅಥವಾ ಈ ದಿನ ಬೆಳಿಗ್ಗೆ ಸತ್ತರು, ಅದನ್ನು ಹೇಗೆ ತಿಳಿದುಕೊಂಡರೂ ಒಂದೆ. ಅದರಲ್ಲಿ ಅಭ್ಯಂತರವಿಲ್ಲ. ಇಲ್ಲಿ ನನ್ನ ಇತರ ಸಂಬಂಧಿಕರಾಗಲಿ ಗುರುತಿನವರಾಗಲಿ ಯಾರೂ ಇಲ್ಲ. ಮುದುಕರು ಇಂದು ಬೆಳಿಗ್ಗೆ ಮೃತಪಟ್ಟದ್ದರೆ ಎಲ್ಲವೂ ಅನುಕೂಲವಾಗಿಯೇ ಇರುತ್ತಿತ್ತು. ತಾವು ತಮಿಳಿಗರಾದ ನಮ್ಮವರೆ, ಎಂದು ತಿಳಿದುಕೊಂಡ ಬಳಿಕ, ಧೈರ್ಯದಿಂದ ನಾನು ತಮ್ಮಲ್ಲಿಗೆ ಬಂದಿರುವೆನು. ಇದೋ, ತಮಗೆ ಅನಂತ ವಂದನೆಗಳನ್ನರ್ಪಿಸುತ್ತಿರುವೆನು. ಇನ್ನೂ ಶವಸಂಸ್ಕಾರ ಆಗಿಲ್ಲ. ಹನುಮಾನ್ ಘಾಟ್‌ನಲ್ಲಿ ಕ್ರಿಯೆಯನ್ನು ಮಾಡಲಿದ್ದೇನೆ. ತಾವು ದಯವಿಟ್ಟು— “ನಾನು ಚಿಕಿತ್ಸೆಮಾಡಿದೆ, ಆದರೆ ಕಾಯಿಲೆ ಗುಣವಾಗಲಿಲ್ಲ ಈ ದಿನ

ಹತ್ತು ಘಂಟೆ ಸಮಯದಲ್ಲಿ ರೋಗಿಯು ಮೃತಪಟ್ಟಿರುವನು" ಎಂಬುದಾಗಿ ಬರೆದು ಕೊಡಬೇಕು. ತಮಗೆ ಇದರಿಂದಾಗಿ ಯಾವ ವಿಧದಲ್ಲೂ ತೊಂದರೆ ಯಾಗದು. ನಾನು ತಮಗೆ ರೂಪ್ಯಾ ಐದು ಸಾವಿರ ಈಗಲೇ ಕೊಡು ತ್ತೇನೆ. ದಯವಿಟ್ಟು ಈ ಹಣವನ್ನು ಸ್ವೀಕರಿಸಿ ಬರೆದುಕೊಡಬೇಕು" ಎಂಬುದಾಗಿ ಹೇಳುತ್ತ ಶಿವಸುಬ್ರಹ್ಮಣ್ಯ ಅಯ್ಯರರು ಐದು ಸಾವಿರ ರೂಪ್ಯಾಗಳ ನೋಟುಗಳನ್ನು ಡಾ| ಆರೋಗ್ಯಂರವರ ಮುಂದೆ ಹಿಡಿದು ಕೊಂಡು ನಿಂತರು. ಮತ್ತು ಹೇಳಿದರು—"ಊರಿಗೆ ಈ ವಿಚಾರವಾಗಿ ತಂತಿಯನ್ನು ಬಿಡಬೇಕಾಗಿದೆ. ತಾವೂ ಕೂಡ ಹನುಮಾನ್‌ಘಾಟ್‌ನಲ್ಲಿ ನಡೆಯುವ ಶವಸಂಸ್ಕಾರ ಉತ್ತರಕ್ರಿಯೆಗಳನ್ನು ಬಂದು ನೋಡಬೇಕು. ನನ್ನನ್ನು ರಕ್ಷಿಸಬೇಕು" ಎಂದು ಅಯ್ಯರರು ಅಂಗಲಾಚಿ ಬೇಡಿಕೊಂಡರು.

ಡಾ| ಆರೋಗ್ಯಂರವರು ಬಹಳ ಯೋಚಿಸಿದರು. ತಮ್ಮ ಸ್ವಪ್ನ ವನ್ನು ಸ್ಮರಿಸಿಕೊಂಡ ಅವರು ಹರ್ಷಚಿತ್ತರಾದರು. ಮಹಾಗಣಪತಿಯು ಕನಸಿನಲ್ಲಿ ಬಂದು ಅಭಯಪ್ರದಾನಮಾಡಿದಂತೇ ಕಷ್ಟ ನಿವಾರಣೆಗಾಗಿಯೇ ಇದೀಗ ಈ ಮಾರ್ಗವನ್ನು ತೋರಿಸಿರಬೇಕೆಂದು ಮನಗಂಡ ಅವರು, ಸೇಠಜೀಯವರ ಸಾಲದಿಂದ ಹೇಗಾದರೂ ವಿಮುಕ್ತರಾಗಬೇಕಾಗಿದ್ದುದ ರಿಂದ, ಹಣವನ್ನು ತೆಗೆದುಕೊಂಡು ಮೊದಲು ಸಾಲ ತೀರಿಸಿ, ಮಿಕ್ಕುಳಿದ ಹಣದಿಂದ ಏನಾದರೂ ಜೀವನೋಪಾಯವನ್ನು ಹುಡುಕಬಹುದೆಂದು ನಿರ್ಧರಿಸಿಕೊಂಡರು. ಮನದಲ್ಲೇ ಮತ್ತೊಂದು ಪ್ರತಿಜ್ಞೆಯನ್ನೂ ಅವರು ಮಾಡಿಕೊಂಡರು. ಜೀವನದಲ್ಲಿ ಕಷ್ಟನಷ್ಟಗಳಿಗೆ ಕಾರಣವಾದ ಆ ಪಾನ.... ಶರಾಬು! ಅದನ್ನೆಂದೂ ಮುಟ್ಟಲಾರೆ. ಇದೇ ಅವರ ಆ ಪ್ರತಿಜ್ಞೆಯಾಗಿ ದ್ದಿತು. ಕಾರ್ಯಪ್ರವರ್ತನಾಗುವ ಮೊದಲೇ ಚೆನ್ನಾಗಿ ವಿಮರ್ಶೆಮಾಡಿ ಕೊಳ್ಳಬೇಕು. ಅಂತೆಯೇ ಡಾ| ಆರೋಗ್ಯಂರವರು, ವಿಚಾರ ವಿಮರ್ಶೆಗೆ ತೊಡಗಿದರು—'ಅಯ್ಯರರ ಮತದಂತೆ ಬರೆದು ಕೊಟ್ಟರೆ, ಅದು ಅನ್ಯಾಯ ವಾದೀತೆ? ಸತ್ತವನು ಹೇಗೂ ಸತ್ತಿರುವನು. ಇಂದು—ನಿನ್ನೆ—ಅದೆಲ್ಲ ಒಂದೆ. ಇನ್ನು ಆಸ್ತಿಯೆಲ್ಲವೂ ಮಗಳ ಮಗನಿಗೇ ಸೇರುವುದೆನ್ನುವಾಗ ಆದರಲ್ಲಿ ಅನ್ಯಾಯವೆಲ್ಲಿದೆ? ಅದೇ ಸರಿ!' ಎಂದು ನಿರ್ಧರಿಸಿಕೊಂಡ ಡಾಕ್ಟರರು—ಶಿವಸುಬ್ರಹ್ಮಣ್ಯ ಅಯ್ಯರರೊಡನೆ ಹೇಳಿದರು—"ಈ ವಿಚಾರ ವಾಗಿ ನೀವು ಹೇಳಿದ್ದು ನನಗರ್ಥವಾಯಿತು, ಆದರೆ ಚೆನ್ನಾಗಿ ವಿಮರ್ಶೆ

ಮಾಡಿಕೊಳ್ಳಬೇಕಾದುದು ಮುಖ್ಯ. ನನಗೆ ಸಂಜೆಯ ತನಕ ಸ್ವಲ್ಪ ಸಮಯ ಕೊಡಿ, ನಾನು ಆಲೋಚಿಸಿ ಸಾಯಂಕಾಲದೊಳಗೆ, ನಿಮಗೆ ನನ್ನ ನಿರ್ಧಾರವನ್ನು ತಿಳಿಸುವೆನು" ಎಂದರು.

"ಛೆ....ಛೆ....ಇಲ್ಲ....ಇಲ್ಲ....ಅದರಲ್ಲಿ ವಿಮರ್ಶಿಸುವ ಅಂಶವೇ ಉಳಿದಿಲ್ಲ ಡಾಕ್ಟ್ರೆ! ಇನ್ನು ಯಾವುದಕ್ಕೂ ಸಮಯವೂ ಇಲ್ಲ. ಶವಸಂಸ್ಕಾರಾದಿ ಕಾರ್ಯಗಳು ಈಗಲೇ ನೆರವೇರಬೇಕು. ತಾವು ಅನುಮಾನಿಸಬಾರದು. ನಡೆಯಿರಿ ಹೋಗೋಣ! ಇದೋ ಈಗಲೇ ಈ ಒಂದು ಸಾವಿರ ರೂಪಾಯಿಗಳನ್ನು ತೆಗೆದುಕೊಳ್ಳಿರಿ! ಒಟ್ಟು ಆರು ಸಾವಿರ ಕೊಡುತ್ತೇನೆ" ಎಂದೆನ್ನುತ್ತ ಅಯ್ಯರರು ಬಲವಂತವಾಗಿಯೇ ಒಂದು ಸಾವಿರ ರೂಪಾಯಿಗಳ ನೋಟುಗಳನ್ನು ಡಾಕ್ಟರರ ಕೈಯ್ಯಲ್ಲಿಟ್ಟರು. ಮತ್ತು ಒಡನೆಯೇ ಕಾಗದ-ಲೇಖನಿಯನ್ನು ತೆಗೆದು ಅವರ ಎದುರಿಗೇ ಇಟ್ಟುಬಿಟ್ಟರು.

ಡಾ| ಆರೋಗ್ಯಂರವರು ಹಣವನ್ನು ತೆಗೆದು ಭದ್ರವಾಗಿ ತಮ್ಮ ಪೆಟ್ಟಿಗೆಯಲ್ಲಿರಿಸಿ, ಬರೆಯುವುದಕ್ಕೆ ಕುಳಿತರು—"ತಮ್ಮ ಹೆಸರು ಶಿವಸುಬ್ರಹ್ಮಣ್ಯ ಅಯ್ಯರ್ ಅಲ್ಲವೇ?"

"ಹೌದು" ಎಂದರು ಅಯ್ಯರರು.

"ಸರಿ" ಎಂದೆನ್ನುತ್ತ ಡಾಕ್ಟರರು ಬರೆಯತೊಡಗಿದರು:

"ಶಿವಸುಬ್ರಹ್ಮಣ್ಯ ಅಯ್ಯರ್ ಎಂಬ ಸಾಮುಧಾರಿ, ತಂಜಾವೂರಿನ ಬ್ರಾಹ್ಮಣರೊಬ್ಬರು ತಮ್ಮ ಮಾವ (ಹೆಂಡತಿಯ ತಂದೆ)ಯೊಡನೆ ತೀರ್ಥಯಾತ್ರೆಗಾಗಿ ಕಾಶಿಗೆ ಬಂದಿದ್ದರು. ವಯೋವೃದ್ಧರಾದ ಅವರ ಮಾವಂದಿರು ಪ್ರಯಾಣಕಾಲದಲ್ಲೇ ಕಾಯಿಲೆಗೆ ತುತ್ತಾದರು. ಅವರ ಚಿಕಿತ್ಸೆಗಾಗಿ ಸದ್ರಿಯವರು ನನ್ನ ಬಳಿಗೆ ಬಂದು ಪ್ರಾರ್ಥಿಸಿಕೊಂಡಂತೆ ನಾನು ಔಷಧೋಪಚಾರಗಳನ್ನು ಮಾಡಿದೆ. ಆದರೆ, ವೃದ್ಧಾಪ್ಯದ ಕಾರಣ ಮದ್ದು ಪರಿಣಾಮಕಾರಿಯಾಗಲಿಲ್ಲ. ಈ ದಿನ ಬೆಳಿಗ್ಗೆ ಅವರು ಸುಮಾರು ಹತ್ತು ಗಂಟೆ ಸಮಯದಲ್ಲಿ ಮರಣಹೊಂದಿರುವರು. ಸದ್ರಿ ಅಯ್ಯರರು ಕೇಳಿಕೊಂಡಂತೆ ಈ ಪತ್ರವನ್ನು ಬರೆದುಕೊಡಲಾಗಿದೆ."

ಈ ರೀತಿ ಬರೆದು ಪೂರ್ಣಗೊಳಿಸಿದ ಪತ್ರವನ್ನು ಡಾಕ್ಟರರು ಅಯ್ಯರರ ಕೈಗಿತ್ತರು.

ಸಂತೋಷಗೊಂಡ ಶಿವಸುಬ್ರಹ್ಮಣ್ಯ ಅಯ್ಯರರು, ಡಾಕ್ಟರರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಸಂಧ್ಯಾಕಾಲ ತಪ್ಪದೆ ಹನುಮಾನ್ ಘಾಟ್‌ಗೆ ಬರಬೇಕೆಂದು ಪ್ರಾರ್ಥಿಸಿ ಅಲ್ಲಿಂದ ಹೊರಟು ಹೋದರು.

ಶುಕ್ರವಾರ ದಿನ, ವ್ಯಾದೆಗೆ ಸರಿಯಾಗಿ ಡಾ। ಪಾಲ್ ಆರೋಗ್ಯಂರವರು, ಬನ್ಸಿಲಾಲ್ ಸೇಠಜೀಯವರಿಗೆ ಸಲ್ಲತಕ್ಕ ಹಣವನ್ನು ಕೊಟ್ಟು ರಶೀದಿ ಪಡಕೊಂಡರು. ಇನ್ನು ಮುಂದೆ ಇಂತಹ ಮೋಸಕೃತ್ಯಗಳನ್ನು ಮಾಡಬಾರದೆಂದು, ಸೇಠಜೀಯವರೂ ಪೊಲೀಸಿನವರೂ ಡಾಕ್ಟರರನ್ನು ಎಚ್ಚರಿಸಿದರು, ಮತ್ತು ಇದೊಂದು ಸಲ ಕ್ಷಮಿಸಿದ್ದೇವೆ ಎಂದೂ ಹೇಳಿ ಕಳುಹಿಸಿಕೊಟ್ಟರು.

ಆ ದಿನ, ವಿನಾಯಕನ ಚೌತಿಯ ಶುಭದಿನವಾಗಿತ್ತು. ಡಾಕ್ಟರ್‌ರವರು ಸೇಠರಲ್ಲಿಂದ ಮರಳುತ್ತ ಪೇಟೆಯಲ್ಲಿ ಸುಂದರವಾದ ಗಣಪತಿಯ ವಿಗ್ರಹಗಳನ್ನು ನೋಡಿ ಹರ್ಷಭರಿತರಾದರು. ತಮ್ಮ ಈಸಾಯಿ ಧರ್ಮವನ್ನು ಮನಸ್ಸಿನಿಂದ ತೊಡೆದು ಹಾಕಿ, ಭಯಭಕ್ತಿಗಳಿಂದ ತಾವೂ ಒಂದು ಗಣಪತಿಯ ಮೂರ್ತಿಯನ್ನು ಕೊಂಡುಕೊಂಡರು. ಮನೆಗೆ ಬಂದು ಗಣೇಶನನ್ನು ಪೀಠವಲ್ಲಿರಿಸಿ, ಧೂಪ ದೀಪ ನೈವೇದ್ಯಗಳನ್ನರ್ಪಿಸಿ, ಪುಷ್ಪಗಳಿಂದ ಅಲಂಕರಿಸಿ ಭಕ್ತಿಯಿಂದ ಕೈ ಮುಗಿದು ಕಣ್ಮುಚ್ಚಿ ಆ ಮಂಗಲ ಮೂರ್ತಿಯ ಎದುರಿಗೆ ನಿಂತುಕೊಂಡು, "ನನ್ನನ್ನು ರಕ್ಷಿಸಿದ ಮಹಾಮಹಿಮ! ಅನಾಥ ರಕ್ಷಕ! ಆಪದ್ಬಾಂಧವ!" ಎಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸಿ, ಸಾಷ್ಟಾಂಗ ಪ್ರಣಾಮಗಳನ್ನರ್ಪಿಸಿದರು. ಸಂಜೆಯಾಗುತ್ತಲೇ ಅಯ್ಯರರ ಕೇಳಿಕೆಯಂತೆ, ಹನುಮಾನ್ ಘಾಟ್‌ಗೆ ಹೊರಟು ಹೋಗಿ, ಶಿವಸುಬ್ರಹ್ಮಣ್ಯ ಅಯ್ಯರರನ್ನು ಭೇಟಿಯಾದರು.

ತನ್ನ ದೊಡ್ಡ ಸಂಕಷ್ಟದಿಂದ ಪಾರಾಗಲು ಕಾರಣರಾದ ಶಿವಸುಬ್ರಹ್ಮಣ್ಯ ಅಯ್ಯರರ ಮಾವನ ಅಂತಿಮ, ಪ್ರಥಮ ದರ್ಶನಕ್ಕಾಗಿ ಕಾತರರಾಗಿದ್ದ— ಡಾಕ್ಟರರು ಉತ್ಸಾಹದೊಡನೆ ಆ ಮೃತ ದೇಹದ ಬಳಿಗೆ ಮುನ್ನಡೆದರು; ತೀರ ಹತ್ತಿರಕ್ಕೆ ಹೋಗಿ ನಿಂತರು. ನೋಡಿದರು; ಚೆನ್ನಾಗಿ ನೋಡಿದರು! ದಂಗು ಬಡಿದವರಂತೆ ಮತ್ತೂ ಮತ್ತೂ ಆ ಹೆಣವನ್ನು ನೋಡುತ್ತಾ ಸ್ತಬ್ಧರಾಗಿ ನಿಂತಲ್ಲೇ ನಿಂತುಬಿಟ್ಟರು! ಆ ಮೃತಪಟ್ಟ ವ್ಯಕ್ತಿಯು ತಮ್ಮ ತಂದೆಯ ತದ್ರೂಪದಂತೆ ತೋರಿ, ಡಾ। ಆರೋಗ್ಯಂರವರು ಸಂದೇಹಪಟ್ಟರು, ಕಣ್ಣುಗಳನ್ನುಜ್ಜಿಕೊಂಡು ಪುನಃ ನೋಡಿದರು—ಆ ವ್ಯಕ್ತಿ, ಜೀವವಿಲ್ಲದ ಹೆಣ! ತಮ್ಮ ತಂದೆಯದೇ ಹೌದೆಂದು ಕಂಡುಹಿಡಿಯಲು ಹೆಚ್ಚು ವಿಳಂಬವಾಗಲಿಲ್ಲ. ಆದರೆ ಅಷ್ಟು ದೊಡ್ಡ ಆಸ್ತಿ ತಮ್ಮ ತಂದೆಗೆ ಇರಲಿಲ್ಲ.

ಈ ಸ್ಥಿತಿಯಲ್ಲಿ ಅವರು ಇಲ್ಲಿ ಹೇಗೆ? ಎಂಬುದೇ ಸಮಸ್ಯೆಯಾಯಿತು, ಡಾ| ಆರೋಗ್ಯಂರವರಿಗೆ.

ಶಿವಸುಬ್ರಹ್ಮಣ್ಯ ಅಯ್ಯರರ: ಎಲ್ಲಾ ಕಾರ್ಯಕಲಾಪಗಳನ್ನು ಶೀಘ್ರವಾಗಿ ನೆರವೇರಿಸಿದರು ಡಾ| ಆರೋಗ್ಯಂರವರು ಮೌನವಾಗಿಯೇ ಇದ್ದರು. ಪವಿತ್ರ ನದಿಯಾಗಿರುವ ಗಂಗಾ ತೀರದಲ್ಲಿ ನಡೆಯುವ ಉತ್ತರ ಕ್ರಿಯಾದಿಗಳು, ಬಹು ಚುರುಕಾಗಿ ನೆರವೇರುತ್ತವೆ. ಅಂತೆಯೇ ಉತ್ತರ ಕ್ರಿಯೆಯ ಕೆಲಸ ನೆರವೇರಿತು.

ಆ ಬಳಿಕ ಡಾ| ಆರೋಗ್ಯಂರವರು ಅಯ್ಯರರನ್ನು ತಮ್ಮ ಮನೆಗೆ ಬರಬೇಕೆಂದು ಕೇಳಿಕೊಂಡರು. ಆಗ ಅಯ್ಯರರು ಹೇಳಿದರು: "ನಾನು ಧರ್ಮಛತ್ರಕ್ಕೆ ಹೋಗಿ ಕೆಲವು ಬ್ರಾಹ್ಮಣರನ್ನು ಕರೆಸಿ ಇನ್ನು ಮಾಡಬೇಕಾದ ಶಾಸ್ತ್ರೀಯ ವಿಧಿಗಳನ್ನೆಲ್ಲ ಮಾಡಿ ಪೂರೈಸಬೇಕಾಗಿದೆ. ಆದುದರಿಂದ ನಾಳೆ ಬೆಳಗ್ಗೆ ತಮ್ಮಲ್ಲಿಗೆ ಬರುತ್ತೇನೆ" ಎಂದರು.

ಡಾ| ಆರೋಗ್ಯಂರವರು ಅಲ್ಲಿಂದ ತಮ್ಮ ಮನೆಗೆ ಮರಳಿದರು. ನಡೆದ ವಿಚಾರಗಳನ್ನೆಲ್ಲ ಮೆಲುಕು ಹಾಕುತ್ತ ಮನೆ ಸೇರಿದರು. ತಂದೆಯ ಮರಣಕ್ಕಾಗಿ ದುಃಖಕ್ಕಿಂತಲೂ ಹೆಚ್ಚಾಗಿ ಆಶ್ಚರ್ಯಪಡುತ್ತ ಶತಪಥ ತಿರುಗುತ್ತ ಅವರು ಅನ್ಯಮನಸ್ಕರಾಗಿ, ದೊಡ್ಡ ಸಮಸ್ಯೆಯೊಂದರಲ್ಲಿ ಸಿಲುಕಿದಂತಿದ್ದರು. ಅಂದು ರಾತ್ರೆ ಅವರಿಗೆ ನಿದ್ರೆಯೇ ಬೀಳಲಿಲ್ಲ. ಕ್ಷಣಕ್ಷಣವೂ ಒಂದೊಂದು ಸಮಸ್ಯೆ ಮನಸ್ಸಿನ ಮುಂದೆ ನಿಂತಂತಿತ್ತು. ಬೆಳಗಿನ ಜಾವಕ್ಕೆನ್ನುವಾಗ ಹೇಗೂ ಅವರಿಗೆ ನಿದ್ರೆ ಹಿಡಿಯಿತು.

ಶಿವಸುಬ್ರಹ್ಮಣ್ಯ ಅಯ್ಯರರು ಬೆಳಿಗ್ಗೆ ಬೇಗನೆದ್ದು ಡಾ| ಆರೋಗ್ಯಂರವರಲ್ಲಿಗೆ ಬಂದರು. ಡಾಕ್ಟರರು ಪ್ರಸನ್ನವದನರಾದರು. ಅಯ್ಯರರು ಎಲ್ಲ ವಿಚಾರಗಳನ್ನೂ ಸವಿಸ್ತಾರವಾಗಿ ಹೇಳುತ್ತ, ತಮ್ಮಲ್ಲಿದ್ದ ವೀಲ್ ನಾಮೆಯ ಆ ಒಂದು ಪ್ರತಿಯನ್ನೂ ಡಾಕ್ಟರರಿಗೆ ತೋರಿಸುತ್ತ ಅದರಲ್ಲಿದ್ದ ಉಲ್ಲೇಖಗಳನ್ನು ಓದಿ ಹೇಳತೊಡಗಿದರು. ಅದರ ಉಲ್ಲೇಖ ಇಂತಿದ್ದಿತು—

"ಸಿಯಾಲಿ ತಾಲೂಕು ಕಾಟುಮುನಿಯಪ್ಪನ್ ಕೋವಿಲ್‌ನ ನಿವಾಸಿಗಳಾದ, ಮಹದೇವ ಅಯ್ಯರರ ಪುತ್ರರಾದ ಶ್ರೀ ಸಾಂಬಶಿವ ಅಯ್ಯರರು ಬರೆಸಿಟ್ಟ ವೀಲ್‌ನಾಮೆಯ ಕ್ರಮವೆಂತೆಂದರೆ— "ನನ್ನ ಮೊದಲನೆ ಹೆಂಡತಿಯಲ್ಲಿ ಹುಟ್ಟಿದ ನನ್ನ ಹಿರಿಯ ಮಗನು ಚಿಕ್ಕಂದಿನಲ್ಲೇ ಮನೆಬಿಟ್ಟು ಪರಾರಿ

ಯಾಗಿದ್ದಾನೆ. ಅವನು ಮನೆಯಿಂದ ಹೊರಟು ಇಂದಿಗೆ ಮೂವತ್ತು ವರ್ಷಗಳು ಕಳೆದುವು. ಆದರೆ, ಇದು ತನಕವೂ ಅವನ ಸುದ್ದಿಯೇ ತಿಳಿದಿರುವುದಿಲ್ಲ. ನನ್ನ ಎರಡನೇ ಪತ್ನಿಯಲ್ಲಿ ಜನಿಸಿದ ಪುತ್ರನೊಬ್ಬನು ಅಕಾಲ ಮರಣಕ್ಕೆ ತುತ್ತಾದನು. ನನ್ನ ಮೊದಲನೇ ಹೆಂಡತಿಯಲ್ಲಿ ಹುಟ್ಟಿದ ಮಗಳು ಬಾಲಂಬಾಲ ಎಂಬವಳನ್ನು ಶಿವಸುಬ್ರಹ್ಮಣ್ಯ ಅಯ್ಯರ್ ಎಂಬ ಸತ್ಪುರುಷರಿಗೆ ಧಾರೆಯೆರೆದು ಕೊಡಲಾಗಿದೆ. ಅವರು ಗಂಡ-ಹೆಂಡತಿ ಈರ್ವರೂ ಸುಖವಾಗಿರುವರು. ಅವರಿಗೆ ಸುಖ ಸಂಪತ್ತುಗಳಿಗೇನೂ ಕಡಿಮೆಯಿಲ್ಲ. ನನ್ನ, ಈ ಕೆಳಗೆ ವಿವರಗಳನ್ನು ಕೊಡಲ್ಪಟ್ಟಿರುವ ಸಮೃದ್ಧವಾದ ಆಸ್ತಿ ಒಂದು. ಅದು ನನ್ನ ಎರಡನೆಯ ಹೆಂಡತಿಯಾದ ಗೋರಿ ಅಮ್ಮಾಳ್ ಅವಳಿಗೆ ಸೇರತಕ್ಕದ್ದು. ನಾನು ಸಂಪಾದಿಸಿ ಕೂಡಿಸಿಟ್ಟ ಹಣ ಎರಡು ಲಕ್ಷಕ್ಕೂ ಮಿಕ್ಕಿ ಇರುವುದು. ಅದನ್ನು ಈ ಕೆಳಗೆ ನಮೂದಿಸಿದ ಬೇಂಕಿನಲ್ಲಿ ಇಡಲಾಗಿದೆ. ನನ್ನ ಜೀವಿತ ಕಾಲದಲ್ಲಿ ನನ್ನ ಇಚ್ಛಾನುಸಾರವಾಗಿ, ಅದರಿಂದ ತೆಗೆದು ಖರ್ಚುಮಾಡಲು ಹಕ್ಕುಳ್ಳವನಾಗಿದ್ದೇನೆ. ನನ್ನ ಖರ್ಚು ತೆಗೆದು ಮಿಕ್ಕುಳಿದ ಹಣವನ್ನು ನನ್ನ ನಂತರ, ನನ್ನ ಮರಣಕ್ಕೆ ಮೊದಲು, ನನ್ನ ಮಗಳಾದ ಬಾಲಂಬಾಲಳಲ್ಲಿ ಗಂಡು ಮಗು ಹುಟ್ಟಿದ್ದೇ ಆದರೆ, ಅದೆಲ್ಲವೂ ಆ ಮಗನಿಗೆ ಸೇರತಕ್ಕದ್ದು. ನನ್ನ ಜೀವಿತ ಕಾಲದಲ್ಲಿ ಮಗಳಾದ ಬಾಲಂಬಾಲಳಿಗೆ ಗಂಡು ಮಗು ಹುಟ್ಟದಿದ್ದರೆ, ಮನುಸ್ಮೃತಿಯಲ್ಲಿ ಹೇಳಿರುವಂತೆ ನನ್ನ ಉತ್ತರಾಧಿಕಾರಿಯಾದವನಿಗೇ ಸೇರತಕ್ಕದ್ದು. ಅಥವಾ ಒಂದು ವೇಳೆ, ಮನೆಯಿಂದ ಕಾಣೆಯಾಗಿರುವ ನನ್ನ ಹಿರಿಯ ಪುತ್ರನು ಮರಳಿ ಮನೆಗೆ ಬಂದರೆ, ಸರ್ವಾಧಿಕಾರವೂ ಅವನಿಗೇ ಸೇರತಕ್ಕದ್ದು. ಹಾಗೆ ಮರಳಿ ಬಾರದಿದ್ದಲ್ಲಿ, ನನ್ನ ಮರಣದನಂತರ, ನನ್ನ ಸಮೀಪದ ಬಂಧುಗಳಿಗೆ ಸೇರತಕ್ಕುದ್ದಾಗಿದೆ. ಈ ರೀತಿಯಿಂದ ವಿವರಿಸಿದ ಈ ವಿಲ್ ಪತ್ರವು ಈ ಪ್ರಕಾರ, ತಾ.........ರಲ್ಲಿ, ರಿಜಿಷ್ಟ್ರಿ ಮಾಡಲಾಗಿದೆ."

ವಿಲ್‌ಪತ್ರವನ್ನು ಓದಿದ ಬಳಿಕ ಡಾ। ಆರೋಗ್ಯಂರವರ ಮುಖ ವಿವರ್ಣವಾಗಿದ್ದಿತು. ಅವರು ನಿಟ್ಟುಸಿರೊಂದನ್ನು ಬಿಟ್ಟು ಮೌನವಾಗಿ ಕುಳಿತಿದ್ದರು. ಶಿವಸುಬ್ರಹ್ಮಣ್ಯ ಅಯ್ಯರರು ಡಾಕ್ಟರರಿಂದ ಬೀಳ್ಕೊಂಡು ತಮ್ಮ ನಿವಾಸಸ್ಥಾನಕ್ಕೆ ತೆರಳಿದರು.

o o o o o

"ಇದ್ದುದೆಲ್ಲವೂ ತಂಗಿಯಾದ ಬಾಲಂವಾಲಳಿಗೂ ಅವಳ ಮಗುವಿಗೂ ಸೇರುವಂತಾಯಿತು. ಅರಿಯದ ಬಾಲಕನಂತೆ ನಾನೆಂತಹ ಮೋಸದಲ್ಲಿ ಬಿದ್ದೆ........ಆದರೂ ನಾನು ಗೆದ್ದಿರುವೆನು. ಇದರಲ್ಲಿ ವ್ಯಥೆಪಡುವುದು ಸರಿಯಲ್ಲ." ಈ ರೀತಿಯಿಂದ ತಮ್ಮ ಮನಸ್ಸನ್ನು ಸ್ಥಿಮಿತದಲ್ಲಿಟ್ಟುಕೊಳ್ಳುತ್ತ ಡಾ| ಆರೋಗ್ಯಂರವರೂ ಸಮಾಧಾನ ತಂದುಕೊಳ್ಳುತ್ತಿದ್ದರು.

ಡಾ| ಪಾಲ್ ಆರೋಗ್ಯಂರವರು, ಶಾಂತಚಿತ್ತರಾಗಿ ಆ ಮಹಾಗಣಪತಿಯನ್ನು ಪೂಜಿಸಿ, ಶಿರಬಾಗಿ, ಪ್ರಸಾದವನ್ನು ಸ್ವೀಕರಿಸಿದರು. ಆ ತರುವಾಯ ಆ ದಿವ್ಯ ಮೂರ್ತಿಯ ಮುಂದೆ—ಪದ್ಮಾಸನದಲ್ಲಿ ಕುಳಿತು, ಭಕ್ತಿಯಿಂದ ಧ್ಯಾನಮಾಡುತ್ತ ಮೈಮರೆತರು.

o o o o o

"ಅಣ್ಣಾ........ಅಣ್ಣಾ........ನೀವು ಬಂದುಬಿಟ್ಟಿರಾ! ಮನೆ ಬಿಟ್ಟು ಮೂವತ್ತು ವರ್ಷಗಳ ನಂತರ ಇಂದು ಬರುತ್ತಿದ್ದೀರಿ. ಇಂದು ನಿಮ್ಮನ್ನು ಕಂಡು, ತಂದೆಯವರನ್ನಗಲಿದ ದುಃಖವನ್ನೂ ಮರೆತುಬಿಟ್ಟಿದ್ದೇನೆ. ಅಣ್ಣಾ! ವೈದ್ಯನಾಥ್! ನೀವು ಈಸಾಯಿ ಧರ್ಮವನ್ನು ಸ್ವೀಕರಿಸಿ ಆ ಜಾತಿಗೆ ಸೇರಿಬಿಟ್ಟಿದ್ದೀರೆಂದು ಕೇಳಿದ್ದೆ....ಅದು ನಿಜವೇನಣ್ಣ!" ಎಂದೆನ್ನುತ್ತ ಡಾ| ಪಾಲ್ ಆರೋಗ್ಯಂರವರ ತಂಗಿ ಬಾಲಂವಾಲಳು ಅಳತೊಡಗಿದಳು. ಡಾ| ಆರೋಗ್ಯಂರವರಿಗೂ ಕಣ್ಣೀರು ಬಂದಿದ್ದಿತು. ಮೂವತ್ತು ವರ್ಷಗಳ ಅನಂತರದ ಆ ಅಣ್ಣತಂಗಿಯರ ಮಿಲನವು ಇಬ್ಬರಲ್ಲಿಯೂ, ಸಂತೋಷವನ್ನೂ ದುಃಖವನ್ನೂ ಒಡಮೂಡಿಸಿದ್ದಿತು. ಡಾ| ಆರೋಗ್ಯಂರವರು ತಂಗಿಯನ್ನು ಸಮಾಧಾನ ಪಡಿಸುತ್ತ ಅಂಗಿಯನ್ನು ತೆಗೆದು ತಮ್ಮ ಜನಿವಾರವನ್ನು ತೋರಿಸಿದರು. "ಬಾಲಾ, ನೀನು ಅಳಬೇಡಮ್ಮ! ಆದದ್ದು ಆಗಿಹೋಯಿತು. ಎಲ್ಲಾ ದೈವಸಂಕಲ್ಪ! ಎರಡು ಲಕ್ಷದ ರಾಶಿಯನ್ನೂ ಆಸ್ತಿಯನ್ನೂ ಬರೀ ಆರು ಸಾವಿರ ರೂಪಾಯಿಗಳಿಗೆ ಮರುಳಾಗಿ, ನಾನು ತೊರೆದು ಬಿಟ್ಟೆ! ನೋಡಮ್ಮ, ನಾನು ಎಂತಹ ಹುಚ್ಚ! ಎಂತಹ ಕಡು ಮೂರ್ಖ" ಎಂದೆನ್ನುತ್ತ ಡಾ| ಆರೋಗ್ಯಂರವರು ಗಹಗಹಿಸಿ ನಕ್ಕರು. ಆ ವಿಕಟ ನಗು ಅಲ್ಲೆಲ್ಲ ತುಂಬಿ ಪ್ರತಿಧ್ವನಿಸಿತು!

"ಅಣ್ಣಾ....ನೀವು ಹೇಗೂ ಮನೆಗೆ ಬಂದಿದ್ದೀರಿ. ಇನ್ನು ಆಸ್ತಿಯೆಲ್ಲವನ್ನೂ ನೀವೇ ಇಟ್ಟುಕೊಳ್ಳಿರಿ. ನನಗೆ ಅದರಲ್ಲಿ ಸ್ವಲ್ಪವೂ ಪಶ್ಚಾತ್ತಾಪ

ವಿಲ್ಲ" ಎಂಬುದಾಗಿ ಅಣ್ಣನಿಗೆ ಸಮಾಧಾನ ಹೇಳುತ್ತ ಆ ನಿರ್ಮಲ ಹೃದಯಿಯಾದ ಬಾಲಂಬಾಲಳು ಮಗುವಿಗೆ ಮೊಲೆಯುಣಿಸಲು ಹೊರಟಳು.

"ನಿನಗೇನು ಗೊತ್ತಿದೆ? ಮೂರ್ಖರ ಹಾಗೆ ಮಾತನಾಡುತ್ತೀಯಲ್ಲ! ಅವರು ನಿನ್ನ ಹಣ—ಆಸ್ತಿಗಾಗಿ ಆಸೆಪಟ್ಟುಕೊಂಡು ಬಂದವರಲ್ಲ. ಅವರು ಮಹಾತ್ಮರು, ಸದ್ಗುಣಸಂಪನ್ನರು, ಮಹಾ ತ್ಯಾಗವೀರರು. ಅವರು ತಮ್ಮ ಮುಂದಿನ ಜೀವನವನ್ನು ಶಂಕರಾಚಾರ್ಯರ ಮಠಕ್ಕೆ ತೆರಳಿ ದೇವರ ಧ್ಯಾನದಲ್ಲೇ ಕಳೆಯಬೇಕೆಂದು ನಿಶ್ಚೈಸಿದ್ದಾರೆ. ಇನ್ನು ಅವರು ನಿನ್ನ ಮಾತುಗಳನ್ನು ಕೇಳುತ್ತಾರೆಯೇ?" ಶಿವಸುಬ್ರಹ್ಮಣ್ಯ ಅಯ್ಯರರು ಉದ್ದೇಶ ಪೂರ್ವಕವಾಗಿ, ಈ ಮಾತುಗಳನ್ನು ತಮ್ಮ ಹೆಂಡತಿಯೊಡನೆ ಹೇಳಿದರು.

o o o o o

ಶಿವಸುಬ್ರಹ್ಮಣ್ಯ ಅಯ್ಯರರು ಹೇಳಿದ ಮಾತು ಸುಳ್ಳಾಗಿರಲಿಲ್ಲ. ಡಾ|| ಪಾಲ್ ಆರೋಗ್ಯಂರವರು ತಮ್ಮ ವೇಷಭೂಷಣಗಳನ್ನು ಕೂಡಲೇ ಕಳಚಿ ಬಿಸುಟರು. ಆ ಮೇಲೆ, ಅವರು, ವಿಲಂಬಿಸದೆ ಕುಂಭಕೋಣಕ್ಕೆ ಪ್ರಯಾಣಮಾಡಿದರು. ಅಲ್ಲಿ, ವೈದ್ಯನಾಥ ಅಯ್ಯರ್ ಎಂಬ ಹೆಸರಿನಿಂದ ವೈದಿಕ ಬ್ರಾಹ್ಮಣರ ಸಮೂಹದಲ್ಲಿ ಸೇರಿಕೊಂಡು, ಕರ್ಮಾನುಷ್ಠಾನಗಳಿಂದ ಆಚಾರಶೀಲರಾಗಿ ಶೋಭಿಸುತ್ತ, ತಮ್ಮ ಶೇಷಜೀವನವನ್ನು ಪರಮಾತ್ಮನ ಧ್ಯಾನದಲ್ಲಿ ಕಳೆಯುತ್ತಿದ್ದರು.



Edited, Printed & Published by K. V. Shenoy

# 64

# ಲೌಕಿಕ ನ್ಯಾಯಗಳು

•

ನಲ್ವತ್ತೈದು 'ನ್ಯಾಯ'ಗಳ
ವಿವರಣೆ.

ಸಂಗ್ರಾಹಕರು, ಲೇಖಕರು:
ಶ್ರೀ। ಕೆ.ಎಲ್.ಎನ್.ಉಪಾಧ್ಯಾಯ,
ಉಡುಪಿ.

1955.



# ಒಂದಾಣೆ ಮಾಲೆಯಲ್ಲಿ
## ಈ ವರೆಗೆ ಪ್ರಕಟವಾದ ಪುಸ್ತಕಗಳ ವಿವರ ಹೀಗಿದೆ:

೧. ‡ಕೆಪ್ಪಟರಾಯ (ವಿನೋದ ಕಥೆ) — ದಿ| ಎಂ. ಎನ್. ಕಾಮತ್.
೨. ‡ನಾರೀಶ್ವರರು (ಏಕಾಂಕ ಪ್ರಹಸನ) — ಶ್ರೀ| ಕುಡ್ಪಿ ವಾಸುದೇವ ಶೆಣೈ.
೩. ‡ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು — ಶ್ರೀ| ಎಲ್. ಎಸ್. ನಾಯಕ.
೪. ‡ಸದ್ರಿ ಸುಬ್ಬ (ಏಕಾಂಕ ಪ್ರಹಸನ) — ದಿ| ಎಂ. ಎನ್. ಕಾಮತ್.
೫. ‡ಅದ್ಭುತ ತ್ಯಾಗ ಮತ್ತು ಇತರ ಕಥೆಗಳು — ವೈದ್ಯಗುರು ಎಂ. ಆರ್. ಭಟ್.
೬. ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ) — ಕುಡ್ಪಿ ವಾಸುದೇವ ಶೆಣೈ.
೭. ‡'ಬೀಡಿ ಸೇದಬೇಡಿ' ಮತ್ತು 'ಆ ಮಗು' (ವಿನೋದ ಕಥೆಗಳು) — ದಿ| ಎಂ.ಎನ್. ಕಾಮತ್.
೮. ‡ಇಂಗ್ಲಿಷ್–ಕನ್ನಡ ಅರ್ಥಕೋಶ (ಭಾರತ ಸಂಸ್ಥಾನದಿಂದ)
೯. ‡ಲಂಚಕ್ಕೆ ಸಂಚಕಾರ — ಡಾ| ಎಸ್. ಪಿ. ಭಟ್.
೧೦. ‡ಟಿಶ್ಯೂ ಔಷಧಿಗಳ ಕೈಪಿಡಿ. — ಶ್ರೀ| ಪಿ. ಎಸ್. ವೆಂಕಟಕೃಷ್ಣರಾವ್.
೧೧. ಕ್ಷೇತ್ರ ಧರ್ಮಸ್ಥಳ (ತೃತೀಯ ಮುದ್ರಣ).
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು — ಶ್ರೀ| ಎಲ್. ಎಸ್. ನಾಯಕ.
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು — ಡಾ| ಪಿ. ಆರ್. ಭಟ್.
೧೪. "ವೆಂಕಟನ ಸಂಕಟ" (ಏಕಾಂಕ ಪ್ರಹಸನ) ಮತ್ತು ಎರಡು ಕಥೆಗಳು
೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ) — ಶ್ರೀ| ಕುಡ್ಪಿ ವಾಸುದೇವ ಶೆಣೈ.
೧೬. ವೇಣೂರಿನ ಗತವೈಭವ — ದಿ| ಪಂಡಿತ ಲೋಕನಾಥ ಶಾಸ್ತ್ರಿಗಳು.
೧೭. ಒಗಟುಗಳು (ದ್ವಿತೀಯ ಮುದ್ರಣ) — ಶ್ರೀ| ಟಿ. ಚಂದ್ರರಾಜ ಸೆಟ್ಟಿ.
೧೮. ಜಗಳಗಂಟಿ ಮತ್ತು ಇತರ ಕಥೆಗಳು — ವೈದ್ಯಗುರು ಎಂ. ಆರ್. ಭಟ್.
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಪ್ಪು — ದಿ| ಎಂ. ಎನ್. ಕಾಮತ್.
೨೧. ‡ಭಾರತದ ಮಹಾನಗರಗಳು (ಪ್ರಥಮ ಭಾಗ) — ಶ್ರೀ| ಟಿ. ಚಂದ್ರರಾಜ ಸೆಟ್ಟಿ.
೨೨. ‡ತಿರುಕ್ಕುರಲ್ — ಶ್ರೀ| ಡಿ. ಪುಟ್ಟಸ್ವಾಮಿ, ಎಡ್ವೊಕೇಟ್.
೨೩. ಸೂರ್ಯನ ಸಂಸಾರ ಮತ್ತು ಇತರ ಕಥೆಗಳು — ಶ್ರೀ| ಬಿ. ಶಂಕರ ಭಟ್.
೨೪. ‡ಭಾರತದ ಮಹಾನಗರಗಳು (ದ್ವಿತೀಯ ಭಾಗ) — ಶ್ರೀ| ಟಿ. ಚಂದ್ರರಾಜ ಸೆಟ್ಟಿ.
೨೫. ಧೈರ್ಯ ಮತ್ತು ಇತರ ಸತ್ಯ ಕಥಾನಕಗಳು — ಶ್ರೀ| ಎಲ್. ಎಸ್. ನಾಯಕ.
೨೬. ‡ನಾರಾವತಾರ (ಏಕಪಾತ್ರ ಯಕ್ಷಗಾನ ಪ್ರಬಂಧ) — ಶ್ರೀ| ಜಿ. ಆರ್. ಪಾಂಡೇಶ್ವರ.
೨೭. ಹಾಸ್ಯವಿಲಾಸ (ಆರಿಸಿ ತೆಗೆದ ನಗೆಹನಿಗಳು) — ಶ್ರೀ| ಕುಡ್ಪಿ ವಾಸುದೇವ ಶೆಣೈ.
೨೮. ಸತ್ಯವಂತ ಬಾಬಿ [ಏಕಾಂಕ ಪ್ರಹಸನ] — ಶ್ರೀ| ಕುಡ್ಪಿ ವಾಸುದೇವ ಶೆಣೈ.
೨೯. ಜಾಣ್ಮೆಯ ಒಗಟುಗಳು — ಡಾ| ಎಸ್. ಪಿ. ಭಟ್.
೩೦. ಜಾತಕ ಕಥೆಗಳು — ಶ್ರೀ| ಎಂ. ಸುಬ್ರಾಯನ್.
೩೧. ಕಾರ್ಕಳದ ಚರಿತ್ರೆ — ಶ್ರೀ| ಡಿ. ಪುಟ್ಟಸ್ವಾಮಿ, ಎಡ್ವೊಕೇಟ್.
೩೨. ಮರ್ಜಿ [ಏಕಾಂಕ ಪ್ರಹಸನ] — ದಿ| ಎಂ. ಎನ್. ಕಾಮತ್.
೩೩. ದರ್ಶನದ ಕಥೆಗಳು. — ಶ್ರೀ| ಬಿ. ಶಂಕರ ಭಟ್ಟ ಮತ್ತು ಶ್ರೀ| ಬಿ. ಎಂ. ಶರ್ಮಾ.

(ಪುಟ 17ಕ್ಕೆ ಮುಂದುವರಿದಿದೆ.)

# ಲೌಕಿಕ ನ್ಯಾಯಗಳು

## (ಕನ್ನಡದಲ್ಲಿ ಅರ್ಥವಿವರಣೆ ಸಹಿತ)

........

### ೧. ಅಶೋಕವನಿಕಾನ್ಯಾಯ

ಅಶೋಕವೃಕ್ಷದುಪವನದಲ್ಲಿ ರಾವಣನು ಸೀತೆಯನ್ನಿರಿಸಿದನು. ಲಂಕೆಯಲ್ಲಿ ಬಗೆಬಗೆಯ ಉಪವನಗಳಿರುವಾಗ ಅಶೋಕ ವನವನ್ನೇ ಸೀತೆಯ ಕಾವಲಿಗೆ ರಾವಣನು ಆಯ್ದುಕೊಳ್ಳಲು ಕಾರಣವನ್ನು ಊಹಿಸಲು ಬರುವದಿಲ್ಲ. ಹಾಗೆಯೇ ಒಂದು ಕೆಲಸವನ್ನು ಸಾಧಿಸಲು ಹಲವಾರು ದಾರಿಗಳು ಇರಬಹುದು. ಆದರೆ, ಒಂದು ಮಾರ್ಗವನ್ನವಲಂಬಿಸಿ ಒಬ್ಬನು ಕಾರ್ಯವನ್ನು ಸಾಧಿಸುತ್ತಾನೆ ಎಂಬರ್ಥದಲ್ಲಿ ಈ ನ್ಯಾಯವು ಬಂದಿದೆ.

### ೨. ಅಶ್ಮಲೋಷ್ಟ ನ್ಯಾಯ

ಒಂದು ಕಲ್ಲು ಮತ್ತು ಗಟ್ಟಿ ಮಣ್ಣು ಎಂದರ್ಥ. ಗಟ್ಟಿ ಮಣ್ಣನ್ನು ಹತ್ತಿಯೊಡನೆ ಹೋಲಿಸುವಾಗ ಅದನ್ನು ಗಟ್ಟಿಯೆನ್ನಬಹುದು. ಆದರೆ ಕಲ್ಲಿನೊಡನೆ ಹೋಲಿಸಿದಾಗ ಅದು ಮಿದುವೇ ಸರಿ. ಹಾಗೇ ಸಾಮಾನ್ಯ ಜನರ ಗೋಷ್ಠಿಯಲ್ಲಿ ಶ್ರೇಷ್ಠನೆನಿಸಿಕೊಂಡವನು ಮಹಾಜನರ ಗೋಷ್ಠಿಯಲ್ಲಿ ಸಾಮಾನ್ಯನೆನಿಸುವವು.

### ೩. ಅಂಧಗೋಲಾಂಗೂಲ ನ್ಯಾಯ

ಕುರುಡನು ಮತ್ತು ದನದ ಬಾಲವೆಂದರ್ಥ. ಧೂರ್ತನೊಬ್ಬನು ದಾರಿಗಾಣದೆ ಅಂಡಲೆಯುತ್ತಿರುವ ಕುರುಡನನ್ನು ಕಂಡು, ದಯಾವಂತನಂತೆ ನಟಿಸಿ ಸಹಾನುಭೂತಿಯಿಂದ ಮಾತಾಡಿದನು. ಕುರುಡನಿಗೆ ತಾನು ಸರಿದಾರಿ ತೋರುವೆನೆಂದು ಭರವಸೆ ಕೊಟ್ಟನು. ಕೊನೆಗೆ ಒಂದು ತುಡುಗು

ದನದ ಬಾಲವನ್ನು ಅವನ ಕೈಯಲ್ಲಿರಿಸಿ ನೀನು ಹೋಗಬೇಕೆಂದಿರುವಲ್ಲಿಗೆ ಇದು ಒಯ್ಯುವದೆಂದು ಹಾಸ್ಯಮಾಡಿದನು. ಕುರುಡನು ಅದರಿಂದಾಗಿ ತುಂಬ ಪೇಚಾಟಪಡುವನು.

ವೇದಾಂತಸೂತ್ರ ಭಾಷ್ಯದಲ್ಲಿ ಶಂಕರಾಚಾರ್ಯರು ಶಿಷ್ಯರನ್ನು ತಪ್ಪು ದಾರಿಗೆಳೆಸುವ ಗುರುವನ್ನು ಮೇಲಣ ನ್ಯಾಯವನ್ನು ಉದಾಹರಿಸಿ ನಿರಾಕರಿಸಿರುವರು.

## ೪. ಅಂಧಕ-ವರ್ತಕೀಯ ನ್ಯಾಯ

ಒಬ್ಬ ಕುರುಡನಿಗೆ ನಡೆಯುತ್ತಿರುವಾಗ ಲಾವಕ್ಕಿಯು ಅದೃಷ್ಟವಿಶೇಷದಿಂದ ದೊರಕುತ್ತದೆ. ಆಕಸ್ಮಿಕವಾಗಿ ತೆರೆದ ಭಾಗ್ಯೋದಯಕ್ಕೆ ಈ ನ್ಯಾಯವು ಅರ್ಥಪುಷ್ಟಿಯನ್ನು ಕೊಡುತ್ತದೆ. ಹುಟ್ಟು ಸಾವುಗಳಿಂದ ಕೂಡಿದ ಈ ಸಂಸಾರದಲ್ಲಿ ಮನುಷ್ಯಜನ್ಮವೂ, ದೊಡ್ಡ ವಂಶದಲ್ಲಿ ಜನಿಸುವದೂ, ಸಜ್ಜನರ ಗೋಷ್ಠಿಯೂ ಇವೇ ಮುಂತಾದುವು ಅಂಧಕ ವರ್ತಕೀಯ ನ್ಯಾಯದಂತೆ (ಸುಕೃತದಿಂದ) ದೊರಕುವವು.

## ೫. ಅಂಧ-ಗಜ ನ್ಯಾಯ

ಇದು ಲೋಕಪ್ರಸಿದ್ಧವಾದ ನ್ಯಾಯವು. ಒಂದು ಆನೆಯ ಆಕೃತಿಯನ್ನು ಹಲವು ಕುರುಡರೊಟ್ಟಾಗಿ ಬಗೆಯಲು ಯತ್ನಿಸಿದರು. ಒಬ್ಬನು ಅದರ ಸುಂಡಿಲನ್ನು ಹಿಡಿದು ಅದು ಹೆಬ್ಬಾವಿನಂತಿದೆಯೆಂದು ತಿಳಿದುಕೊಂಡನು. ಅದರ ಕಾಲನ್ನು ಬಳಸಿದವನು ಅದು ಕಂಬದಂತೆಯೆಂದು ನಿಶ್ಚಯಿಸಿದನು. ಅದರ ಕಿವಿಯನ್ನು ಭಾವಿಸಿದವನು ಅದು ಗೆರಸೆಯಂತೆಯೆಂದು ಹೇಳಿಕೆಯನ್ನಿತ್ತನು. ಹೀಗೆ ಒಬ್ಬೊಬ್ಬರು ಒಂದೊಂದು ಭಾಗವನ್ನು ಪರಾಂಬರಿಸಿ ಬೇರೆ ಬೇರೆ ರೀತಿಯಲ್ಲಿ ಆನೆಯ ರೂಪವನ್ನು ಮನವರಿಕೆಮಾಡಿಕೊಂಡರು.

ಸುರೇಶ್ವರಾಚಾರ್ಯರು ವಾರ್ತಿಕದಲ್ಲಿ 'ಒಬ್ಬನೇ ದೋಷದೂರನಾದ ದೇವರನ್ನು ಕುರುಡರ ನಾನಾವಿಧ ಹೇಳಿಕೆಗಳಂತೆ ಬಹುಜನರು ಬಹುವಿಧವಾಗಿ ಭಾವಿಸುತ್ತಾರೆ' ಎಂದಿರುವರು.

## ೧. ಕಾಕತಾಲೀಯ ನ್ಯಾಯ

ತಾಳೆಯ ಮರದ ಸೋಗೆಯಲ್ಲಿ ಕಾಗೆಯು ಹಾರಿಬಂದು ಕುಳಿತಿತು. ಆಗಲೇ ತಾಳೆಯ ಕಾಯಿಯೊಂದು ಅದರ ತಲೆಯ ಮೇಲೆ ಬಿದ್ದು ಕಾಗೆಯು ಸತ್ತಿತು. ಘಟನಾನುಘಟನೆಯಿಂದ ನಡೆದ ಕಾರ್ಯವನ್ನು ಈ ನ್ಯಾಯವು ಸೂಚಿಸುತ್ತದೆ. ದೇವದತ್ತನು ಮನೆಯಿಂದ ಹೊರಟುದಕ್ಕೂ ಕಳ್ಳರು ಆತನ ಮೇಲೆ ಬಿದ್ದುದಕ್ಕೂ ಸಮ ಆಯಿತು. ಇದು ಕಾಕತಾಲೀಯ ನ್ಯಾಯದಿಂದ ಒದಗಿದ ದುರಂತ.

## ೨. ಕಾಕದಂತಪರೀಕ್ಷಾ ನ್ಯಾಯ

'ವಾಯಸದಂತ ವಿಮರ್ಶನ ನ್ಯಾಯ'ವೆಂದು ಇದನ್ನು ಕರೆಯುವುದೂ ಉಂಟು. ಕಾಗೆಯ ಹಲ್ಲನ್ನು ಎಣಿಸುವ ಯತ್ನವೆಂದರ್ಥ. ಪ್ರಯೋಜನ ವಿಲ್ಲದ ಅರ್ಥಸಿದ್ಧಿಯಿಲ್ಲದ ಕೆಲಸದಲ್ಲಿ ತೊಡಗಿದಾಗ ಅದು ಕಾಕದಂತ ಪರೀಕ್ಷಾನ್ಯಾಯದಂತೆ ವ್ಯರ್ಥವೆನ್ನುವರು.

## ೩. ಕೂಪಮಂಡೂಕ ನ್ಯಾಯ

ಬಾವಿಯಲ್ಲಿರುವ ಕಪ್ಪೆಯೆಂದರ್ಥ. ಲೋಕಾನುಭವವಿಲ್ಲದವನಿಗೆ ಈ ನ್ಯಾಯವನ್ನು ಪ್ರಯೋಗಿಸುತ್ತಾರೆ. ಮನೆಯ ಸಂಕುಚಿತ ಆವರಣದ ಲ್ಲಿದ್ದು ವಿಶಾಲ ಜಗತ್ತಿನ ಗಾಳಿತಾಗದ ಮನುಷ್ಯನು "ಕೂಪಮಂಡೂಕ"ಕ್ಕೆ ಸರಿಹೋಲುವನು. ಅನೇಕ ಅದ್ಭುತ ವಾರ್ತಾಬಹುಲವಾದ ಭೂಮಂ ಡಲವನ್ನು ಸುತ್ತದೆ ಇರುವವನು ಬಾವಿಯೊಳಗಿನ ಕಪ್ಪೆಯಂತೆ.

## ೪. ಘಟ್ಟ ಕುಟ್ಟೀ ಪ್ರಭಾತ ನ್ಯಾಯ

ಸುಂಕದಕಟ್ಟೆಯ ಹತ್ತಿರವೇ ಬೆಳಗಾದುದು ಎಂದರ್ಥ. ಒಬ್ಬ ಮನುಷ್ಯನು ಸುಂಕವನ್ನು ತಪ್ಪಿಸಲೋಸುಗ ಬಳಸುದಾರಿ ಹಿಡಿದು ಅಲೆ ದಾಡಿ ಅಲೆದಾಡಿ ಬೆಳಗಾಗುವ ಹೊತ್ತಿಗೆ ಸುಂಕದಕಟ್ಟೆಯ ಹತ್ತಿರವೇ ಕಂಗುತ್ತಾನೆ. ಮತ್ತು ಸುಂಕದಾಳುಗಳ ಕೈಗೆ ಸಿಕ್ಕುತ್ತಾನೆ. ಕಷ್ಟಪಟ್ಟೂ

ದರೂ ಉದ್ದೇಶಿಸಿದ ಕಾರ್ಯವು ನೆರವೇರದೆ ಹೋಗುವದಕ್ಕೆ ಈ ನ್ಯಾಯವು ಉದಾಹರಿಸಲ್ಪಡುತ್ತದೆ.

## ೧೦. ಘುಣಾಕ್ಷರ ನ್ಯಾಯ

ಮರವನ್ನು ಅಥವಾ ಪುಸ್ತಕವನ್ನು ಕೊರೆಯುವ ಕೀಟವು ಕೊರೆಯುತ್ತ ಹೋದಹಾಗೆ ಕೊರೆದಲ್ಲಿ ಒಂದು ಅಕ್ಷರದಂತೆ ಕಾಣಿಸಿಕೊಳ್ಳುವದಕ್ಕೆ ಘುಣಾಕ್ಷರ ನ್ಯಾಯವೆನ್ನುತ್ತಾರೆ. ಇದು ಕೇವಲ ಯಾದೃಚ್ಛಿಕ; ಬುದ್ಧಿಪೂರ್ವಕವಲ್ಲ. ದಡ್ಡನಿಂದ ಒಂದು ಚಾತುರ್ಯದ ಕೆಲಸ ನಡೆದರೆ ಅದು ಕೇವಲ ಘುಣಾಕ್ಷರ ನ್ಯಾಯದಂತೆ ನಡೆದುದೆಂದು ತಿಳಿಯಬೇಕು.

## ೧೧. ದೇಹಲೀ ದೀಪನ್ಯಾಯ

ಹೊಸಲಲ್ಲಿಟ್ಟ ದೀಪವು ಒಳಗೂ ಹೊರಗೂ ಬೆಳಕು ನೀಡುವದೆಂದರ್ಥ. ಒಂದೇ ಕೆಲಸವು ಎರಡು ಫಲಗಳನ್ನು ತಂದಲ್ಲಿ ಈ ನ್ಯಾಯವನ್ನು ಮುಂದಿಡಬಹುದು. ಮಗಳಿಗೆ ವರನನ್ನು ಹುಡುಕುತ್ತ ಹೊರಟ ಗೃಹಸ್ಥನಿಗೆ ಹೋದಲ್ಲಿ ಪುಷ್ಕಳ ಊಟವೂ ಸಿಕ್ಕಿತು. ಸುಯೋಗ್ಯ ವರನೂ ದೊರಕಿದನು. ಗೃಹಸ್ಥನ ವರಾನ್ವೇಷಣವು ಮೃಷ್ಟಾನ್ನವನ್ನೂ ತಂದಿತು; ವರನನ್ನೂ ತಂದಿತು. ಹೀಗೆ ಒಂದು ಕೆಲಸದಿಂದ ಎರಡು ಪ್ರಯೋಜನಗಳನ್ನು ದೊರಕಿಸಿಕೊಳ್ಳುವದೇ, ಈ ನ್ಯಾಯದ ಮುಖ್ಯವಾದ ಅರ್ಥ.

## ೧೨. ನಷ್ಟಾಶ್ವದಗ್ಧರಥ ನ್ಯಾಯ

ಕಳೆದುಕೊಂಡ ಕುದುರೆ ಮತ್ತು ಸುಟ್ಟುಹೋದ ರಥವೆಂದರ್ಥ. ಇದರ ಹಿನ್ನೆಲೆಯಲ್ಲಿ ಒಂದು ಕತೆಯು ಹೇಳಲ್ಪಟ್ಟದೆ.

ಇಬ್ಬರು ಪ್ರವಾಸಿಗಳು ತಮ್ಮ ತಮ್ಮ ರಥದಲ್ಲಿ ಕುಳಿತು ಪ್ರಯಾಣ ಹೊರಟರು. ಅವರಲ್ಲಿ ಒಬ್ಬನು ಮಧ್ಯದಾರಿಯಲ್ಲಿ ತನ್ನ ರಥದ ಕುದುರೆಗಳನ್ನು ಕಳೆದುಕೊಂಡನು. ಮತ್ತೊಬ್ಬನು ಉಳಕೊಂಡ ಮನೆಯೂ ಸುಟ್ಟು ಹೋಗಿ ಆತನ ರಥವೂ ಅದರೊಡನೆ ಸುಟ್ಟುಹೋಗುತ್ತದೆ. ಆಗ ಕುದುರೆಯಿಲ್ಲದವನು ತನ್ನ ರಥವನ್ನು ಆತನಿಗೊಪ್ಪಿಸಿದನು. ರಥ ಸುಟ್ಟುಕೊಂಡ

ವನು ತನ್ನ ಕುದುರೆಗಳನ್ನು ಆ ರಥಕ್ಕೆ ಹೂಡಿ ಇಬ್ಬರೂ ಕುಳಿತು ಪ್ರಯಾಣ ವನ್ನು ಮುಂದರಿಸುವರು.

ಹೀಗೆ ಒಬ್ಬರಿಂದೊಬ್ಬರಿಗೆ ದೊರಕಿದ ಉಪಕಾರವನ್ನು ಹೇಳುವಲ್ಲಿ ಈ ನ್ಯಾಯವು ಅರ್ಥವತ್ತಾಗಿದೆ.

## ೧೩. ಪಂಕಪ್ರಕ್ಷಾಲನ ನ್ಯಾಯ

ಕೆಸರನ್ನು ಮುಟ್ಟಿ ಮತ್ತೆ ತೊಳೆಯುವದು ಎಂದರ್ಥ. ಧರ್ಮ ಮಾಡುವದಕ್ಕಾಗಿಯಾದರೂ ಹಣವನ್ನು ಸಂಗ್ರಹಿಸುವದು ತಪ್ಪು. ಧನ ಸಂಗ್ರಹದ ಪಾಪವನ್ನು ಮಾಡಿ, ಆ ಪಾಪವನ್ನು ಕಳೆದುಕೊಳ್ಳುವದಕ್ಕೆ ಧರ್ಮವನ್ನಾಚರಿಸುವದಕ್ಕಿಂತ, ಹಣವನ್ನು ಸಂಗ್ರಹಿಸದೇ ಇರುವದು ಮೇಲಲ್ಲವೆ? ರೋಗ ಚಿಕಿತ್ಸೆಗಿಂತ ರೋಗನಿರೋಧವು ಮೇಲು— ಮುಂತಾದುವು ಈ ನ್ಯಾಯದಿಂದ ಸಿದ್ಧವಾಗುವವು.

## ೧೪. ಪಂಜರಚಾಲನ ನ್ಯಾಯ

ಹಕ್ಕಿಗಳು ಗೂಡನ್ನು ಅಲುಗಾಡಿಸುವದು ಎಂದರ್ಥ. ಒಂದು ಗೂಡಿನಲ್ಲಿ ಸೆರೆಸಿಕ್ಕಿದ ಹನ್ನೊಂದು ಹಕ್ಕಿಗಳು ಪ್ರತ್ಯೇಕ ಪ್ರತ್ಯೇಕ ಅಲ್ಲಾಡುತ್ತ ಇರುವಾಗ ಎಲ್ಲ ಪಕ್ಷಿಗಳ ಒಟ್ಟು ಯತ್ನವು ಇಡೀ ಗೂಡನ್ನು ಚಲನಗೊಳಿಸಿತು. ಒಬ್ಬೊಬ್ಬರು ತಮ್ಮ ಮನೆಬಾಗಿಲು ವಠಾರವನ್ನು ಶುಚಿಯಾಗಿರಿಸುವದರಿಂದ ಆ ಇಡೀ ಕೇರಿಯೇ ಶುಚಿಯಾಗಿರುವ ನಾಗರಿಕ ನೀತಿಗೆ ಈ ನ್ಯಾಯವನ್ನು ಉದಾಹರಿಸಬಹುದು.

## ೧೫. ಪಿಷ್ಟಪೇಷಣ ನ್ಯಾಯ

ಬೀಸಿದ ಹಿಟ್ಟನ್ನೇ ಪುನಃ ಬೀಸುವದು ಎಂದರ್ಥ. ಹೇಳಿದ್ದನ್ನೇ ಪುನರುಚ್ಚರಿಸುವದೂ, ಅರ್ಥಹೀನವಾಗಿ ವಿವರಿಸುವದೂ ಮುಂತಾದ ನಿಷ್ಪ್ರಯೋಜಕ ವಿಷಯಗಳನ್ನೇ ಹೇಳುವಲ್ಲಿ ಈ ನ್ಯಾಯವು ಬರುತ್ತದೆ.

## ೧೬. ಭಿಕ್ಷುಪಾದ ಪ್ರಸಾರಣ ನ್ಯಾಯ

ಒಬ್ಬ ಭಿಕ್ಷುವು ತನಗೆ ಊಟ, ಉಡಿಗೆ, ವಸತಿ ಮುಂತಾದ ಸೌಕರ್ಯ ಸಿಗಬೇಕೆಂದು, ಒಬ್ಬ ಶ್ರೀಮಂತನ ಮನೆಗೆ ಹೋದನು. ಭಿಕ್ಷುವು

"ಮೊದಲು ತನಗೆ ಹೆಜ್ಜೆಯೂರಲು ಒಂದಿನಿತು ಅವಕಾಶಸಿಗಲಿ; ಮತ್ತೆ ಆತನ ಪರಿಚಯದಿಂದ ಎಲ್ಲವನ್ನೂ ದೊರಕಿಸಿಕೊಳ್ಳಬಹುದೆಂದು" ಎಣಿಸುತ್ತಾನೆ. ಆದ್ದರಿಂದ ಮೊದಲಾಗಿ ದೊರಕಿದ ಕೊಂಚ ಭಿಕ್ಷೆಯನ್ನೂ ಆದರದಿಂದ ತೆಗೆದುಕೊಂಡು ಮೆಲ್ಲಗೆ ಮನೆಯೊಳಗೆ ಕಾಲಿಟ್ಟು, ತನ್ನ ಇಷ್ಟಾರ್ಥವನ್ನು ಪಡೆಯುವನು.

## ೧೭. ವಿಷವೃಕ್ಷ ನ್ಯಾಯ

ವಿಷದ ಹಣ್ಣನ್ನೀಯುವ ಮರವೆಂದರ್ಥ. ಅಂಥ ಮರವನ್ನಾದರೂ ತಾನೇ ಬೆಳೆಸಿ ತನ್ನ ಕೈಯಿಂದಲೇ ಕಡಿಯಬಾರದು.

ಉಪಮಿತಿ ಭಾವಪ್ರಪಂಚ ಎಂಬ ಗ್ರಂಥದಲ್ಲಿ ಓರ್ವನು ತನ್ನ ಮಗನನ್ನು ಗದರಿಸುತ್ತ "ಕೈಯ್ಯಾರೆ ಸಾಕಿ ಸಲಹಿ ಬೆಳೆಸಿದ ಮಗನನ್ನು ತಾನೇ ಗದರಿಸಿದೆನಲ್ಲ!" ಎಂದು ದುಃಖಿಸಿದ ಸಂದರ್ಭದಲ್ಲಿ ಈ ನ್ಯಾಯವನ್ನುದಾಹರಿಸಿರುವರು.

## ೧೮. ವೃದ್ಧಕುಮಾರೀ ವಾಕ್ಯ ನ್ಯಾಯ

ಪ್ರಾಯ ಕಳೆದ ಕನ್ಯೆಯ ಭಿನ್ನಹವೆಂದರ್ಥ. ಈಕೆಯು ಇಂದ್ರನನ್ನು ಒಲಿಸಿ ತನ್ನ ಮಕ್ಕಳು ಹಾಲನ್ನವನ್ನು ಕಂಚೀ ಬಟ್ಟಲಲ್ಲಿ ಉಣ್ಣುವಂತೆ ವರವನ್ನು ಕರುಣಿಸಲು ಕೇಳಿಕೊಳ್ಳುವಳು. ಆಕೆಗೆ ಪತಿಯು ಇಲ್ಲದ ಬಳಿಕ ಎಲ್ಲಿಯ ಮಕ್ಕಳು? ಎಲ್ಲಿಯ ಅನ್ನ? ಎಲ್ಲಿಯ ಕ್ಷೀರ? ಆದರೆ ಆಕೆಯು ಒಂದೇ ವರದಿಂದ ಪತಿಪುತ್ರ ಸಂಪತ್ತನ್ನೆಲ್ಲ ಪ್ರಾರ್ಥಿಸಿದಂತಾಯಿತು. ಹೀಗೆ ಅರ್ಥವುಳ್ಳ ವಾಕ್ಯವನ್ನು 'ವೃದ್ಧ ಕುಮಾರೀವಾಕ್ಯ ನ್ಯಾಯದಂತೆ' ಅನ್ನುವದುಂಟು.

## ೧೯. ಶ್ವಶ್ರೂ ನಿರ್ಗಚ್ಛೋಕ್ತಿ ನ್ಯಾಯ

ಅತ್ತೆಯು ಮನೆಗೆ ಬಂದ ಭಿಕ್ಷುಕನನ್ನು ದೂರ ಅಟ್ಟುವದು ಎಂದರ್ಥ. ಜ್ಞಾನೋತ್ತಮನು ಈ ನ್ಯಾಯದ ಕುರಿತು ಹೀಗೆ ಹೇಳುವನು: ಭಿಕ್ಷೆಯನ್ನೆತ್ತಲು ಬಂದ ಭಿಕ್ಷುಕನಿಗೆ ಭಿಕ್ಷೆಯನ್ನು ಹಾಕುವದಿಲ್ಲೆಂದು ನಿರಾಕರಿಸಿದ ಸೊಸೆಯನ್ನು ಅತ್ತೆಯು ಗದರಿಸಿ ಅವನನ್ನು ಪುನಃ ಕರೆದಳು.

ಹಿಂತಿರುಗಿಬಂದ ಭಿಕ್ಷುಕನಿಗೆ ಅತ್ತೆಯು ಭಿಕ್ಷೆ ಹಾಕದೆ ಮರಳಿ ಕಳುಹಿಸಿದಳು. ಇದರಂತೆ ಒಳ್ಳೇ ಯುಕ್ತಿಗಳಿಂದ ಕೂಡಿರದ ವಾದವನ್ನು ಶ್ವಶ್ರೂನಿರ್ಗಚ್ಛೋಕ್ತಿ ನ್ಯಾಯದಿಂದ ನಿರಾಕರಿಸುತ್ತಾರೆ.

## ೨೦. ಸಿಂಹಾವಲೋಕನ ನ್ಯಾಯ

ಸಿಂಹವು ನೋಡುವದೆಂದರ್ಥ. ಸಿಂಹವು ಕೊಳ್ಳೆಯನ್ನು ಹಿಡಿದ ಬಳಿಕ ಹಿಂದೆ ಮುಂದೆ ತನ್ನ ದೃಷ್ಟಿಯನ್ನು ಹಾಯಿಸುತ್ತದೆ,—ತನ್ನ ಆಹಾರವನ್ನು ವಿರೋಧಿಸುವವರಿದ್ದಾರೆಯೇ ಎಂದು. ಒಂದು ಪದವು ಅಥವಾ ವಾಕ್ಯವು ಹಿಂದಣ ವಾಕ್ಯಕ್ಕೂ ಮುಂದಣ ವಾಕ್ಯಕ್ಕೂ ಅರ್ಥ ಹಾಯಿಸುವಂತಿದ್ದರೆ ಈ ನ್ಯಾಯವು ಅರ್ಥವಿವರಣೆಗೆ ಸಹಾಯಕ ವಾಗುವುದು.

## ೨೧. ಸೂಚೀ-ಕಟಾಹ ನ್ಯಾಯ

ಸೂಜಿಯೂ ಕುದಿಸುವ ದೊಡ್ಡ ಕಡಾಯಿಯೂ ಎಂದರ್ಥ. ಬೃಹತ್ಪ್ರಮಾಣದ ಕಡಾಯಿಯೊಡನೆ ಹೋಲಿಸುವಾಗ ಸೂಜಿಯು ಅತ್ಯಂತ ಸೂಕ್ಷ್ಮವೂ ನಿಕೃಷ್ಟವೂ ಆಗಿ ಕಾಣುತ್ತದೆ. ಎರಡು ವಿಷಯಗಳನ್ನು ವಿವರಿಸಬೇಕಾದಾಗ ಗಹನವಾದುದನ್ನು ಮೊದಲು ವಿವರಿಸಿ ಸುಲಭವಾದದ್ದನ್ನು ಮತ್ತೆ ವಿವರಿಸುತ್ತೇವೆ. ಇದಕ್ಕೆ ಸೂಚೀ–ಕಟಾಹ ನ್ಯಾಯವೆನ್ನುತ್ತೇವೆ.

## ೨೨. ಸ್ಥಾಲೀಪುಲಾಕ ನ್ಯಾಯ

ಚರಿಗೆಯಲ್ಲಿ ಬೇಯುತ್ತಿರುವ ಅನ್ನವೆಂದರ್ಥ. ಅನ್ನ ಬೇಯಿಸುವ ಚರಿಗೆಯಲ್ಲಿ ಕುದಿಯುವ ಎಸರಿನೊಂದಿಗೆ ಮೆತ್ತಗಾದ ಅನ್ನದ ಅಗುಳಲ್ಲಿ ಒಂದರ ಹದ ನೋಡಿದರೆ ಉಳಿದುದೆಲ್ಲ ಆದರಂತೆಯೇ ಎಂದು ತಿಳಿಯಬಹುದು.

ಸಮಾಜದಲ್ಲಿ ಒಬ್ಬ ವ್ಯಕ್ತಿಯ ಗುಣಯೋಗ್ಯತೆಗಳು ಇಡೀ ಸಮಾಜಕ್ಕೆ ಅನ್ವಯಿಸುವದೂ ಸ್ಥಾಲೀಪುಲಾಕ ನ್ಯಾಯದಿಂದ.

## ೨೩. ಅಂಧದರ್ಪಣ ನ್ಯಾಯ

ಕುರುಡನಿಗಾಗಿ ಕನ್ನಡಿ ಹಿಡಿಯುವದೆಂದರ್ಥ. ಸ್ವಂತ ಬುದ್ಧಿಯಿಲ್ಲದವನಿಗೆ ಶಾಸ್ತ್ರಪಾಠವು ಯಾವುದಕ್ಕಾಗಿ? ಕಣ್ಣುಗಳೇ ಇಲ್ಲದವನಿಗೆ ಕನ್ನಡಿಯಿಂದೇನು ಫಲ?

## ೨೪. ಅರಣ್ಯರೋದನ ನ್ಯಾಯ

ಕಗ್ಗಾಡಿನಲ್ಲಿ ಕೂಗುವದು ಎಂದರ್ಥ. ವ್ಯರ್ಥವಾದ ಯತ್ನಕ್ಕೆ ಇದನ್ನು ಉದಾಹರಿಸುತ್ತಾರೆ. ಮೂರ್ಖರಾದ ಜನರ ಸೇವೆಯು ಕುರಿತಾದ ಪದ್ಯದಲ್ಲಿ ಈ ನ್ಯಾಯವು ಬಂದಿದೆ: "ಮೂಢರನ್ನು ಸೇವಿಸಿದುದು ಅರಣ್ಯರೋದನವಾಯ್ತು; ಹೆಣದ ಮೈಯು ಅಲಂಕಾರವಾಯ್ತು; ನೆಲದಲ್ಲಿ ಕಮಲವನ್ನು ಬೆಳೆದುದಾಯ್ತು. ಮರಳ್ಗಾಡಲ್ಲಿ ಸುರಿದ ಮಳೆಯಾಯ್ತು; ನಾಯಿ ಬಾಲವನ್ನು ಬಗ್ಗಿಸಿದುದಾಯ್ತು; ಕಿವುಡನ ಕಿವಿಯಲ್ಲಿ ಉಸುರಿದ ಪಿಸು ಮಾತಾಯ್ತು; ಕುರುಡನ ಮುಖಕ್ಕೆ ಮಾಡಿದ ಶೃಂಗಾರದಲಂಕಾರವಾಯ್ತು."

## ೨೫. ಅರ್ಧವೈಶಸ ನ್ಯಾಯ

ಹೇಂಟೆಯು ಅರ್ಧ ಭಾಗ ಮಾಂಸಕ್ಕೆ, ಅರ್ಧ ಭಾಗ ಮರಿಗಳಾಗುವದಕ್ಕೆ ಎಂದರ್ಥ. ಸರ್ವಥಾ ಸಂಭವಿಸಲಾರದ ವಿಷಯವನ್ನು ಹಿಡಿದು ವಾದಿಸುವಲ್ಲಿ ಈ ನ್ಯಾಯವು ಬರುತ್ತದೆ. ಒಬ್ಬನು ಹೇಂಟೆಯ ಮಾಂಸವನ್ನೂ ಇಚ್ಛಿಸಿದನು. ಅದರಿಂದ ಮುಂದೆ ಮರಿಗಳಾಗುವದನ್ನೂ ಆಶಿಸಿದನು. ಕೊನೆಗೆ ಹೇಂಟೆಯ ಅರ್ಧ ಭಾಗವನ್ನು ಮಾಂಸಕ್ಕಾಗಿ ಕಡಿದು, ಅರ್ಧ ಭಾಗವನ್ನು ಸಂತಾನಕ್ಕಾಗಿ ಮೊಸಲಿಟ್ಟನು. ಇದು ತೀರ ನಡೆಯಲಾರದ ವಿಚಾರ.

## ೨೬. ಇಷುಕಾರ ನ್ಯಾಯ

ಬಾಣಗಳನ್ನು ರಚಿಸುವವನು ಎಂದರ್ಥ. ಒಬ್ಬನು ತನ್ನ ಕೆಲಸದಲ್ಲಿಯೇ ಮಗ್ನನಾಗಿ ಸುತ್ತಮುತ್ತಣ ಗೊಂದಲವನ್ನು ತಗಲಿಸಿಕೊಳ್ಳದಲ್ಲಿ ಈ ನ್ಯಾಯವನ್ನು ಉದಾಹರಿಸಬಹುದು.

ದಾರಿಯ ಎಡಬಲ ನೋಡದೆ ಮುಖ ತಗ್ಗಿಸಿಕೊಂಡು ಒಬ್ಬ ಮುದುಕನು ಹಳೆ ದಂಟೆಯೂರಿಕೊಂಡು ತನ್ನ ದಾರಿ ಹಿಡಿದು ಸಾಗುತ್ತಿದ್ದನು. ಆತನ ತಲೆಯ ಮೇಲೆ ದಿವ್ಯ ಶಕ್ತಿಯೊಂದು ಉಜ್ವಲವಾದ ರತ್ನಖಚಿತ ಕಿರೀಟವನ್ನು ಹಿಡಿದುಕೊಂಡು ಮುದುಕನು ಕೈಯಲ್ಲಿ ಹಿಡಿದ ಹಳೆ ದಂಟೆಗೆ ಪ್ರತಿಯಾಗಿ ಕೊಡಲು ಸಿದ್ಧವಾಗಿತ್ತು. ಆದರೆ ಆ ಪುಣ್ಯಾತ್ಮ ಕಾಲಿನಡಿ ಧೂಳನ್ನೆಬ್ಬಿಸುತ್ತ ಮುನ್ನಡೆದಿದ್ದನೇ ಹೊರತು ಮೇಲೆ ನೋಡಲಿಲ್ಲ.

## ೨೭. ಇಷುವೇಗಕ್ಷಯ ನ್ಯಾಯ

ಕುಂಬಾರನ ಚಕ್ರವು ತಿರುಗುತ್ತ ತಿರುಗುತ್ತ ಕ್ರಮೇಣ ತನ್ನ ವೇಗವನ್ನು ಕಳೆದುಕೊಳ್ಳುತ್ತದೆ. ದೇಹವು ಹಳೆಯದಾದಂತೆ ಇಚ್ಛೆಗಳೂ ಇಳಿಮುಖವಾಗುತ್ತವೆ.

## ೨೮. ಕಟಕಗವೋದಾಹರಣಂ

ಹಟ್ಟಿಯಲ್ಲಿ ಕಟ್ಟಿಯೇ ಅಭ್ಯಾಸವಾದ ದನಗಳು ಹಟ್ಟಿಯಿಂದ ಹೊರಗೆ ಬಯಲಿಗೆ ಮೇಯಲಟ್ಟಿದರೂ ಪುನಃ ಅವು ಹಟ್ಟಿಗೇ ಮರಳುವವು. ಅಭ್ಯಾಸ ಬಲದಿಂದ ನಾವು ಪ್ರತಿದಿನ ತೋರುವ ಅನೇಕ ಚೇಷ್ಟೆಗಳಿಗೆ ಈ ನ್ಯಾಯವು ಉದಾಹರಣೆಯಾಗುವದು.

## ೨೯. ಕಾಕೋಲೂಕ ನಿಶಾವತ್

ಕಾಗೆ ಮತ್ತು ಗೂಗೆಯ ರಾತ್ರಿಯೆಂದರ್ಥ. ಕಾಗೆಯ ರಾತ್ರೆ ಗೂಗೆಗೆ ಹಗಲಾಗುತ್ತದೆ. ಗೂಗೆಯ ರಾತ್ರೆ ಕಾಗೆಗೆ ಹಗಲಾಗುತ್ತದೆ. "ಎಲ್ಲರಿಗೂ ರಾತ್ರಿಯೆನಿಸಿದಾಗ ಜ್ಞಾನಿಯು ಎಚ್ಚರವಾಗಿರುವನು. ಎಲ್ಲರೂ ಎಚ್ಚರಗೊಂಡಿರುವಾಗ ಜ್ಞಾನಿಗೆ ಅದು ರಾತ್ರಿಯಾಗಿರುವದು" ಎಂಬ ಗೀತೆಯ ಮಾತನ್ನು ಇಲ್ಲಿ ಸ್ಮರಿಸಬಹುದು.

ಸುರೇಶ್ವರಾಚಾರ್ಯರು ವಾರ್ತಿಕದಲ್ಲಿ "ತಿಳುವಳಿಕೆಯುಳ್ಳವನಿಗೂ ತಿಳುವಳಿಕೆಯಿಲ್ಲದವನಿಗೂ ಸಂಸಾರವು ಕಾಗೆ-ಗೂಗೆಗಳ ರಾತ್ರೆ-ಹಗಲುಗಳಂತೆ ಸುಖದುಃಖಗಳನ್ನು ತರುವವು" ಎಂದು ಉದಾಹರಿಸಿರುವರು.

## ೩೦. ಕ್ಷೀರ-ನೀರ ನ್ಯಾಯ

ಹಾಲಿನಲ್ಲಿ ಬೆರೆತ ನೀರು ಎಂದರ್ಥ. ಹಾಲಿನಲ್ಲಿ ನೀರನ್ನು ಬೆರೆಸಿದರೆ ಅದು ಎಷ್ಟು ಪ್ರಮಾಣದಲ್ಲಿ ಬೆರೆತಿದೆಯೆಂದು ನೋಡಿದೊಡನೆ ತಿಳಿಯುವ ದಿಲ್ಲ. ಗಾಢವಾಗಿ ಒಂದರೊಡನೊಂದು ಬೆರೆತುಕೊಳ್ಳುವದಕ್ಕೆ 'ಕ್ಷೀರ-ನೀರ ನ್ಯಾಯ'ವೆನ್ನಬಹುದು. ಎರಡು ವಸ್ತುಗಳು ಒಂದರಿಂದ ಮತ್ತೊಂದು ಬೇರ್ಪಡುವಂತೆ ಬೆರೆತಿರುವದು (ಎಳ್ಳು ಮತ್ತು ಅಕ್ಕಿ) ಸಂಸೃಷ್ಟಿಯೆಂದೂ, ಕ್ಷೀರ-ನೀರ ನ್ಯಾಯದಿಂದ ಬೆರೆತಿರುವದು ಸಂಕರವೆಂದೂ ಅಲಂಕಾರ ಸರ್ವಸ್ವದಲ್ಲಿ ಹೇಳಿಕೆಯಿದೆ.

## ೩೧. ಘಟೀಯಂತ್ರ ನ್ಯಾಯ

ಒಂದೇ ಸವನೆ ತಿರುಗುತ್ತಿರುವ ಬಾವಿಯ ಯಂತ್ರವೆಂದರ್ಥ. ಸುರೇಶ್ವರಾಚಾರ್ಯರ ವಾರ್ತಿಕದಲ್ಲಿ "ಬಯಕೆಗಳಿಗೆ ಬಾಯ್ಬಿಡುತ್ತ ಹುಟ್ಟು ಸಾವುಗಳ ಆವೃತ್ತಿಯುಳ್ಳ ಸಂಸಾರದಲ್ಲಿ ಅವಿಶ್ರಾಂತವಾಗಿ ತಿರುಗುವವನನ್ನು ಘಟೀಯಂತ್ರ" (ಬಾವಿಗೆ ತಗಲಿಸಿದ ಯಂತ್ರ ಚಕ್ರ)ಕ್ಕೆ ಸಂಹೋಲಿಸಿರುವರು. ಪ್ರಬಂಧ ಚಿಂತಾಮಣಿಯಲ್ಲಿ ಇದನ್ನು ಇನ್ನೊಂದು ರೀತಿಯಲ್ಲಿ ಅರ್ಥವಿಸಿರುವರು: "ಚಕ್ರಯಂತ್ರವು ಕೆಳಗಿಂದ ಮೇಲಕ್ಕೆ ಬರುವಾಗ ತುಂಬಿಕೊಂಡಿದ್ದು ಮೇಲಿನಿಂದ ಕೆಳಕ್ಕಿಳಿಯುವಾಗ ಬರಿದಾಗುವಂತೆ ಭಾಗ್ಯಚಕ್ರವು ತಿರುಗುತ್ತಿರುತ್ತದೆ. ಧನಮದದಿಂದ ಮೋಹಗೊಂಡು ಬಡವರನ್ನು ಅಣಕಿಸುವದೇಕೆ?" ಎಂಬ ಮಾತು ಬಂದಿದೆ.

## ೩೨. ತಸ್ಕರ ಕಂದು ನ್ಯಾಯ

ಕಳ್ಳನು ಅಡಿಗೆಯವನಂತೆ ವೇಷ ತಳೆಯುವದು ಎಂದರ್ಥ. ನಮಗೆ ಎಟಕದ ಕೆಲಸಕ್ಕೆ ಕೈಹಚ್ಚುವವರ ಪರಿಣಾಮವನ್ನು ಈ ನ್ಯಾಯವು ಬೋಧಿಸುತ್ತದೆ. ಒಬ್ಬ ಕಳ್ಳನು ಕದ್ದುಕೊಂಡ ಸ್ವತ್ತನ್ನು ರಕ್ಷಿಸುವದಕ್ಕೆ ಒಬ್ಬ ಅಡಿಗೆಯವನ ಮನೆಯನ್ನು ಪ್ರವೇಶಿಸುತ್ತಾನೆ. ಅಡಿಗೆಯವನು ಅವನನ್ನು ಕಂಡು ಅಡಿಗೆ ಕೆಲಸವನ್ನು ಆತನಿಗೊಪ್ಪಿಸಿದ್ದಾಗ ಕಳ್ಳನಿಗೆ ಆ ಕೆಲಸ ಬರುವದಿಲ್ಲ. ಆಗ ಪೋಲೀಸಿನವರು ಆ ಮನೆಗೆ ಬಂದು ಆ ಅಜ್ಞಾತ ವ್ಯಕ್ತಿಯಲ್ಲಿ ಸಂದೇಹ ತಳೆದು ಅವನನ್ನು ಸೆರೆಹಿಡಿಯುತ್ತಾರೆ.

## ೩೩. ತೃಣ ಜಲಾಯುಕ ನ್ಯಾಯ

ಕಂಬಳಿ ಹುಳವು ಒಂದು ಹುಲ್ಲಿನ ಕೊನೆಯಿಂದ ಮತ್ತೊಂದು ಹುಲ್ಲಿನ ತುದಿಯಲ್ಲಿ ತೂರಿಕೊಂಡ ಬಳಿಕ ತನ್ನ ದೇಹವನ್ನು ಅತ್ತ ಸೆಳೆದು ಕೊಳ್ಳುತ್ತದೆ. ಜೀವನು ದೇಹದಿಂದ ದೇಹಕ್ಕೆ ಹಾದುಹೋಗುವದಕ್ಕೆ ಈ ನ್ಯಾಯುವನ್ನು ಉದಾಹರಿಸಿದ್ದಾರೆ.

## ೩೪. ತೈಲಪಾತ್ರಧರ ನ್ಯಾಯ

ತುಂಬಿ ಸೂಸುವ ಎಣ್ಣೆಯ ಪಾತ್ರವನ್ನು ಹಿಡಿದವನು ಎಂದರ್ಥ. ಆ ಎಣ್ಣೆಯಲ್ಲಿ ಒಂದು ಬಿಂದು ಹೊರಗೆ ಬಿನುಗಿದರೆ ಅವನಿಗೆ ಮರಣ ಶಿಕ್ಷೆ ಯಿದೆ. ವ್ರತವನ್ನು ಕೈಕೊಂಡವನು ಅತಿ ಜಾಗ್ರತೆಯಿಂದ ವರ್ತಿಸಬೇಕೆಂಬು ದಕ್ಕೆ ಈ ನ್ಯಾಯುವು ಅರ್ಥಪುಷ್ಟಿ ಕೊಡುತ್ತದೆ.

## ೩೫ ಪ್ರದೀಪವತ್

ಕಾಡಿನ ಒಂದು ಮೊಡಕಿನಲ್ಲಿ ಕುಳಿತ ಓರ್ವ ಸಾಧಕನು ಜಗತ್ತಿಗೆ ತನ್ನ ಸತ್ಯದರ್ಶನದ ಬೆಳಕನ್ನು ಕೊಡುತ್ತಾನೆ. ಒಂದೆಡೆ ಇರಿಸಿದ ದೀಪವು ಇಡೀ ಭವನವನ್ನು ಬೆಳಗುವಂತೆ, ನರ್ತಕಿಯೋರ್ವಳು ಹಲವು ಸಾಮಾಜಿಕ ರನ್ನು ತನ್ಮಯಗೊಳಿಸುವಂತೆ.

## ೩೬ ಬಕಬಂಧನ ನ್ಯಾಯ

ಒಬ್ಬನು ಒಂದು ಕೊಕ್ಕರೆಯನ್ನು ಹಿಡಿಯಲೋಸುಗ ಒಂದು ಬೆಣ್ಣೆ ಮುದ್ದೆಯನ್ನು ಅದರ ತಲೆಯಲ್ಲಿರಿಸಿದನಂತೆ. ಮಧ್ಯಾಹ್ನದ ಬಿಸಿಲಿನ ಝಳಕ್ಕೆ ಬೆಣ್ಣೆ ಕಾದು ಕರಗಿ ನೀರಾಗಿ ಅದರ ಕಣ್ಣಿಗೆ ಹರಿದು, ಕಣ್ಣುಕುರು ಡಾದ ಬಳಿಕ ಆ ಕೊಕ್ಕರೆಯನ್ನು ಸುಲಭವಾಗಿ ಹಿಡಿಯಬಹುದೆಂದು ಅವನ ಯುಕ್ತಿಯಾಗಿದ್ದಿತು. ಇದು ತೀರ ಹಾಸ್ಯಾಸ್ಪದ. ಹಾಸ್ಯಾಸ್ಪದವಾದ ವಿಚಾರವನ್ನು ಮುಂದಿಟ್ಟರೆ ಈ ನ್ಯಾಯುವನ್ನು ಹೇಳಬಹುದು.

## ೩೭. ಭೂಲಿಂಗ ನ್ಯಾಯ

ಹಿಮವತ್ಪ್ರದೇಶದಲ್ಲಿ ಭೂಲಿಂಗವೆಂಬ ಹಕ್ಕಿಯಿದೆ. ಅದರ ಕೂಗು ಯಾವಾಗಲೂ 'ಸಾಹಸಕ್ಕೆ ಕೈಹಚ್ಚ ಬೇಡಿರೆ'ಂದು. ಆದರೆ ತಾನು ಮಾತ್ರ

ಸಿಂಹವು ಮಾಂಸವನ್ನು ತಿನ್ನುತ್ತಿರುವಾಗ ಅದರ ಕೋರೆದಾಡೆಯ ಎಡೆಯಲ್ಲಿ ಸಿಕ್ಕಿದ ಮಾಂಸದ ತುಣುಕುಗಳನ್ನು ಕೊಕ್ಕಿನಿಂದ ಕುಕ್ಕುತ್ತಿರುತ್ತದೆ. ಒಬ್ಬನು ಮಾತಿನಂತೆ ವರ್ತಿಸದಿದ್ದರೆ ಈ ನ್ಯಾಯವನ್ನು ಉದಾಹರಿಸಬಹುದು. ಪರೋಪದೇಶಮಾತ್ರ ಕುಶಲನು ತಾನು ಮನಸ್ಸು ಬಂದಂತೆ ವರ್ತಿಸಿ ದಾಂಭಿಕನೆನಿಸುವನು.

## ೩೮. ಮತ್ಸ್ಯನ್ಯಾಯ

ಮೀನುಗಳ ಜೀವನದಿಂದ ಆಯ್ದುಕೊಂಡ ನ್ಯಾಯವಿದು. ಬಲಿಷ್ಠರಿಗೂ ದುರ್ಬಲರಿಗೂ ವಿರೋಧವುಂಟಾದಾಗ ಬಲಿಷ್ಠನು ದುರ್ಬಲನನ್ನು ಪೀಡಿಸುತ್ತಾನೆ. ಎರಡು ನ್ಯಾಯಗಳಿಗೆ ಪರಸ್ಪರ ವಿರೋಧ ಕಂಡಾಗ ಬಲಿಷ್ಠ ನ್ಯಾಯವು ದುರ್ಬಲ ನ್ಯಾಯವನ್ನು ಬಾಧಿಸುತ್ತದೆ. ಮೀನುಗಳಲ್ಲಿಯೂ ದೊಡ್ಡ ಮೀನು ಸಣ್ಣ ಮೀನನ್ನು ತಿಂದು ಜೀವನ ನಡೆಸುತ್ತದೆ.

## ೩೯. ಮಾಷರಾಶಿ ಪ್ರವಿಷ್ಟಮಷೀ ನ್ಯಾಯ

ಉದ್ದಿನ ರಾಶಿಯಲ್ಲಿದ್ದ ಮಸೀ ತುಂಡೆಂದರ್ಥ. ಉದ್ದಿನ ರಾಶಿಯಲ್ಲಿದ್ದ ಮಸಿಯನ್ನು ಥಕ್ಕನೆ ಗುರುತಿಸಲು ಆಗುವದಿಲ್ಲ. ಏಕೆಂದರೆ ಅವೆರಡೂ ಸರೂಪಗಳು. ಶೂದ್ರಕ ಮಹಾಕವಿಯು ಬರೆದ ಮೃಚ್ಛಕಟಿಕ ನಾಟಕದಲ್ಲಿ ಈ ನ್ಯಾಯವು ಬಂದಿದೆ. “ಉದ್ದಿನ ರಾಶಿಯಲ್ಲಡಗಿ ಹೋದ ಮಸಿಯಂತೆ ನೋಡುತ್ತ ನೋಡುತ್ತ ಇದ್ದ ಹಾಗೆ ವಸಂತ ಸೇನೆಯು ಕತ್ತಲೆಯಲ್ಲಿ ಕಾಣದಾದಳು”

## ೪೦. ಮಿಥಿಲಾಯಾಂ ಪ್ರದೀಪ್ತಾಯಾಂ ನಮೇದಹ್ಯತಿ ಕಿಂಚನ

ನಿರ್ಮಮತೆಗೆ ಇದಕ್ಕಿಂತ ಮೇಲಿನ ಉದಾಹರಣೆ ಸಾಹಿತ್ಯ ಪ್ರಪಂಚದಲ್ಲಿಯೇ ದೊರಕಲಾರದು. ಮಿಥಿಲಾ ಪಟ್ಟಣವು ಸುಡುತ್ತಿದ್ದರೂ ನನ್ನದಾದುದು ಯಾವುದೂ ನಷ್ಟವಾಗುತ್ತಿಲ್ಲವೆಂದು ಯೋಗೀಶ್ವರನಾದ ಜನಕನು ಹೇಳುತ್ತಾನೆ. ಕಳೆದುಕೊಳ್ಳಲು ತನ್ನದಾದುದು ಯಾವುದೂ ಇಲ್ಲದವನಿಗೆ ಕಳೆದು ಹೋಗುವಾಗ ಯಾವ ಚಿಂತೆಯೂ ಆಗುವದಿಲ್ಲ.

## ೪೧. ಯಾದೃಶೋ ಯಕ್ಷಃ ತಾದೃಶೋ ಬಲಿ

ಯಕ್ಷನು ಎಂಥವನೋ ಅವನಿಗೆ ಒಪ್ಪಿಸುವ ಬಲಿಯೂ ಅಂಥದೇ ಆಗಿರಬೇಕು. ವಾಚಸ್ಪತಿ ಮಿಶ್ರನೂ, ಜಯಂತ ಭಟ್ಟನೂ ಈ ನ್ಯಾಯವನ್ನು ಬಳಸಿರುವರು. ನಯವಾದ ಪ್ರಶ್ನೆಗೆ ನಯವಾದ ಉತ್ತರವು ದೊರಕುವಂತೆ ಜೋರಾದ ಗದರಿಕೆಗೆ ಗದರಿಕೆಯ ಉತ್ತರವೇ ದೊರಕುತ್ತದೆ. ಇದು ಮೇಲೆ ಹೇಳಿದ ನ್ಯಾಯದ ಅನುಸಾರವಾಗಿದೆ.

## ೪೨. ರಾಜಪುತ್ರ-ವ್ಯಾಧ ನ್ಯಾಯ

ಬೃಹದಾರಣ್ಯಕ ಉಪನಿಷತ್ತಿನ ಶಾಂಕರ ಭಾಷ್ಯದಲ್ಲಿ ಈ ಕತೆಯು ಉದಾಹೃತವಾಗಿದೆ. ಒಬ್ಬ ಅರಸುಮಗನು ಹುಟ್ಟಿದ ಕೂಡಲೇ ಹೆತ್ತವರು ಅವನನ್ನು ಬಿಟ್ಟರು. ಆ ಮಗುವನ್ನು ಒಬ್ಬ ಬೇಡರವನು ಸಾಕಿದನು. ಆ ಹುಡುಗನು ತಾನು ಯಾರ ಮಗನೆಂಬುದನ್ನರಿಯದೆ ಬೇಡರ ಮನೆಯಲ್ಲಿ ಬಳೆದನು. ಬೇಡರ ಸಹಜವಾದ ಕೆಲಸಗಳನ್ನೇ ಮಾಡುತ್ತಿದ್ದನು. ಕ್ಷತ್ರಿಯರ ತೇಜಸ್ಸು ಅವನಲ್ಲಿ ಅಡಗಿದ್ದಿತು. ಒಬ್ಬ ಕರುಣಾಳುವು ಅವನ ಮೂಲವನ್ನು ತಿಳಿದು ಅವನು ರಾಜಕುಮಾರನೆಂದೂ ಕ್ಷತ್ರಿಯನೆಂದೂ ತಿಳಿಸುತ್ತಾನೆ. ಬಳಿಕ ತನ್ನ ನಿಜವನ್ನರಿತ ಬಾಲಕನು ತನ್ನ ತಂದೆ ತಾತಮುತ್ತಾತಂದಿರಂತೆ ವೀರನಾಗಿ ಅರಸುತನಗೈಯುವನು. ತನ್ನ ಸ್ವರೂಪದ ತಿಳುವಳಿಕೆಯಿಲ್ಲದೆ ಅಜ್ಞಾನದಲ್ಲಿ ಮುಳುಗುತ್ತಿರುವ ಜೀವವನ್ನು ಓರ್ವ ಕರುಣಾಳು ಗುರುವು ಅನುಗ್ರಹಿಸುತ್ತಾನೆ ಎಂಬುದಕ್ಕೆ ಮೇಲಣ ಕತೆಯು ದೃಷ್ಟಾಂತವಾಗಿದೆ.

## ೪೩. ಲಾಂಗಲಂ ಜೀವನಂ

ನೇಗಿಲೇ ಜೀವನವೆಂದರ್ಥ. ಆಯುಷ್ಯವನ್ನು ಹೆಚ್ಚಿಸುವ ತುಪ್ಪವನ್ನು ಆಯುಷ್ಯವೇ ತುಪ್ಪವೆಂದು ಹೇಳಿದಂತೆ ಈ ಮಾತು ಇದೆ. ಕಾರಣವನ್ನೂ ಅದರಿಂದುಂಟಾದ ಕಾರ್ಯವನ್ನೂ ಒಂದೇ ಎನುವಲ್ಲಿ ಈ ನ್ಯಾಯವು ಉಪಯುಕ್ತವಾಗಿದೆ.

## ೪೪. ವಧೂಮುಷ್ಟಿ ಮಾಪನ ನ್ಯಾಯ

ಸೊಸೆಯು ಕೈಯಿಂದ ಕೊಡಿಸಿದ ಧಾನ್ಯವೆಂದರ್ಥ. ಅಕ್ಷ್ರತತ್ತ್ವ ವಿವೇಕದಲ್ಲಿ ಈ ನ್ಯಾಯವು ಇದೆ. ಓರ್ವ ಲೋಭಿಯಾದ ಮುದುಕನು ಮನೆಗೆ ಬಂದ ಬೇಡುವವರಿಗೆ ಹೆಂಡತಿಯ ಕೈಯಿಂದ(ತನ್ನ ಮುಷ್ಟಿಯಿಂದ ಆಕೆಯ ಮುಷ್ಟಿಯು ಸಣ್ಣದೆಂಬ ಕಾರಣದಿಂದ) ಒಂದೊಂದು ಮುಷ್ಟಿ ಧಾನ್ಯವನ್ನು ಕೊಡಿಸುತ್ತಿದ್ದನು. ಹೀಗಿರಲಾಗಿ ಮುದುಕನ ಮಗನಿಗೆ ಮದುವೆಯಾಯಿತು. ಸೊಸೆ ಮನೆಗೆ ಬಂದಳು. ಆಗ ಮುದುಕನಿಗೆ ಒಂದು ಆಲೋಚನೆ ಹೊಳೆಯಿತು. ಹೆಂಡತಿಯ ದೊಡ್ಡ ಮುಷ್ಟಿಯಲ್ಲಿ ಧಾನ್ಯ ಕೊಡಿಸುವದಕ್ಕಿಂತ ಸೊಸೆಯ ಸಣ್ಣ ಹಿಡಿಯಲ್ಲಿ ಧಾನ್ಯ ಕೊಡಿಸಿದರೆ ತುಸು ಉಳಿತಾಯವಾಗಬಹುದೆಂದು ಆತನು ಬಗೆದನು. ಬೇಡುವವರಿಗೆ ಧಾನ್ಯ ಹಂಚಲು ಸೊಸೆಯನ್ನೇ ನೇಮಿಸಿದನು. ಸೊಸೆಯು ಚೆಲುವೆಯಾಗಿದ್ದಳು. ಆಕೆಯ ರೂಪವನ್ನು ಸವಿಯಲು ನೂರಾರು ಮಂದಿ ಭಿಕ್ಷೆಯ ನೆವದಿಂದ ಮನೆ ಬಾಗಿಲಿಗೆ ಬಂದರು. ಆಗ ಒಂದೊಂದು ಮುಷ್ಟಿಯಲ್ಲಿ ಕೊಂಚ ಧಾನ್ಯ ಕಡಿಮೆ ನಿಂತರೂ, ಅನೇಕ ಮಂದಿ ಮನೆಗೆ ಬಂದುದರಿಂದ ಖರ್ಚಾದ ಧಾನ್ಯದ ಮೊತ್ತವು ಹೆಚ್ಚಾಯಿತು.

## ೪೫. ವನಸಿಂಹ ನ್ಯಾಯ

ಕಾಡು ಮತ್ತು ಸಿಂಹವೆಂದರ್ಥ. ಕಾಡಿನಲ್ಲಿ ಸಿಂಹವು ಇರುವುದು ಸಹಜವಾದ್ದರಿಂದ ಕಾಡು ಮತ್ತು ಸಿಂಹ ಇವೆರಡೂ ಪರಸ್ಪರ ಪೂರಕ ತತ್ತ್ವಗಳು. ಬೇಡರು ಸಿಂಹವನ್ನು ಹಿಂಬಾಲಿಸಿ ಕೊಲ್ಲಲುದ್ದೇಶಿಸಿದರೂ, ಕಾಡನ್ನು ಸಿಂಹವು ಹೊಕ್ಕ ಬಳಿಕ ಅದನ್ನು ಕೊಲ್ಲಲಾಗುವದಿಲ್ಲ. ಏಕೆಂದರೆ, ಗಹನವಾದ ಕಾಡನ್ನು ಪ್ರವೇಶಿಸಲು ಬೇಡರಿಗೆ ಧೈರ್ಯ ಸಾಲದು.



ಪ್ರಧಾನಾಮಾತ್ಯ

# ಪಂಡಿತ ಜವಾಹರಲಾಲ ನೆಹರು



## ಸಂಕ್ಷಿಪ್ತ ಜೀವನ ಚರಿತ್ರೆ.

ಬೆಲೆ: ಒಂದಾಣೆ.

ಲೇಖಕ: ಕುದ್ವಿ ವಾಸುದೇವ ಶೆಟ್ಟಿ.

# ಒಂದಾಣೆ ಮಾಲೆಯಲ್ಲಿ ಈ ವರೆಗೆ ಪ್ರಕಟವಾದ ಪುಸ್ತಕಗಳು

೧. *ಕೆಪ್ಪಟರಾಯ (ವಿನೋದ ಕಥೆ)
೨. *ನಾರೀಶ್ವರರು (ಏಕಾಂಕ ಪ್ರಹಸನ)
೩. *ಕಳ್ಳನಿಗೆ ಸಂಭಾವನೆ
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ)
೫. *ಅದ್ಭುತತ್ಯಾಗ ಮತ್ತು ಇತರ ಕಥೆಗಳು
೬. ಚುನಾವಣೆ ಅರ್ಥಾತ್ ಬನಾವಣೆ
೭. *'ಬೀಡಿ ಸೇದಬೇಡಿ' ಮತ್ತು 'ಆ ಮಗು'
೮. *ಇಂಗ್ಲಿಷ್-ಕನ್ನಡ ಅರ್ಥಕೋಶ
೯. *ಲಂಚಕ್ಕೆ ಸಂಚಕಾರ
೧೦. *ಟಿಶ್ಯೂ ಔಷಧಿಗಳ ಕೈಪಿಡಿ.
೧೧. ಶ್ರೀಕ್ಷೇತ್ರ ಧರ್ಮಸ್ಥಳ (ತೃ. ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು
೧೪. ವೆಂಕಟನ ಸಂಕಟ (ಏಕಾಂಕ ಪ್ರಹಸನ)
೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ)
೧೬. ವೇಣೂರಿನ ಗತವೈಭವ.
೧೭. ಒಗಟುಗಳು [ದ್ವಿತೀಯ ಮುದ್ರಣ]
೧೮. ಜಗಳಗಂಟಿ ಮತ್ತು ಇತರ ಕಥೆಗಳು
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಪ್ಪು
೨೧. *ಭಾರತದ ಮಹಾನಗರಗಳು (ಭಾಗ ೧)
೨೨. ತಿರುಕ್ಕುರಲ್
೨೩. ಸೂರ್ಯನ ಸಂಸಾರ
೨೪. *ಭಾರತದ ಮಹಾನಗರಗಳು (ಭಾಗ ೨)
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳು.
೨೬. *ಮಾರಾವತಾರ
೨೭. ಹಾಸವಿಲಾಸ (ನಗೆಹನಿಗಳು)
೨೮. ಸತ್ಯವಂತ ಬಾಜಿ (ಏಕಾಂಕ ಪ್ರಹಸನ)
೨೯. ಜಾಣ್ಮೆಯ ಒಗಟುಗಳು
೩೦. ಜಾತಕ ಕಥೆಗಳು
೩೧. ಕಾರ್ಕಳದ ಚರಿತ್ರೆ
೩೨. ಮರ್ಜಿ (ಏಕಾಂಕ ಪ್ರಹಸನ)
೩೩. ದರ್ಶನದ ಕಥೆಗಳು
೩೪. ಅಳುವಿನ ಹೊಳೆ ಮತ್ತು ಕೇಶವಭೂಪ
೩೫. ಶರಾಬಿನ ಸಿಪಾಯಿಗಳು
೩೬. ಉಪದೇಶ ಶತಕ
೩೭. ನಿಮಗೆ ಗೊತ್ತಿದೆಯೇ?
೩೮. ಚತುರ ಚಮತ್ಕಾರ
೩೯. ಸತೀ ಸಾವಿತ್ರಿ
೪೦. ಆಭರಣಗಳ ಪೆಟ್ಟಿಗೆ, ಮತ್ತು ಇತರ [ಕಥೆಗಳು
೪೧. ಭಾರತದ ಮಂತ್ರಿಮಂಡಲಗಳು (ದ್ವಿ. [ಮುದ್ರಣ)
೪೨. ಕಾಲುಬಳೆಯ ಕಥೆ
೪೩. ಭಾರತದ ನಾಲ್ಕು ಕಲಶಗಳು
೪೪. ವ್ಯಸನದಿಂದ ಲಾಭ ಮತ್ತು ಇತರ [ಕಥೆಗಳು
೪೫. ಸುಭಾಷಿತ
೪೬. ೧೮೫೭ರ "ಸಿಪಾಯಿ ದಂಗೆ"
೪೭. ಅಕಾಂಡ ತಾಂಡವ (ರೇಡಿಯೋ ನಾಟಕ)
೪೮. ಸಾಹಸದ ಕಥೆಗಳು.
೪೯. ಸಂಜ್ಞಾ ಜ್ಞಾನ ಕೋಶ
೫೦. ಪಂಡಿತನ ಪಿಟಿಲು
೫೧. ಭೋಗಯಾತ್ರೆ
೫೨. ಸಂಗ್ರಾಮಸಿಂಹ
೫೩. ಧರ್ಮ ಶಿಕ್ಷಾ
೫೪. ಮಹಾತ್ಮ
೫೫. ಮೀರಾಬಾಯಿ (ಏಕಾಂಕ ನಾಟಕ)
೫೬. ವೀರರಮಣಿ ಕರ್ಮದೇವಿ
೫೭. ಅರಳಿದ ನಗು
೫೮. ಸಚಿತ್ರ ಜಬಾನ್
೫೯. ಚುಟ್ಟಿ ಬಿಟ್ಟಿ ಧಿಟ್ಟಿ (ಏಕಾಂಕ ಪ್ರಹಸನ)
೬೦. ನಿರಪರಾಧಿ
೬೧. ಭಕ್ತವಾಣಿ
೬೨. ಜಾನಪದ ಸಾಹಿತ್ಯ
೬೩. ಡಾಕ್ಟರ್ ಆರೋಗ್ಯವರ್
೬೪. ಲೌಕಿಕ ನ್ಯಾಯಗಳು
೬೫. ಶಿಶುಪಾಲ ಮಾನಭಂಗ
೬೬. ಜರಾಸಂಧ ವಧೆ
೬೭. ಜವಾಹರಲಾಲರ ಜೀವನ ಚರಿತ್ರೆ

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಈ ವರೆಗೆ ಅರವತ್ತೇಳು ಪುಸ್ತಕಗಳಲ್ಲಿ, ಅರವತ್ತೇಳು ಆಣೆಗಳಿಗೆ,
'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, 1456 ಪುಟಗಳನ್ನು ಕೊಟ್ಟಿರುತ್ತದೆ.

# ಪ್ರಸ್ತಾವನೆ

ಜಗತ್ತಿನ ಇತಿಹಾಸದಲ್ಲಿ ಅನೇಕ ಪ್ರಖ್ಯಾತ ಪ್ರಧಾನಾಮಾತ್ಯರು ಬಂದು, ಆಳಿ, ಹೋಗಿರುವರು. ಇಂಗ್ಲೆಂಡಿನ ವಿಲಿಯಮ್ ಇವಾರ್ಟ್ ಗ್ಲೇಡ್‌ಸ್ಟೋನನು ೮೯ ವರ್ಷಗಳ ಕಾಲ ಬಾಳಿ, ತನ್ನ ಜೀವಿತಕಾಲದಲ್ಲಿ, ಅನೇಕ ಸಲ ಬ್ರಿಟ್ಯನಿನ ಅರ್ಥಸಚಿವನಾಗಿಯೂ, ೧೮೬೮ರಿಂದ ೧೮೯೪ರೊಳಗೆ ನಾಲ್ಕು ಬಾರಿ ಪ್ರಧಾನ ಸಚಿವನಾಗಿಯೂ, ಅವನ ಕಾಲದ ರಾಜಕಾರಣಿಗಳಲ್ಲಿ ಅತ್ಯದ್ಭುತ ವಾಗೀಶನೆಂದೂ ಮೇಧಾವಿಯೆಂದೂ ಹೆಸರುಪಡೆದವನು. ವಿಲಿಯಮ್ ಪಿಟ್‌ನು, ಹದಿನೆಂಟನೇ ಶತಮಾನದಲ್ಲಿ, ತನ್ನ ೨೪ನೇ ವಯಸ್ಸಿನಲ್ಲಿ ಬ್ರಿಟ್ಯನಿನ ಮಹಾ ಮಂತ್ರಿಯಾದ, (ಎರಡು ಬಾರಿ ಈ ಪದವಿಯನ್ನಲಂಕರಿಸಿದ) ದಾಖಲೆಯು ಇಂದಿಗೂ ಉಳಿದಿದೆ. ದ್ವಿತೀಯ ಮಹಾಯುದ್ಧ ಕಾಲದಲ್ಲಿ ಚರ್ಚಿಲ್ಲರು ಯುದ್ಧ ಪ್ರಭುವಾಗಿಯೂ ಸಮರ್ಥ ಪ್ರಧಾನಾಮಾತ್ಯರಾಗಿಯೂ ಜಾಗತಿಕ ಖ್ಯಾತಿ ಪಡೆದಿದ್ದಾರೆ. ಫ್ರಾನ್ಸಿನಲ್ಲಿ, ಹದಿನಾರನೇ ಶತಮಾನದಲ್ಲಿ ಕಾರ್ಡಿನಲ್ ರಿಚಲು ಎಂಬಾತನು ಮಹಾತಂತ್ರಜ್ಞನಾಗಿ ರಾಜಮನೆತನದ ಮೇಲೆ ಅಸಾಧಾರಣ ವರ್ಚಸ್ಸು ಬೀರಿ, ಮಹಾರಾಜ್ಞಿಯಿಂದಲೂ ಕದಲಿಸಲಾರದಂಥ ಸ್ಥಾನ ಪಡೆದವನು, ಮುಖ್ಯ ಮಂತ್ರಿಯೂ ಆಗಿದ್ದವನು. ಜರ್ಮನಿಯ ಬಿಸ್ಮಾರ್ಕನು ಕಳೆದ ಶತಮಾನದಲ್ಲಿ ಜರ್ಮನಿಯ 'ಉಕ್ಕಿನ ಮನುಷ್ಯ'ನಾಗಿ, ಯುರೋಪದ ರಾಜಕೀಯಗಳಲ್ಲಿ ತೀವ್ರ ವರ್ಚಸ್ಸು ಬೀರಿ, ಆಧುನಿಕ ಯುಗದ ಮೇಧಾವಿಗಳಲ್ಲೊಬ್ಬನೆನಿಸಿರುವನು. ಒಬ್ಬೊಬ್ಬರು ಒಂದೊಂದು ವಿಧವಾಗಿ ಹೆಸರುವಾಸಿಯಾಗಿರುವರು. ಆದರೆ, ಪ್ರಧಾನಾಮಾತ್ಯರ ಪರಂಪರೆಯಲ್ಲಿ ಪಂಡಿತ ಜವಾಹರಲಾಲ ನೆಹರುಗಳವರ ಹೆಸರು, ಈ ಶತಮಾನದಲ್ಲಿ ಅತ್ಯುಚ್ಚವಾಗಿ, ಪ್ರಪ್ರಥಮವಾಗಿ ರಾರಾಜಿಸುವುದು. ಗ್ಲೇಡ್‌ಸ್ಟೋನ್ ಮತ್ತು ಜವಾಹರಲಾಲರೊಳಗೆ ಇವೆರಡು ಸಾಮ್ಯಗಳು ತೋರುತ್ತವೆ: ಗ್ಲೇಡ್‌ಸ್ಟೋನರಂತೆ ಜವಾಹರರೂ ತಮ್ಮ ೫೭ನೇ ವಯಸ್ಸಿನಲ್ಲಿ ಪ್ರಧಾನಾಮಾತ್ಯರಾದರು; ಗ್ಲೇಡ್‌ಸ್ಟೋನರಂತೆ ಸರಿಸಾಟಿಯಿಲ್ಲದ ವಾಗ್ಮಿ ಮತ್ತು ರಾಜಕಾರಣಿಯಾಗಿರುವರು. ಆದರೆ, ಗ್ಲೇಡ್‌ಸ್ಟೋನರಿಗಿಂತ ತುಸು ಮುಂದರಿದು, ಜವಾಹರರು ಆಸ್ಯದ ಮುಖಂಡತ್ವ ವಹಿಸಿ ಜಗತ್ತಿನ ರಾಜಕೀಯಗಳಲ್ಲೇ ಅಸಾಧಾರಣ ವರ್ಚಸ್ಸು ಬೀರಿ, ಇಂದು ತಮ್ಮ ೬೬ನೇ ವರ್ಷ ಪ್ರಾಯದಲ್ಲೂ ಅತ್ಯಪೂರ್ವ ನವಚೈತನ್ಯವನ್ನೇ ಸದಾ ತೋರಿ, ದಿನದ ಇಪ್ಪತ್ತನಾಲ್ಕು ತಾಸುಗಳಲ್ಲಿ ಹದಿನೇಳು ಅಥವಾ ಹದಿನೆಂಟು ತಾಸು ಶ್ರಮಿಸುವ ಅಸಾಧಾರಣ ಪುರುಷರಾಗಿರುವರು. ಮಹಾತ್ಮಾಜಿಯವರ ನಂತರ ಜಗತ್ತಿನ ಅಸಂಖ್ಯಾಕ ಜನರ ಪ್ರೀತ್ಯಾದರಗಳನ್ನು ಹೊಂದಿರುವವರಲ್ಲಿ ಬಹುಶಃ ಜವಾಹರರಿಗೆ ಪ್ರಥಮ ಸ್ಥಾನ ಸಲ್ಲುತ್ತದೆ.

ಭಾರತದ ಮಹಾ ಪ್ರಧಾನರಾಗಿ, ನವಜಗತ್ತಿನ ಒಬ್ಬ ಶಿಲ್ಪಿಯಾಗಿ, ಜನರ ಹೃದಯಗಳಲ್ಲಿ ತುಂಬಿಕೊಂಡಿರುವ ಜವಾಹರರ ಜೀವನ ಚರಿತ್ರವು ಅದ್ಭುತರಮ್ಯವಾಗಿದೆ. ಈ ಚಿಕ್ಕ ವಹಿಯಲ್ಲಿ ಆ ಚರಿತ್ರವನ್ನು ಅತೀ ಸಂಕ್ಷೇಪವಾಗಿ ಮಾತ್ರ ಹೇಳಲು ಸಾಧ್ಯವಿದೆ.

**ಕುಡ್ವಿ ವಾಸುದೇವ ಶೆಣೈ.**



ಪ್ರಧಾನಾಮಾತ್ಯ

# ಪಂಡಿತ ಜವಾಹರಲಾಲ ನೆಹರು

## ಸಂಕ್ಷಿಪ್ತ ಜೀವನ ಚರಿತ್ರೆ

ಬಹುಕಾಲದ ಹಿಂದಿನ ಮಾತು. ಪಂಡಿತ ಜವಾಹರಲಾಲ ನೆಹರುಗಳವರ ಪೂರ್ವಜರು, ಕಾಶ್ಮೀರದಿಂದ ಢಿಲ್ಲಿಗೆ ಬಂದು ನೆಲಸಿದರು. ಅವರು ಕಾಶ್ಮೀರಿ ಬ್ರಾಹ್ಮಣರು. ಮೊಗಲರ ಕೈಕೆಳಗೆ ಅವರ ಹಿರಿಯರಿಗೆ ಉದ್ಯೋಗ ದೊರೆಯಿತು. ಬಾದಷಹನು ಅವರಿಗೆ 'ನಹರ್' (ನಾಲೆ ಅಥವಾ ಕಾಲುವೆ) ದಡದಲ್ಲಿ ಮನೆ ಕೊಟ್ಟುದರಿಂದ, (ಅವರ ಕೌಟುಂಬಿಕ ಉಪನಾಮ 'ಕೌಲ್') ರೂಢಿಯಾಗಿ ನೆಹರು ಎಂದು ಕರೆಯಲಾರಂಭಿಸಿದರು.

ನೆಹರು ಕುಟುಂಬವು ಢಿಲ್ಲಿಯಲ್ಲಿ ಶಾಶ್ವತ ನಿಲ್ಲಲಾಗಲಿಲ್ಲ. ೧೮೫೭ ರಲ್ಲಿ ಬ್ರಿಟಿಷರಿಗೆದುರಾಗಿ ಸಿಪಾಯಿದಂಗೆಯೆದ್ದಿತು. ಹಲವರು ಢಿಲ್ಲಿ ಬಿಟ್ಟು ಓಡಬೇಕಾಯಿತು. ನೆಹರು ಕುಟುಂಬವು ಆಗ್ರಕ್ಕೆ ಹೋಗಿ, ಅಲ್ಲಿ ಕೆಲವು ವರ್ಷ ಉಳಕೊಳ್ಳಬೇಕಾಯಿತು. ಮುಂದೆ, ಆಗ್ರದಿಂದ ಅಲ್ಲಹಾಬಾದಕ್ಕೆ ಬಂದು, ಅಲ್ಲೆ ನೆಲಸಿದರು. ಅವರ ಸಂತತಿ ಬೆಳೆಯಿತು. ೧೮೮೯ರಲ್ಲಿ, ಪಂಡಿತ ಮೋತಿಲಾಲರಿಗೆ ಪುತ್ರಜನನವಾಯಿತು. ಗೃಹದೊಳಗಿನ ಮೊದಲ ಮಗು. ಮಗುವಿಗೆ ಜವಾಹರನೆಂದು ನಾಮಕರಣವಾಯಿತು.

ಜವಾಹರನು ಬಾಲ್ಯಕಾಲದಿಂದಲೂ ಚಟುವಟಿಕೆಯ ಹುಡುಗ. ಶ್ರೀಮಂತಿಕೆಯಲ್ಲಿ ಹುಟ್ಟಿ ಬೆಳೆದ ಬಾಲಕ. ಎಫ್. ಟಿ. ಬ್ರೂಕ್ಸ್ ಎಂಬ ಆಂಗ್ಲೇಯನನ್ನು ಜವಾಹರನಿಗೆ ಇಂಗ್ಲಿಷ್ ಅಧ್ಯಾಪಕನಾಗಿ ನೇಮಿಸಿದರು. ಈ ಬ್ರೂಕ್ಸನು ಹಿಂದೂದೇಶದ ಮೇಲೆ ಅಭಿಮಾನವಿದ್ದವರು; ಥಿಯೊಸೊಫಿಸ್ಟ್ ಆಗಿದ್ದು, ಜವಾಹರನಿಗೂ ಥಿಯೊಸೊಫಿ ಬೋಧಿಸಿದ್ದುಂಟು. ಅದೇನೆಂದು ಅರ್ಥವಾಗದ ಜವಾಹರರು ಆ ಸೊಸೈಟಿಯ ಕಿರಿಯ ಸದಸ್ಯನಾದುದೂ ಉಂಟು. ಆದರೆ, ಬ್ರೂಕ್ಸ್ ಬಿಟ್ಟುಹೋದ ಬೆನ್ನಲ್ಲೆ, ಬಾಲಕ ಜವಾಹರನು ಥಿಯೊಸೊಫಿಯನ್ನೂ ಬಿಟ್ಟನು.

ಜವಾಹರರು, ಬ್ರೂಕ್ಸನು ನಿರವಿಸಿದ ಲೂಯಿಸ್ ಕೆರಲನ ಗ್ರಂಥಗಳನ್ನೂ, ಸ್ಕೋಟ್, ಡಿಕನ್ಸ್, ಥೆಕರೆ ಮತ್ತು ವೆಲ್ಸರ ಕಾದಂಬರಿಗಳನ್ನೂ ಆ ಕಾಲದಲ್ಲಿ ಓದಿ ಮುಗಿಸಿದ್ದರು.

ಪಂಡಿತ ಮೋತಿಲಾಲರ "ಆನಂದ ಭವನ"ವು ಅಕ್ಷರಶಃ ಆನಂದದಿಂದ ತುಂಬಿದ್ದ ಭವನವೇ ಆಗಿದ್ದಿತು. ಅರಮನೆಯಂಥ ಗೃಹ, ವಿಶಾಲ ತೋಟ, ಈಜುವ ಕೊಳಗಳು,—ಆ ಕಾಲದ ಎಲ್ಲ ಸೌಕರ್ಯಗಳೂ ಅಲ್ಲಿದ್ದುವು. ನಿತ್ಯವೂ ಹಲವು ಅತಿಥಿಗಳು ಬರುತಿದ್ದರು. ಬಾಲಕನನ್ನು ವಯೋವೃದ್ಧ ಮುನ್ಶಿಜಿ ಹಿಡಿದಾಡಿಸುತ್ತ, ನಡೆಸುತ್ತ, ಆಗಾಗ್ಗೆ ತೋಟದಲ್ಲಿ ಕುಳ್ಳಿರಿಸಿ, ಗಲಜಿಅರ ಸಿಪಾಯಿದಂಗೆಯ ಕಥೆಯನ್ನು ಹೇಳುತ್ತ, ಭಾರತೀಯರು ತಮ್ಮ ಸ್ವಾತಂತ್ರ್ಯಕ್ಕಾಗಿ ಹೇಗೆ ಧೀರತೆಯಿಂದ ಕಾದಾಡಿದರು ಎಂದು ವಿವರಿಸುತಿದ್ದನು. ಅದನ್ನು ಕೇಳಿ, ಬಾಲಕ ಜವಾಹರನ ಹೃದಯವು ತನ್ನ ಜನರ ಧೈರ್ಯ—ಶೌರ್ಯಗಳಿಗಾಗಿ ಗೌರವದಿಂದ ತುಂಬುವುದು. ಮುನ್ಶಿಜಿ, ಬಾಲಕನಿಗೆ, 'ಅರೇಬಿಯನ್ ನಾಯಿಟ್ಸ್' ಕಥೆಗಳನ್ನೂ ಹೇಳುವನು. ಅಲ್ಲಾವುದ್ದೀನನ ವಿಚಿತ್ರ ದೀಪ, ವಾಯುವೇಗದಲ್ಲಿ ಚಲಿಸುವ ಕುದುರೆಗಳು ಜವಾಹರನ ಮನಸ್ಸನ್ನು ನಲಿಸುವುವು. ಒಂದು ದಿನ ತಂದೆಯು ಬಾಲಕ ಜವಾಹರನಿಗೆ 'ರುಕ್ಷ' ಎಂಬ ಅರಬ್ಬಿ ಕುದುರೆಯನ್ನು ಕೊಟ್ಟನು. ಅಂದು ಅಲ್ಲಹಾಬಾದದಲ್ಲಿ ಜವಾಹರನಿಗಿಂತ ಅಧಿಕ ಸಂತೋಷಿ ಬಾಲಕನು ಮತ್ತೊಬ್ಬನಿರನಿಲ್ಲ. ಜವಾಹರನು 'ರುಕ್ಷ'ನನ್ನು ಸವಾರಿಮಾಡತೊಡಗಿ, ಮರಳಿ ಬಂದಾಗ ಮುನ್ಶಿಗೆ ಕಲ್ಪನೆಯ ಕಥೆಗಳನ್ನು ಹೇಳುವನು. ಮುನ್ಶಿಯೂ ಜವಾಹರನೂ ಹೀಗೆ ಕಲ್ಪನಾಸಾಮ್ರಾಜ್ಯದಲ್ಲಿ ತೊಡಗಿದ್ದುಂಟು. ಒಂದು ದಿನ, ಜವಾಹರನು 'ರುಕ್ಷ'ನನ್ನು ನಾಗಾಲೋಟದಿಂದ ಓಡಿಸಿ, ಕೆಳಗೆ ಬಿದ್ದನು. ಕುದುರೆ ಓಡಿ ಓಡಿ ಆನಂದಭವನಕ್ಕೆ ಮರಳಿ ಬಂತು. ಮನೆಯವರು ಗಾಬರಿಯಿಂದ ಬಾಲಕನನ್ನು ಹುಡುಕಿ ಬರುವಾಗ, ಅತಿ ದೂರದಲ್ಲಿ ಬಾಲಕನು ನಡೆದುಬರುತಿದ್ದನು. ಯಾವ ಹಾನಿಯೂ ಆಗಿರಲಿಲ್ಲ. ಈ ಘಟನೆಯಿಂದ ಜವಾಹರನಿಗೆ 'ರುಕ್ಷ'ನ ಮೇಲೆ ಕೋಪವುಂಟಾಗಲಿಲ್ಲ. ಎಂದಿನಂತೇ ಅವನು ವಿಹಾರಾರ್ಥ ಹೋಗಿ ಬರುತಿದ್ದನು.

ಹಬ್ಬಗಳೆಂದರೆ ಜವಾಹರನಿಗೆ ಬಲು ಪ್ರೀತಿ. ಹೋಳಿ ಉತ್ಸವದಂದು ಅವನು, ಬಣ್ಣದ ನೀರು ತುಂಬಿದ ಪಿಚಕಾರಿಯಿಂದ ಆನಂದಭವನದ

ಬಯಲು ತುಂಬ ಓಡಾಡಿ, ಎದುರಾದವರೆಲ್ಲರಿಗೆ ಓಕುಳಿಯ ತಂಪನ್ನು ಕೊಡುತಿದ್ದನು. ದೀಪಾವಳಿ ಕಾಲದಲ್ಲೂ, ತನ್ನ ಜನ್ಮದಿನೋತ್ಸವದಂದೂ ಬಾಲಕನ ಉತ್ಸಾಹಕ್ಕೆ ಮಿತಿಯೇ ಇರುತ್ತಿರಲಿಲ್ಲ. ಹುಟ್ಟುಹಬ್ಬದಂದು ಬಾಲಕನನ್ನು ತಕ್ಕಡಿಯಲ್ಲಿ ಕುಳ್ಳಿರಿಸಿ, ಇನ್ನೊಂದರಲ್ಲಿ ಗೋದಿ ಮತ್ತು ಇತರ ಧಾನ್ಯಗಳನ್ನು ಹಾಕಿ 'ತುಲಾಭಾರ' ಮಾಡಿ, ಆ ಧಾನ್ಯವನ್ನು ಬಡವರಿಗೆ ಹಂಚುವ ಕ್ರಮವಿರುತಿತ್ತು.

ಬಾಲಕನು ಅತಿ ಚಿಕ್ಕ ಪ್ರಾಯದಲ್ಲೇ ಈಜನ್ನೂ ಕಲಿತಿದ್ದನು. ದೊಡ್ಡವರೊಂದಿಗೆ ಈಜುಕೊಳಕ್ಕೆ ಪ್ರವೇಶಿಸಿ, ಅವರೊಡನೆ ಆಡಿ, ದಣಿಸುತಿದ್ದನು. ಕೊಳದ ಬಳಿ ನಿಂತು ಇಣಿಕುವವರ ಹಿಂದೆ ಮೆಲ್ಲನೆ ಹೋಗಿ, ಅವರನ್ನು ನೀರಿಗೆ ದೂಡುವ ತುಂಟತನ ತೋರುತಿದ್ದನು.

ಒಮ್ಮೆ, ಬಾಲಕ ಜವಾಹರನು, ತನ್ನ ತಂದೆಯು ಅತಿಥಿಗಳೊಡನೆ ದ್ರಾಕ್ಷಾರಸ ಕುಡಿಯುವುದನ್ನು ಅಡಗಿ ನಿಂತು ನೋಡಿ, ತಾಯಿ ಬಳಿಗೆ ಓಡಿ ಹೋಗಿ, "ಮಾ, ಅಪ್ಪನು ನೆತ್ತರು ಕುಡಿಯುತಿದ್ದಾನೆ!" ಎಂದು, ಗಾಬರಿಯಿಂದ ಹೇಳಿದನೆಂದು, ಜವಾಹರರು ತನ್ನ ಆತ್ಮಕಥೆಯಲ್ಲೊಂದು ಕಡೆ ಹೇಳಿರುತ್ತಾರೆ.

ಜವಾಹರನಿಗೆ ಹತ್ತು ವರ್ಷವಾದಾಗ, ಅವನ ತಾಯಿ ಸ್ವರೂಪರಾಣಿಯವರು ಹೆಣ್ಣು ಶಿಶುವನ್ನು (ವಿಜಯಲಕ್ಷ್ಮಿ) ಹೆತ್ತರು.

ಹನ್ನೊಂದನೇ ವರ್ಷದಲ್ಲಿ ಜವಾಹರರ ಶಿಕ್ಷಣಕ್ಕೆ, ಮೇಲೆ ಉಲ್ಲೇಖಿಸಿದ ಬ್ರೂಕ್ಸ್‌ನನ್ನು ನೇಮಿಸಿದ್ದರು. ಬ್ರೂಕ್ಸನು ಹೆಚ್ಚು ಕಾಲ ನಿಲ್ಲಲಾಗಲಿಲ್ಲ.

ಹೀಗೇ ಕೆಲಕಾಲಾನಂತರ, ೧೯೦೫ನೇ ಮೇ ತಿಂಗಳಲ್ಲಿ, ಜವಾಹರನಿಗೆ ಹದಿನೈದನೇ ವರ್ಷ ಪ್ರಾಪ್ತವಾದಾಗ, ಪಂಡಿತ ಮೋತಿಲಾಲರು ಕುಟುಂಬ ಸಹಿತ ಇಂಗ್ಲೆಂಡಿಗೆ ಹೊರಟರು. ಇಂಗ್ಲೆಂಡಿನ ರಾಜಕುಮಾರರೂ ಲಾರ್ಡ್ ಮನೆತನದವರೂ ತಮ್ಮ ಮಕ್ಕಳನ್ನು ಕಳಿಸುತಿದ್ದ ಹೆರೋ ವಿದ್ಯಾಸಂಸ್ಥೆಗೆ ಜವಾಹರನನ್ನೂ ಸೇರಿಸಿದರು. ಆ ಕಾಲದಲ್ಲೇ, ಜವಾಹರರ ಸಹಪಾಠಿಗಳಾಗಿ ಬರೋಡೆಯ ಯುವರಾಜರೂ, ಕಪುರ್ತಲಾ ರಾಜಕುಮಾರರೇ ಮೊದಲಾದವರಿದ್ದರು. ಮೋತಿಲಾಲರು, ಜವಾಹರನನ್ನು ಅಲ್ಲಿ ಬಿಟ್ಟು, ಪತ್ನೀ-ಪುತ್ರಿಯೊಂದಿಗೆ ಯುರೋಪಿಗೆ ತೆರಳಿ, ಅಲ್ಲಿ ಸಂಚರಿಸಿ, ಸ್ವದೇಶಕ್ಕೆ

ಮರಳಿದರು. ಜವಾಹರರಿಗೆ, ಮನೆಯನ್ನೂ ದೇಶವನ್ನೂ ಬಿಟ್ಟು ಬಂದ ಈ ಮೊದಲನೇ ಅನುಭವವು ಮನೆಯಾಸೆಯನ್ನೇ ಉಂಟುಮಾಡುವಂತಾಗಿತ್ತು. ಇಂಗ್ಲಿಷ್ ಯುವಕರ ಜೀವನವು ಅವರಿಗೆ ಮೊದಲು ರುಚಿಸಲಿಲ್ಲ. ಅವರು ತಮ್ಮ ಪಾಠ ಮತ್ತು ಆಟಗಳ ವಿಷಯವಾಗಿಯೇ ಮಾತಾಡಿಕೊಳ್ಳುತ್ತಿದ್ದರು. ಜವಾಹರರು, ಸದಾ ವೃತ್ತಪತ್ರಿಕೆಗಳನ್ನೋದುತ್ತ, ಜಗತ್ತಿನ ವಿದ್ಯಮಾನಗಳನ್ನು ಅಭ್ಯಸಿಸುತ್ತಿದ್ದರು. ಒಂದು ದಿನ, ಶಾಲಾ ಅಧ್ಯಾಪಕರು, ಇಂಗ್ಲೆಂಡಿನಲ್ಲಿ ಆಗ ತಾನೆ ನಡೆದ ಮಹಾಚುನಾವಣೆಗಳ ವಿಷಯವಾಗಿ ಪ್ರಶ್ನಿಸಿದಾಗ, ಜವಾಹರರೊಬ್ಬರೇ ಅಲ್ಲಿ ಹೊಸದಾಗಿ ಅಧಿಕಾರಕ್ಕೆ ಬಂದ ಸರಕಾರದ ವಿಷಯವಾಗಿ ಹೇಳಲು ಸಮರ್ಥರಾಗಿ, ಮೆಚ್ಚುಗೆ ಪಡೆದರು.

ಜವಾಹರರು ತನ್ನ ದೇಶದಿಂದ ದೂರವಿದ್ದರೂ, ವೃತ್ತ ಪತ್ರಿಕೆಗಳ ಮೂಲಕ ಎಲ್ಲವನ್ನೂ ತಿಳಿದುಕೊಳ್ಳುತ್ತಿದ್ದರು. ಆಗ, ಬಂಗಾಳದ ವಿಭಜನೆಯುಂಟಾಗಿ, ಅದರಿಂದ ದೇಶದ ಜನರು ಪ್ರಕ್ಷುಬ್ಧಗೊಂಡಿದ್ದರು. ವಿದೇಶೀ ವಸ್ತುಗಳ ಬಹಿಷ್ಕಾರ, ಸ್ವದೇಶಿಗೆ ಪುರಸ್ಕಾರ—ಎಂಬ ಕೂಗು ಎದ್ದಿತ್ತು. ಪಂಜಾಬಕೇಸರಿ ಲಾಲಾ ಲಜಪತ ರೈಗಳವರಿಗೆ ಗಡಿಪಾರು ಶಿಕ್ಷೆ ವಿಧಿಸಲ್ಪಟ್ಟಿತ್ತು. ತಿಲಕರ ಸಿಂಹನಾದವು ಕೇಳಿಸಿತ್ತು. ಜವಾಹರರು ಇದನ್ನೆಲ್ಲ ಓದುತ್ತ, ಕೆರಳಿದರು. ಆದರೆ, ಆ ವಿಷಯವಾಗಿ ಅಲ್ಲಿ ಯಾರೊಡನೆಯೂ ಚರ್ಚಿಸುವಂತಿರಲಿಲ್ಲ. ಅಶಾಂತ ಮನಸ್ಸನ್ನು, ಜಗತ್ತಿನಲ್ಲಿ ಸ್ವಾತಂತ್ರ್ಯಕ್ಕಾಗಿ ಕಾದಾಡಿದ ಮಹಾಪುರುಷರ ವೃತ್ತಗಳನ್ನೋದಿ ತಣಿಸಲು ಯತ್ನಿಸಿದರು.

ಹೆರೋ ವಿದ್ಯಾಸಂಸ್ಥೆಯ ಶಿಕ್ಷಣ ಮುಗಿಸಿ, ಜವಾಹರರು ಕೇಂಬ್ರಿಜ್ ವಿಶ್ವವಿದ್ಯಾಲಯವನ್ನು ಸೇರಿದರು. ಅಲ್ಲಿ, ಇತರ ಶ್ರೀಮಂತ ವಿದ್ಯಾರ್ಥಿಗಳ ಅನುಕರಣೆ ಮಾಡಿ ಹೇರಳ ಹಣ ವ್ಯಯಿಸತೊಡಗಿದಾಗ, ಮೋತಿಲಾಲರಿಗೆ ಯೋಚನೆಯುಂಟಾದುದಿದೆ. ಆದರೆ, ಜವಾಹರರು ಈ ದುಂದುವ್ಯಯದ ಮರುಳನ್ನು ಬೇಗನೇ ಬಿಟ್ಟು ಕೊಟ್ಟು, ತಮ್ಮ ಪದವಿಗಾಗಿ (ಬಿ.ಎ. ಆನರ್ಸ್) ಮೂರು ವರ್ಷಗಳ ಕಾಲ ಶ್ರದ್ಧೆಯಿಂದ ಕಲಿಯತೊಡಗಿದರು. ಈ ಕಾಲದಲ್ಲೇ ಅವರು, ನೆಹರು ಕುಟುಂಬದಲ್ಲಿ ಇನ್ನೋರ್ವ ಹೆಣ್ಣು ಶಿಶುವಿನ ಕೂಡಿಕೆಯಾಯಿತೆಂಬುದನ್ನು (ಕೃಷ್ಣಾ) ಕೇಳಿದರು. ಈ ವಿದ್ಯಾರ್ಥಿಯ ತೀಕ್ಷ್ಣಮತಿಯನ್ನು ಗುರುತಿಸಿ, ಕೇಂಬ್ರಿಜ್ ವಿಶ್ವವಿದ್ಯಾಲಯದವರು, ಆಗಲೇ 'ಎಮ್.ಎ., ಆನರ್ಸ್' ಡಿಗ್ರಿಯನ್ನೂ ಕೊಟ್ಟು ಭೂಷಿಸಿದರು.

ಕೇಂಬ್ರಿಜ್ ಶಿಕ್ಷಣ ಮುಗಿದು ಜವಾಹರರು, "ಐ.ಸಿ.ಎಸ್." ಕಲಿವ ಆಲೋಚನೆ ಮಾಡಿದರೂ, ಕಡಿಮೆ ವಯಸ್ಸಿನ ನಿರ್ಬಂಧಗಳಿಂದಾಗಿ ಸಾಧ್ಯವಾಗಲಿಲ್ಲ. ಆದಕ್ಕಾಗಿ, ತನ್ನ ತಂದೆಯಂತೇ ಬೆರಿಸ್ಟರನಾಗಲು ನಿರ್ಧರಿಸಿ, ಲಂಡನಿಗೆ ಬಂದರು. ಅಲ್ಲಿ ಕಾನೂನು ಕಲಿಯಲಾರಂಭಿಸಿದರು. ಈ ಶಿಕ್ಷಣ ಕಾಲದಲ್ಲಿ ಜವಾಹರರು, ಅನುವು ದೊರೆತಾಗ ಯುರೋಪಿನ ದೇಶಗಳಿಗೂ ಹೋಗಿ ಬರುತಿದ್ದರು. ಒಮ್ಮೆ ಜರ್ಮನಿಯ ರಾಜಧಾನಿ ಬರ್ಲಿನ್ ನಗರಕ್ಕೆ ತನ್ನ ತಂದೆಯೊಂದಿಗೆ ಹೋದಂದು, ಕೌಂಟ್ ಝೆಪೆಲಿನರ ನೂತನ ರಚನೆಯಾದ 'ವಾಯುಹಡಗ'(Zeppelin) ಪ್ರಥಮ ಹಾರಾಟ ಕಂಡರು. ಅಂದು ಬರ್ಲಿನ್ ನಗರವಿಡೀ ಸಂತೋಷಾಧಿಕ್ಯದಿಂದ ಉದ್ರೇಕಗೊಂಡಿತ್ತು. ಆಳರಸ ಕೈಸರ್ರು ಸ್ವತಃ ಬಂದು ಕೌಂಟ್ ಝೆಪೆಲಿನರನ್ನು ಗೌರವಿಸಿದರು. ರಾತ್ರೆಯಿಡೀ ಆ ನಗರದಲ್ಲಿ ಮಹೋತ್ಸವಗಳು ಜರಗಿದ್ದುವು. ಝೆಪೆಲಿನರ ಚಿತ್ರವನ್ನು ಜನರಿಗೆ ಹಂಚಿದರು: ಜವಾಹರರಿಗೂ ಒಂದು ಸಿಕ್ಕಿತು. ಕೌಂಟ್ ಝೆಪಲಿನರ ಅಂದಿನ ಆ ಚಿತ್ರವು, ಜವಾಹರರೊಡನೆ ಈಗಲೂ ಇದೆ. ಇನ್ನೊಮ್ಮೆ ಜವಾಹರರು, ನೊರ್ವೆಯಲ್ಲಿ ತನ್ನ ಸ್ನೇಹಿತರೊಂದಿಗೆ ವಿಹರಿಸುತಿದ್ದಾಗ, ತಾನು ಉಳಕೊಂಡ ಹೊಟೇಲಿನಲ್ಲಿ ಸ್ನಾನದ ಸೌಕರ್ಯವಿಲ್ಲವೆಂದು ಕೇಳಿ, ಬಳಿಯ ಪರ್ವತ ಪ್ರವಾಹದಲ್ಲಿ ಮೀಯಲು ಹೋಗಿ, ಸಾಮಾನ್ಯರಾರೂ ಧೈರ್ಯಪಡದಂಥ ಆ ಅಪಾಯಕರ ಪ್ರವಾಹದಲ್ಲಿಳಿದಾಗ ತೇಲಿಹೋದರೆಂದೂ, ಪ್ರವಾಹವು ಒಂದು ಕಡೆ ಅತಿ ಎತ್ತರದಿಂದ ಕೆಳಗಿನ ಬಂಡೆಗೆ ಬೀಳುವಲ್ಲಿಗೆ ತುಸು ದೂರ, ಅವರ ಸ್ನೇಹಿತನೊಬ್ಬನು ಓಡಿ ಓಡಿ ಅವರ ಕಾಲನ್ನು ಹಿಡಿದೆಳೆದ ಬದುಕಿಸಿದನೆಂದೂ ಹೇಳಲಾಗಿದೆ.

೧೯೧೨ರಲ್ಲಿ ಜವಾಹರರು ಬಾರ್-ಎಟ್-ಲೋ ಪದವಿ ಪಡೆದು ಸ್ವದೇಶಕ್ಕೆ ಮರಳಿದಾಗ, ೧೯೦೫ರ ಬಂಗಾಳ ವಿಭಜನೆಯಿಂದುಂಟಾದ ಚಳವಳವು ನಿಂತಿತ್ತು. ಮೋತಿಲಾಲರು ಸ್ವಾತಂತ್ರ್ಯ ಸಂಬಂಧವಾದ ಬದಲಾವಣೆಗಳು ಕ್ರಮೇಣ ಮತ್ತು ಮೆಲ್ಲಗೆ ಬರತಕ್ಕುವೆಂಬ ನಂಬುಗೆ ತಾಳಿದ್ದರು. ಇದು ಜವಾಹರರಿಗೆ ತೃಪ್ತಿ ಕರವೆನಿಸಲಿಲ್ಲ. ಅವರು ತನ್ನ ತಂದೆಯೊಡನೆ ಆ ವಿಷಯದಲ್ಲಿ ಅಭಿಪ್ರಾಯಭೇದ ತಾಳಿದ್ದರು. (ಒಮ್ಮೆ ಜವಾಹರರು ಇಂಗ್ಲೆಂಡಿನಲ್ಲಿದ್ದಾಗ, ತನ್ನ ತಂದೆ ಬಂಗಾಳದಲ್ಲಿನ ಕೆಲವು ಹಿಂದೀಯರ ಹಿಂಸಾತ್ಮಕ ಕೃತ್ಯಗಳನ್ನು ನಿಷೇಧಿಸಿದ್ದನ್ನು ಕೇಳಿ, ತಂದೆಗೆ, "ಅಪ್ಪಾ, ನಿಮ್ಮ ಅಭಿಪ್ರಾಯಗಳಿಂದ ಸರ

ಕಾರಕ್ಕೆ ಬಹಳ ಸಹಾಯವಾಯಿತೆಂಬುದು ನಿಶ್ಚಯ” ಎಂದು ಬರೆದರೆಂದೂ ಮೋತಿಲಾಲರು, ಹುಡುಗನ ಈ ‘ಉದ್ಧಟತನ’ಕ್ಕೆ ಕುಪಿತರಾದರೆಂದೂ, ಮಗನನ್ನು ಸ್ವದೇಶಕ್ಕೆ ಆ ಕೂಡಲೇ ಹಿಂದೆ ಕರೆಸುವ ಆಲೋಚನೆ ಕೂಡ ಮಾಡಿದ್ದರೆಂದೂ ಹೇಳಲಾಗಿದೆ. ಹಿರಿಯರ ಅಭಿಪ್ರಾಯಗಳ ಮುಂದೆ ಇನ್ನು ದುಡುಕಲಾರದೆ ಜವಾಹರರು, ಅಲ್ಲಾಹಾಬಾದದಲ್ಲಿ, ತನ್ನ ತಂದೆಯ ನಿರ್ದೇಶನದಲ್ಲಿ, ವಕೀಲಿವೃತ್ತಿ ಆರಂಭಿಸಿದರು. ತನ್ನ ತಂದೆಯನ್ನು ಅವರು ಪ್ರತಿಭಟಿಸಲು ಆಗ ಧೈರ್ಯಪಡುತ್ತಿರಲಿಲ್ಲ. ತಂದೆಯ ಮೇಲೆ ಅವರಿಗೆ ಗೌರವವೂ ಇದ್ದಿತು. ಮೋತಿಲಾಲರನ್ನು ಪ್ರತಿಯೊಬ್ಬರೂ ಗೌರವಿಸುತ್ತಿದ್ದರು.

ಮೋತಿಲಾಲರು ಪರ್ಸಿಯನ್ ಮತ್ತು ಉರ್ದು ಪಂಡಿತರಿದ್ದರು. ಹಾಗೇ ಪಾಶ್ಚಿಮಾತ್ಯರ ಸಂಸ್ಕೃತಿ ಮತ್ತು ರೂಢಿಗಳನ್ನೂ ಚೆನ್ನಾಗಿ ಬಲ್ಲವರಿದ್ದು, ಬ್ರಿಟಿಷರ ಆಡಳಿತವನ್ನು ಹೋರಾಡಿದರೂ, ಬ್ರಿಟಿಷರಿಂದ ನಾವು ಕಲಿತುಕೊಳ್ಳಬೇಕಾದುದೆಷ್ಟೋ ಇದೆ ಎಂದು ತಿಳಿದಿದ್ದರು. ಭಾರತವೂ ಯುರೋಪಿನ ದೇಶಗಳಂತೆ ಮುಂದುವರಿಯಬೇಕೆಂದು ಇಚ್ಛಿಸುತಿದ್ದರು, ಜವಾಹರರೂ, ಇದೇ ತೆರ, ತನ್ನ ತಂದೆಯ ಅಭಿಪ್ರಾಯಗಳನ್ನೇ ಬಲು ಮಟ್ಟಿಗೆ ಅನುಮೋದಿಸುತಿದ್ದವರು. ಇಂಗ್ಲಿಷರನ್ನು ಮೆಚ್ಚುತಿದ್ದರು. ಬಾಲ್ಯದಿಂದಲೇ ವಿದೇಶೀ ರೀತಿನೀತಿಗಳಿಂದೆಂಬಂತೆ ಬೆಳೆಸಲ್ಪಟ್ಟು, ಇಂಗ್ಲಿಷ್ ಅಧ್ಯಾಪಕರಿಂದಲೂ ಇಂಗ್ಲಿಷ್ ದಾದಿಗಳಿಂದಲೂ ಆರೈಕೆ ಹೊಂದುತಿದ್ದ ಅವರು ಹೀಗೆ ಸುಲಭವಾಗಿ ಇಂಗ್ಲಿಷರನ್ನು ಮೆಚ್ಚುವುದು ಆಶ್ಚರ್ಯವಲ್ಲ.

ಜವಾಹರರರು ಬಿಡುವಿದ್ದಾಗ, ಆಗಾಗ್ಗೆ ಶಿಕಾರಿಗೆ ಹೋಗುತಿದ್ದರು. ಒಮ್ಮೆ ಒಂದು ಚಿಕ್ಕ ಜಿಂಕೆಯನ್ನು ಗುಂಡಿನಿಂದ ಹೊಡೆದು, ರಕ್ತಮಯವಾಗಿ ಬಿದ್ದು ಕರುಣಾದ್ರ್ರ ದೃಷ್ಟಿಯಿಂದ ನೋಡುತ್ತಿದ್ದ ಆ ನಿಷ್ಪಾಪಿ ಪ್ರಾಣಿಗಾಗಿ ಜವಾಹರರ ಕರುಳು ಕತ್ತರಿಸಿದಂತಾಗಿ, ತನ್ನ ಮುಂದೆ ಶಿಕಾರಿ ಮಾಡುವುದಿಲ್ಲವೆಂದು ಶಪಥ ತೊಟ್ಟುಕೊಂಡರು. (ಜವಾಹರರ ಪ್ರಾಣಿದಯೆಯ ವಿಷಯವಾಗಿ ಅನೇಕ ಕಥೆಗಳಿವೆ.)

೧೯೧೪ರಲ್ಲಿ ಪ್ರಥಮ ಜಾಗತಿಕ ಯುದ್ಧ ಆರಂಭವಾಗಿ ೧೯೧೮ಕ್ಕೆ ಮುಗಿಯುತ್ತಾ ಬರುವಾಗ, ಮೋತಿಲಾಲರೊಡನೆ ಮತ್ತು ಇತರ ಹಿರಿಯ ಕೊಂಗ್ರೆಸ್ ನಾಯಕರೊಡನೆ ಜವಾಹರರೂ, (ತಮ್ಮ ರಾಜಕೀಯ ಅಭಿ

ಪ್ರಾಯಗಳಿಗಾಗಿ ತಂದೆಯೊಡನೆ ವಾಗ್ಯುದ್ಧ ನಡೆಸಿದರೂ) ಸ್ವಾತಂತ್ರ್ಯ ಚಳ ವಳದಲ್ಲಿ ಸೇರಿದರು. ಜವಾಹರರ ಪ್ರಥಮ ಸಾರ್ವಜನಿಕ ಭಾಷಣವು ಅಲ್ಲ ಹಾಬಾದದಲ್ಲಿ ನಡೆಯಿತು. ದೊಡ್ಡ ಜನಸಂದಣಿಯನ್ನೆದುರಿಸಿ ಮಾತಾಡಲು ನಾಚುತಿದ್ದ ಜವಾಹರರು ಅಂದಿನಿಂದ ಒಂದೇ ಸವನೆ ಬಯಲಿಗೆ ದುಮುಕಿ ದರು. ಅಂದಿನಿಂದ, ಬಹುವ್ಯಯದ ವಿಲಾಸೀ ಜೀವನವನ್ನು ಕ್ರಮೇಣ ಬಿಟ್ಟುಬಿಡತೊಡಗಿದರು. 'ಹೋಮ್‌ರೂಲ್' ಚಳವಳದಲ್ಲಿ ಸಹಾಯಕ ರಾದರು.

೧೯೧೬ರಲ್ಲಿ, ವಸಂತಪಂಚಮಿಯ ದಿನ ಜವಾಹರರು, ಹದಿನೇಳು ವರ್ಷ ಪ್ರಾಯದ ಕನ್ಯೆ ಕಮಲಾ ಕೌಲರನ್ನು ಲಗ್ನವಾದರು. ವಿವಾಹವು ಅತೀ ವಿಜೃಂಭಣೆಯಿಂದ ಜರಗಿತು. ವಿವಾಹಾನಂತರ, ಕಾಶ್ಮೀರಕ್ಕೆ "ಮಧು ಮಾಸ"ಕ್ಕೆ ತೆರಳಿದರು. ಅದೇ ವರ್ಷ ಮಹಾತ್ಮಾಜಿಯವರನ್ನು, ಲಕ್ನೋ ಕೊಂಗ್ರೆಸ್ ಕಾಲದಲ್ಲಿ ಪ್ರಥಮತಃ ಕಂಡರು. ೧೯೧೭ರಲ್ಲಿ ಜವಾ ಹರರಿಗೆ ಹೆಣ್ಣು ಮಗು ಜನಿಸಿತು. ಮಗುವಿಗೆ "ಇಂದಿರಾ ಪ್ರಿಯದರ್ಶಿನಿ" ಎಂದು ನಾಮಕರಣ ಮಾಡಿದರು.

ಗಾಂಧಿಜಿಯವರು ದಕ್ಷಿಣಾಫ್ರಿಕದಲ್ಲಿ, ಹಿಂದೀಯರ ಸ್ಥಾನಮಾನ ಗಳಿಗಾಗಿ ಹೋರಾಡಿ, ಕಾರಾಗ್ರಹವಾಸವನ್ನೂ ಅನುಭವಿಸಿ, ಸ್ವದೇಶಕ್ಕೆ ಮರಳಿದ್ದರು. ಆ ಕಾಲದಲ್ಲಿ, ಯುದ್ಧರಂಗದಿಂದ ನಿವೃತ್ತಿಹೊಂದಿ ಮರಳಿದ ಸೈನಿಕರು ಕೆಲವರು ಅತೃಪ್ತರಾಗಿ, ಪಂಜಾಬದಲ್ಲಿ ಕೆಲವು ಹಿಂಸಾಕೃತ್ಯಗಳು ನಡೆದುವು. ಸರಕಾರವು ತೀವ್ರ ಕಾರ್ಯಕ್ರಮ ಕೈಕೊಂಡಿತು. ನಿರಪ ರಾಧಿಗಳು ಶಿಕ್ಷಿಸಲ್ಪಟ್ಟರು. ಗಾಂಧಿಜಿಯವರು ಆ ಕಾಲದಲ್ಲಿ ನಮಗೆ, ಸಹನೆ-ತ್ಯಾಗಗಳ ಉಪದೇಶಮಾಡಲುಪಕ್ರಮಿಸಿದರು. ಅಹಿಂಸೆಯನ್ನು ಬೋಧಿಸಿದರು. ಆತ್ಮಬಲ, ಸತ್ಯದ ಮಹಿಮೆಯನ್ನು ವಿಶದೀಕರಿಸಿದರು. ಸತ್ಯಾಗ್ರಹ ಚಳವಳವು ರೂಪಿಸಿ ಬಂತು (೧೯೨೦). ಆಗಲೇ ಪಂಜಾಬದ "ಜಲಿಯನ್‌ವಾಲಾಬಾಗ್ ಅತ್ಯಾಚಾರ" ಪ್ರದೇಶದಲ್ಲಿ ಸಂತಾಪವನ್ನುಂಟು ಮಾಡಿತು. ಜಲಿಯನ್‌ವಾಲಾಬಾಗದಲ್ಲಿ ರಾಜಕೀಯ ಸಭೆ ಸೇರಿದ್ದಾಗ, ಜನರಲ್ ಮೇಕ್ ಒಡ್ವಾಯರನೆಂಬ ಬ್ರಿಟಿಷ್ ಅಧಿಕಾರಿಯ ಆಜ್ಞೆಯಿಂದ, ನಿಶ್ಶಸ್ತ್ರ ಜನರ ಮೇಲೆ ಗೋಳೀಬಾರು ಮೂಲಕ ಹತ್ಯಾಕಾಂಡ ನಡೆಯಿತು. ಇದರಿಂದ ಉದ್ವಿಗ್ನಗೊಂಡು, ಹಲವು ಹಿಂದೂ-ಮುಸ್ಲಿಮರು ಮಹಾತ್ಮಾಜಿ

ಯುವರ ಧುರೀಣತ್ವದಲ್ಲಿ 'ಸ್ವಾತಂತ್ರ್ಯ ಚಳವಳ ಸೇರಿದರು. ಹೇರಳ ಸಂಪಾದನೆಯಿರುವ ಲಾಯರ್‌ವೃತ್ತಿಯನ್ನು ಬಿಟ್ಟು ಮೋತಿಲಾಲರೂ ಜವಾಹರರೂ ಖಾದಿಧಾರಿಗಳಾಗಿ ಸ್ವಾತಂತ್ರ್ಯಸಂಗ್ರಾಮದಲ್ಲಿ ಮುಂದಾಳಾದರು.

೧೯೨೧ರಲ್ಲಿ, ಇಂಗ್ಲೆಂಡಿನ ಯುವರಾಜರು ಹಿಂದೂದೇಶಕ್ಕೆ ಆಗಮಿಸುವ ಕಾಲಕ್ಕೆ ಹಲವರು ಕರಿಯಪತಾಕೆಗಳಿಂದ ಅವರಿಗೆ ನಿಷೇಧ ತೋರಿಸಲು ಯೋಚಿಸಿದ್ದರು. ಒಂದು ದಿನ ಜವಾಹರರು ತಮ್ಮ ಆಫೀಸಿನಲ್ಲಿ ಕೆಲಸದಲ್ಲಿ ಕುಳಿತಿದ್ದಾಗ, ಪೋಲೀಸರು ಬಂದು ಅವರ ದಸ್ತಗಿರಿಮಾಡಿದರು; ಮೋತಿಲಾಲರೂ ಇತರ ಮುಖಂಡರೂ ವಸ್ತಗಿರಿಗೊಳಗಾದರು. ಗಾಂಧಿಜಿಯವರನ್ನು ಅವರು ಮುಟ್ಟಲಿಲ್ಲ. ಜವಾಹರರಿಗೆ ಮೂರು ತಿಂಗಳ ಮತ್ತು ಮೋತಿಲಾಲರಿಗೆ ಆರು ತಿಂಗಳ ಶಿಕ್ಷೆ ವಿಧಿಸಲ್ಪಟ್ಟಿತು.

'ಚೌರೀ ಚೋರಾ'ದಲ್ಲಿ (ಸಂಯುಕ್ತ ಪ್ರಾಂತ) ಜನರು ದಂಗೆಗೆ ತೊಡಗಿದ ಕಾರಣ, ಗಾಂಧಿಜಿಯವರು ಚಳವಳವನ್ನು ಹಿಂದೆಗೆದರು. "ಸ್ವಾತಂತ್ರ್ಯಕ್ಕೂ ಹೆಚ್ಚಿನದು ಅಹಿಂಸೆ" ಎಂದರು ಗಾಂಧಿಜಿ.

ಕಾರಾಗ್ರಹದಿಂದ ಮರಳುತ್ತಲೇ ಜವಾಹರರು ತಿರುಗಿ ತಮ್ಮ ಕಾರ್ಯಾರಂಭಮಾಡಿದರು. ಸರಕಾರವು ತಿರಿಗಿ ಅವರನ್ನು ಹದಿನೆಂಟು ತಿಂಗಳ ಶಿಕ್ಷೆ ವಿಧಿಸಿ ಜೈಲಿಗೆ ಕಳಿಸಿತು. ಇವರು ಕಾರಾಗ್ರಹದಲ್ಲಿರುವಾಗ, ದಂಡ ವಿಧಿಸಿದ ಮೊಬಲಗಿನ ಬಗ್ಗೆ ಪೋಲೀಸರು 'ಆನಂದಭವನ'ಕ್ಕೆ ಹೋಗಿ, ಒಂದೊಂದೇ ವಸ್ತುವನ್ನು ಒಯ್ಯುತಿದ್ದರು. ೧೯೨೩ರಲ್ಲಿ ಜವಾಹರರು ಬಿಡುಗಡೆಹೊಂದಿದರು.

ಕೆಲಕಾಲಾನಂತರ, ಕಮಲಾ ನೆಹರುಗಳವರು ಅಸ್ವಸ್ಥರಿದ್ದಾಗ, ಪತ್ನಿ ಮತ್ತು ಪುತ್ರಿಯೊಂದಿಗೆ ಸ್ವಿಝರ್ಲೆಂಡಿಗೆ ತೆರಳಿ, ಅಲ್ಲಿ ಒಂದು ವರ್ಷ ಕಾಲ ಉಳಿದು, ಮರಳಿದರು. ೧೯೨೭ರಲ್ಲಿ ರಷ್ಯದ ಸರಕಾರದ ಆಮಂತ್ರಣದಂತೆ ಅಲ್ಲಿಗೆ ತೆರಳಿ, ರಷ್ಯದ ಪ್ರಜಾಪ್ರಭುತ್ವದ ಹತ್ತನೇ ವಾರ್ಷಿಕೋತ್ಸವದಲ್ಲಿ ಭಾಗವಹಿಸಿದರು. ೧೯೨೮ರಲ್ಲಿ ಜಿನೇವದಲ್ಲಿ ಸಾಮ್ರಾಜ್ಯ ವಿರೋಧಿ ಪಕ್ಷದ ಅಧಿವೇಶನ ನಡೆದಾಗ ಅದರಲ್ಲಿ ಭಾಗವಹಿಸಿದರು. ಅದೇ ವರ್ಷ ಹಿಂದೂಸ್ಥಾನೀ ಸೇವಾದಳದ ಪ್ರಥಮಾಧಿವೇಶನದ ಅಧ್ಯಕ್ಷತೆ ವಹಿಸಿದರು. ೧೯೨೯ರಲ್ಲಿ, ಲಾಹೋರ್ ಕೊಂಗ್ರೆಸ್ ಅಧಿವೇಶನಕ್ಕೆ ಪ್ರಥಮ ಬಾರಿ, ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಜವಾಹರರ ಹೆಸರು ದೇಶದ ಮೂಲೆ ಮೂಲೆಗಳಿಗೂ ಹರಡಿತು.

ಅವರನ್ನು "ಭಾರತಭೂಷಣ"—"ತ್ಯಾಗಮೂರ್ತಿ" ಮುಂತಾಗಿ ಜನತೆ ಸಂಬೋಧಿಸಿತು. ಇದರಿಂದ ಅವರು ವಿನೋದಗೊಳ್ಳುತಿದ್ದರೇ ವಿನಾ ತಲೆಗೆಡಲಿಲ್ಲ.

ಸೆಖೆಗಾಲದಲ್ಲಿ ಪುಟ್ಟ ಇಂದಿರಾ, ತನ್ನ ತಾಯಿಯೊಂದಿಗೆ ಮುಸ್ಸೂರಿಗೆ ಹೋಗಿ ನಿಂತಾಗ, ಜವಾಹರರು ಬಾಲಕಿಯ ತಿಳುವಳಿಕೆ ಬಗ್ಗೆ, ಭೂಮಿ ಮತ್ತು ಅದರ ಪ್ರಗತಿಯ ಕಥೆಯನ್ನು ಪತ್ರಗಳ ರೂಪದಲ್ಲಿ ಕಳಿಸುತಿದ್ದರು. ಆ ಪತ್ರಗಳು ಚಲೋಗ್ರಂಥವಾಗಿ ಪ್ರಕಟವಾಗಿವೆ.

೧೯೩೦ರ ಸುಮಾರಿಗೆ ಮೋತಿಲಾಲ ನೆಹರುಗಳವರು ತಮ್ಮ ಭವ್ಯ ಗೃಹವನ್ನು ರಾಷ್ಟ್ರದ ಸೇವೆಗಾಗಿ ಕೊಂಗ್ರೆಸ್ಸಿಗೆ ಬಿಟ್ಟರು. ಅದನ್ನು "ಸ್ವರಾಜ್ಯ ಭವನ"ವೆಂದು ನಾಮಕರಣಮಾಡಲಾಯಿತು. ಬಳಿಯಲ್ಲೇ ಇನ್ನೊಂದು ಮನೆಕಟ್ಟಿಸಿ, ನೆಹರೂ ಕುಟುಂಬವು ಆ ಭವನಕ್ಕೆ ಬಂದು ವಾಸಿಸತೊಡಗಿತು.

೧೯೩೦ರಲ್ಲಿ ನೆಹರು ಕುಟುಂಬವಿಡೀ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿತು.

ಗಾಂಧಿಜಿಯವರೂ ಜವಾಹರರೂ ಬಂಧಿಸಲ್ಪಟ್ಟರು. (ಜವಾಹರರು, ಆಗ ತಮ್ಮ ಕಾರಾಗೃಹವಾಸದಲ್ಲಿ, ಗಿಳಿಗಳೊಡನೆಯೂ ಅಳಿಲಿನೊಡನೆಯೂ ನಾಯಿಮರಿಗಳೊಡನೆಯೂ ಸ್ನೇಹಮಾಡಿಕೊಂಡು, ಆಡುತಿದ್ದ ಕಥೆಗಳು ಸ್ವಾರಸ್ಯಪುಳ್ಳುದಿವೆ.) ಆ ಕಾಲದಲ್ಲೆ ಮೋತಿಲಾಲರು ತಿರಿಗಿ ದಸ್ತಗಿರಿ ಮಾಡಲ್ಪಟ್ಟು ಅದೇ ಕಾರಾಗ್ರಹಕ್ಕೆ ತರಲ್ಪಟ್ಟು, ಕೆಲಕಾಲದಲ್ಲೆ, ಅಸ್ವಸ್ಥದ ದೆಸೆಯಿಂದ ಬಿಡುಗಡೆ ಮಾಡಲ್ಪಟ್ಟರು. ಕೆಲಕಾಲಾನಂತರ ಜವಾಹರ ಲಾಲರ ಕಾರಾಗ್ರಹ ಅವಧಿ ಮುಗಿದು ಬಿಡುಗಡೆಯಾಯಿತಾದರೂ, ಎಂಟೇ ದಿನಗಳಲ್ಲಿ ತಿರಿಗಿ ಅವರನ್ನು ದಸ್ತಗಿರಿಮಾಡಿ ಜೈಲಿಗೊಯ್ದರು. ೧೯೩೧ ರಲ್ಲಿ ಕಮಲಾ ನೆಹರುಗಳವರನ್ನು ಬಂಧಿಸಲಾಯಿತು. ಕಮಲಾ ನೆಹರು ಗಳವರು ಜೈಲಿನಲ್ಲಿ ೨೬ ದಿನಗಳನ್ನು ಕಳೆಯುವುದರೊಳಗೆ, ಮೋತಿಲಾಲರ ಅಸ್ವಸ್ಥವು ಹೆಚ್ಚಿತೆಂಬ ಕಾರಣದಿಂದ ಜವಾಹರ ದಂಪತಿಗಳು ಬಿಡುಗಡೆ ಮಾಡಲ್ಪಟ್ಟರು. ಇದಾದ ಹನ್ನೊಂದು ದಿನಗಳಲ್ಲಿ ಮೋತಿಲಾಲರು, ಗಾಂಧಿಜಿಯವರೊಡನೆ, "ಮಹಾತ್ಮಾಜಿ, ನಾನು ಹೊರಡುವೆನು. ಸ್ವರಾಜ್ಯ ಲಭಿಸಿದುದನ್ನು ನೋಡಲು ನನ್ನಿಂದಾಗಲಿಲ್ಲ. ಆದರೆ, ನೀವು ಅದನ್ನು ಗೆದ್ದಿರುವಿರಿ—ಶೀಘ್ರದಲ್ಲೆ ಪಡೆಯುವಿರಿ ಎಂಬುದನ್ನು ಬಲ್ಲೆ" ಎನ್ನುತ್ತ ಇಹವನ್ನು ತೊರೆದರು.

ಜವಾಹರರು ದಿನರಾತ್ರಿ ದೇಶಕ್ಕಾಗಿ ಶ್ರಮಿಸಲಾರಂಭಿಸಿದರು. ೧೯೩೨ರಲ್ಲಿ ಕೊಂಗ್ರೆಸ್ಸು ತಿರುಗಿ ಬೇಕಾಯಿದೆಶೀರ ಸಂಸ್ಥೆಯೆಂದು ಸಾರಲ್ಪಟ್ಟಿತು. ಅಲ್ಲಹಾಬಾದದಲ್ಲಿ, ಕಾನೂನನ್ನುಲ್ಲಂಘಿಸಿ ತೆಗೆದ ಮೆರವಣಿಗೆಯಲ್ಲಿ, ಜವಾಹರರ ಮಾತೆ ಸ್ವರೂಪರಾಣಿಯವರೂ ಇದ್ದರು; ಲಾಠಿ ಪ್ರಯೋಗವಾದಾಗ ಅವರಿಗೂ ಪೆಟ್ಟು ತಗಲಿತು. ಕಮಲಾ—ಶೀರ ಅಸ್ವಸ್ಥವಿದ್ದರು. ಆದರೂ, ಅತ್ತೆ-ಸೊಸೆ ಕೂಡಿ ಆಗಾಗ್ಗೆ ಕಾರಾಗ್ರಹಕ್ಕೆ ತೆರಳಿ ಜವಾಹರರನ್ನು ಮಾತಾಡಿಸಿ ಬರುತಿದ್ದರು. ಒಮ್ಮೆ ಜೈಲು ಅಧಿಕಾರಿಗಳು ಅವಮಾನಕರ ಮಾತುಗಳನ್ನಾಡಲು, ಜವಾಹರರು ತನ್ನ ಪತ್ನಿಗೆ ಮತ್ತು ಮಾತೃವಿಗೆ, ಇನ್ನು ಮುಂದೆ ಅವರೊಡನೆ ವಿನಂತಿಸಿ ಇಲ್ಲಿಗೆ ಬರಬೇಡಿರೆಂದು ಹೇಳಿದರು. ಕಾರಾಗ್ರಹದಲ್ಲಿ ಏಕಾಂತವಾಸವನ್ನು ಗ್ರಂಥ ವಾಚನದಿಂದ ಕಳೆದರು. ಜರ್ಮನ್ ಭಾಷೆಯನ್ನು ಕಲಿಯಲೂ ತೊಡಗಿದರು. ಸುಮಾರು ಒಂದೂವರೆ ವರ್ಷದ ಕಾರಾಗ್ರಹವಾಸದಿಂದ ಹೊರಗೆ ಬಂದ ಐದು ತಿಂಗಳು ಹದಿಮೂರು ದಿನಗಳಲ್ಲಿ ಸರಕಾರವು ತಿರುಗಿ ಅವರನ್ನು ಬಂಧಿಸಿತು. ಕಮಲಾ ನೆಹರುಗಳವರ ಅಸ್ವಸ್ಥವು ವಿಷಮಾವಸ್ಥೆಗೆ ತಲಪಿತು. ಅವರನ್ನು ಕೆಲಕಾಲದಲ್ಲಿ ಜರ್ಮನಿಗೆ ಹವಾಬದಲಾವಣೆಗೂ ಚಿಕಿತ್ಸೆಗೂ ಕಳಿಸಲಾಯಿತು. ಜತೆಯಲ್ಲಿ ಇಂದಿರಾ ಹೋದಳು. ಜವಾಹರರು ಪುಸ್ತಕಗಳನ್ನೋದಿ, ದುಃಖವನ್ನು ಮರೆಯಲು ಯತ್ನಿಸಿದರು. ಜರ್ಮನಿಯಲ್ಲಿ ಕಮಲಾ ನೆಹರುಗಳವರ ಸ್ಥಿತಿ ಇನ್ನೂ ಕೆಟ್ಟಿತು. ಜವಾಹರರು ಬಿಡುಗಡೆಮಾಡಲ್ಪಟ್ಟು, ಜರ್ಮನಿಗೆ ತೆರಳಿದರು. ಕಮಲಾ, ತನ್ನ ಪ್ರಿಯ ಪತಿಯ ಸನ್ನಿಧಿಯಲ್ಲಿ (೧೯೩೬) ಪ್ರಾಣತ್ಯಾಗಮಾಡಿದಳು. ಜವಾಹರರು ವಿಧುರನಾಗಿ ಸ್ವದೇಶಕ್ಕೆ ಮರಳಿದರು. ಆ ವರ್ಷವೇ ತಿರುಗಿ ಲಕ್ನೋ ಕೊಂಗ್ರೆಸಿನ್ನ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಮುಂದಿನ ವರ್ಷ ಫೈಝ್‌ಪುರಿಯಲ್ಲೂ ಅವರೇ ಆರಿಸಲ್ಪಟ್ಟರು. ಅದೇ ವರ್ಷ (೧೯೩೭) ನಡೆದ ಮಹಾಚುನಾವಣೆಗಳಲ್ಲಿ ಜವಾಹರರು ದೇಶವ್ಯಾಪೀ ಸಂಚಾರ ಕೈಕೊಂಡು ಪ್ರಚಾರ ನಡೆಸಿದರು. ಇದರ ಫಲವಾಗಿ ಹಲವು ಕಡೆಗಳಲ್ಲಿ ಕೊಂಗ್ರೆಸ್ಸು ಗೆದ್ದಿತು. ಹನ್ನೊಂದು ಪ್ರಾಂತಗಳ ಪೈಕಿ ಏಳರಲ್ಲಿ ಕೊಂಗ್ರೆಸ್ ಸರಕಾರವು ಅಧಿಕಾರಕ್ಕೆ ಬಂತು.

೧೯೩೮ರಲ್ಲಿ ಜವಾಹರರಿಗೆ ಮಾತೃವಿಯೋಗವಾಯಿತು.

೧೯೩೭ರಿಂದಿತ್ತ ಜಹಾರಲಾಲ ನೆಹರುಗಳವರ ಕಾರ್ಯಪ್ರಗತಿಯೂ ಯಶಸ್ಸೂ ಸುದೀರ್ಘ, ಮನೋಹರ ಚರಿತ್ರವೇ ಆಗಿರುತ್ತದೆ.

ಇಟೇಲಿ ಪ್ರವಾಸ ಕೈಕೊಂಡಾಗ, ಅಂದಿನ ಸರ್ವಾಧಿಕಾರಿ ಮುಸ್ಸಲಿನಿಯು ಜವಾಹರರ ಭೇಟಿಯನ್ನಿಚ್ಛಿಸಿದ್ದನು. ಅಬ್ಬಿಸೀನಿಯದ ಮೇಲೆ ಅನ್ಯಾಯವಾಗಿ ಯುದ್ಧ ಹೂಡಿದ ಇವನನ್ನು ಜವಾಹರರು ಕಾಣಲು ಮುಂದಾಗಲಿಲ್ಲ. ೧೯೩೮ರಲ್ಲಿ ಅವರು, ಸ್ಪೈಯಿನ್‌ನಲ್ಲಿ ಯುದ್ಧ ನಡೆದಿದ್ದಾಗ, ಆ ದೇಶವನ್ನು ಸಂದರ್ಶಿಸಿ, ಜನತೆಗೆ ಭಾರತದ ಸಹಾನುಭೂತಿಯ ಸಂದೇಶ ತಲಪಿಸಿದರು. ಸಂಕಷ್ಟದಲ್ಲಿರುವವರಿಗೆ ಭಾರತದಿಂದ ಆಹಾರ ಸಹಾಯ ತಲಪುವಂತೆ ಮಾಡಿದರು. ಸರ್ವಾಧಿಕಾರಿಗಳಿಗೆ ಬಗ್ಗಬಾರದೆಂದು ಲೋಕವನ್ನು ಎಚ್ಚರಿಸಿದರು. ಚೀನವನ್ನು ಸಂದರ್ಶಿಸಿ, ಭಾರತದ ಸ್ನೇಹ ಸಂದೇಶವನ್ನಿತ್ತರು. ಚೀನ—ಭಾರತಗಳ ಸಂಸ್ಕೃತಿ ಹಾಗು ಸಮಸ್ಯೆಗಳು ಏಕಪ್ರಕಾರವೆಂದರು. ಚಯಾಂಗ-ಕೆಯಿ-ಶೇಕ ದಂಪತಿಗಳನ್ನು ಭಾರತಕ್ಕೆ ಬರಮಾಡಿಸಿದರು.

ದ್ವಿತೀಯ ಮಹಾಯುದ್ಧವು ೧೯೩೯ನೇ ಸಪ್ಟಂಬರ ತಾ. ೩ರಲ್ಲಿ ಆರಂಭವಾಯಿತು. ಮುಂದೆ ಕೆಲಕಾಲದಲ್ಲಿ, ಭಾರತವೂ ಈ ಯುದ್ಧದಲ್ಲಿ ಭಾಗಿಯೆಂದು ಬ್ರಿಟಿಷ್ ಸರಕಾರವು ಸಾರಿತು. ವೈಯಕ್ತಿಕ ಸತ್ಯಾಗ್ರಹ ವಾಯಿತು. 'ಭಾರತ ಸಂರಕ್ಷಣೆ'ಯ ಹೆಸರಿನ ಉಗ್ರ ಶಾಸನವು ಜ್ಯಾರಿಯಾಯಿತು. ೧೯೪೨ರಲ್ಲಿ, ಕ್ರಿಪ್ಸರ ಸಂಧಾನ ಯತ್ನ, ಆದರ ವಿಫಲತೆ, ೧೯೪೨ನೇ ಆಗೋಸ್ತು ತಾ. ೮ರಲ್ಲಿ ಮಹಾತ್ಮಾಜಿ ಮತ್ತು ಇತರ ಮುಖಂಡರ ಸಭೆ ಮತ್ತು ಆ ಸಭೆಯಲ್ಲಾದ "ಭಾರತದಿಂದ ತೊಲಗಿರಿ" ಎಂಬ ಠರಾವು, ತಾ. ೯ನೇ ಪ್ರಾತಃಕಾಲ ಎಲ್ಲ ಮುಖಂಡರ ದಸ್ತಗಿರಿ, ಆದರ ಫಲವಾಗಿ ದೇಶದಲ್ಲೆದ್ದ ದಂಗೆಗಳು ಮತ್ತು ಸಾವಿರಾರು ಜನರ ದಸ್ತಗಿರಿ, ಆಹುತಿ—ಇದೆಲ್ಲವೂ ಇಂದಿನ ಎಲ್ಲರ ಸ್ಮರಣೆಯಲ್ಲೂ ಇದೆ. (ದೇಶದಲ್ಲಿ ನಡೆದ ದಂಗೆಗಳ ಪ್ರಾಯಶ್ಚಿತ್ತವಾಗಿ ಮಹಾತ್ಮರ ೨೧ ದಿನಗಳ ಉಪವಾಸವೂ ನಡೆಯಿತು) ಜವಾಹರರನ್ನು ಇತರ ಕೆಲವರೊಂದಿಗೆ ಅಹಮ್ಮದನಗರ ಕೋಟೆಯಲ್ಲಿ ಬಂಧಿಸಿದರು. ಕಾರಾಗ್ರಹದಲ್ಲಿ ಜವಾಹರರು, ಇತರ ಮುಖಂಡರ ಬಗ್ಗೆ ಚೀನೀ ಮಾದರಿಯ ಚಹಾ ತಯಾರಿಸುತಿದ್ದರು. ಅವರಿಗೆ ಅಡುಗೆಮಾಡಲು ಮಾತ್ರ ಬರುತಿದ್ದಿಲ್ಲ. ೧೯೪೫ರಲ್ಲಿ ಜವಾಹರರನ್ನು

ಆಲ್ಮೋರಕ್ಕೆ ಒಯ್ದರು. ಅದೇ ವರ್ಷ ಮಹಾಯುದ್ಧವು ಮುಗಿಯಿತು- (ಜೂನ್.) ನಮ್ಮ ಮುಖಂಡರ ಬಿಡುಗಡೆಯಾಗಿ, ಅವರನ್ನೂ ಮುಸ್ಲಿಂ ಲೀಗ್ ಮುಖಂಡರನ್ನೂ ಕರೆಸಿ, ಸಮಾಲೋಚನೆ ನಡೆಸಿ, ಮಧ್ಯವರ್ತಿ ಸರಕಾರ ರಚಿಸಲ್ಪಟ್ಟಿತು. ಯುದ್ಧಾನಂತರ ಇಂಗ್ಲೆಂಡಿನಲ್ಲಿ ನಡೆದ ಮಹಾ ಚುನಾವಣೆಗಳಲ್ಲಿ ಮಜೂರ ಪಕ್ಷವು ಅಧಿಕಾರಕ್ಕೆ ಬಂತು. ೧೯೪೭ನೇ ಆಗೋಸ್ತು ೧೫ರಂದು ಭಾರತಕ್ಕೆ ಸ್ವಾತಂತ್ರ್ಯ ಲಭಿಸಿತು. (ದೇಶವೂ, ಇಬ್ಭಾಗವಾಯಿತು;) ಕೊನ್ಸ್ಟಿಟ್ಯೂವೆಂಟ್ ಎಸೆಂಬ್ಲಿ ರಚನೆಯಾಯಿತು. ಪ್ರಥಮ ಪ್ರಧಾನಾಮಾತ್ಯರಾಗಿ ಜವಾಹರರು ಆರಿಸಲ್ಪಟ್ಟರು. ೧೯೫೦ರಲ್ಲಿ ಭಾರತವು ಪ್ರಜಾಪ್ರಭುತ್ವವಾಗಿ ಸಾರಲ್ಪಟ್ಟಿತು. ೧೯೫೨ರಲ್ಲಿ ನಡೆದ ಮಹಾ ಚುನಾವಣೆಗಳಲ್ಲೂ ಕೊಂಗ್ರೆಸ್ಸೇ ಬಹುಮತ ಪಡೆದು, ಜವಾಹರರು ಎರಡನೇ ಬಾರಿಯೂ ಪ್ರಧಾನ ಸಚಿವರಾದರು.

ಪ್ರಧಾನಾಮಾತ್ಯರಾಗಿ ಜವಾಹರರು ಆಸ್ಯದ ಜನಾಂಗಗಳನ್ನೊಂದುಗೂಡಿಸುವ ಮಹಾ ಪರಿಷತ್ತು ಜರಗಿಸಿದರು. ಚೀನ--ಇಂಗೆಂಡ್--ರಷ್ಯಗಳ ಪ್ರವಾಸ ಕೈಕೊಂಡರು. ಚೀನೀ ಮುಖಂಡರನ್ನು ಇಲ್ಲಿಗೆ ಆಹ್ವಾನಿಸಿದರು. ಇತ್ತೀಚೆಗೆ, ರಷ್ಯದ ಮಹಾ ಮುಖಂಡರನ್ನು ಬರಮಾಡಿಸಿ, ಸ್ನೇಹ ಸಂವರ್ಧನೆಯನ್ನು ಸಾಧಿಸಿದರು. ಭಾರತವು ಯಾವ ಶಕ್ತಿಕೂಟಗಳೊಡನೆಯೂ ಸೇರುವುದಿಲ್ಲ—ಶಾಂತಿ ಸಾಧನೆ ಮತ್ತು ಶೋಷಣರಹಿತ ಸಮಾಜದ ರಚನೆಯೇ ಭಾರತದ ಧ್ಯೇಯವೆಂದು ಪದೇ ಪದೇ ಜಗತ್ತಿಗೆ ಸ್ಪಷ್ಟೀಕರಿಸುತ್ತಿರುವರು.

"ರಾಷ್ಟ್ರವು ಅವರ ಕೈಯಲ್ಲಿ ಸುರಕ್ಷಿತವಾಗಿದೆ" ಎಂದು ಗಾಂಧಿಜಿಯವರಂದಿದ್ದರು. ಅದು ಸದಾ ನಿಜ. "ಜವಾಹರರು ನನ್ನ ಉತ್ತರಾಧಿಕಾರಿಯಾಗಿರುವರು" ಎಂದೂ ಹೇಳಿದ್ದರು. ಅದೂ ನಿಜ. ಜನಕೋಟಿಯ ಪ್ರೇಮಾದರಗಳಿಗೆ ಪಾತ್ರರಾದ ಮುಖಂಡರಲ್ಲಿ ಇಂದು ಜವಾಹರರ ಸ್ಥಾನ ಹಿರಿದು.

**ಜವಾಹರರು ದೀರ್ಘಾಯುವಾಗಲಿ!**



# ತಿಥಿ ವಿವರಣೆ.

## ಪಂಡಿತ ಜವಾಹರಲಾಲ ನೆಹರೂರವರ ಜೀವನದ 60 ವರ್ಷಗಳಲ್ಲಿ ನಡೆದ ಮುಖ್ಯ ಘಟನೆಗಳ ತಿಥಿಗಳು.

1889—(14ನೇ ನವಂಬರ್) ಜನ್ಮ, ಅಲಹಾಬಾದಿನಲ್ಲಿ.

1905—ಇಂಗ್ಲೆಂಡಿಗೆ ಪ್ರಯಾಣ.

1907—ಕೇಂಬ್ರಿಜ್‌ನ ಟ್ರನಿಟಿ ಕೋಲೇಜಿನಲ್ಲಿ ಪ್ರವೇಶ.

1910—ಪ್ರಕೃತಿ ವಿಜ್ಞಾನ ಪರೀಕ್ಷೆಯಲ್ಲಿ ಉತ್ತಮ ದರ್ಜೆಯಲ್ಲಿ ಉತ್ತೀರ್ಣರಾದರು.

1912—ವಕೀಲಿ ಪರೀಕ್ಷೆಯಲ್ಲಿ ಪಾಸಾಗಿ ಭಾರತಕ್ಕೆ ಪುನರಾಗಮನ

1916—ಲಕ್ನೋ ಕೊಂಗ್ರೆಸ್ ಅಧಿವೇಶನದಲ್ಲಿ ಮೊದಲ ಬಾರಿಗೆ ಗಾಂಧಿಜಿಯವರ ಭೇಟಿ.

—ಕುಮಾರಿ ಕಮಲಾ ಕೌಲರೊಡನೆ ವಿವಾಹ.

1918—ಅ.ಭಾ.ಕೊಂಗ್ರೆಸ್ ಕಮಿಟಿಯ ಸದಸ್ಯರಾದರು.

1922—(ಮೇ) ಯುವರಾಜ ಎಡ್ವರ್ಡನ ಭಾರತ ಯಾತ್ರೆಯ ಸಮಯದಲ್ಲಿ ಮೊದಲನೆಯ ಬಾರಿ ಬಂಧನ.

—(ಆಗಸ್ಟ) ಬಂಧವಿಮೋಚನೆ.

—(ಅಕ್ಟೋಬರ್) ವಿದೇಶೀ ವಸ್ತ್ರ ಬಹಿಷ್ಕಾರದ ಚಳವಳದ ಸಂಬಂಧವಾಗಿ ಎರಡನೆಯ ಬಾರಿ ಬಂಧನ.

1923—(ಜನವರಿ) ಬಿಡುಗಡೆ.

—ಅ. ಭಾ. ಕೊಂ. ಕಮಿಟಿಯ ಮಂತ್ರಿಯಾಗಿ ಆಯ್ಕೆ.

—ನಾಭಾದಲ್ಲಿ ಶಾಸನೋಲ್ಲಂಘನೆಗಾಗಿ ಬಂಧನ.

—ನಾಭಾ ಜೈಲಿನ ಕಷ್ಟಗಳ ಕಾರಣದಿಂದಾಗಿ ವಿಷಮಶೀತಜ್ವರದಿಂದ ಪೀಡಿತರಾದರು.

1926—ಜವಾಹರಲಾಲರ ಪ್ರೇರಣೆಯಿಂದ ಯುಕ್ತಪ್ರಾಂತೀಯ ಕೊಂಗ್ರೆಸ್ ಕಮಿಟಿಯ ಮೂಲಕ ಸಮಾಜವಾದೀ ಪ್ರವೃತ್ತಿಯ ಕಾರ್ಯಕ್ರಮ ನಿರ್ಧರಿಸಲ್ಪಟ್ಟಿತು.

1926-27—ಕೊಂಗ್ರೆಸ್ಸಿನ ಪ್ರತಿನಿಧಿಯಾಗಿ ಬ್ರುಸೆಲ್ಸ್‌ನ ಸಾಮ್ರಾಜ್ಯವಾದ ವಿರೋಧಿ ಸಮ್ಮೇಳನದಲ್ಲಿ ಭಾಗವಹಿಸುವಿಕೆ; ಹಾಗೂ ಇಟಲಿ,

ಸ್ವಿಜರ್‌ಲೇಂಡ್, ಇಂಗ್ಲೆಂಡ್, ಬೆಲ್ಜಿಯುವ್, ಜರ್ಮನಿ ಮತ್ತು ರಸ್ಯದ ಸಂದರ್ಶನ.

1927—(ನವಂಬರ್) ರಸ್ಯದ ಕ್ರಾಂತಿಯ ಹತ್ತನೇ ವಾರ್ಷಿಕ ಸಮ್ಮೇಲನದಲ್ಲಿ ಭಾಗವಹಿಸಲು ಮೋಸ್ಕೊ ಪ್ರಯಾಣ.

—(ಡಿಸೆಂಬರ್) ಮದ್ರಾಸ್ ಕೊಂಗ್ರೆಸಿನಲ್ಲಿ ಸ್ವಾಧೀನತೆ, ಯುದ್ಧ ಸಂಕಟ ಮತ್ತು ಸಾಮ್ರಾಜ್ಯವಾದ ವಿರೋಧೀ ಸಂಘದೊಡನೆ ಸಹಯೋಗದ ಪ್ರಸ್ತಾಪಗಳ ಸಮರ್ಥನೆ ಮತ್ತು ಸ್ವೀಕಾರ.

—(ಡಿಸೆಂಬರ್) ಅ. ಭಾ. ಕೊಂ. ಕಮಿಟಿಯ ಮಂತ್ರಿಪದವಿಯ ಗ್ರಹಣ

1929—ಅ. ಭಾ. ಕೊಂ. ಕಮಿಟಿಯಲ್ಲಿ ಯುಕ್ತ ಪ್ರಾಂತೀಯ ಕೊಂಗ್ರೆಸ್ ಕಮಿಟಿಯ ಸಮಾಜವಾದೀ ಕಾರ್ಯಕ್ರಮದ ಸಮರ್ಥನೆ ಮತ್ತು ಸ್ವೀಕಾರ.

—ಕೊಂಗ್ರೆಸ್ಸಿನ ಅಧ್ಯಕ್ಷರೆಂದು ಸಾರಲ್ಪಟ್ಟರು.

—"Letters From a Father to His Daughter" (ಮಗಳಿಗೆ ತಂದೆಯ ಪತ್ರಗಳು) ಇದರ ಪ್ರಕಟಣೆ.

—(ಡಿಸೆಂಬರ್) ಸ್ವಾಧೀನತೆಯ ಪ್ರಸ್ತಾಪದ ಅನುಮೋದನೆ ಮತ್ತು ಲಾಹೋರ ಕೊಂಗ್ರೆಸ್ಸಿನ ಮೂಲಕ ಅದರ ಸ್ವೀಕಾರ.

1930—(14ನೇ ಎಪ್ರಿಲ್) ಉಪ್ಪಿನ ಸತ್ಯಾಗ್ರಹಕ್ಕಾಗಿ ನಾಲ್ಕನೆಯ ಬಾರಿ ಬಂಧನ ಮತ್ತು 6 ತಿಂಗಳ ಶಿಕ್ಷೆ.

—(14 ಅಕ್ಟೋಬರ್) ಬಿಡುಗಡೆ.

—(ಅಕ್ಟೋಬರ್) ಅಲಹಾಬಾದಿನಲ್ಲಿ ರೈತರ ಸಮ್ಮೇಳನದಲ್ಲಿ ಭಾಗವಹಿಸಿದುದಕ್ಕಾಗಿ ಐದನೇ ಬಾರಿ ಬಂಧನ.

1931—(26ನೇ ಜನವರಿ) ಬಿಡುಗಡೆ.

—(ಫೆಬ್ರುವರಿ) ಪಂಡಿತ ಮೋತೀಲಾಲ ನೆಹರೂರವರ ನಿಧನ.

—ಕರಾಚಿ ಕಾಂಗ್ರೆಸ್ಸಿಗಾಗಿ ಆರ್ಥಿಕನೀತಿಯ ಮಸೂದೆಯನ್ನು ತಯಾರಿಸಿದರು.

—(26ನೇ ಡಿಸೆಂಬರ್) ಯುಕ್ತಪ್ರಾಂತದ ರೈತ ವಿದ್ರೋಹದ ಆಂದೋಲನದಲ್ಲಿ ಆರನೇ ಬಾರಿ ಬಂಧನ ಮತ್ತು ಎರಡು ವರ್ಷದ ಸಜೆ.

1933—(30ನೇ ಆಗಸ್ಟ್) ತಾಯಿಯ ಅನಾರೋಗ್ಯದ ಕಾರಣದಿಂದಾಗಿ ಜೈಲಿನಿಂದ ಬಿಡುಗಡೆ.

1934—(ಜನವರಿ) ಬಿಹಾರದ ಭೂಕಂಪ ಪೀಡಿತರ ಸಹಾಯಕ್ಕಾಗಿ ಸಂಚಾರ ಮತ್ತು ಸಂಘಟನೆ.

—(16ನೇ ಫೆಬ್ರುವರಿ) ಕಲ್ಕತ್ತೆಯಲ್ಲಿ ಕೊಟ್ಟ ಭಾಷಣಕ್ಕಾಗಿ ಏಳನೇ ಬಾರಿ ಬಂಧನ ಮತ್ತು ಎರಡು ವರ್ಷಗಳ ಸಜೆ.

—"Glimpses of World History" (ವಿಶ್ವ ಇತಿಹಾಸದ ನೋಟಗಳು) ಎಂಬ ಗ್ರಂಥದ ಪ್ರಕಾಶನ.

—(11ನೇ ಆಗಸ್ಟ್) ಪತ್ನಿಯ ಅನಾರೋಗ್ಯದ ಕಾರಣದಿಂದಾಗಿ 11 ದಿನಗಳ ವಾಗ್ಬದ್ಧ ಬಿಡುಗಡೆ.

1935—(4 ಸೆಪ್ಟೆಂಬರ) ಪತ್ನಿಯು ಅಸ್ವಸ್ಥದ ದೆಸೆಯಿಂದ ಬಿಡುಗಡೆ.

1936—(25ನೇ ಫೆಬ್ರುವರಿ) ಕಮಲಾ ನೆಹರೂರವರ ನಿಧನ.

—(ಎಪ್ರಿಲ್) "ಆತ್ಮಕಥೆ"ಯು ಪ್ರಕಾಶನ.

—(ಡಿಸೆಂಬರ್) ಎರಡನೇ ಬಾರಿ ಕೊಂಗ್ರೆಸ್ಸಿನ ಅಧ್ಯಕ್ಷ ಪದವಿಯನ್ನು ಅಲಂಕರಿಸಿದರು.

1937—ಪುನಃ ಕೊಂಗ್ರೆಸ್ಸಿನ ಅಧ್ಯಕ್ಷರಾದರು.

1938—(ಜುಲೈ) ಗೃಹಯುದ್ಧ ಪೀಡಿತ ಸ್ಪೆಯಿನ್‌ದ ಯಾತ್ರೆ ಮತ್ತು ಅಲ್ಲಿಯ ಪ್ರಜಾತಂತ್ರವಾದೀ ಮುಖಂಡರ ಭೇಟಿ.

1939—ಸಿಂಹಳಯಾತ್ರೆ.

—ಚೀನಾಯಾತ್ರೆ.

1940—ವೈಯಕ್ತಿಕ ಸತ್ಯಾಗ್ರಹದ ಆಂದೋಲನದಿಂದಾಗಿ ಎಂಟನೇ ಬಾರಿ ಬಂಧನ.

1941—ಬಿಡುಗಡೆ.

1942—(ಆಗಸ್ಟ್) ಅ. ಭಾ. ಕೊಂ. ಸಮಿತಿಯ ಮುಂಬಯಿ ಅಧಿವೇಶನದಲ್ಲಿ 'ಭಾರತದಿಂದ ತೊಲಗಿರಿ' ಎಂಬ ಪ್ರಸ್ತಾಪದಿಂದಾಗಿ ಒಂಭತ್ತನೇ ಬಾರಿ ಬಂಧನ.

1945—(ಜೂನ್) ಬಿಡುಗಡೆ.

—ಅಜಾದ್ ಹಿಂದ್ ಮೊಕದ್ದಮೆಗಾಗಿ ಡಿಫೆನ್ಸ್ ಕೌನ್ಸಿಲ್ ಸಂಘಟನ.

1946—(ಮಾರ್ಚ್) "Discovery of India" (ಭಾರತದ ಸಂಶೋಧನೆ) ಎಂಬ ಗ್ರಂಥದ ಪ್ರಕಾಶನ.

—(ಜುಲೈ) ನಾಲ್ಕನೇ ಬಾರಿ ಕೊಂಗ್ರೆಸ್ಸಿನ ಅಧ್ಯಕ್ಷರಾಗಿ ಚುನಾಯಿತರಾದರು.

—(ಸೆಪ್ಟೆಂಬರ್) ನಡುಗಾಲ ಸರಕಾರದಲ್ಲಿ ವಿದೇಶ ಮಂತ್ರಿಯಾಗಿ ಪ್ರವೇಶಮಾಡಿ ಮತ್ತು Executive Councilನ ಉಪಾಧ್ಯಕ್ಷರಾಗಿ ನೇಮಿತರಾದರು.

1947—(ಮಾರ್ಚ್) ಢಿಲ್ಲಿಯಲ್ಲಿ ಅಖಿಲ ಏಷ್ಯ ಸಮ್ಮೇಳನದ ಸಂಯೋಜನೆ ಮತ್ತು ಅದರ ಕಾರ್ಯಕ್ರಮದಲ್ಲಿ ಪ್ರಮುಖ ಭಾಗ.

—(15ನೇ ಆಗಸ್ಟ್) ಭಾರತದ ಪ್ರಧಾನ ಮಂತ್ರಿಯಾದರು.

1948—(ಜೂನ್) ಉದಕಮಂಡಲದ "ಸಂಯುಕ್ತ ರಾಷ್ಟ್ರಗಳ ಏಷ್ಯ ಮತ್ತು ದೂರಪೂರ್ವದ ಆರ್ಥಿಕ ಕಮಿಶನ್"ನ ತೃತೀಯ ಅಧಿವೇಶನದ ಉದ್ಘಾಟನೆ.

—(ಅಕ್ಟೋಬರ್) ಲಂಡನಿನಲ್ಲಿ ಕೊಮನ್‌ವೆಲ್ತ್ ಸಮ್ಮೇಳನದಲ್ಲಿ ಭಾಗವಹಿಸುವಿಕೆ ಮತ್ತು ಭಾರತವು ಕೊಮನ್‌ವೆಲ್ತ್‌ನ ಒಳಪಟ್ಟಿದೆಯೆಂಬ ಘೋಷಣೆ.

1949—(ಅಕ್ಟೋಬರ್) ಅಮೇರಿಕಾ ಪ್ರವಾಸ

—( ,, ) ಅಮೇರಿಕೆಯ ಶಾಸನಸಭೆಯ ಅಧಿವೇಶನದಲ್ಲಿ ಭಾಷಣ ಮತ್ತು ಭಾರತದ ಪರವಾಗಿ ವಿಶ್ವದಲ್ಲಿ "ಸ್ವಾಧೀನತೆ, ನ್ಯಾಯ ಮತ್ತು ಶಾಂತಿ"ಯ ಸೇವೆಯ ಪ್ರತಿಜ್ಞೆ.

—(ಅಕ್ಟೋಬರ್) ಸಂಯುಕ್ತರಾಷ್ಟ್ರಗಳ "ಟ್ರಸ್ಟೀ ಶಿಪ್ ಕೌನ್ಸಿಲ್" ನಲ್ಲಿ ಭಾಷಣ.

—(ಅಕ್ಟೋಬರ್) ಕೆನಡದ ಪಾರ್ಲಿಮೆಂಟಿನಲ್ಲಿ ಭಾಷಣ ಮತ್ತು ಭಾರತದ ಪರವಾಗಿ ಕೋಮನ್‌ವೆಲ್ತ್‌ನೊಡನೆ ಸಹಯೋಗದ ಆಶ್ವಾಸನೆ.

1950—(ಜನವರಿ 26) ಭಾರತವು ಗಣರಾಜ್ಯವಾಯಿತು.

1952—ಎರಡನೇ ಬಾರಿ ಭಾರತದ ಪ್ರಧಾನಾಮಾತ್ಯರಾದರು

1953—ಚೀನಾ ಪ್ರವಾಸ.

1955—ರಷ್ಯಾ ಪ್ರವಾಸ.

▪▪▪▪▪▪▪▪

Edited, Printed & Published by K. V. Shenoy
at The Prabhat Printers, Ltd., Mangalore.

ಒಂದಾಣೆ ಮಾಲೆ. **80**

# ಡಾಕ್ಟರ್ ಗಾಂಧೀಜಿ

## ಅಥವಾ ನಿಸರ್ಗಚಿಕಿತ್ಸೆ ಮತ್ತು ಗಾಂಧೀಜಿ



ಲೇಖಕರು: ಶ್ರೀ ಮರಕ್ಕಿಣಿ ಶಂಕರನಾರಾಯಣ ಭಟ್, B.Sc., B.L.

**1956** ಮಂಗಳೂರು. ಬೆಲೆ: ಒಂದಾಣೆ.

# 'ಒಂದಾಣೆ ಮಾಲೆ'ಯ ಪ್ರಕಟಣೆಗಳು:

೧. *ಕೆಪ್ಪಟಿರಾಯ (ವಿನೋದ ಕಥೆ)
೨. *ನಾರೀಶ್ವರರು (ಏಕಾಂಕ ಪ್ರಹಸನ)
೩. ಕಳ್ಳನಿಗೆ ಸಂಭಾವನೆ (ದ್ವಿ. ಮುದ್ರಣ)
೪. *ಸಿದ್ರಿಸುಬ್ಬ (ಏಕಾಂಕ ಪ್ರಹಸನ)
೫. ಅದ್ಭುತ ತ್ಯಾಗ (ದ್ವಿತಿಯ ಮುದ್ರಣ)
೬. *ಚುನಾವಣೆ ಅರ್ಥಾತ್ ಬನಾವಣೆ
೭. *'ಬೀಡಿ ಸೇದಬೇಡಿ' ಮತ್ತು 'ಆ ಮಗು'
೮. *ಇಂಗ್ಲಿಷ್-ಕನ್ನಡ ಅರ್ಥಕೋಶ
೯. *ಲಂಚಕ್ಕೆ ಸಂಚಕಾರ
೧೦. *ಟಿಶ್ಯೂ ಔಷಧಿಗಳ ಕೈಪಿಡಿ.
೧೧. ಶ್ರೀಕ್ಷೇತ್ರ ಧರ್ಮಸ್ಥಳ (ತೃ. ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು
೧೪. *ವೆಂಕಟನ ಸಂಕಟ (ಏಕಾಂಕ ಪ್ರಹಸನ)
೧೫. ಬಾಬಿಗೆ ಬಾಸಿಂಗ (ದ್ವಿತೀಯ ಮುದ್ರಣ)
೧೬. ವೇಣೂರಿನ ಗತವೈಭವ (ದ್ವಿ. ಮುದ್ರಣ)
೧೭. ಒಗಟುಗಳು [ದ್ವಿತೀಯ ಮುದ್ರಣ]
೧೮. ಜಗಳಗಂಟಿ ಮತ್ತು ಇತರ ಕಥೆಗಳು
೧೯. ರಥೋತ್ಸವ.
೨೦. ಕೆರಿನಾಯಿ ಮತ್ತು ಮುಪ್ಪು
೨೧. ಭಾರತದ ಮಹಾನಗರ (ದ್ವಿ. ಮುದ್ರಣ)
೨೨. ತಿರುಕ್ಕುರಲ್ (ದ್ವಿತೀಯ ಮುದ್ರಣ)
೨೩. ಸೂರ್ಯನ ಸಂಸಾರ
೨೪. ಭಾರತದ ಮಹಾನಗರ (ದ್ವಿ. ಮುದ್ರಣ)
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳು.
೨೬. ಮಾರಾವತಾರ (ದ್ವಿತೀಯ ಮುದ್ರಣ)
೨೭. ಹಾಸವಿಲಾಸ (ನಗೆಹನಿಗಳು)
೨೮. *ಸತ್ಯವಂತ ಬಾಜಿ (ಏಕಾಂಕ ಪ್ರಹಸನ)
೨೯. ಚಾಣಕ್ಯಯ ಒಗಟುಗಳು
೩೦. ಜಾತಕ ಕಥೆಗಳು
೩೧. ಕಾರ್ಕಳದ ಚರಿತ್ರೆ
೩೨. ಮರ್ಜಿ (ಏಕಾಂಕ ಪ್ರಹಸನ)
೩೩. ದರ್ಶನದ ಕಥೆಗಳು
೩೪. ಆಲುವಿನ ಹೊಳೆ ಮತ್ತು ಕೇಶವಭೂಷ
೩೫. ಶರಾಬಿನ ಶಿಪಾಯಿಗಳು
೩೬. ಉಪದೇಶ ಶತಕ
೩೭. ನಿಮಗೆ ಗೊತ್ತಿದೆಯೇ?
೩೮. ಚತುರ ಚಮತ್ಕಾರ
೩೯. ಸತೀ ಸಾವಿತ್ರಿ

೪೦. ಆಭರಣಗಳ ಪೆಟ್ಟಿಗೆ, ಇತರ ಕಥೆಗಳು
೪೧. ಭಾರತದ ಮಂತ್ರಿಮಂಡಲಗಳು (ದ್ವಿ.
೪೨. ಕಾಲುಬಳೆಯ ಕಥೆ [ಮುದ್ರಣ)
೪೩. ಭಾರತದ ನಾಲ್ಕು ಕಲಶಗಳು
೪೪. ವ್ಯಸನದಿಂದ ಲಾಭ ಮತ್ತು ಇತರ
೪೫. ಸುಭಾಷಿತ [ಕಥೆಗಳು
೪೬. ೧೮೫೭ರ "ಸಿಪಾಯಿ ದಂಗೆ"
೪೭. ಅಕಾಂಡ ತಾಂಡವ (ರೇಡಿಯೋ ನಾಟಕ)
೪೮. ಸಾಹಸದ ಕಥೆಗಳು.
೪೯. ಸಂಜ್ಞಾ ಜ್ಞಾನ ಕೋಶ
೫೦. ಪಂಡಿತನ ಪಿಟಿಲು
೫೧. ಭೋಗಯಾತ್ರೆ
೫೨. ಸಂಗ್ರಾಮಸಿಂಹ
೫೩. ಧರ್ಮ ಶಿಕ್ಷಾ
೫೪. ಮಹಾತ್ಮ
೫೫. ಮೀರಾಬಾಯಿ (ಏಕಾಂಕ ನಾಟಕ)
೫೬. ವೀರರಮಣಿ ಕರ್ಮದೇವಿ
೫೭. ಅರಳಿದ ನಗು
೫೮. ಸಚಿತ್ರ ಜಪಾನ್
೫೯. ಚುಟ್ಟ ಬಿಟ್ಟ ಧಿಟ್ಟ (ಏಕಾಂಕ ಪ್ರಹಸನ)
೬೦. ನಿರಪರಾಧಿ
೬೧ ಭಕ್ತವಾಣಿ
೬೨. ಜಾನಪದ ಸಾಹಿತ್ಯ
೬೩. ಡಾಕ್ಟರ್ ಆರೋಗ್ಯವರ್
೬೪. ಲೌಕಿಕ ನ್ಯಾಯಗಳು
೬೫. ಶಿಶುಪಾಲ ಮಾನಭಂಗ
೬೬. ಜರಾಸಂಧ ವಧೆ
೬೭. ಜವಾಹರಲಾಲರ ಜೀವನ ಚರಿತ್ರೆ
೬೮. ಕರುಣೆ ಮತ್ತು ಇತರ ಕಥೆಗಳು
೬೯. ಶ್ರೀಕ್ಷೇತ್ರ ಉಡುಪಿ
೭೦. ವಿನೋದ ವಿಹಾರ
೭೧ ಭಾರತದ ಗತವೈಭವ
೭೨ ಸತ್ಯ ಹರಿಶ್ಚಂದ್ರ
೭೩. ಸೂಕ್ತಿಗಳು.
೭೪ ಉ. ಕ. ದ ಯಕ್ಷಗಾನ ಕಲಾವಿದರು
೭೫ ದೇವರ ಸಾಮ್ರಾಜ್ಯದಲ್ಲಿ
೭೬. ಕ್ರಾಂತಿಕಂಠೀರವ ಭಗತ್ ಸಿಂಘ್
೭೭. ಜಾತಕಪಠನ ಮತ್ತು ಇತರ ಕಥೆಗಳು
೭೮. ಅಮೃತವಾಣಿ
೭೯. ಮಾಯಾಮೃಗ
೮೦. ಡಾಕ್ಟರ್ ಗಾಂಧೀಜಿ

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

# ಡಾಕ್ಟರ್ ಗಾಂಧೀಜಿ

**ಜನವರಿ ೩೦!** ಮೂರು ಬಾರಿ ಗುಂಡು ಹಾರಿತು. ಗಾಂಧೀಜಿ ಬಿದ್ದರು. ಅವರ ದೇಹವು ಕಂಪಿಸುತಿತ್ತು. ಕಣ್ಣುಗಳು ಅರೆಮುಚ್ಚಿದ್ದುವು. ಅಂದು ಡಾಕ್ಟರ್ ಸುಶೀಲಾ ನಾಯರ್ ಎಲ್ಲೋ ಬಲು ದೂರವಿದ್ದರು. ಆಪ್ತರು ಒಡನೆ ಡಾಕ್ಟರ್ ಭಾರ್ಗವರನ್ನು ಕರೆತಂದರು. ಭಾರ್ಗವರು, ಸುಶೀಲಾ ನಾಯರರು ಆಪತ್ಕಾಲಗಳಲ್ಲಿ ಉಪಯೋಗಿಸುತಿದ್ದ ಔಷಧಗಳ ಪೆಟ್ಟಿಗೆಯನ್ನು ಹುಡುಕಾಡತೊಡಗಿದರು. ಕೊನೆಗಾದರೂ ರಾಷ್ಟ್ರಪಿತನ ಪ್ರಾಣ ಉಳಿಯುವುದಾದರೆ.... ಎಂಬ ಆಸೆ ಭಾರ್ಗವರದಾಗಿತ್ತು. ಆದರೆ, ಗಾಂಧೀಜಿ ಔಷಧಗಳ ಪ್ರಬಲ ವಿರೋಧಿಗಳೆಂಬುದು ಭಾರ್ಗವರಿಗೆ ತಿಳಿದಿಲ್ಲವೆಂದು ತೋರುತ್ತದೆ. ಅಥವಾ ತಿಳಿದಿದ್ದರೂ ಇಂತಹ ಸಂಧಿಗ್ಧ ಪರಿಸ್ಥಿತಿಗಳಲ್ಲಿ ಗಾಂಧೀಜಿ ಹಟ ಹಿಡಿಯರೆಂಬ ನಂಬುಗೆಯೋ ಏನೋ. ಇದರ ಮೊದಲು ಎಷ್ಟೋ ಬಾರಿ ತಮಗೆ ಮದ್ದು ಕುಡಿಯಿಸಲು ಬಂದ ಡಾಕ್ಟರರನ್ನು ಗಾಂಧೀಜಿ ಮದ್ದು ಸಮೇತ ಹಿಂದೆ ಕಳುಹಿಸಿದ್ದರು. ಕೆಲವು ಬಾರಿ ಅಂತಹ ಡಾಕ್ಟರರಿಗೇ ಗಾಂಧೀಜಿಯವರ "ರೋಗ"ವು ಹರಡುವುದೂ ಇತ್ತು. ಗಾಂಧೀಜಿಯವರ ರೋಗ ಇನ್ನೇನೂ ಅಲ್ಲ—ನಿಸರ್ಗ ಚಿಕಿತ್ಸೆ. ನಿಸರ್ಗ ಚಿಕಿತ್ಸೆಯು ಅವರ ಒಂದೇ ಬಾಣ ಡಾಕ್ಟರರ ಎಲ್ಲಾ ಔಷಧಿಗಳನ್ನೂ ನುಂಗಿತ್ತು. ನಿಸರ್ಗ ಚಿಕಿತ್ಸೆಗೂ ವೈದ್ಯಶಾಸ್ತ್ರಕ್ಕೂ ತಾತ್ವಿಕ ಮತಭೇದ ತುಂಬಾ ಇದೆ. ಅದರಿಂದಾಗಿ ಡಾಕ್ಟರರಿಗೂ ಗಾಂಧೀಜಿಗೂ ಸದಾ ಕರ್ಣಾರ್ಜುನ—ಒಂದೇ ವಿಚಾರದಲ್ಲಿ—ಆರೋಗ್ಯ ವಿಚಾರದಲ್ಲಿ. ಲೋಕವನ್ನೆಲ್ಲ ಮಾತನಾಡಿ ಕೊನೆಗೆ ಆರೋಗ್ಯ, ರೋಗ ಇತ್ಯಾದಿ ಮಾತು ಬಂದಾಗ ಗಾಂಧೀಜಿ ನಿಸರ್ಗ ಚಿಕಿತ್ಸೆಗೆ.

ಒಂದು ಬಾರಿ ಡಿಲ್ಲಿಯಲ್ಲಿದ್ದಾಗ ಗಾಂಧೀಜಿ ಕಾಯಿಲೆ ಬಿದ್ದರು. ಜ್ವರ ಕಠಿಣವಾಗಿಯೇ ಇತ್ತು. ಗಾಂಧೀಜಿಯವರ ಕಷ್ಟನೋಡಿ ಡಾ। ಸುಶೀಲಾ ನಾಯರರು ಪೆನ್ಸಿಲಿನ್ ಸೇವಿಸುವಂತೆ ಗಾಂಧೀಜಿಯನ್ನು ಒತ್ತಾಯಿಸಿದರು. ಆದರೆ ಗಾಂಧೀಜಿ ಒಪ್ಪಲಿಲ್ಲ. ತಾನು ಮಾಡಿದ ಯಾವುದೋ ಪಾಪದ ಫಲವಾಗಿ ಕೆಮ್ಮು ಹತ್ತಿದೆಯೆಂದು ಅವರ ನಂಬುಗೆ. ಗಾಂಧೀಜಿಗೆ ಪಾಪವೆಂದರೆ ಕರ್ತವ್ಯಲೋಪ; ಪ್ರಕೃತಿಯ ನಿಯಮಗಳ ಉಲ್ಲಂಘನೆ. ಅಂತಹ ಪಾಪಕ್ಕೆ ಪಶ್ಚಾತ್ತಾಪವೇ ತಕ್ಕ ಮದ್ದೆಂದುಕೊಂಡು ಅವರು ಪೆನ್ಸಿಲಿನ್ ತಿನ್ನಲಿಲ್ಲ. ಪೆನ್ಸಿಲಿನ್ ತಿಂದು ತನ್ನ ಹಿಂದಿನ ಆಹಾರದೋಷಗಳಿಂದ ಬಂದ ರೋಗವನ್ನು ಪರಿಹರಿಸಬಹುದೆಂಬ ಸುಲಭ ಸಿದ್ಧಾಂತದಲ್ಲಿ ಅವರಿಗೆ ನಂಬುಗೆಯಿರಲಿಲ್ಲ. ಕೆಮ್ಮಿದರು, ಹತ್ತು ಹದಿನಾರು

ದಿನವೂ ಕೆಮ್ಮಿದರು. ಅವರ ಆಕಾಶವಾಣಿ ಭಾಷಣದೊಂದಿಗೆ ಈ ಕೆಮ್ಮೂ ಪ್ರಸಾರವಾಯಿತು. ಕೊನೆಗಂತೂ ಜಲಚಿಕಿತ್ಸೆಯ ಸಹಾಯದಿಂದ ಗುಣಪಡಿಸಿಕೊಂಡರು. ನಾಯರರು ಸೋತರು,

**ಅದೊಂದು ಸಾಗರ:** ಸುಶೀಲಾ ನಾಯರರು ಗಾಂಧೀಜಿಯ ಶಿಷ್ಯರಾದರೂ ಹದಿನಾರಾಣೆ ಎಲೋಪೆಥಿಯವರು. ಅವರಂತೆಯೇ ಗಾಂಧೀಜಿಯ ಪಾರ್ಶ್ವಾನುಯಾಯಿಗಳು ಇನ್ನೂ ಅನೇಕ ಡಾಕ್ಟರರಿದ್ದಿರಬಹುದು. ಗಾಂಧೀಜಿ ಆ ಕಾಲದಲ್ಲಿ ಯಾರ ಮೇಲೂ ನಿಸರ್ಗಚಿಕಿತ್ಸೆಯನ್ನು ಹೇರುತ್ತಿದ್ದಿಲ್ಲ. ಪ್ರಯೋಗ, ಪರೀಕ್ಷೆಗಳನ್ನು ಮಾಡಿಕೊಂಡು ತನ್ನಲ್ಲೇ ಅದರ ಬೆಲೆಯನ್ನು ನಿರ್ಣೈಸುವುದರಲ್ಲಿದ್ದರು. ಇತರರಿಗೂ ಇದನ್ನು ಹರಡಬೇಕೆಂಬ ಕುತೂಹಲ ಅವರಿಗುಂಟಾದುದು ಮತ್ತೆ. ಆ ವರೆಗೆ ಅವರೊಂದು ಸಾಗರದಂತೆ. 'ಯಾರೂ ನೀರು ತೋಡಿಕೊಳ್ಳಬಹುದು—ಇಚ್ಛೆ ಇದ್ದರೆ'—ಹಾಗಿದ್ದರು. ಎಷ್ಟೋ ಮಂದಿ ತಮಗೆ ಆಳವಾದಷ್ಟು ನೀರು ತಾವೇ ತೋಡಿಕೊಳ್ಳುತ್ತಿದ್ದರು. "ನಿಸರ್ಗ ಚಿಕಿತ್ಸಕನು ರೋಗಿಗಳನ್ನು ಕರೆದು ತಾನು ಸ್ವತಃ ನಿಸರ್ಗ ಜೀವನದ ದಾರಿದಲ್ಲಿದ್ದುಕೊಂಡು ಇತರರಿಗೆ ಮಾದರಿಯಂತಿರುತ್ತಾನೆ. ಅದೊಂದು ಕುಪ್ಪಿಯಲ್ಲಿ ಮಾರುವ ಚಿಕಿತ್ಸೆಯಲ್ಲ; ಜೀವನದ ರೀತಿ" ಎಂಬುದಾಗಿ ಗಾಂಧೀಜಿ ವಿವರಿಸಿದರು.

**ಚಿಕ್ಕಂದಿನಿಂದಲೂ ನಿಸರ್ಗಚಿಕಿತ್ಸೆಯ ಹುಚ್ಚು:** ನಿಸರ್ಗ ಚಿಕಿತ್ಸೆಗೆ ಗಾಂಧೀಜಿ ತಿರುಗಿದ್ದು ಚಿಕ್ಕಂದಿನಲ್ಲೇ. ಸದ್ಯವೇನೂ ಅಲ್ಲ. ಆದರೆ, ಅದು ಸಾರ್ವಜನಿಕರಂಗದಲ್ಲಿ ಪ್ರಕಟವಾದುದು ಮಾತ್ರ ಮೊನ್ನೆ ಮೊನ್ನೆ—ಅವರು ಸಾಯುವ ಒಂದೂಮುಕ್ಕಾಲು ವರ್ಷ ಮೊದಲು—೧೯೪೬ರಲ್ಲಿ—ಉರುಳಿಕಾಂಚನದಲ್ಲಿ. ೧೯೪೬ನೇ ಮಾರ್ಚ್ ೨೩ನೇ ತಾರೀಕು ಒಂದು ಪುಣ್ಯದಿನ. ಗಾಂಧೀಜಿಗೆ ಮಾತ್ರವಲ್ಲ ನಮಗೆಲ್ಲರಿಗೂ. ಗಾಂಧೀಜಿಯ ಜೀವನದ ಆಕಾಂಕ್ಷೆಯು ಕುಡಿ ಚಿಗುರಿ ಫಲಬಿಟ್ಟ ದಿನ ಅಂದು. ಅವರು ಉರುಳಿಕಾಂಚನದಲ್ಲಿ ನಿಸರ್ಗಚಿಕಿತ್ಸಾಲಯವನ್ನು ತೆರೆದ ದಿನ ಅದು.

ನಿಸರ್ಗಚಿಕಿತ್ಸಾಲಯವನ್ನು ತೆರೆಯುತ್ತಾ ಗಾಂಧೀಜಿ ಹೀಗೆ ನುಡಿದರು: "ಚಿಕ್ಕಂದಿನಿಂದಲೂ ನನಗೆ ನಿಸರ್ಗಚಿಕಿತ್ಸೆಯ ಹುಚ್ಚಿತ್ತು. ನಿಸರ್ಗಚಿಕಿತ್ಸೆಯಲ್ಲಿ ದುಡಿಯಬೇಕೆಂಬುದು ನನ್ನ ಆಕಾಂಕ್ಷೆಯಾಗಿತ್ತು. ಆದರೆ, ಈ ವರೆಗೆ ಕೈಗೂಡಲಿಲ್ಲ. ಇತರ ಹಲವಾರು ತಾಪತ್ರಯಗಳು ನನ್ನ ಸಮಯವನ್ನೆಲ್ಲಾ ತಿಂದುವು. ಇಂದು ಪರಮಾತ್ಮನೇ ಶಕ್ತಿ ಒದಗಿಸಿದುದರಿಂದ ಸ್ವೀಕರಿಸಿಕೊಂಡೆ."

ಗಾಂಧೀಜಿಗೆ ಪ್ರಕೃತಿಯ ಕಡೆಗೆ ಸಹಜವಾದ ಒಲವು. ಪೇಟೆ ಪಟ್ಟಣಗಳ ಕೃತಕ ಬಿಸಿವಾತಾವರಣವು ಇದಕ್ಕೆ ಗೊಬ್ಬರವಿಟ್ಟಿತು. ಅವರು ಇಂಗ್ಲೆಂಡಿನಲ್ಲಿದ್ದಾಗ ಒಮ್ಮೆ ಪ್ಲೂರಸಿ (ಹೃತ್ಕೋಶ ಬೀಗುವುದು) ಬಂತು. ಇಂಗ್ಲೆಂಡು ಆಧುನಿಕ ಔಷಧಗಳ ತವರೂರು. ಗಾಂಧೀಜಿಗೆ ಮದ್ದಿನಲ್ಲಿ ವಿಶ್ವಾಸವಿಲ್ಲ. ಪ್ರಾಕೃತಿಕ ವಿಧಾನ

ಗಳಿಂದಲೇ ರೋಗ ಗುಣವಾಗಬೇಕೆಂದು ಅವರ ನಂಬುಗೆ. ಪ್ರಾಕೃತಿಕ ವಿಧಾನಗಳು ಈ ರಾಷ್ಟ್ರದಲ್ಲಿ ಹೇಗೆ ಸಿಗಬೇಕು? ಎಲ್ಲಿ ನೋಡಿದರೂ ಕೆಂಪಾಗಿ ಕೃತಕವೇ ಕಣ್ಣು ಕಟ್ಟುವಂತಿತ್ತು. ಅಲ್ಲಿ ಗಾಂಧೀಜಿಯಂತಹ ಪ್ರಕೃತಿ ಜೀವಿ ಎಷ್ಟು ಕಷ್ಟಪಟ್ಟಿರಬೇಕೋ ನೀವೇ ಯೋಚಿಸಿರಿ. ನಡೆದರು, ಮಾರ್ಗದುದ್ದಕ್ಕೂ ನಡೆದರು. ಯಾರಾದರೂ ಇರುವರೇ ಎಂದು ವಿಚಾರಿಸಿದರು. ತಮ್ಮ 'ಪಾರ್ಟಿ'ಯ ಜನ ಒಬ್ಬನೂ ಸಿಕ್ಕಲಿಲ್ಲ. (ಒಂದು ಹುಳವೂ ಇಲ್ಲ) ಮತ್ತೂ ನೋಡಿದರು. ಅಷ್ಟರಲ್ಲಿ ಡಾ। ಎಲಿನ್‌ಸನ್‌ರ ಶಾಪು ದೊರೆಯಿತು. ಇವರು ಸಸ್ಯಾಹಾರಿ ವಾದಕ್ಕೆ ಸೇರಿದ ಡಾಕ್ಟರರು. ವೈದ್ಯಕೀಯ ಕಲಿತು ಪದವಿಗಿದವಿ ಎಲ್ಲಾ ಆಗಿ ಕೊನೆಗೆ ನಿಸರ್ಗಚಿಕಿತ್ಸೆಗೆ ತಿರುಗಿದವರು. ಚಾತಕಪಕ್ಷಿಗೆ ಮಳೆನೀರು ಉದುರಿದಂತಾಯಿತು ಗಾಂಧೀಜಿಗೆ. ಒಳಹೊಕ್ಕರು. ಏನೋ ಹಲಕೆಲವು ಸುಲಭ ವ್ಯಾಯಾಮ, ತಣ್ಣೀರು ಸ್ನಾನ, ಉತ್ತಮ ಉಸಿರಾಟ ಇತ್ಯಾದಿಗಳ ಉಪದೇಶವಾಯಿತು. ಅಂದಿನಿಂದ ನಿಸರ್ಗ ಚಿಕಿತ್ಸೆಯಲ್ಲಿ ದುಡಿಯುವುದಾಗಿ ಗಾಂಧೀಜಿ ನಿರ್ಧರಿಸಿಕೊಂಡರು. ಇಲ್ಲಿ ಗಾಂಧೀಜಿಗೆ ನಿಸರ್ಗಚಿಕಿತ್ಸೆಯ ಪರಿಣಯವಾಯಿತೆನ್ನಬಹುದು. ಡಾ॥ ಎಲಿನ್‌ಸನ್ನರೇ ಈ ಪರಿಣಯದ ಪುರೋಹಿತ.

ಅನಂತರ ದೀರ್ಘಕಾಲದ ಮೇಲೆ ಉರುಲಿಕಾಂಚನದಲ್ಲಿ ನಿಸರ್ಗಚಿಕಿತ್ಸಾಲಯವು ತೆರೆಯಲ್ಪಟ್ಟಿತು.

**ಉರುಲಿಕಾಂಚನದಲ್ಲಿ:** ಗಾಂಧೀಜಿ ಸ್ಥಾಪಿಸಿದ ನಿಸರ್ಗಚಿಕಿತ್ಸಾಲಯವು ಉರುಲಿಕಾಂಚನದಲ್ಲಿ ಇಂದಿಗೂ ನಡೆಯುತ್ತಿದೆ. ಪೂನಾ–ಸೊಲ್ಲಾಪುರ ಮಾರ್ಗದಲ್ಲಿ ಪೂನಾದಿಂದ ಹತ್ತು ಮೈಲು ದೂರದಲ್ಲಿದೆ ಈ ಹಳ್ಳಿ. ಸುಮಾರು ಐದು ಸಾವಿರ ಜನಸಂಖ್ಯೆ. ವಿಶಾಲವಾದ ಪ್ರಕೃತಿ ಸೌಂದರ್ಯಗಳ ಹಸನಾದ ಮೈದಾನ. ಪಂಚಭೂತಗಳಿಗೆ ಸಂಪೂರ್ಣ ಸ್ವಾತಂತ್ರ್ಯ ಇಲ್ಲಿ. ಊರ ಪರವೂರ ಮಂದಿಗಳು ಚಿಕಿತ್ಸೆಗಾಗಿ ಬಂದುಹೋಗುತ್ತಿದ್ದಾರೆ. ಇಲ್ಲಿ ಯಾವ ವಿಧದ ಔಷಧಿಯನ್ನೂ ಉಪಯೋಗ ಮಾಡುವುದಿಲ್ಲ. ಬರೇ ಮಣ್ಣು, ನೀರು, ವಾಯು, ಬಿಸಿಲು, ಆಕಾಶ ಮತ್ತು ಆಹಾರ ಇವಿಷ್ಟೇ ವಿಧಾನಗಳಿಂದ ಸಕಲ ರೋಗಗಳಿಗೂ ಚಿಕಿತ್ಸೆ ಕೊಡಲಾಗುತ್ತದೆ. ರೋಗಿಗಳ ಖರ್ಚು ವೆಚ್ಚಗಳನ್ನು ಅವರವರೇ ನೋಡಿಕೊಳ್ಳಬೇಕು. ಶೀತ, ನೆಗಡಿ, ಕೆಮ್ಮುಗಳಿಂದ ತೊಡಗಿ ಪಾಂಡುರೋಗ, ಕ್ಷಯ, ಮೂಲವ್ಯಾಧಿ, ಪಿತ್ತ ಇತ್ಯಾದಿ ಮಹಾರೋಗಗಳಿಗೂ ನೂರಾರು ಜನ ಇಲ್ಲಿಂದ ಚಿಕಿತ್ಸೆಪಡೆದು ಹೋಗಿದ್ದಾರೆ. ಅಂತಹವರಿಗೆ ಅದೊಂದು ಆಸ್ಪತ್ರೆಯಲ್ಲ, ದೇವಸ್ಥಾನವೆನ್ನಬಹುದು. ಈಗೀಗ ಇದೊಂದು ಯಾತ್ರಾಸ್ಥಳವೂ ಆಗುತ್ತಿದೆ. ಇದಕ್ಕೆ ಮಹಾತ್ಮರ ಹೆಸರು ಅಂಟಿರುವುದರಿಂದಲೇ ಅಷ್ಟು ಪವಿತ್ರತೆ.

**ಅಂಟು ರೋಗ:** ನಿಸರ್ಗ ಚಿಕಿತ್ಸೆ ಒಂದು "ಅಂಟು ರೋಗ"ದಂತೆ. ಗಾಂಧೀಜಿಯವರು ನಿಸರ್ಗಚಿಕಿತ್ಸೆಯ ಕಡೆಗೆ ಒಲಿದುದು ಎಡೋಲ್ಫ್ ಜಸ್ಟರವರ

ಪುಸ್ತಕದಿಂದ. ಎಡೋಲ್ಫ್ ಜಸ್ಟುರವರು ಜರ್ಮನರು. ಅವರು ಈ ಚಿಕಿತ್ಸೆಯಲ್ಲಿ ಬಹಳ ಅಭಿವೃದ್ಧಿಯನ್ನು ತಂದವರು. ಅವರ "ಪ್ರಕೃತಿಗೆ ತಿರುಗು" ("Return to Nature") ಎಂಬ ಪುಸ್ತಕ ಆಕಸ್ಮಾತ್ ಒಂದು ದಿನ ಗಾಂಧೀಜಿಯವರ ಕೈಗೆ ಬಂತು. ಅಂದಿನಿಂದಲೇ ಅವರಿಗೂ ಈ 'ಹುಚ್ಚು' ಪ್ರಾರಂಭವಾಯಿತು.

**ಮದ್ದಿಗಿಂತ ಮಣ್ಣು ಉತ್ತಮ:** ಜಸ್ಟುರವರು ಮಣ್ಣಿನ ಚಿಕಿತ್ಸೆಯನ್ನು ಬಹಳವಾಗಿ ಒತ್ತಿ ಹೇಳಿದ್ದಾರೆ. ಪರೀಕ್ಷೆಮಾಡಬೇಕೆನಿಸಿತು ಗಾಂಧೀಜಿಗೆ. ಗಾಂಧೀಜಿಗೆ ಅರೋಗ್ಯ ಕೆಟ್ಟಿತ್ತು. ಅವರೇ ಹೇಳುವಂತೆ "೧೯೦೧ರ ವರೆಗೆ ನಾನು ಕಾಯಿಲೆ ಬಿದ್ದಾಗಲೆಲ್ಲ ಡಾಕ್ಟರರ ಬಳಿಗೆ ಓಡದಿದ್ದರೂ ಅವರ ಔಷಧಗಳನ್ನು ಕೆಲಮಟ್ಟಿಗೆ ಉಪಯೋಗಿಸುತ್ತಿದ್ದೆ. ಮಲಬದ್ಧತೆಯಾದಾಗ ಭೇದಿಉಪ್ಪನ್ನು ತೆಗೆದುಕೊಳ್ಳುತ್ತಿದ್ದೆ. ದಿವಂಗತ ಡಾ|| ಪ್ರಾಣಜೀವನ ಮೆಹತಾ ನೈತಾಲಿಗೆ ಬಂದಿದ್ದರು. ನನಗೆ ಪದೇ ಪದೇ ಆಗುತ್ತಿದ್ದ ನಿತ್ರಾಣ, ಬಳಲಿಕೆಗಳನ್ನು ಗುಣಮಾಡಲು ಕೆಲವು ಔಷಧಿಗಳನ್ನು ಸೂಚಿಸಿದರು. ಇದರಿಂದಾಗಿ ನಾನು ಮದ್ದಿನ ಸಾಹಿತ್ಯವನ್ನು ತುಸು ಓದಬೇಕಾಯಿತು. ಸಾಲದುದಕ್ಕೆ ನೈತಾಲಿನ ಆಸ್ಪತ್ರೆಯೊಂದರಲ್ಲಿ ಕೆಲವು ಕಾಲ ದುಡಿದು ಅನುಭವವು ಇತ್ತು. ಈ ಎಲ್ಲವುಗಳ ಸಹಾಯದಿಂದ ಕೆಲವು ಸಮಯ ಹೇಗೂ ದೂಡಿದೆ. ಆದರೆ ಯಾವ ಔಷಧಿಯೂ ಒಂದಿಷ್ಟೂ ಗುಣ ಕೊಡಲಿಲ್ಲ. ತಲೆನೋವೂ, ಸಾಮಾನ್ಯ ಅನಾರೋಗ್ಯವೂ ಹಾಗೆಯೇ ಉಳಿದುವು. ಇದರಿಂದ ಔಷಧಿಗಳಲ್ಲಿ ನನಗಿದ್ದ ಅಲ್ಪ ಸ್ವಲ್ಪ ನಂಬುಗೆಯೂ ಮಾಯವಾಗತೊಡಗಿತು." ಆ ಸಮಯದಲ್ಲಿ ಗಾಂಧೀಜಿಯವರು ಜಸ್ಟುರವರ ಪುಸ್ತಕ ಓದಿದರು. ಮಲಬದ್ಧತೆಗೆ ಕಿಬ್ಬೊಟ್ಟೆಯ ಮೇಲೆ ಮಣ್ಣಿನ ರೊಟ್ಟಿಯನ್ನು ಕಟ್ಟಬೇಕೆಂದು ಜಸ್ಟು ಹೇಳುತ್ತಾನೆ. "ನಾನು ಶುದ್ಧವಾದ ಒಣಮಣ್ಣಿನ ಹುಡಿಯನ್ನು ನೀರಿನೊಂದಿಗೆ ಬೆರಸಿ ತೆಳುವಾದ ಬಟ್ಟೆಯಲ್ಲಿಟ್ಟು ಕಿಬ್ಬೊಟ್ಟೆಗೆ ಕಟ್ಟಿಕೊಂಡು ಮಲಗಿ, ರಾತ್ರಿ ಎಚ್ಚರವಾದಾಗ, ಅದನ್ನು ಬಿಡಿಸಿ ಬೇರೊಂದು ರೊಟ್ಟಿ ಬದಲಾಯಿಸುತ್ತಿದ್ದೆ. ಇದರ ಪರಿಣಾಮ ಅತ್ಯಾಶ್ಚರ್ಯಕರವಾಗಿತ್ತು. ಮಾರನೆ ದಿನವೇ ಬೆಳಗ್ಗೆ ನನಗೆ ಸಹಜವಾಗಿಯೂ ತೃಪ್ತಿಕರವಾಗಿಯೂ ಮಲಶೋಧನೆಯಾಯಿತು. ಅಂದಿನಿಂದ ನಾನು ಭೇದಿಉಪ್ಪನ್ನು ಮುಟ್ಟಿಯೇ ಇಲ್ಲವೆನ್ನಬಹುದು" ಎಂದು ಗಾಂಧೀಜಿ ಹೇಳಿರುವರು.

**ಲೂಯಿ ಖೂನೆ** (Louis Kuhne): ಗಾಂಧೀಜಿಯ ಒಳಗಡೆ ಏನೋ ತುಸು ಸಂದೇಹ ಸೇರಿದ್ದಿತಾದರೆ ಲೂಯಿ ಖೂನೆಯವರ ಪುಸ್ತಕವು ಗಾಂಧೀಜಿಯವರನ್ನು ಸಂಪೂರ್ಣವಾಗಿ ತಿರುಗಿಸಿ ಬಿಟ್ಟಿತು. "ಖೂನೆ, ಜಸ್ಟು ಮೊದಲಾದವರ ಬರಹಗಳು ಸರಳವೂ ಜನಪ್ರೀತವೂ ಆಗಿವೆ. ಅವು ಬಹಳ ಪ್ರಯೋಜನ ಉಳ್ಳವುಗಳು. ಅವುಗಳನ್ನೋದುವುದು ಎಲ್ಲರ ಕರ್ತವ್ಯ. ಈ ಪುಸ್ತಕಗಳನ್ನೂ ಓದಿದಂದಿನಿಂದ ನಾನು ನಿಸರ್ಗ ಚಿಕಿತ್ಸೆಗೆ ಸಂಪೂರ್ಣವಾಗಿ ಮತಾಂತರ ಹೊಂದಿದೆ. ಇದು

೪೦ ವರ್ಷಗಳ ಹಿಂದೆ" ಎಂದು ಗಾಂಧೀಜಿ ನುಡಿದಿದ್ದಾರೆ. ಖೂನೆಯವರು ನಿಸರ್ಗ ಚಿಕಿತ್ಸೆಯ ತಾತನೆಂದು ಗಣಿಸಲ್ಪಡುತ್ತಾರೆ.

ಖೂನೆಯವರೂ ಜರ್ಮನಿಯವರು. ೧೯ನೇ ಶತಮಾನದವರು. ನಿಸರ್ಗ ಚಿಕಿತ್ಸೆಯು ನಮ್ಮ ವೇದಾಂತದ ರೂಪದಲ್ಲಿ ಅನಾದಿಯಿಂದಲೇ ಬಂದಿದೆಯೆಂಬುದನ್ನು ಬಿಟ್ಟರೆ ಅದಕ್ಕೆ ಸರಿಯಾದ ರೂಪಕೊಟ್ಟು, ವೈಜ್ಞಾನಿಕ ಬಣ್ಣಬಳಿದು ಒಂದು ನಿಶ್ಚಿತ ಚಿಕಿತ್ಸಾವಿಧಾನವನ್ನಾಗಿ ಮಾಡಿದವರು ಲೂಯಿ ಖೂನೆ. ಅವರಿಂದಲೇ ನಿಸರ್ಗಚಿಕಿತ್ಸೆಯು ಇಡೀ ವಿಶ್ವಕ್ಕೆ ಹರಡುವಂತಾಯಿತು. ಅವರ ಚಿಕಿತ್ಸಾಲಯವು ವಿಶ್ವಖ್ಯಾತಿ ಪಡೆದಿತ್ತು. ಇಂದು ಅವರ ಅನುಯಾಯಿಗಳಿಲ್ಲದ ರಾಷ್ಟ್ರವಿಲ್ಲ. ಖೂನೆಯವರ ಪುಸ್ತಕವು ಜಗತ್ತಿನ ೬೦ಕ್ಕೂ ಮಿಕ್ಕಿ ಭಾಷೆಗಳಿಗೆ ಭಾಷಾಂತರವಾಗಿದೆ.

**ಸರದಾರರಿಗೂ ಪ್ರಸಾದ:** ನಿಸರ್ಗಚಿಕಿತ್ಸೆಯು ತನಗೆ ದೇವರೇ ಕೊಟ್ಟ ಪ್ರಸಾದವೆಂದು ಗಾಂಧೀಜಿ ತಿಳಿಯುತ್ತಿದ್ದರು. ಅದನ್ನು ಸರದಾರ ಪಟೇಲರಿಗೂ ಕೊಂಚ ಕೊಟ್ಟರು. ಪಟೇಲರಿಗೊಮ್ಮೆ ದೀರ್ಘ ಸೆರೆಮನೆಯ ವಾಸದಿಂದ ಹೊರ ಬಂದಾಗ ಬಹಳ ಕಾಯಿಲೆಯಾಯಿತು. ಅವರ ಮೇಲೆ ಕಠಿಣವಾದೊಂದು ಶಸ್ತ್ರ ಚಿಕಿತ್ಸೆ ನಡೆಸುವ ಅಗತ್ಯವಿದೆಯೆಂದು ಡಾಕ್ಟರರು ಅಭಿಪ್ರಾಯ ಪಟ್ಟರು. ಶಸ್ತ್ರ ಚಿಕಿತ್ಸೆಯ ಅಪಾಯ ಗಾಂಧೀಜಿಗೆ ಗೊತ್ತು. ಏನು ಬಂದರೂ ನಿಸರ್ಗಚಿಕಿತ್ಸೆಯೊಂದೇ ಮಾಡತಕ್ಕ ಮದ್ದು ಎಂದು ಗಾಂಧೀಜಿಯ ವಿಶ್ವಾಸ. ಶಸ್ತ್ರಚಿಕಿತ್ಸೆಯ ಗಂಡಾಂತರವನ್ನೂ ನಿಸರ್ಗಚಿಕಿತ್ಸೆಯ ಲಾಭಗಳನ್ನೂ ಪಟೇಲರಿಗೆ ವಿವರಿಸಿದರು. ಸರದಾರರಿಗೂ ಹೌದೆನಿಸಿತು. ಒಡನೆ ಈರ್ವರೂ ಪೂನಾದ ಡಾ॥ ದಿನ್‌ಶಾ ಮೆಹತಾರವರ ನಿಸರ್ಗಚಿಕಿತ್ಸಾಲಯಕ್ಕೆ ಬಂದರು. ಗಾಂಧೀಜಿ ಸ್ವತಃ ಡಾಕ್ಟರರಾದರು. ಕೆಲವು ದಿನ ತಾವೇ ಚಿಕಿತ್ಸೆ ನಡೆಸಿದರು. ಸುಮಾರು ಮೂರು ತಿಂಗಳ ಕಾಲದಲ್ಲಿ ಪಟೇಲರಿಗೆ ಸುಖವಾಯಿತು. ಗಾಂಧೀಜಿಯ ಪ್ರಯೋಗವು ಸಫಲವಾಯಿತು. ಇಂತಹ ಜೀವಂತ ಪ್ರಯೋಗಗಳು ನೂರಾರು ನಡೆದಿವೆ. ಗಾಂಧೀಜಿ ಏನನ್ನೂ ನುಡಿವವರಲ್ಲ. ಎಲ್ಲವೂ ಅನುಭವದ ಒರೆಗಲ್ಲಿನಿಂದ ಹೊರಡಬೇಕು.

ಗಾಂಧೀಜಿಯ ಯಾವ ಪ್ರಯೋಗ ಪರೀಕ್ಷೆಗೂ ಮೂಲದಲ್ಲಿ ಅವರಲ್ಲಿರುವ ಸೇವಾಸಕ್ತಿಯೇ ಬೀಜ. ಸೇವೆಯಿಲ್ಲದ ಕಾರ್ಯ ಅವರಿಗೆ ತಿರುಳಿಲ್ಲದ ಹೊಟ್ಟು. ನಿಸರ್ಗಚಿಕಿತ್ಸೆಯಾದರೂ ಅವರ ಮನ ಒಲಿಸಲು ಇದೊಂದು ಮುಖ್ಯ ಕಾರಣ. "ಮಿಲಿಯಾಂತರ ಜನರಿಗೆ ಸಿಗಲಾರದ ಅನುಕೂಲತೆಗಳನ್ನು ನಾವು ಕೆಲವರು ಮಾತ್ರ ಏಕೆ ಅನುಭವಿಸಬೇಕು?" ಎಂದು ಅವರು ವೈದ್ಯಕೀಯದ ಭಾರಿ ಕ್ರಯದ ಔಷಧಗಳನ್ನೂ ಹತ್ಯಾರುಗಳನ್ನೂ ಕುರಿತಾಗಿ ಹೇಳಿದರು. ನಿಸರ್ಗಚಿಕಿತ್ಸೆಗೆ ಅವಶ್ಯಕ ವಸ್ತುಗಳೆಂದರೆ ನಿಸರ್ಗದಲ್ಲಿ ಹೇರಳವಾಗಿ ದೊರೆಯುವ ಮಣ್ಣು, ನೀರು, ಗಾಳಿ, ಬಿಸಿಲು ಮಾತ್ರ. ಅತಿ ಬೆಲೆಯ ಔಷಧ ಇಂಜೆಕ್ಷನುಗಳ ಅವಶ್ಯಕತೆಯಿಲ್ಲ. ನಾನಾ ಯಂತ್ರೋಪಕರಣಗಳ ಕಷ್ಟವಿಲ್ಲ. ರೋಗ ಪರೀಕ್ಷೆಯು

ಕಾಳಜಿಯಿಲ್ಲ. ಬಲುದೂರದ ಪೇಟೆಪಟ್ಟಣಗಳ ಆಸ್ಪತ್ರೆಗಳಲ್ಲಿ ನಳಳಬೇಕಾಗಿಲ್ಲ. ಅವರವರ ವಾಸಸ್ಥಾನದಲ್ಲೇ ಇದ್ದುಕೊಂಡು, ಪಂಚಭೂತಗಳ ಯೋಗ್ಯ ಸಂಯೋಜನೆಯಿಂದ ಇದನ್ನು ಮಾಡಿಕೊಳ್ಳಲು ಸಾಧ್ಯವಿದೆ. ಆದ್ದರಿಂದಲೇ ಗಾಂಧೀಜಿ ಅದರ ಪ್ರಚಾರಕ್ಕೆ ಮನಮಾಡಿದರು.

**ಆರೋಗ್ಯಶಾಸ್ತ್ರ ಸಕಲರಿಗೂ ಎಟಕುವಂತಿರಬೇಕು:** ಆರೋಗ್ಯಶಾಸ್ತ್ರವು ಎಲ್ಲರಿಗೂ ಆಲೋಚನೆಗೆ ನಿಲುಕುವಂಥಾದ್ದೂ ಆಗಿರಬೇಕು ಅದು ಮಾತ್ರ ಆ ಶಾಸ್ತ್ರದ ಸತ್ಯತೆಯನ್ನು ತೋರಿಸುತ್ತದೆ. ಪರಮಾತ್ಮನು ಯಾರನ್ನೂ ಪರಾವಲಂಬಿಯಾಗಿ ನಿರ್ಮಿಸಿಲ್ಲ. ಆದ್ದರಿಂದ ಆರೋಗ್ಯಕ್ಕಾಗಿ ಯಾರೂ ಪರಾವಲಂಬಿಗಳಾಗುವ ಅವಶ್ಯಕತೆಯಿಲ್ಲ. ಆರೋಗ್ಯವು ಕೇವಲ ಹಣವುಳ್ಳವರಿಗೆ ಅಥವಾ ವಿದ್ಯೆಯುಳ್ಳವರಿಗೆ ಮಾತ್ರ ದೊರಕುವಂಥಾದ್ದಾಗಿಗಲು ಸಾಧ್ಯವಿಲ್ಲ. ಆದರೆ, ಇಂದಿನ ವೈದ್ಯಶಾಸ್ತ್ರವು ಇಲ್ಲಿಗೆ ಮುಟ್ಟಿದೆ. ಅದು ಬಡವರಿಗೂ ಅವಿದ್ಯಾವಂತರಿಗೂ ದೊರೆಯುವುದಿಲ್ಲ. ಅದು ನಿಸರ್ಗಚಿಕಿತ್ಸೆಯಲ್ಲಿ ಮಾತ್ರವೇ ಸಾಧ್ಯ. ನಿಜವಾದ ಆರೋಗ್ಯಶಾಸ್ತ್ರ ಹಾಗೇ ಇರಬೇಕು. ಹೇರಳವಾಗಿ ನಿಸರ್ಗದಲ್ಲಿ ಹಬ್ಬಿರುವ ಪಂಚಶಕ್ತಿಗಳೇ ನಿಜವಾದ ಔಷಧಿಗಳು. ಗಾಂಧೀಜಿ ಈ ವಾದಸರಣಿಯನ್ನು ಮೆಚ್ಚಿದರು. ಆದರೆ ಅಷ್ಟರಲ್ಲೇ ಕುಶಲಮತಿ ಡಾಕ್ಟರರೊಬ್ಬರು "ಡಾಕ್ಟರರು ಕೊಡುವ ಔಷಧಿಗಳಾದರೂ ಪಂಚಭೂತಗಳ ಸಮ್ಮಿಳನದಿಂದಲೇ ತಯಾರಾದುದಷ್ಟೆ?" ಎಂಬುದಾಗಿ ಪ್ರಶ್ನಿಸದೆ ಬಿಡಲಿಲ್ಲ. ಗಾಂಧೀಜಿ ಹೀಗೆ ಉತ್ತರಿಸಿದರು: "ಈ ದೃಷ್ಟಿಯಿಂದ ಎಲ್ಲವನ್ನೂ ಪ್ರಾಕೃತಿಕವೆಂದೇ ವಾದಿಸಬಹುದು. ನಾನು ಹೇಳುವುದಿಷ್ಟೇ. ರಾಮನಾಮಕ್ಕಿಂತ ಹೊರಗಿನದೆಲ್ಲವೂ ನಿಸರ್ಗಚಿಕಿತ್ಸೆಗೆ ವಿರೋಧವಾದುದು. ಈ ಕೇಂದ್ರ ತತ್ವದಿಂದ ಒಬ್ಬನು ದೂರ ಸರಿದಷ್ಟೂ ಅವನು ನಿಸರ್ಗ ಚಿಕಿತ್ಸೆಯಿಂದಲೂ ಅಷ್ಟೇ ದೂರ ಸರಿಯುತ್ತಾನೆ. ಈ ವಾದವನ್ನನುಸರಿಸಿದರೆ ಪಂಚಮಹಾಭೂತದ ಐದು ವಸ್ತುಗಳ ಉಪಯೋಗವೇ ನಿಸರ್ಗಚಿಕಿತ್ಸೆಯ ಪರಿಮಿತಿಯೆಂದು ಹೇಳಬಹುದು." ಆದ್ದರಿಂದ ಔಷಧಿಗಳೂ ಪ್ರಾಕೃತಿಕವೆಂಬ ವಾದದಲ್ಲಿ ಹುರುಳಿಲ್ಲ. ಪಂಚಭೂತಗಳು ಹೇಗೆ ನಿರ್ಮಿಸಲ್ಪಟ್ಟಿರುವುವೋ ಅದೇ ರೂಪದಲ್ಲಿ ಅವನ್ನು ಉಪಯೋಗಿಸತಕ್ಕದ್ದು. ಮಣ್ಣು, ನೀರು, ಗಾಳಿ, ಬಿಸಿಲು, ಆಕಾಶಗಳು ಪರಮಾತ್ಮನೇ ನಿರ್ಮಿಸಿದ ಔಷಧಿಗಳು ಅದಕ್ಕಿಂತ ಮಿಗಿಲಾದ ಔಷಧಿಗಳನ್ನು ನಾವು ತಯಾರಿಸುವುದು ಸಾಧ್ಯವಲ್ಲ.

**ಸಾಮಾನ್ಯ ಚಿಕಿತ್ಸಕರೇ ಮೇಲು:** ಚಿಕ್ಕಂದಿನಲ್ಲಿ ಗಾಂಧೀಜಿಗೆ ವೈದ್ಯಕೀಯವೃತ್ತಿಯ ಮೇಲೆ ತುಂಬಾ ಅಭಿಮಾನವಿತ್ತು. ದೇಶಕ್ಕಾಗಿ ತಾನೊಬ್ಬ ಡಾಕ್ಟರನಾಗಬೇಕೆಂಬುದು ಅವರ ಅಭಿಲಾಷೆಯಾಗಿತ್ತು. ಆದರೆ, ಅನಂತರ ಇದೇ ಅಭಿಲಾಷೆ ಬೆಳೆದಂತೆ ತೋರುವುದಿಲ್ಲ. ಕೊನೆಕೊನೆಗೆ ವೈದ್ಯಕೀಯ ವೃತ್ತಿಯ ಮೇಲೆ ಅವರಿಗೆ ಒಂದು ತೆರನಾದ ಜಿಗುಪ್ಸೆಯೇ ಹುಟ್ಟಿತೆನ್ನಬಹುದು. ಆಸ್ಪತ್ರೆ

ಗಳನ್ನೂ ಡಾಕ್ಟರರನ್ನೂ ಅವರು ಒಂದೆರಡು ಬಾರಿ ಕಠೋರ ಮಾತುಗಳಿಂದ ಖಂಡಿಸಿದ್ದಾರೆ. ವೈದ್ಯಶಾಸ್ತ್ರವು ಜನತೆಗೆ ನಿಜವಾಗಿಯೂ ಸೇವೆಸಲ್ಲಿಸುವುದಿಲ್ಲ ವೆಂದು ಅವರು ಆರೋಪಿಸಿದ್ದಾರೆ. ವೈದ್ಯಶಾಸ್ತ್ರದ ಪ್ರಕೃತಿಯೇ ಹಾಗೆ ಎನ್ನು ತ್ತಾರೆ ಅವರು.

"ಡಾಕ್ಟರರು ನಮ್ಮನ್ನು ಬಹಳ ಮಟ್ಟಿಗೆ ನಿಸ್ಸಹಾಯಕರನ್ನಾಗಿ ಮಾಡಿರು ತ್ತಾರೆ. ಕೆಲವು ಬಾರಿ ದೊಡ್ಡ ದೊಡ್ಡ ಪದವೀಧರ ಡಾಕ್ಟರರಿಗಿಂತಲೂ ಸಾಮಾನ್ಯ ಚಿಕಿತ್ಸಕರೇ ಮೇಲೆಂದು ನನಗೆ ತೋರುತ್ತದೆ" ಎಂದರು.

"ಯೋಚಿಸೋಣ. ಡಾಕ್ಟರರು ಏನು ಮಾಡುತ್ತಾರೆಂಬುದನ್ನು ನೋಡೋಣ. ನಾನು ಅತಿಯಾಗಿ ತಿನ್ನುತ್ತೇನೆ, ನನಗೆ ರೋಗ ಬರುತ್ತದೆ, ಡಾಕ್ಟರರೊಬ್ಬರು ನನ್ನನ್ನು ಗುಣಮಾಡುತ್ತಾರೆ. ಆಗ ನಾನು ಪುನಃ ಅತಿಯಾಗಿ ತಿನ್ನತೊಡಗುತ್ತೇನೆ. ಪುನಃ ರೋಗಗ್ರಸ್ಥನಾಗುತ್ತೇನೆ. ಡಾಕ್ಟರರು ಬಾರದಿರುತ್ತಿದ್ದರೆ ನಿಸರ್ಗವು ತನ್ನ ಕಾರ್ಯಮಾಡಿ ಮುಗಿಸುತಿತ್ತು; ನನ್ನ ತಪ್ಪಿಗೆ ತಕ್ಕ ಶಾಸ್ತಿಯಾಗಿ ಮುಂದೆ ನಾನು ತಿದ್ದಿಕೊಳ್ಳುವಂತಾಗುತಿತ್ತು; ನಾನು ಸುಖಹೊಂದಬಹುದಿತ್ತು. ಡಾಕ್ಟರರು ನನ್ನಲ್ಲಿ ಈ ರೀತಿಯಲ್ಲಿ ದುರಾಚಾರಗಳನ್ನು ಪ್ರೋತ್ಸಾಹಿಸುತ್ತಾರೆ."

ಗಾಂಧೀಜಿ ಹೇಳಿದುದು ಸತ್ಯ. ಇದಕ್ಕೆ ಪಂಡಿತ ಪಾಮರರೆನ್ನದೆ ಅನೇಕ ಮಂದಿಯ ಅನುಭವಗಳೇ ಸಾಕ್ಷಿ. ಡಾ॥ ಫೀಲ್ಡಿಂಗ್ ಓಲ್ಡ್, M. D., M. R. C. P., M. A., ಇವರು ೧೯೩೩ರಲ್ಲಿ "ವೈದ್ಯಶಾಸ್ತ್ರವು ವೈಜ್ಞಾನಿಕವೆಂಬುದನ್ನು ನಾನು ಸಂಪೂರ್ಣವಾಗಿ ಅಲ್ಲಗಳೆಯುತ್ತೇನೆ. ರೋಗವೆಂದರೇನೆಂಬುದು ಕೂಡಾ ವೈದ್ಯಶಾಸ್ತ್ರಕ್ಕೆ ತಿಳಿದಿಲ್ಲವೆನ್ನಬೇಕಾಗುತ್ತದೆ. ಇಂದು ನಾವು, ಡಾಕ್ಟರರು, ನಮ್ಮ ಸಂಪೂರ್ಣ ತತ್ವಗಳನ್ನು ಪುನರ್ವಿಮರ್ಶಿಸಬೇಕಾಗಿ ಬಂದಿದೆ. ಡಾಕ್ಟರರು ಗುಣ ಮಾಡುವುದೆಂದು ಹೇಳಬಹುದಾದ ಏನನ್ನೂ ಮಾಡುವುದಿಲ್ಲ, ಬದಲಾಗಿ ರೋಗ ವನ್ನು ಬೆಳೆಸುತ್ತಾರೆ. ಕೇವಲ ಶೀತಬಾಧೆಗೆ ಅವರ ಆಸರೆ ಪಡೆದರೆ ಪ್ಲೂರಸಿ, ನ್ಯುಮೋನಿಯಾಗಳಂತಹ ಭಯಂಕರಸ್ಥಿತಿಗೆ ಮುಟ್ಟಿಸುತ್ತಾರೆ ವಾತ, ಅಸ್ತ್ಮ, ಇತ್ಯಾದಿ "ಅಪರಿಹಾರ್ಯ" ರೋಗಗಳನ್ನು ನಿಸರ್ಗಚಿಕಿತ್ಸೆಯಲ್ಲಿ ಸುಲಭವಾಗಿ ಗುಣ ಪಡಿಸಲು ಸಾಧ್ಯವಾಗಿದೆ. ನಿಜ ಹೇಳುವುದಾದರೆ ಕಲ್ಮಶ ಸಂಗ್ರಹಣವೇ ರೋಗ, ಅದರ ವಿಸರ್ಜನೆಯೇ ಚಿಕಿತ್ಸೆ. ನಾವು ಮಾನಸಿಕ ಮತ್ತು ಕಾಯಿಕ ಪರಿಶುದ್ಧತೆ ಯಲ್ಲಿದ್ದಾಗ ಯಾವ ರೋಗವೂ ಇಲ್ಲ ..." ಎಂದು ಲಂಡನಿನಲ್ಲಿ ಭಾಷಣಮಾಡಿದರು.

ಪ್ಯಾರೀಸಿನ ಪ್ರಖ್ಯಾತ ಡಾ॥ ಮೆಜೆಂಡಿಯವರು 'Medicine is a great humbug. I know it is called science. Science, indeed! It is nothing like science. Doctors are merely emperics when they are not charlatnas..." ಔಷಧಿಯು ಒಂದು ಮಹಾ ಮೋಸ. ಅದು ವೈಜ್ಞಾನಿಕವೆಂದು ಕರೆಯಲ್ಪಡುವುದು ನನಗೆ ಗೊತ್ತಿದೆ. ವಿಜ್ಞಾನ, ಖಂಡಿತ

ವಾಗಿಯೂ! ವಿಜ್ಞಾನದ ಯಾವ ಲಕ್ಷಣವೂ ಅದಕ್ಕಿಲ್ಲ. ಡಾಕ್ಟರರು ಕೇವಲ ಮಾತಿನ ಮಲ್ಲರು. ಅಲ್ಲವಾದರೆ ಬರೇ ಆಳಲೇಕಾಯಿ ಪಂಡಿತರು...." ಎಂಬು ದಾಗಿ ಸಾರಿದರು.

ಡಾ|| ಜೇಮ್ಸ್ ಜೋನ್ಸನ್ನರು "ನನ್ನ ಹೃದಯವಾಣಿ ಹೇಳುತ್ತಿದೆ, ಇಂದು ಲೋಕದಲ್ಲಿ ಒಬ್ಬನೇ ಒಬ್ಬ ಡಾಕ್ಟರನಾಗಲೀ, ಒಂದೇ ಒಂದು ಔಷಧಿಯಾಗಲೀ ಇಲ್ಲದಿರುತ್ತಿದ್ದರೆ ಜನರು ಈಗ ಇರುವುದಕ್ಕಿಂತ ಹೆಚ್ಚಿನ ಸುಖದಲ್ಲಿರುತ್ತಿದ್ದರು" ಎಂದರು.

ವೈದ್ಯಶಾಸ್ತ್ರದ ತಾತನೆಂದು ಡಾಕ್ಟರರು ಹೇಳುವ ಹಿಪೋಕ್ರೇಟ್ಸರೇ "ನಿಸರ್ಗವೇ ಸರ್ವರೋಗ ಪರಿಹಾರಕ ಶಕ್ತಿ" ಎಂದು ಸಾರಿದ್ದಾರೆ.

ಅಮೇರಿಕದ ಡಾ|| ವೆಂಡೆಲ್ ಹೋಮ್ಸ್‌ರವರು "ನಮ್ಮಲ್ಲಿರುವ ಎಲ್ಲಾ ಔಷಧಿಗಳನ್ನು ಸಮುದ್ರಕ್ಕೆಸೆದರೆ ಅವು ಅಲ್ಲಿ ಮೀನುಗಳಿಗೂ ಉಪದ್ರ ಕೊಡದಿರಲಾರವು" ಎಂದು ಹೇಳಿ, ಮದ್ದುಗಳು ಮನುಷ್ಯರಿಗೆ ಮಾಡುವ ಅನಾಹುತಗಳನ್ನು ವಿವರಿಸಿದ್ದಾರೆ.

ಉರುಲಿಕಾಂಚನದಲ್ಲಿ ಚಿಕಿತ್ಸಾಲಯ ತೆರೆದು ಕೆಲವು ದಿನ ಗಾಂಧೀಜಿ ಸ್ವತಃ ನಿಂತು ಚಿಕಿತ್ಸೆ ನಡೆಸಿದರು. ದಿನಕ್ಕೆ ಮೂವತ್ತು ನಲ್ವತ್ತರಂತೆ ರೋಗಿಗಳು ಬರ ತೊಡಗಿದರು. ಗಾಂಧೀಜಿ ಎಲ್ಲರಿಗೂ ಸಾಮಾನ್ಯ ಹೆಚ್ಚು ಕಡಮೆ ಒಂದೇ ರೀತಿಯ ಚಿಕಿತ್ಸೆ ಹೇಳುತ್ತಿದ್ದರು. ಮಣ್ಣು ಲೇಪ, ತಣ್ಣೀರು ಸ್ನಾನ (ಕಟಿ ಅಥವಾ ಸ್ಪರ್ಶ), ಸೂರ್ಯಸ್ನಾನ, ವಾಯು ವಿಹಾರ, ಆಕಾಶ ಚಿಕಿತ್ಸೆ, ಆಹಾರ ನಿಯಮ ಇವಿಷ್ಟನ್ನೆ ಅಲ್ಲಲ್ಲಿ ಕೊಂಚ ವ್ಯತ್ಯಾಸಮಾಡಿ ಹೇಳುತ್ತಿದ್ದರು.

**ಅದ್ವೈತ ಸಿದ್ಧಾಂತ:** ಒಂದೇ ಚಿಕಿತ್ಸೆಯಲ್ಲಿ ಗಾಂಧೀಜಿ ಹೇಗೆ ತರ ತರದ ರೋಗಿಗಳನ್ನು ಗುಣಮಾಡುತ್ತಿದ್ದರೆಂದು ಹಲವರಿಗೆ ಆಶ್ಚರ್ಯ. ಗಾಂಧೀಜಿ ಹೀಗೆ ವಿವರಿಸಿದರು: "ನಿಸರ್ಗಚಿಕಿತ್ಸೆಯಲ್ಲಿ ಹಲವಾರು ರೋಗಗಳೆಂಬುದಿಲ್ಲ. ದೇಹದೊಳಗೆ ಕಲ್ಮಶ ಸೇರುವುದೊಂದೇ ಮನುಷ್ಯನಿಗೆ ಬರುವಂತಹ ರೋಗ. ಕಲ್ಮಶವು ಸೇರಿದಂತಹ ಅಂಗ, ಕಾಲ, ರೋಗಿಯ ಶರೀರ ರಚನೆ ಇತ್ಯಾದಿಗಳನ್ನು ಹೊಂದಿಕೊಂಡು ಒಂದೇ ರೋಗವು ಭಿನ್ನಭಿನ್ನ ರೂಪಗಳಿಂದ ಕಾಣಿಸುತ್ತದೆ."

ಹಾಗಿದ್ದರೆ ನೆಗಡಿ, ಶೀತ, ಕ್ಷಯ, ವಾತ–ಇವೆಲ್ಲಾ ಒಂದೇ ರೋಗವೇ?

"ಇವೆಲ್ಲಾ ರೋಗಗಳಿಗೂ ಕಾರಣ ಒಂದೇ–ಕಲ್ಮಶ ಸಂಗ್ರಹಣ. ಆದ್ದರಿಂದ ಇವೆಲ್ಲಾ ರೋಗಗಳೂ ಒಂದೇ. ಕಲ್ಮಶವು ಅಲ್ಪವಾಗಿದ್ದು ಮೂಗಿನಲ್ಲಿ ಕಾಣಿಸಿದರೆ ನೆಗಡಿಯಾಯಿತು, ಶ್ವಾಸಕೋಶವನ್ನು ಕಲ್ಮಶ ಪ್ರವೇಶಿಸಿದಾಗ ಕ್ಷಯವಾಯಿತು; ಅದೇ ಕಲ್ಮಶವು ಗಂಟುಗಳನ್ನು ಬಾಧಿಸಿದರೆ ವಾತವಾಯಿತು. ಆದುದರಿಂದ ಅಂತಹ ಕಲ್ಮಶವನ್ನು ದೇಹದಿಂದ ಹೊರಹಾಕಿದಾಗ ಶೀತವೂ, ಕ್ಷಯವೂ, ವಾತವೂ ಎಲ್ಲವೂ ಗುಣವಾಯಿತು."

ಕಲ್ಮಶವೇ ರೋಗದ ಕಾರಣವಾದ್ದರಿಂದ ಅದನ್ನು ವಿಸರ್ಜಿಸುವುದೇ ರೋಗಕ್ಕೆ ತಕ್ಕ ಚಿಕಿತ್ಸೆ. ನಿಸರ್ಗ ಚಿಕಿತ್ಸೆಯು ಮಾಡುವುದಾದರೂ ಇದನ್ನೇ. ಮಣ್ಣು, ನೀರು, ವಾಯು, ಉಪವಾಸ ಇತ್ಯಾದಿಗಳು ಕಲ್ಮಶವನ್ನು ಹೊರಹಾಕಲು ತುಂಬಾ ಶಕ್ತಿಯುಳ್ಳವುಗಳು. ಆದ್ದರಿಂದಲೇ ಯಾವುದೇ ರೋಗವಾಗಿದ್ದರೂ ಈ ಚಿಕಿತ್ಸೆಯನ್ನು ಪ್ರಯೋಗಿಸಿದಾಕ್ಷಣ ಕಲ್ಮಶವು ಹೊರಹೋಗಿ ರೋಗವು ಗುಣವಾಗುತ್ತದೆ. "ಒಂದೇ ರೋಗವಾದ್ದರಿಂದ ಅದಕ್ಕೆ ಒಂದೇ ಚಿಕಿತ್ಸೆಯು ಇರಲೇಬೇಕಷ್ಟೆ? ನಿಸರ್ಗಚಿಕಿತ್ಸೆಯೇ ಅದು" ಎಂದು ಗಾಂಧೀಜಿ ವಿವರಿಸಿದರು. ಇದುವೇ ಅದ್ವೈತ ಸಿದ್ಧಾಂತ.

ಈ ಅದ್ವೈತ ಸಿದ್ಧಾಂತವನ್ನು ಮೊದಲು ಕಂಡುಹಿಡಿದವನು ಲೂಯಿ ಖೂನೆ. ಈ ಸಿದ್ಧಾಂತವು ನಿಸರ್ಗಚಿಕಿತ್ಸೆಯನ್ನು ಎಷ್ಟು ಸುಲಭಗೊಳಿಸಿದೆಯೆಂದು ಅಳೆಯಲು ಸಾಧ್ಯವಿಲ್ಲ. ಯಾವ ರೋಗವಾದರೂ ಚಿಕಿತ್ಸೆಮಾಡಬೇಕಾದುದು ಒಂದೇ ರೀತಿಯಾಗಿ ಎಂದರೆ ಎಷ್ಟು ಸುಲಭ! ನಿಸರ್ಗಚಿಕಿತ್ಸೆಯು ನಿಜವಾಗಿ ಅಷ್ಟು ಸುಲಭವಾಗಿ ಇರುವುದೂ ಹೌದು. ಆದ್ದರಿಂದಲೇ ನಿಸರ್ಗಚಿಕಿತ್ಸೆ ಸುರುಹಚ್ಚುವ ಮೊದಲು ರೋಗವು ಯಾವುದೆಂದು ನಿರ್ಧರಿಸುವ ಕಾಳಜಿ ಇಲ್ಲ. ರೋಗಿಯ ಶಕ್ತಿ, ಪ್ರಾಯ, ರೋಗದ ಬೆಳವಣಿಗೆ, ಕಾಲ ಇತ್ಯಾದಿಗಳನ್ನು ನೋಡಿಕೊಂಡು ಅಲ್ಪಸ್ವಲ್ಪ ವ್ಯತ್ಯಾಸಮಾಡಿಕೊಂಡರೆ ಮಿಕ್ಕ ವಿಚಾರಗಳಲ್ಲೆಲ್ಲ ಚಿಕಿತ್ಸೆ ಒಂದೇ ರೀತಿ ಇರುತ್ತದೆ.

ಸುಲಭವೂ ಅಗ್ಗವೂ ಆಗಿರುವುದರಿಂದ ಪ್ರತಿಯೊಬ್ಬನೂ ತನಗೆ ತಾನೇ ಡಾಕ್ಟರನಾಗುವ ವಿದ್ಯೆ ನಿಸರ್ಗಚಿಕಿತ್ಸೆ. "ನಿಸರ್ಗಚಿಕಿತ್ಸೆ ಅಭ್ಯಾಸ ಮಾಡಿಕೊಂಡರೆ ಅನಂತರ ಅವನು ಕಾಯಿಲೆ ಬೀಳುವುದಿಲ್ಲ. ಅಥವಾ ಬಿದ್ದರೆ ಅವನು ತನಗೆ ತಾನೆ ಚಿಕಿತ್ಸೆ ನಡೆಸಿ ಗುಣಹೊಂದುತ್ತಾನೆ. ಅವನು ಎಂದೂ ಡಾಕ್ಟರ, ವೈದ್ಯರ ಅಥವಾ ಹಕೀಮರ ಬಾಗಿಲು ಕಾಯಬೇಕಾಗಿಲ್ಲ"—ಗಾಂಧೀಜಿ.

**ಮನೆಮನೆ ಗಂಗಾವತಾರ:** "ಇಷ್ಟು ಸಂಜೀವಿನಿಯೇ ಎಂದಾದರೆ ಡಾಕ್ಟರರೂ ವೈದ್ಯರೂ ಏಕೆ ಈ ಚಿಕಿತ್ಸೆಯನ್ನು ಹೇಳುವುದಿಲ್ಲ?" ಗಾಂಧೀಜಿಗೆ ಒಂದು ಪ್ರಶ್ನೆ ಬಂತು. ಅವರು ಹೀಗೆ ಉತ್ತರಿಸಿದರು: "ಮನೆಮನೆಗಳಲ್ಲಿ ಗಂಗಾವತಾರವು ಸಾಧ್ಯವೆಂದು ಡಾಕ್ಟರರು ಒಪ್ಪಿಕೊಂಡರೆ ಅವರ ಜೀವನದ ವೃತ್ತಿಗೇನೇ ತೊಂದರೆಯಾದೀತು. ಆದ್ದರಿಂದ ಅವರು ತಮ್ಮ ಔಷಧ, ಭಸ್ಮ, ಚೂರ್ಣಗಳಲ್ಲಿ ವಿಶ್ವಾಸವಿಡಬೇಕಾಗುತ್ತದೆ; ಮಾತ್ರವಲ್ಲ, ನಿಜವಾದ ಚಿಕಿತ್ಸೆಯನ್ನು ಇತರರಿಗೆ ಹೇಳಬೇಕಾದರೆ ತಾನೂ ಅದನ್ನು ಅನುಭವಿಸಿ ತಿಳಿದಿರಬೇಕು. ಅದು ಬರೇ ಪುಸ್ತಕದ ಬಾಯಿಪಾಠವಲ್ಲ. ಅನುಭವವಿಲ್ಲದವನು ಇತರರಿಗೆ ಅದನ್ನು ಹೇಳುವುದಾದರೂ ಹೇಗೆ? ನಿಸರ್ಗಚಿಕಿತ್ಸೆಯಷ್ಟು ಸುಲಭವಾದ ಚಿಕಿತ್ಸೆ ಇದ್ದರೂ ನಾವು ಡಾಕ್ಟರರ, ವೈದ್ಯರ ಹಿಂದೆ ಹೋಗುವುದು ಆಶ್ಚರ್ಯ."

ನಿಸರ್ಗಚಿಕಿತ್ಸೆಯ ಶಕ್ತಿಯನ್ನು ಗಾಂಧೀಜಿ ಈ ಮಾತುಗಳ ಮೂಲಕ ವ್ಯಕ್ತ

ಪಡಿಸಿದರು: "೧೦೦೦ದಲ್ಲಿ ೯೯೯ 'ಕೇಸು'ಗಳನ್ನು ಕೂಡಾ ಮಣ್ಣು, ನೀರು, ನಿಯಮಿತ ಆಹಾರ ಇತ್ಯಾದಿಗಳಿಂದಲೇ ಗುಣಪಡಿಸಬಹುದು. ಪ್ರತಿಯೊಂದು ಚಿಕ್ಕ ಕಾಯಿಲೆಗೂ ಡಾಕ್ಟರು, ವೈದ್ಯ, ಹಕೀಮರೆಂದು ಓಡಿಕೊಂಡು ಅವರು ಕೊಡುವ ಏನೋ ಮದ್ದುಗಳನ್ನೂ ಸಸ್ಯಗಳನ್ನೂ ನುಂಗಿಕೊಂಡು ಆಯುಷ್ಯ ಕಳಕೊಳ್ಳುವರಿದ್ದಾರೆ. ಹಾಗೆ ನುಂಗುವವರು ದೇಹದ ಒಡೆಯರಾಗುವ ಬದಲಾಗಿ ದಾಸರಾಗುತ್ತಾರೆ; ಆತ್ಮಶಕ್ತಿಯನ್ನು ಕಳೆದುಕೊಂಡು ಮನುಷ್ಯತ್ವವನ್ನೇ ಇಲ್ಲದಂತೆ ಮಾಡುತ್ತಾರೆ."

ಹಾಗಿದ್ದರೆ ನಾವು ಯಾಕೆ ಬಲುಕಷ್ಟದಿಂದ ವೈದ್ಯಕೀಯ ವಿದ್ಯೆ ಕಲಿಯಬೇಕೆಂದು ಹಲವರು ಕೇಳಬಹುದು. ಗಾಂಧೀಜಿಯ ಅಭಿಪ್ರಾಯ ಹೀಗಿದೆ: "ನಾವು ವೈದ್ಯಕೀಯ ಕಲಿಯುವುದು ಏಕಾಗಿ ಎಂಬುದನ್ನು ನೋಡಬೇಕು. ದೇಶಸೇವೆಗಾಗಿ ಅಲ್ಲವೆಂಬುದು ನಿಶ್ಚಯ. ಕೇವಲ ಹಣ ಮತ್ತು ಹೆಸರಿಗಾಗಿ. ವೈದ್ಯಕೀಯ ವೃತ್ತಿಯಲ್ಲಿ ನಿಜವಾದ ಸೇವೆಯೇ ಇಲ್ಲ. ಮಾತ್ರವಲ್ಲ, ಅದು ಜನತೆಗೆ ಹಾನಿಕಾರಕವಾದುದು. ಡಾಕ್ಟರರು ಇಲ್ಲದ ಜ್ಞಾನವನ್ನು ತೋರಿಸಿಕೊಂಡು, ಅತೀವ ಹಣ ಕಸಿದುಕೊಂಡು ತಿಳಿಯದ ಜನರನ್ನು ವಂಚಿಸುತ್ತಾರೆ."

**ನಿಸ್ವಾರ್ಥ ಸೇವೆ:** ನಿಜವಾದ ನಿಸ್ವಾರ್ಥ ಸೇವೆಯ ದೃಷ್ಟಿಯಿಂದ ಮುಂದೆ ಬಂದಿರುವ ಒಂದೇ ಒಂದು ವಿಧಾನವೆಂದರೆ ನಿಸರ್ಗಚಿಕಿತ್ಸೆ" ಎಂಬುದಾಗಿ ಗಾಂಧೀಜಿ ಸಾರಿ, ಈ ಚಿಕಿತ್ಸೆಯನ್ನು ಜನರಲ್ಲಿ ಪ್ರಚಾರಮಾಡಲು ನಮ್ಮ ಡಾಕ್ಟರರು ಮುಂದಾಗಬೇಕೆಂದೂ ನಿಸರ್ಗಚಿಕಿತ್ಸಕ ಡಾಕ್ಟರರ ಸಂಖ್ಯೆ ನಮ್ಮಲ್ಲಿ ಬೆಳೆಯಬೇಕೆಂದೂ ಆಶಿಸಿದರು.

**ಅಣು ಯುದ್ಧ ವ್ಯರ್ಥ:** ರೋಗಗಳು ಅಣುಜೀವಿಗಳಿಂದ ಉಂಟಾಗುತ್ತವೆಂಬ ಆಧುನಿಕ ವೈದ್ಯಶಾಸ್ತ್ರದ ಅಣುಸಿದ್ಧಾಂತವು ಗಾಂಧೀಜಿಯ ಮೆಚ್ಚುಗೆ ಪಡೆಯಲಿಲ್ಲ. ರೋಗ ಕಾರಣದ ಕುರಿತು ಅವರ ಕಲ್ಪನೆ ಏನೆಂದು ನೋಡಿದ್ದೇವೆ —ಕಲ್ಮಶ ಸಂಗ್ರಹ. ಕಲ್ಮಶ ಸಂಗ್ರಹವಾಗಲು ಮುಖ್ಯವಾಗಿ ಬೇಕಾದುದಕ್ಕಿಂತ ಹೆಚ್ಚು ಆಹಾರ ಸೇವಿಸುವುದು ಕಾರಣವೆಂದು ಗಾಂಧೀಜಿ ಮನಗಂಡಿದ್ದರು. ಗಾಂಧೀಜಿಯ ದೃಷ್ಟಿಯಲ್ಲಿ ಶರೀರ ರಕ್ಷಣೆಗೆ ಬೇಕಾದುದಕ್ಕಿಂತ ಹೆಚ್ಚು ಆಹಾರ ಸೇವಿಸುವುದು ಮಹಾ ಪಾಪಕರ್ಮ. "ಹೇಗೆ ದೇಹರಕ್ಷಣೆಗಾಗಿ ಉಸಿರಾಡುವೆವೋ ಹಾಗೆಯೇ ಆಹಾರಸೇವನೆಯಾದರೂ ಶರೀರ ರಕ್ಷಣೆಗಾಗಿ—ರುಚಿಗಾಗಿ ಅಲ್ಲ" ಎಂದರು. "ರುಚಿಯನ್ನು ಹತೋಟಿಗೆ ತಾರದವನು ಇನ್ನೇನನ್ನೂ ಮಾಡಲಾರನು" ಎಂದು ಸಾರಿದರು. ಯಾವ ರೋಗವೇ ಇದ್ದರೂ ಅದು ಇಂತಹ ಪಾಪಕರ್ಮಗಳ ಫಲವಂತೆ. ಒಂದು ಸೀನು, ಕೆಮ್ಮು ಕೂಡಾ ಯಾವುದೋ ಒಂದು ಪಾಪಕರ್ಮದ ಪರಿಣಾಮವೇ ವಿನಾ ಯಾವ ರೋಗವೂ ಬಾಹ್ಯ ಅಣುಜೀವಿಗಳ ಸ್ಪರ್ಶದಿಂದ ಬರಲಾರದು ಎಂಬುದು ಅವರ ಕಲ್ಪನೆ. ಆದ್ದರಿಂದ ರೋಗ ಬಂದಾಗ

ಆಹಾರ ವಿಹಾರಗಳನ್ನು ಸರಿಗೊಳಿಸದೇ ಸುಮ್ಮನೆ ಅಣುಜೀವಿಗಳನ್ನು ಬೇಟೆಯಾಡುವುದು ಕೇವಲ ವ್ಯರ್ಥಾಲಾಪ. ಅಣುಸಿದ್ಧಾಂತವು ಟೊಳ್ಳೆಂದು ತಿಳಿದುದರಿಂದಲೇ ಗಾಂಧೀಜಿ ಎಂದೂ ಅಣುಗಳ ಮೂಲಕ ರೋಗ ಹರಡೀತೆಂಬ ಎಚ್ಚರಿಕೆಗೆ ಗಮನ ಕೊಟ್ಟವರಲ್ಲ. ಡಾಕ್ಟರರು ಕಣ್ಣು ಮೂಗುಗಳನ್ನು ಮುಚ್ಚಿಕೊಂಡು ಭಾರಿಭಾರಿ ಕ್ರಿಮಿನಾಶಕ ವ್ಯವಸ್ಥೆಯಲ್ಲಿ ಇದ್ದಾಗಲೂ ಗಾಂಧೀಜಿ ಅವೊಂದೂ ಇಲ್ಲದೆ ರೋಗೀ ಜನರು ತನ್ನ ಅಪ್ತ ಸಹೋದರರೆಂಬಂತೆ ಮಹಾಮಹಾ ರೋಗವುಳ್ಳವರನ್ನೂ ಬರಿ ಕೈಯಿಂದ ಬೆನ್ನು ಚಪ್ಪರಿಸಿ ಸಮಜಾಯಿಸಿ ಶುಶ್ರೂಷೆಗೈದರು. ರೋಗಿಯಾಗಿರಲಿ ಇತರರಾಗಿರಲಿ, ಪರಸ್ಪರ ಹೃದಯಗಳನ್ನು ದೂರಮಾಡುವ ಯಾವುದೇ ವಿಧಾನವು ಮಾನವಸಮಾಜಕ್ಕೆ ಯೋಗ್ಯವಲ್ಲ; ಮಾನವಸಮಾಜವು ಸಹೋದರತಾ ಸಾಮ್ರಾಜ್ಯ ಎಂದು ಗಾಂಧೀಜಿ ಸ್ಪಷ್ಟವಾಗಿ ಹೇಳಿಬಿಟ್ಟರು.

**ಆಶ್ರಮದಲ್ಲಿ:** ಗಾಂಧೀಜಿಯ ಆಶ್ರಮದಲ್ಲಿ ಒಬ್ಬನನ್ನೂ ಬಿಡದೆ ನಿಸರ್ಗ ಚಿಕಿತ್ಸೆಯ ಯಾವತ್ತೂ ಸೇವೆ ಸಂದಿತ್ತು. ಮಣ್ಣಿನ ರೊಟ್ಟಿ ಅಲ್ಲಿನ ಭಾರೀ ತಲೆಗಳ ಮೇಲಕ್ಕೂ ಏರುವಷ್ಟು ಪುಣ್ಯ ಪಡೆದಿತ್ತು. ಎಷ್ಟೋ ಸಾರಿ ಆಪ್ತರನೇಕರು ಸನ್ನಿಪಾತದಂತಹ ವಿಪತ್ತುಗಳಿಗೆ ಗುರಿಯಾದಾಗಲೂ ಗಾಂಧೀಜಿ ಯಾವ ಡಾಕ್ಟರರನ್ನೂ ಮುಟ್ಟಲು ಬಿಡಲಿಲ್ಲ. ತಾವೇ ಸ್ವತಃ ಚಿಕಿತ್ಸೆ ನಡೆಸಿದರು.

**ಗಾಂಧೀಜಿ ಡಾಕ್ಟರರಾದುದು:** ಗಾಂಧೀಜಿ ಆ ವರೆಗೆ ನಿಸರ್ಗಚಿಕಿತ್ಸೆಯನ್ನು ತಮ್ಮ ಸ್ವಂತದ ಮೇಲೆ ಪ್ರಯೋಗಿಸುತ್ತಿದ್ದರಲ್ಲದೆ ಇತರರ ಮೇಲೆ ಪ್ರಯೋಗಿಸಿರದೆ ಮೊದಲ ಬಾರಿ ಅವರು ಹಾಗೆ ಪ್ರಯೋಗಿಸಿ "ಡಾಕ್ಟರು" ಎನಿಸಿಕೊಂಡ ಘಟನೆಯೊಂದನ್ನು ಹೇಳುತ್ತೇನೆ. ಒಂದು ಬಾರಿ ಗಾಂಧೀಜಿಯ ದ್ವಿತೀಯ ಪುತ್ರ, ಆಗ ೧೦ ವರ್ಷದ ಹುಡುಗ, ಕಠಿಣ ಸನ್ನಿಪಾತಕ್ಕೆ ಗುರಿಯಾದ. ನ್ಯೂಮೋನಿಯಾವೂ ಇತ್ತು, ರಾತ್ರಿ ಹುಚ್ಚುಚ್ಚಾಗಿ ಮಾತನಾಡುತಿದ್ದ. ಗಾಂಧೀಜಿ ಯೋಚಿಸಿದರು. ಸನ್ನಿಪಾತಕ್ಕೂ ನಿಸರ್ಗಚಿಕಿತ್ಸೆ ಸಫಲವಾದೀತೆಂದು ತೋರಲಿಲ್ಲ. ಡಾಕ್ಟರರನ್ನು ಕರೆತಂದರು.

ಮೊಟ್ಟೆ ಮತ್ತು ಹಾಲು ಕೊಡುವುದು ಅಗತ್ಯವೆಂದು ಡಾಕ್ಟರರು ಅಭಿಪ್ರಾಯವಿತ್ತರು. ಆದರೆ, ಗಾಂಧಿಯವರು ಶಾಖಾಹಾರಿ. ಶಾಖಾಹಾರಿ ಜಾತಿ ಮಾತ್ರವಲ್ಲ, ವ್ರತವನ್ನೂ ಹಿಡಿದಿದ್ದರು. ಹಾಗಾಗಿ ಡಾಕ್ಟರರ ಈ ಸಲಹೆಗೆ ಮನ್ನಣೆಕೊಡುವುದು ಸಾಧ್ಯವಿರಲಿಲ್ಲ.

ಗಾಂಧೀಜಿಗೆ ಲೂಯಿ ಖೂನೆಯವರ ಜಲಚಿಕಿತ್ಸೆಯದ್ದು ಸಾಕಷ್ಟು ಪರಿಚಯವಿತ್ತು. ಹುಡುಗನಿಗೂ ಇದನ್ನೇ ಮಾಡಿದರೇನಂತೆ ಎನಿಸಿತು. ಒಡನೆ ಪ್ರಾರಂಭಿಸಿದರು. ಸ್ನಾನವೂ ಉಪವಾಸವೂ ಮುಂದುವರಿಯಿತು. ಮೂರು ದಿನ ಆಹಾರ ಕಿತ್ತಳೆಹಣ್ಣಿನ ರಸ ಮಾತ್ರ. ಆದರೆ ಜ್ವರ ೧೦೪ ಡಿಗ್ರಿಗೆ ಏರಿತು. ಹಾಗಾದೀತೆಂದು ಗಾಂಧೀಜಿ ಎಣಿಸಿರಲಿಲ್ಲ. ರಾತ್ರಿ ಜ್ವರವು ಮೇಲೇರಿ, ಮನೋಭ್ರಮಣೆ ಮಾತು

ಕೂಡಾ ಹೆಚ್ಚಾದುದು ಕಂಡುಬಂತು. ಗಾಂಧೀಜಿಗೆ ಸ್ವಲ್ಪ ಕುತೂಹಲವುಂಟಾಯಿತು. ತುಸು ಭಯವೂ ಬಂತು. ಜನರು ನನ್ನನ್ನು ಏನೆಂದಾರು? ನನ್ನ ಅಣ್ಣ ನನ್ನ ಕುರಿತು ಏನು ತಿಳಿದುಕೊಂಡಾರು? ಬೇರೆ ಡಾಕ್ಟರರನ್ನಾದರೂ ಕರೆಸಬಾರದಿತ್ತೇ? ಆಯುರ್ವೇದ ಪಂಡಿತನಾಗಬಹುದಿತ್ತಲ್ಲ? ತಮ್ಮ ಮಕ್ಕಳ ಮೇಲೆ ತಮ್ಮ ಹುಚ್ಚುತನಗಳನ್ನು ಹೇರಲು ಹೆತ್ತವರಿಗೆ ಏತರ ಅಧಿಕಾರ?

ಗಾಂಧೀಜಿಯವರ ಮೆದುಳಲ್ಲಿ ಈ ರೀತಿಯ ವಿಚಾರಗಳು ಸುತ್ತತೊಡಗಿದುವು. ಅವರು ಏನು ಮಾಡಬೇಕು? ಕೊನೆಗೆ ನಿರ್ಧರಿಸಿದರು: "ನಾನು ನನ್ನ ಮಟ್ಟಿಗೆ ಅನುಸರಿಸುವ ಚಿಕಿತ್ಸೆಯನ್ನು ಮಗನಿಗೂ ಮಾಡಿದರೆ ಪರಮಾತ್ಮನು ಖಂಡಿತವಾಗಿಯೂ ಮೆಚ್ಚುತ್ತಾನೆ. ನನಗೆ ನಂಬುಗೆ ಜಲಚಿಕಿತ್ಸೆಯಲ್ಲಿ; ಎಲೋಪೆಥಿಯಲ್ಲಿಲ್ಲ. ಡಾಕ್ಟರರಾದರೂ ಸ್ಪಷ್ಟವಾಗಿ ಭರವಸೆಕೊಡಲು ಶಕ್ತರಾಗಿಲ್ಲ. ಹೆಚ್ಚೆಂದರೆ ಅವರೂ ಮಾಡುವುದು ಪ್ರಯೋಗ ನಡೆಸುವಂಥಾದ್ದು. ಹೇಗೂ ಜೀವದ ಕೊನೆಯ ಸೂತ್ರವು ಪರಮಾತ್ಮನ ಕೈಯಲ್ಲಿರುವಾಗ ಅವನನ್ನೇ ನಂಬಿ ನಾನು ಸರಿಯೆಂದು ತಿಳಿದಿರುವ ಚಿಕಿತ್ಸೆಯನ್ನೇ ಯಾಕೆ ಮಾಡಬಾರದು?"

ಈ ದ್ವಂದ್ವವಿಚಾರದಲ್ಲಿ ಗಾಂಧೀಜಿ ಸಿಲುಕಿದರು. ಆಗ ರಾತ್ರೆ. ಗಾಂಧೀಜಿ ಮಣಿಲಾಲನ ಮಗ್ಗುಲಲ್ಲೇ ಮಲಗಿದ್ದರು. ಅವರು ಒಂದು ಒದ್ದೆಬಟ್ಟೆಯ ಪಟ್ಟಿ (Pack) ಮಾಡಿ ಅವನ ದೇಹಕ್ಕೆ ಸುತ್ತಲು ನಿರ್ಧರಿಸಿದರು. ಒದ್ದೆ ಪಟ್ಟಿಯು ಕೂನೆ ಹೇಳುವ ಜಲಚಿಕಿತ್ಸೆಯ ಒಂದು ವಿಧಾನ. ಗಾಂಧೀಜಿ ದೊಡ್ಡದೊಂದು ಬಟ್ಟೆಯನ್ನು ತಣ್ಣೀರಲ್ಲಿ ಅದ್ದಿ, ಹಿಂಡಿ, ಇಡೀ ದೇಹದ ಮೇಲೆ ಮುಖ ಮಾತ್ರ ಬಿಟ್ಟು ಸುತ್ತಿದರು. ದೇಹವು ಕಾದ ಕಬ್ಬಿಣದಂತೆ ಸುಡುತಿತ್ತು. ಬೆವರು ಇರಲಿಲ್ಲ.

ಗಾಂಧೀಜಿ ಬಲು ದಣಿದಿದ್ದರು. ಮಣಿಲಾಲನನ್ನು ಆವನ ತಾಯಿಯ ವಶ ಒಪ್ಪಿಸಿ ಹೊರಬಯಲಲ್ಲಿ ದಣಿವಾರಿಸಿಬರಲು ಹೊರಟರು. ಆಗ ರಾತ್ರೆ ೧೦ ಗಂಟೆಯಾಗಬಹುದು. ಬಯಲಲ್ಲಿ ಜನಸಂಚಾರ ಕಡಮೆಯಾಗಿತ್ತು. ಗಾಂಧೀಜಿ ಅದೊಂದನ್ನೂ ನೋಡಲಿಲ್ಲ. ರಾಮನಾಮ ಧ್ಯಾನಮಾಡುತ್ತಾ "ಹೇ ಹರಿ, ನನ್ನ ಮಾನಾಪಮಾನವೆರಡೂ ನಿನ್ನ ಕೈಯಲ್ಲಿದೆ; ಈ ಪರೀಕ್ಷಾ ಕಾಲದಲ್ಲಿ ರಕ್ಷಿಸಲಾರೆಯಾ?" ಎಂದು ಬೇಡಿಕೊಂಡರು. ಸಂಪೂರ್ಣ ನಿರಾಶೆಯಲ್ಲಿ ಪುನಃ ಹಿಂದುರಿಗಿದರು.

"ಬಂದೆಯಾ ತಾತಾ?" ಮಣಿಲಾಲ್ ಕೇಳಿದನು.

"ಹೌದು ಮಗೂ."

"ದಯಮಾಡಿ ನನ್ನನ್ನು ಹೊರಗೆ ತೆಗೆ. ಸುಡುತ್ತಿದೆ."

"ಬೆವರಿದೆಯೋ ಮಗು?"

"ಪೂರ್ಣ ಒದ್ದೆಯಾದೆ ತಾತ, ದಯಮಾಡಿ ಹೊರಗೆ ತೆಗೆ."

ಗಾಂಧೀಜಿ ಹುಡುಗನ ಹಣೆಯ ಮೇಲೆ ಕೈಯಿರಿಸಿ ನೋಡಿದರು. ಬೆವರ ಹನಿಗಳಿದ್ದುವು. ಉಷ್ಣತೆ ಇಳಿಯುತ್ತಿತ್ತು. ಗಾಂಧೀಜಿಗೆ ಉಸಿರು ಬಂತು. ಮತ್ತೊಮ್ಮೆ ದೇವರನ್ನು ಸ್ಮರಿಸಿಕೊಂಡರು. ಜ್ವರ ಬರುವ ರೋಗಿಗಳಿಗೆ ಬೆವರು ವಂತೆ ಮಾಡುವುದು ಅತಿ ಪ್ರಾಮುಖ್ಯವೆಂದು ಖೂನೆ ಹೇಳುತ್ತಾನೆ. ಬೆವರುತ್ತಿದೆ ಯಾದರೆ ಗುಣವಾದೀತು, ಅಲ್ಲವಾದರೆ ಕಠಿಣಸ್ಥಿತಿಯೆಂದು ತಿಳಿಯಬೇಕು ಎನ್ನು ತ್ತಾನೆ ಖೂನೆ. ಬೆವರ ಹನಿ ಕಂಡಾಗ ಗಾಂಧೀಜಿಗೆ ಸಮಾಧಾನ ಬಂದುದರ ಕಾರಣ ಅಷ್ಟೆ.

"ಮಣಿಲಾಲ್, ನಿನ್ನ ಜ್ವರ ಇನ್ನು ಖಂಡಿತವಾಗಿ ಗುಣವಾಗುತ್ತದೆ. ಇನ್ನು ತುಸು ಬೆವರಲಿ, ಅನಂತರ ತೆಗೆಯುತ್ತೇನೆ."

"ಬೇಡ ತಾತ, ಈಗಲೇ ತೆಗೆ. ಈ ಕುಲುಮೆಯಲ್ಲಿ ಬೇಯುತ್ತಿದ್ದೇನೆ. ಬೇಕಾ ದರೆ ಇನ್ನು ಯಾವಾಗಲಾದರೂ ಪುನಃ ಸುತ್ತುವೆಯಂತೆ."

ಹೇಗೂ ಹುಡುಗನ ಮನಸ್ಸು ಬೇರೆ ಕಡೆಗೆ ಸೆಳೆದು ಕೆಲವು ನಿಮಿಷ ಕಳೆದರು. ಬೆವರು ಹಣೆಯಿಂದ ಧಾರೆಯಾಗಿ ಇಳಿಯತೊಡಗಿತು. ಈಗ ಬಿಡಿಸಿ ಮೈ ಒರಸಿ ದರು. ಹುಡುಗ ಸುಖವಾಗಿ ನಿದ್ರಿಸಿದ. ಗಾಂಧೀಜಿಯೂ ಅದೇ ಚಾಪೆಯಲ್ಲಿ ನಿದ್ರಿಸಿಕೊಂಡರು.

ತಂದೆ ಮತ್ತು ಮಗ ಇಬ್ಬರೂ ಕೊಳ್ಳಿಯಂತೆ ನಿದ್ರಿಸಿದರು. ಮೂರನೆಯ ದಿನ ಜ್ವರ ಇಳಿದಿತ್ತು. ನಲುವತ್ತು ದಿನಗಳ ವರೆಗೆ ಹಾಲು ಮತ್ತು ಹಣ್ಣಿನ ರಸ ಮಾತ್ರ ಆಹಾರ. ಚಿಕಿತ್ಸೆ ಮುಂದುವರಿಯಿತು. ಈಗ ಗಾಂಧೀಜಿಗೆ ಪೂರ್ಣ ಧೈರ್ಯ ಬಂದಿತ್ತು........"ಈಗ ನನ್ನ ಮಕ್ಕಳಲ್ಲೆಲ್ಲ ಮಣಿಲಾಲನೇ ಆರೋಗ್ಯ ವಂತನು" ಎಂದು ಅನಂತರ ಒಂದು ಬಾರಿ ಗಾಂಧೀಜಿ ಶಿಫಾರಸು ಮಾಡಿದ್ದರು.

ಈ ಘಟನೆಯು ನನ್ನ ಅನುಭವದ ಇನ್ನೊಂದು ಘಟನೆಯನ್ನು ನೆನಪಿಗೆ ತರು ತ್ತದೆ. ಇದೂ ಇದೇ ರೀತಿಯದು. ಗಾಂಧೀಜಿ ಹೇಳುವ ಪ್ರಯೋಗಗಳು ಹೇಗೆ ನಮ್ಮ ನಿತ್ಯಜೀವನಕ್ಕೂ ಅನ್ವಯಿಸತಕ್ಕವುಗಳೆಂಬುದನ್ನು ಸೂಚಿಸುವುದಕ್ಕಾಗಿ ಅದನ್ನು ಇಲ್ಲಿ ಕೊಡಬಯಸುತ್ತೇನೆ.

ನನ್ನ ತಂಗಿ ವೇದಾವತಿಗೆ ಆಗ ೫ ವರ್ಷ. ಇದು ಇಂದಿಗೆ ಸುಮಾರು ೧೬–೧೭ ವರ್ಷಗಳ ಹಿಂದೆ ಜ್ವರ ಪ್ರಾರಂಭವಾಯಿತು. ಈ ಮೊದಲೇ ನನ್ನ ತೀರ್ಥ ರೂಪರು, ಶ್ರೀ। ಮುರಕ್ಕಿಣಿ ಗೋವಿಂದ ಭಟ್ಟರು ತಮ್ಮ ಮಟ್ಟಿಗೆ ನಿಸರ್ಗಚಿಕಿತ್ಸೆ ಯನ್ನನುಸರಿಸಿ ತುಂಬಾ ಗುಣಪಡೆದಿದ್ದರು. ಯಾವುದೇ ರೋಗಕ್ಕೂ ಈ ಚಿಕಿತ್ಸೆ ಹಿಡಿದೀತೆಂಬ ವಿಶ್ವಾಸ ಅವರಲ್ಲಿ ಉಂಟಾಗಿತ್ತು. ಆದರೆ ಮನೆಯ ಇತರ ಹಿರಿಯ ರಿಗೂ ಹೆಮ್ಮಕ್ಕಳಿಗೂ ಅಂತಹ ವಿಶ್ವಾಸ ಬಂದಿರಲಿಲ್ಲ. ಆದ್ದರಿಂದ ಮಗುವಿಗೆ ಯಾವ ಚಿಕಿತ್ಸೆ ಮಾಡಿಸಬೇಕೆಂಬ ಕುರಿತು ಭಿನ್ನಾಭಿಪ್ರಾಯ ಬಂತು. ನಿಸರ್ಗಚಿಕಿ ತ್ಸೆಯೋ, ಮದ್ದೋ? ಅಂತೂ ಹೆಚ್ಚಾಗಿ ಎಲ್ಲಾ ಕಡೆಗಳಲ್ಲಿಯೂ ಆಗುವಂತೆ

ಇಲ್ಲಿಯೂ ಹೆಮ್ಮಕ್ಕಳೇ ಮೇಲ್ಗೈ ಪಡೆದರು. ವೈದ್ಯರೊಬ್ಬರ ಆಗಮನವೂ ಆಯಿತು ಯಥಾವತ್ತಾಗಿ ಚಿಕಿತ್ಸೆ ನಡೆಯಿತು. ಜ್ವರ ಏರಿದ್ದು ವಿನಾ ಇಳಿಯ ಲಿಲ್ಲ. ಮತ್ತೂ ಮದ್ದು ಕುಡಿಸಿದರು. ಮಗು ಬಲು ಕ್ಷೀಣವಾಯಿತು. ಒಂದು ವಾರದಲ್ಲಿ, 'ಸನ್ನಿಪಾತ' ಎಂದು ವೈದ್ಯರೆಂದರು. ಅನಂತರ ಇನ್ನೊಬ್ಬ ನುರಿತ ಡಾಕ್ಟರರ ಸೇವೆಯೂ ಸಂದಿತು. ಪ್ರಯೋಜನವಾಗಲಿಲ್ಲ. ನಾಲ್ಕಾರು ದಿನಗಳಲ್ಲಿ ಹುಡುಗಿ ಒಣಗಿ ಕಡ್ಡಿಯಂತಾದಳು. ಬಲು ಆಯಾಸ, ಅತಿ ಬಾಯಾರಿಕೆ ಹೀಗೇ ಮುಂದುವರಿದು, ಕೊನೆಗೆ ಸ್ಮೃತಿ ತಪ್ಪಿತು. ಮಲಮೂತ್ರಗಳೆಲ್ಲಾ ಇಂದ್ರಿಯ ಜ್ಞಾನವೇ ಇಲ್ಲದೆ ಹೋಗುತ್ತಿದ್ದುವು. ಜ್ವರ ೧೦೫ ಡಿಗ್ರಿಯಲ್ಲಿ ಬಿಡದೇ ಬರುತ್ತಿತ್ತು. ಎರಡು ವಾರ ಕಳೆಯಿತು. ಒಂದು ದಿನ ರಾತ್ರಿ ಪರಿಸ್ಥಿತಿ ಚಿಂತಾಜನಕವಾಯಿತು. ಮಗುವಿಗೆ ಮೂರ್ಛೆ ಇಲ್ಲ, ಮಲದಲ್ಲಿ ಮಾಂಸವೇ ಹೋಗುತ್ತಿತ್ತು; ಮಹಾದುರ್ವಾಸನೆ. ಉಸಿರು ಮಾತ್ರ ಸೂಕ್ಷ್ಮವಾಗಿ ಹರಿಯುತ್ತಿತ್ತು. ತೀರ್ಥರೂಪರಿಗೆ ಇದನ್ನು ನೋಡಿ ಹೃದಯ ಕರಗಿತು. ಮಗುವು ಸಾವನ್ನು ಸಮೀಪಿಸುತ್ತಿದೆಯೆಂದು ಅವರಿಗೆ ನಿರ್ಧಾರವಾಯಿತು. ಅವರ ಕಣ್ಣಿನಿಂದ ಎರಡು ಹನಿಗಳುದುರಿದುವು. "ನಿರಪರಾಧಿ ಮಗುವನ್ನು ಈ ರೀತಿಯಲ್ಲಿ ಔಷಧಿ ಕುಡಿಯಿಸಿ ಕೊಲ್ಲುವಂತಾಯಿತೇ ಪರಮಾತ್ಮ!" ಎಂದು ಅವರಿಗೆ ತೋರಿರಬೇಕು. ಏನನ್ನೂ ಹೇಳದೆ ನೇರಾಗಿ ಹೊರನಡೆದು ಅಂಗಳದಲ್ಲಿ ಮಲಗಿಕೊಂಡರು. ನಿಸರ್ಗಚಿಕಿತ್ಸೆಯು ಮಗುವನ್ನು ಬದುಕಿಸುತ್ತಿತ್ತೆಂದು ಅವರಿಗೆ ಖಂಡಿತವಾಗಿ ಗೊತ್ತಿತ್ತು. ಆದರೆ, ಇತರರೆಣಿಕೆಯಲ್ಲಿ ಅವರೊಬ್ಬರೇ ಆಗಿದ್ದುದರಿಂದ ಬತ್ತಳಿಕೆಯಲ್ಲಿ ಬ್ರಹ್ಮಾಸ್ತ್ರವಿದ್ದರೂ ಆಪತ್ಕಾಲದಲ್ಲಿ ಪ್ರಯೋಗಿಸಲಾರದವರಂತೆ ನಿರುಪಾಯರಾಗಿ ಮಲಗಿಕೊಂಡರು. ಹೆಮ್ಮಕ್ಕಳಿಗೂ ತೀರ್ಥರೂಪರ ಕಣ್ಣೀರಿನ ಅರ್ಥವಾಯಿತು. ಮಗುವನ್ನು ಸುತ್ತುಗಟ್ಟಿ ಕಣ್ಣೀರಿಟ್ಟು ಕೂಗಿದರು. ಏನು ಪ್ರಯೋಜನ? ಮಗು ಮೂರ್ಛೆತಪ್ಪಿ ಬಿದ್ದಿತ್ತು. ಕೊನೆಗಂತೂ ಕಡೇ ಯತ್ನವಾಗಿ ನಿಸರ್ಗಚಿಕಿತ್ಸೆಯನ್ನು ಮಾಡಬಹುದಿತ್ತೆಂದು ಎಲ್ಲರೂ ಒಪ್ಪಿದರು. ಆದರೆ, ಈಗ ಸಮಯ ಮೀರಿಹೋಗಿತ್ತು. ಆದರೂ ಬದುಕುವ ಆಸೆ ಇಲ್ಲವಾದರೂ ನೀರು ಕೂಡಾ ಕೊಡದೆ ಕೊಲ್ಲುವುದು ಬೇಡ, ಸಾಯುವ ಕಾಲಕ್ಕೆ ನೀರಾದರೂ ಕೊಡಬಹುದಲ್ಲ—ಎಂದು ರೋಗಿಯ ಬಾಯಿಗೆ ಎರಡು ಹನಿ ತಣ್ಣೀರು ಕೊಟ್ಟೆವು. ಕಿಬ್ಬೊಟ್ಟೆಗೆ ಒದ್ದೆ ಬಟ್ಟೆಯ ಬೇಂಡೇಜೂ ಆಯಿತು. ಹುಡುಗಿಗೆ ಮೂರು ದಿನದಿಂದ ಸಹಿಸಲಾರದ ಬಾಯಾರಿಕೆಯಿತ್ತು. ದಿನವಿಡೀ "ನೀರು, ನೀರು" ಎಂದು ಜಪಿಸುತಿದ್ದಳು. ಆದರೆ, ನೀರು ಮುಟ್ಟಕೂಡದೆಂದು ಡಾಕ್ಟರರ ಅಪ್ಪಣೆಯಿತ್ತು. ಈಗ ನೀರು ಕುಡಿಯಲು ಕೊಟ್ಟು ಹತ್ತು ಹದಿನೈದು ನಿಮಿಷಗಳಲ್ಲಿ ಹುಡುಗಿ ಕಣ್ಣು ತೆರೆದಳು. ಆಗ ರಾತ್ರೆ. ಬೆಳಗಾಗುವ ಮೊದಲು ಟಬ್ಬಿನಲ್ಲಿ ತಣ್ಣೀರು ತುಂಬಿಸಿ ನಾಲ್ಕಾರು ಸಾರಿ ಕಟಿಸ್ನಾನಮಾಡಿಸಿದೆವು. ಹೀಗೆಯೇ ಮೂರು ದಿನ ಮಾಡಿದಾಗ ಜ್ವರ ಹಿಂದೆ ಸರಿಯಿತು. ಹುಡುಗಿ ಸುಧಾರಿಸಿದಳು. ಒಂದೆರಡು ವಾರದಲ್ಲಿ ಸಂಪೂರ್ಣ ಚೇತರಿಸಿಕೊಂಡಳು.

ಅಂದಿನಿಂದ ಇಂದಿನ ವರೆಗೆ ನಾವು ನೂರಾರು ರೋಗಿಗಳನ್ನು ಇದೇ ಚಿಕಿತ್ಸೆಯ ಮೂಲಕ ಗುಣಮಾಡಿದ್ದೇವೆ. ನಾವೇನೂ ವೈದ್ಯಕೀಯ ಕಲಿತವರಲ್ಲ. ಎಷ್ಟೋ ಡಾಕ್ಟರರು 'ಅನಿವಾರ್ಯ,' 'ಅಸಾಧ್ಯ,' 'ಗುಣವಾಗದು'—ಎಂದು ತ್ಯಜಿಸಿದ್ದ ರೋಗಿಗಳನ್ನು ಸಂಪೂರ್ಣ ಗುಣಪಡಿಸಿದ್ದೇವೆ. ಕ್ಷಯ, ಕೇನ್ಸರ್, ವಾತ, ಆಸ್ತ್ಮ, ಸ್ಖಲನ ಇತ್ಯಾದಿಗಳೂ ಗುಣವಾಗಿವೆ. ಹೆರಿಗೆ ಬಾಣಂತಿತನಗಳು ಒಂದಿಷ್ಟು ಕಷಾಯ, ಕಹಿ, ಮದ್ದು ಯಾವುದೂ ಇಲ್ಲದೆ ಬರೇ ಮಣ್ಣು, ನೀರುಗಳ ಸಹಾಯದಿಂದ ಎಷ್ಟೋ ಆಗಿ ಕಳೆದಿವೆ. (ಇವೆಲ್ಲವುಗಳ ಕುರಿತು ಇಲ್ಲಿ ಹೇಳಲು ಇದು ಜಾಗವಲ್ಲ. ನನ್ನ ಪುಸ್ತಕದಲ್ಲಿ ವಿವರವಾಗಿ ಹೇಳಿದ್ದೇನೆ.)

**ಕಸ್ತೂರಬಾರವರ ಮೇಲೆ ಬಲವಂತ:** ಗಾಂಧೀಜಿಯವರ 'ರಾಮಬಾಣ' ಪ್ರಯೋಗ ಕಸ್ತೂರಬಾರವರ ಮೇಲೂ ನಡೆದಿತು. ಗಾಂಧೀಜಿಗೆ ನಿಸರ್ಗಚಿಕಿತ್ಸೆಗೆ ಆ ಹೆಸರಿಗಿಂತ ರಾಮಬಾಣವೆಂಬ ಹೆಸರಲ್ಲಿ ಮೆಚ್ಚುಗೆ.

ಕಸ್ತೂರಬಾಗೆ ಗಾಂಧೀಜಿಯ ಈ ಮಣ್ಣು ನೀರುಗಳ ಹುಚ್ಚಾಟಿಕೆ ಹಿಡಿಸುತ್ತಿರಲಿಲ್ಲ. ಆಫೀಸಿನಲ್ಲಿ ಕುಳಿತಿರುವಾಗಲೂ ತಲೆಗೆ ಮಣ್ಣು ಮೆತ್ತಿಕೊಳ್ಳುವುದು ಹುಚ್ಚು ಎಂದು ಅವರು ತಿಳಿಯುತ್ತಿದ್ದರು. ಅದರಲ್ಲೂ ಯಾರಾದರೂ 'ನಂಬ್ರ'ದ ಗಿರಾಕಿಗಳೋ ರಾಜಕೀಯ ಸ್ನೇಹಿತರೋ ಬಂದಿರುವಾಗ ಇಂತಹ ಮೂರ್ಖತನದ ಮಂಗವಿದ್ಯೆಗಳನ್ನು ತೋರಿಸುವುದಕ್ಕಾಗಿ ಅವರು ಆಗಾಗ ಗಾಂಧೀಜಿಯವರ ಎದುರು ಯುದ್ಧಹೂಡುತ್ತಿದ್ದರು. ವಕೀಲಿಯಂತಹ ಗೌರವದ ವೃತ್ತಿಗೆ ನಿಸರ್ಗ ಚಿಕಿತ್ಸೆ ಸಲ್ಲದೆಂದು ಕಸ್ತೂರಬಾ ತೆಗೆದುಹಾಕಿದ್ದರು. ಆದರೆ, ನಿಸರ್ಗಚಿಕಿತ್ಸೆ ಅಂಟುರೋಗವೆಂದೆನಲ್ಲ? ಮೊದಮೊದಲು ನಿಂದಿಸಿದವರಿಗೂ ಕೊನೆಕೊನೆಗೆ ಅದು ಅಂಟುತ್ತದೆ. ಕಸ್ತೂರಬಾಗೂ ಹೀಗೆ ಆಯಿತು. ಸ್ವಲ್ಪ ಕಾಲ ಬೇಕಾಯಿತೆನ್ನಿ. ಪ್ರಾರಂಭದಲ್ಲಿ ಬಾರವರನ್ನು ತನ್ನ ದಾರಿಗೆ ತಿರುಗಿಸಲು ಗಾಂಧೀಜಿ ತನ್ನ ತಪಸ್ಸನ್ನೆಲ್ಲ ಧಾರೆಯೆರೆಯಬೇಕಾಯಿತು.

ಕಸ್ತೂರಬಾರಿಗೊಮ್ಮೆ ಮೂಲವ್ಯಾಧಿ ಸಂಬಂಧ ರಕ್ತಸ್ರಾವ ಉಂಟಾಯಿತು. ಜಲಚಿಕಿತ್ಸೆ ಮಾಡಿಸಿದರು ಗಾಂಧೀಜಿ. ಸಾಕಾಗಲಿಲ್ಲ. ಹೆಚ್ಚಿನ ತೀಕ್ಷ್ಣತೆಯಿಂದ ಚಿಕಿತ್ಸೆ ನಡೆಸುವುದು ಅವಶ್ಯಕವಾಗಿತ್ತು. ಉಪ್ಪು ಮತ್ತು ಧಾನ್ಯ ಪೂರ್ಣ ವರ್ಜಿಸಬೇಕೆಂದರು "ಡಾಕ್ಟರ್" ಗಾಂಧೀಜಿ. ಎಷ್ಟು ಹೇಳಿದರೂ ಬಾ ಇದಕ್ಕೆ ಒಪ್ಪಲಾರರು. ಏನೇನು ಸಮರ್ಥನೆಗಳನ್ನು ಕೊಟ್ಟರೂ ಬಾಗೆ ಸಮಾಧಾನವಾಗಲಿಲ್ಲ. "ನಾನು ಸರಿಯಾಗಿ ನಾಲಗೆ ಬಿಗಿಹಿಡಿಯುವುದಿಲ್ಲ ಎಂದು ದೂರುತ್ತೀರಿ. ನೀವಾಗಿರುತ್ತಿದ್ದರೆ ಹಾಗೆ ಮಾಡುತ್ತಿದ್ದಿರೋ?" ಎಂಬುದಾಗಿ ಬಾರವರು ಗಾಂಧೀಜಿಗೆ ಹೇಳಿದರು. ಗಾಂಧೀಜಿಗೆ ನಾಟಿತು. ಏನು ಹೇಳಬೇಕೋ ತಿಳಿಯದು. ಕೊನೆಗೆ "ನಿನ್ನ ಅಭಿಪ್ರಾಯ ತಪ್ಪು. ನನಗೆ ಸುಖವಿಲ್ಲದಾಗ ಡಾಕ್ಟರರು ಈ ರೀತಿ ಮಾಡಬೇಕೆಂದು ವಿಧಿಸಿದ್ದರೆ ಹಾಗೆಯೇ ಮಾಡುತ್ತಿದ್ದೆ. ಹೋಗಲಿ. ಈಗಂತೂ

ಸುಖವಿದೆಯಾದರೂ ಹಾಗೆ ಮಾಡುವುದನ್ನು ನೋಡುವೆಯಂತೆ. ಇಂದಿನಿಂದ ಒಂದು ವರ್ಷದ ವರೆಗೆ ಉಪ್ಪು ಮತ್ತು ಧಾನ್ಯ ಮುಟ್ಟುವುದಿಲ್ಲ. ನನ್ನ ದೇಹವಾದರೂ ಶುದ್ಧವಾಗಲಿ. ನೀನು ಬಿಡು ಅಥವಾ ಬಿಡದಿರು" ಎಂಬುದಾಗಿ ಗಾಂಧೀಜಿ ಪಣತೊಟ್ಟರು.

ಬಾರವರಿಗೆ ಆಗಸವೇ ಬಿದ್ದಂತಾಯಿತು. ಗಾಂಧೀಜಿ ಹೇಳಿದಂತೆ ಮಾಡುವುದಾಗಿ ಒಪ್ಪಿದರು. ಆದರೂ ತನಗಾಗಿ ಗಾಂಧೀಜಿ ಈ ರೀತಿ ವ್ರತಹಿಡಿಯುವುದು ಅವರಿಗೆ ಸೈರಿಸಲಿಲ್ಲ. ಅಂಗಲಾಚಿ ಬೇಡಿಕೊಂಡರು. ಆದರೆ, ಅದು ಹಾಲಿಗೆ ಹಾಕಿದ ಹೆಪ್ಪು. ಪುನಃ ಹಾಲಾದೀತೇ? ಗಾಂಧೀಜಿಯವರು ಪಣ ಹಿಂದೆಯಲಿಲ್ಲ.

ಕಸ್ತೂರಬಾ ಉಪ್ಪು ಮತ್ತು ಧಾನ್ಯ ಬಿಟ್ಟುಬಿಟ್ಟರು ಅವರ ಆರೋಗ್ಯವೂ ಸುಧಾರಿಸಿತು. ಸ್ರಾವ ಪೂರ್ಣವಾಗಿ ನಿಂತಿತು. ಅಂದಿನಿಂದ ಗಾಂಧೀಜಿಗೆ ಕಸ್ತೂರಬಾರವರಿಂದ 'ಡಾಕ್ಟರ್' ಸರ್ಟಿಫಿಕೇಟು ಬಂತು.

ಹೌದು. ನಿಸರ್ಗಚಿಕಿತ್ಸೆಯಲ್ಲಿ ಆಹಾರ ನಿಯಮಗಳು ಕೊಂಚ ಇವೆ. ಮುಖ್ಯವಾಗಿ ಆಹಾರದೋಷಗಳೇ ಕಾಯಿಲೆಯ ಕಾರಣವಾದ್ದರಿಂದ ಆಹಾರ ನಿಯಮ ಇರಿಸದೆ ಕಾಯಿಲೆ ಹೋಗುವಹಾಗಿಲ್ಲ.

**ಮದ್ದಿನ ವಿರೋಧಿ:** ಗಾಂಧೀಜಿಗೊಮ್ಮೆ ಅಜೀರ್ಣವುಂಟಾಗಿ ತುಸು ಆಮಶಂಕೆ ಪ್ರಾರಂಭವಾಯಿತು. ಆಹಾರವೇನೋ ತುಸು ಅಧಿಕವಾಗಿರಬೇಕು. ಕೆಲಸದ ಭರದಲ್ಲಿ ಗಾಂಧೀಜಿ ಇದನ್ನು ಗಮನಕ್ಕೆ ಹಚ್ಚಿಕೊಳ್ಳಲಿಲ್ಲ. ಮದ್ದುಗಳನ್ನು ತೀರಾ ವರ್ಜಿಸಿದ್ದುದರಿಂದ ಮದ್ದನ್ನು ಸೇವಿಸಲಿಲ್ಲ. ಒಂದು ಊಟ ಬಿಟ್ಟು ಉಪವಾಸಮಾಡಿದರೆ ಇದು ಶಾಂತವಾದೀತೆಂದು ಹಾಗೆ ಮಾಡಿದರು. ಸ್ವಲ್ಪ ಶಾಂತವಾದ್ದೂ ಹೌದು. ಆದರೆ ಪೂರ್ತಿ ಗುಣವಾಗಲು ಮತ್ತೂ ಒಂದೆರಡು ಉಪವಾಸ ಬೇಕಾಗಿತ್ತೋ ಏನೋ. ಅವರಿಗೆ ಅದು ಗೊತ್ತೂ ಇತ್ತು. ಆದರೆ ...

ಆದರೆ ... ಏನು? ಉಪವಾಸ ಮಾಡಲು ಏನು ತೊಂದರೆ? ಆಹಾರವಿಲ್ಲದೆ ಸುಮ್ಮನೆ ಇದ್ದರಾಯಿತಲ್ಲವೇ? ಎಲ್ಲಾ ರೋಗಿಗಳಿಗೆ ಬರುವ ಕಷ್ಟ ಗಾಂಧೀಜಿಗೂ ಬಂತು. ನಾಲಗೆಯನ್ನು ಬಿಗಿಹಿಡಿಯಬೇಕಲ್ಲವೇ? ಜಗಜ್ಜೇತ ದುರ್ಗವನ್ನೂ ದಾಟಬಿಡುವಂತಹ ನಾಲಿಗೆಯು ತುಂಟಕುದುರೆ ಕೇಳಲಿಲ್ಲ.

ಆ ದಿನ ಅಲ್ಲೊಂದು ಜಾತ್ರೆ; ಔತಣ. ಗಾಂಧೀಜಿ ಕಸ್ತೂರಬಾರವರೊಡನೆ ಅಂದು ಮಧ್ಯಾಹ್ನ ಊಟ ಬೇಡವೆಂದಿದ್ದರೂ ಔತಣದಂದು ಗಾಂಧೀಜಿ ಊಟ ಬಿಡುವುದು ಬಾರವರಿಗೆ ಸಮಾಧಾನವಿಲ್ಲ. "ಉಪವಾಸ ಇನ್ನೊಂದು ದಿನ ಮಾಡುವಿರಂತೆ. ಔತಣದಂದು ಚಿಕ್ಕನ ಬಿಡಾರ ಬೇರೆ ಮಾಡಬೇಕೆ?" ಎಂದರು ಬಾ.

ಗಾಂಧೀಜಿಗೆ ರೊಟ್ಟಿಗೆ ಬೆಣ್ಣೆ ಹಚ್ಚಿದಂತಾಯಿತು. ಅಷ್ಟು ಯಾರೂ ಹೇಳುವುದಿಲ್ಲ ಎಂದು ಕಾದಿತ್ತು ಅವರ ನಾಲಗೆ. ಅದರಲ್ಲೂ ಈಗ ಕಸ್ತೂರಬಾರೇ ಹಾಗೆನ್ನುವಾಗ ವಿಶೇಷಣವೂ ಹಾಕಿಕೊಂಡರು. ಯಥಾಪ್ರಕಾರವಾಗಿ ಉಂಡರು.

ತೃಪ್ತಿಯುಷ್ಟು ತಿಂದರು. ಗಾಂಧೀಜಿ ಆಗ ಹಾಲಿನ ವಸ್ತುಗಳೆಲ್ಲವನ್ನೂ ಬಿಟ್ಟಿದ್ದುದರಿಂದ ಅವರಿಗಾಗಿ ಕಸ್ತೂರಬಾ ಎಣ್ಣೆಯಿಂದಲೇ ನಾಲ್ಕಾರು ಭಕ್ಷ್ಯ ತಯಾರಿಸಿದ್ದರು. ಕಸ್ತೂರಬಾಯನ್ನು ಸಮಾಧಾನಪಡಿಸುವ ನೆಪಹಾಕಿ ನಾಲಗೆಯು ತೃಪ್ತಿಯುಷ್ಟು ಸೇವಿಸಿದರು.

ರೋಗದ ಪೆಡಂಭೂತಕ್ಕೆ ಅಷ್ಟೇ ಆಹ್ವಾನ ಬೇಕಾಗಿತ್ತು. ಮರುದಿನ ಆಮಶಂಕೆ ಇಮ್ಮಡಿಯಾಯಿತು. ನಿಶ್ಯಕ್ತಿ ಆವರಿಸಿತು.

ಆಪ್ತರೆಲ್ಲ ಗಾಂಧೀಜಿಯುವರನ್ನು ಸುತ್ತುಗಟ್ಟಿದರು. ಮಾಡುವುದೇನು? ಗಾಂಧೀಜಿಯು ಮೇಲೆ ಅವರ ಪ್ರೀತಿ ಅಗಾಧ. ಆದರೆ, ಈ ಪ್ರೀತಿ ಅವರ ನೋವನ್ನೆಂತು ಗುಣಮಾಡೀತು? ಗಾಂಧೀಜಿ ಔಷಧಿ ಸೇವಿಸಲು ನಿರಾಕರಿಸಿದರು. ಔಷಧಿ ಸೇವಿಸುವುದಕ್ಕಿಂತ ತಾನು ಮಾಡಿದ ಅವಿವೇಕತನಕ್ಕೆ ಶಾಸ್ತಿಯನ್ನನುಭವಿಸುವುದು ಉತ್ತಮವೆಂದು ಹಟಹಿಡಿದರು. ಯಾರಿಗೂ ಏನೂ ತೋಚದು. ಇಪ್ಪತ್ತನಾಲು ಗಂಟೆಗಳಲ್ಲಿ ಮೂವತ್ತು ನಲುವತ್ತು ಬಾರಿ ಭೇದಿಯಾಗುತ್ತಿತ್ತು. ನಿಶ್ಯಕ್ತಿ ಎಷ್ಟಿರಬಹುದೆಂದು ಯೋಚಿಸಿರಿ. ಆದರೂ ಗಾಂಧೀಜಿ ಮದ್ದು ಸೇವಿಸಲಿಲ್ಲ. ಕೇವಲ ಹಣ್ಣಿನ ರಸ ಸೇವಿಸಿಕೊಂಡು ಉಪವಾಸ ಮಾಡಿದರು. ನಾಲಗೆಗೆ ರುಚಿಯೇ ಇರಲಿಲ್ಲ. ಕಬ್ಬಿಣದಷ್ಟು ಗಟ್ಟಿಯೆಂದು ಆ ವರೆಗೆ ಗಾಂಧೀಜಿ ಎಣಿಸಿದ್ದ ಅವರ ದೇಹವು ಬರೇ ಮಣ್ಣಿನ ಮುದ್ದೆಯುಷ್ಟು ಮೆದುವಾಗಿ ತೋರಿತು ಅವರಿಗೆ. ಶಕ್ತಿಯೇ ಇರಲಿಲ್ಲ. ಭೇದಿ ಇನ್ನೂ ಮುಂದುವರಿಯಿತು. ಗಾಂಧೀಜಿ ಕಂಗಾಲಾದರು. ಇಷ್ಟರಲ್ಲಿ ಹುಣ್ಣಿನ ಮೇಲೆ ಬರೆ ಎಂಬಂತೆ ಮಹತ್ವವಾದ ಜ್ವರವೂ ತಲೆದೋರಿತು. ಎಲ್ಲರೂ ದಿಗಿಲುಗೊಂಡರು. ಸಮಯ ಮೀರಿಹೋಗುವುದೆಂದು ಹಲವು ಮಂದಿ ನುರಿತ ಡಾಕ್ಟರರನ್ನು ಕರೆತಂದರು ಆದರೆ, ಅವರ ಮಾತುಗಳಿಗೊಂದಕ್ಕೂ ಕಿವಿಗೊಡದ ಈ ಹಟಮಾರಿಯನ್ನು ಅವರು ಏನು ಮಾಡಲಾಪರು?

ಗಾಂಧೀಜಿ ಜಲಚಿಕಿತ್ಸೆ ಮಾಡಿಕೊಂಡರು. ತುಸು ಶಮನವೂ ತೋರಿತು. ಆದರೆ ದೇಹಪುಷ್ಟಿಯಾಗಬೇಕಲ್ಲ? ಡಾಕ್ಟರರು ಮೊಟ್ಟೆ, ಮಾಂಸ ಇತ್ಯಾದಿ ಸಾವಿರಾರು ಸೂಚಿಸಿದರೆನ್ನಿ. ಅವೊಂದನ್ನೂ ಗಾಂಧೀಜಿ ಮುಟ್ಟರು. ಒಂದು ರಾತ್ರಿಯಂತೂ ಗಾಂಧೀಜಿಗೆ ಸಾವು ಸಮೀಪಿಸುತ್ತಿದೆಯೆಂದೇ ತೋರಿತು. ಎಲ್ಲವನ್ನೂ ಬಿಟ್ಟು ಸುಮ್ಮನೇ ಬಿದ್ದುಕೊಂಡಿದ್ದರು.

ಅಷ್ಟರಲ್ಲಿ ಮಹಾರಾಷ್ಟ್ರದ ಡಾಕ್ಟರರೊಬ್ಬರು— ಗಾಂಧೀಜಿಯು ಜಾತಿಯುವರು —ಒಬ್ಬ "ಹುಚ್ಚ"ರು—ಮುಂದೆ ಬಂದರು. ಮಂಜುಗಡ್ಡೆಯು ಮೂಲಕ ಚಿಕಿತ್ಸೆ ನಡೆಸುವ ಒಂದು ಹೊಸ ಪ್ರಯೋಗ ಅವರಿಗೆ ತಿಳಿದಿತ್ತು. ಹೇಗೂ ಆಗಲೆಂದು ಗಾಂಧೀಜಿ ಇದಕ್ಕೊಪ್ಪಿದರು. ಸಮಾಧಾನವೂ ದೊರಕಿತು.

ಗಾಂಧೀಜಿಗೆ ಬಹುಶಃ ತನ್ನನ್ನು ಸರಿಯಾಗಿ ಮಾರ್ಗದರ್ಶನ ಮಾಡಬಲ್ಲ ಯೋಗ್ಯ ನಿಸರ್ಗಚಿಕಿತ್ಸಕರ ಅಭಾವ ಚೆನ್ನಾಗಿ ಕಂಡಿರಬೇಕು. ಚಲಿಸಲಾರದ

ಅಸೌಖ್ಯತೆಯಲ್ಲಿರುವಾಗ ಅವರ ಸುತ್ತಲಲ್ಲಿ ಕಡೆಗೆ ಮಾತಿನಲ್ಲಾದರೂ ಪ್ರೋತ್ಸಾಹಿಸುವ ಒಬ್ಬನೇ ಒಬ್ಬ ಅಲ್ಲಿರಲಿಲ್ಲ. ಕಸ್ತೂರಬಾಯಿಗೂ ಚಿಕಿತ್ಸಾವಿಧಾನ ಅಷ್ಟಷ್ಟೆ. ಅವರ ಔತಣದಿಂದಲೇ ಇಷ್ಟೆಲ್ಲ ಬರಲು ಕಾರಣ. ಆಫ್ರಿಕದಲ್ಲಿದ್ದಾಗ ಒಮ್ಮೆ ಈ ಅಭಾವದ ಕುರಿತು ಗಾಂಧೀಜಿ ಬಾಯಿ ಬಿಟ್ಟು ಹೇಳಿದ್ದರು: "ನನಗೆ ನಿಸರ್ಗ ಚಿಕಿತ್ಸೆಯಲ್ಲಿ ತುಂಬಾ ವಿಶ್ವಾಸ. ಆದರೆ ಪ್ರತ್ಯಕ್ಷ ಮಾರ್ಗದರ್ಶಕರು ನನಗೆ ಯಾರೂ ದೊರಕಲಿಲ್ಲ"

ಗಾಂಧೀಜಿ ಒಂದೆರಡು ಬಾರಿ ಶಸ್ತ್ರಚಿಕಿತ್ಸೆಗೆ ಎಡೆಕೊಟ್ಟಿದುಂಟು. ಆದರೆ ಅದಕ್ಕಾಗಿ ಅವರು ಅನಂತರ ಬೇಸರಪಟ್ಟಿದ್ದಾರೆ. "ಅದು ನನ್ನ ಮಾನಸಿಕ ನಿಶ್ಶಕ್ತಿಯ ಕಾರಣದಿಂದ ಹಾಗಾಯಿತು" ಎಂದಿದ್ದಾರೆ ಅವರು. ಪ್ರಾರಂಭದಿಂದಲೇ ನಿಸರ್ಗ ಜೀವನ ನಡೆಸಿ ಎಚ್ಚರಿಕೆ ವಹಿಸಿದ್ದರೆ ಎಷ್ಟೋ ಶಸ್ತ್ರಚಿಕಿತ್ಸೆಗಳನ್ನು ಇಲ್ಲದೇ ನಿವೃತ್ತಿ ಮಾಡಬಹುದೆಂದು ಅವರ ಅಭಿಪ್ರಾಯ. ಸರದಾರರಿಗೆ ಶಸ್ತ್ರಚಿಕಿತ್ಸೆಯನ್ನು ತಪ್ಪಿಸಿದ್ದು ನಮಗೆ ನೆನಪಿದೆಯಷ್ಟೇ?

**ಗಾಂಧೀಜಿ ಹಸಿ ಮೇದದ್ದು ಇತ್ಯಾದಿ:** ಗಾಂಧೀಜಿಯ ಆಹಾರ ಪ್ರಯೋಗಗಳ ಕುರಿತು ಒಂದು ರಾಮಾಯಣವನ್ನೇ ಬರೆಯಬಹುದು. ತನ್ನ ೧೮ನೇ ವರ್ಷದಲ್ಲಿಯೇ ಆಹಾರದಲ್ಲಿ ಪ್ರಯೋಗ ನಡೆಸಲು ತಾನು ತೊಡಗಿದ್ದೆನೆಂದು ಅವರೆನ್ನುತ್ತಾರೆ. ಅನಂತರ ಸಾಯುವ ವರೆಗೂ ನಿರರ್ಗಳವಾಗಿ ಸಾಗಿವೆ. ಒಂದು ಬಾರಿ, ಮೆಣಸು, ಹುಳಿ ಬಿಟ್ಟರು. ಇನ್ನೊಮ್ಮೆ ಉಪ್ಪು ಬಿಟ್ಟರು. ಮತ್ತೊಮ್ಮೆ ಐದೇ ವಸ್ತುಗಳ ಸೇವನೆಯೆಂಬ ವ್ರತಮಾಡಿದರು. ಮತ್ತೆ ಕೆಲವು ದಿನ ಕಿಚ್ಚೇ ಇಲ್ಲ, ಎಲ್ಲ ಹಸಿಯೇ ಮೆದರು. ಹತ್ತಾರು ದಿನ ಅಕ್ಕಿಯನ್ನು ಬಿಟ್ಟು ಅದರ ತೌಡಿನಿಂದ ಮಾಡಿದ ಒಣ ರೊಟ್ಟಿಯ ಔತಣವೂ ಆಯಿತು. ಇನ್ನು ಕೆಲವು ದಿನ ಹುಣಸೆ ಹುಳಿ ಕದಡಿ ಕುಡಿದರೆಂದು ತೋರುತ್ತದೆ. ಗಾಂಧೀಜಿಯವರ ಹಾಲಿನ ಪುರಾಣಗಳಂತೂ ಎಲ್ಲರಿಗೂ ತಿಳಿದವುಗಳು. ಎಮ್ಮೆ, ದನ, ಮೇಕೆ ಎಂಬುದಾಗಿ ಅನೇಕ ಬಾರಿ ನಡೆದಿದೆ ಅದರ ರಂಭಾಟ. ಇತರರಿಗೆ ಇವೆಲ್ಲ ಸ್ವಾರಸ್ಯ ಪ್ರಸಂಗಗಳು. ಆದರೆ ಗಾಂಧೀಜಿಗೆ ಅದೊಂದು ಸಮುದ್ರಮಥನ; ಸತ್ಯಾನ್ವೇಷಣೆಯ ಸಾಧನ. ಆದ್ದರಿಂದಲೇ ಅದರಲ್ಲಿ ಅವರಿಗೊಂದು ತೃಪ್ತಿ, ಸಂತೋಷ.

ಆಧುನಿಕ ತರುಣರಿಗೆ ತೋರುವಂತೆ ಗಾಂಧೀಜಿಗೂ ಒಮ್ಮೆ ಉರುಟಾದ ದೇಹ ಬೆಳೆಸಬೇಕೆಂದು ತೋರಿತು; ಚಿಕ್ಕಂದಿನಲ್ಲಿ ಆಡಿನ ಮಾಂಸ ಜಗಿದರು; ಬಲು ಗುಟ್ಟಾಗಿ. ತಂದೆ ತಾಯಿ ತಿಳಿದರೆ ಗುಡುಗುವರೆಂದು ಗೊತ್ತಿದ್ದುದರಿಂದ ಒಂದು ವರ್ಷದ ವರೆಗೂ ಗುಟ್ಟಾಗಿಯೇ ಸಾಗಿತು ಈ ಕಣ್ಣುಮುಚ್ಚಾಲೆ. ಮುಂದೆ ಇಂಗ್ಲೆಂಡಿಗೆ ಹೋದಾಗ ತಾಯಿಗೆ ಕೊಟ್ಟ ವಚನದ ಬಲದಿಂದ ಇದು ನಿಂತಿತು. ತಂದೆ ತಾಯಿಗಳು ಕಳೆದುಹೋದಮೇಲೆ ತಿನ್ನುವೆನೆಂಬ ಆಸೆ ಒಳಗಿನಿಂದ ಇತ್ತು. ಭಾರತೀಯರೆಲ್ಲರೂ ಮಾಂಸಾಹಾರಿಗಳೇ ಆಗಬೇಕೆಂದೂ ತಂದೆ ತಾಯಿ ತೀರಿದ ಮೇಲೆ ಆ ಕುರಿತು ಪ್ರಚಾರಮಾಡುವುದಾಗಿ ನಿರ್ಧರಿಸಿದರು.

ಇವರ ಈ 'ಮಾಂಸಮನೋಭಾವನೆ'ಯನ್ನು ತಿದ್ದಿ ತಿರುಗಿಸಿದ ಕೀರ್ತಿ ಇಂಗ್ಲೆಂಡಿನ ಶ್ರೀ ಸಾಲ್ಟ್‌ರವರಿಗೆ ಸಲಬೇಕು. ಅವರ ಪುಸ್ತಕ ಓದಿದ ಮೇಲೆ ಗಾಂಧೀಜಿಯ ಮನಸ್ಸೂ ಶಾಖಾಹಾರಕ್ಕೆ ತಿರುಗಿತು. ಆ ವರೆಗೆ ವಚನದ ಒತ್ತಾಯದಲ್ಲಿ ಶಾಖಾಹಾರಿಗಳಾಗಿದ್ದವರು ಈಗ ಮನಸಾ ಶಾಖಾಹಾರಿಗಳಾದರು. ಶಾಖಾಹಾರಕ್ಕೆ ತಕ್ಕ ತಾತ್ವಿಕ ನೆಲೆಯನ್ನು ಕಟ್ಟಬೆಳೆಸಿದರು. ಮಾಂಸಾಹಾರ ಪ್ರಚಾರಕ್ಕೆ ನಿರ್ಧರಿಸಿದ್ದವರು ಈಗ ಪೂರ್ವ ಪಶ್ಚಿಮವಾದರು.

ತನ್ನ ಆಹಾರ ಪ್ರಯೋಗಗಳ ಮಧ್ಯದಲ್ಲಿ ಗಾಂಧೀಜಿ ಎಷ್ಟೋ ಸಾರಿ ಎದ್ದಿದ್ದಾರೆ ಬಿದ್ದಿದ್ದಾರೆ. ಅದೇನೂ ಆಧುನಿಕ ಪ್ರಯೋಗಶಾಲೆಯಲ್ಲಿ ಮಾಡುವಂತಹ ಪರೀಕ್ಷಾನಾಳದ ನಿರ್ಜೀವಿ ಪ್ರಯೋಗವಲ್ಲ. ತನ್ನ ಮೇಲೆಯೇ—ಜೀವಂತ ದೇಹದ ಮೇಲೆ—ಪ್ರಾಣದ ಜವಾಬ್ದಾರಿಕೆಯ ಮೇಲೆ—ಮಾಡಿದಂತಹ ಪ್ರಯೋಗ. ಇಷ್ಟೆಲ್ಲ ಕಾಳಜಿ, ಆಸ್ಥೆ ಒಂದೇ ಉದ್ದೇಶಕ್ಕಾಗಿ—ಸತ್ಯಕ್ಕಾಗಿ.

ಒಂದು ಬಾರಿ ಎಂಟು ಔನ್ಸು ಆಕಳ ಹಾಲು ಮತ್ತು ಅಷ್ಟೇ ತೆಂಗಿನ ಹಾಲು—ಹೀಗಿತ್ತು ಅವರ ಆಹಾರ ಕ್ರಮ. ಇದು ಜೀರ್ಣವಾಗಲಿಲ್ಲ. ಭೇದಿ ಪ್ರಾರಂಭವಾಯಿತು. ಪದೇ ಪದೇ ಭೇದಿಯಿಂದ ಅತೀವ ನಿತ್ರಾಣ ತಲೆದೋರಿತು. ಆಕಳಿಕೆ, ಭ್ರಮಣೆ, ಬೆವರು, ಕೈಕಾಲು ಶೀತವೇರುವುದು ಇತ್ಯಾದಿ ಲಕ್ಷಣಗಳು ಕಾಣಿಸಿದುವು. ಆಧಾರವಿಲ್ಲದೆ ನಡೆಯುವುದೂ ಅಸಾಧ್ಯವೆನಿಸಿತು. ಆತುರಗೊಂಡ ನಿಕಟವರ್ತಿಗಳು ಡಾ|| ಸುಶೀಲಾರಿಗೆ ಹೇಳಿ ಕಳುಹಿಸುವ ಯೋಚನೆಯಲ್ಲಿದ್ದರು. ಇದು ಗಾಂಧೀಜಿಗೆ ತಿಳಿಯಿತು. ಸುಶೀಲರನ್ನು ಕರೆಯ ಹೊರಟ ಹುಡುಗನನ್ನು ತಡೆದು ನಿಲ್ಲಿಸಿದರು. "ಸುಶೀಲರಿಗಾಗಿ ಬೊಬ್ಬೆ ಹೊಡೆಯುವ ಬದಲು ನೀವು ರಾಮನಾಮವನ್ನಾದರೂ ಹೇಳಬಹುದಿತ್ತಲ್ಲವೇ? ಎಂದೆಂದಿಗೂ ಆ ದಿವ್ಯಶಕ್ತಿಯನ್ನೇ ಹೊಂದಿಕೊಂಡಿರಬೇಕೆಂದು ನಾನು ನಿಮಗೆ ಎಷ್ಟೋ ಸಾರಿ ಹೇಳಿಲ್ಲವೇ? ಮತ್ತೆ ಸುಶೀಲರಿಗೆ ಕರೆ ಏತಕ್ಕಾಗಿ? ಸುಮ್ಮನೇ ಡಾಕ್ಟರರನ್ನು ಕರೆತಂದರೆ ಏನು ಪ್ರಯೋಜನ?" ಎಂದು ಪ್ರಶ್ನಾರೂಪದಲ್ಲಿ ನಿಷೇಧಿಸಿದರು. ಆನಂತರ ಇತರರಿಗೂ ಹೌದೆನಿಸಿತು. ಕ್ಷಮೆ ಯಾಚಿಸಿದರು. ಇದು ನಡೆದುದು ೧೯೪೭ನೇ ಜನವರಿ ೩೦ ರಂದು—ಅವರು ಸಾಯುವ ಸರಿಯಾಗಿ ಒಂದು ವರ್ಷದ ಮೊದಲು. ದಿನ ಹೇಗೆ ಇಷ್ಟು ಕೂಡಿ ಬಂತೋ ಆಶ್ಚರ್ಯ.

**ನಿಸರ್ಗಚಿಕಿತ್ಸೆಗೆ ಹೊಸ ಹೆಸರು:** ರಾಮನಾಮ ಎಂದೆನಲ್ಲ? ಇದು ಗಾಂಧೀಜಿ ನಿಸರ್ಗಚಿಕಿತ್ಸೆಗೆ ಮಾಡಿದ ಹೊಸ ನಾಮಕರಣ. "ರಾಮನಾಮವೆಂದರೆ ನಿಜವಾದ ನಿಸರ್ಗಚಿಕಿತ್ಸೆ" ಎಂದು ಅವರು ಸಾರಿದ್ದಾರೆ. "ರಾಮನಾಮವು ಕೇವಲ ಬಾಯ ಉಚ್ಚಾರಣೆಯಾಗಿರಕೂಡದು. ಅದು ಹೃದಯದಿಂದ ಬರಬೇಕು. ಹೃದಯದಿಂದ ಬರುತ್ತಿದೆಯೇ ಎಂಬುದು ಕಾರ್ಯದಲ್ಲಿ ತಿಳಿದೀತು. ಮದ್ದು ಕುಡಿದುಕೊಂಡು ರಾಮ ಜಪಮಾಡುವುದು ವ್ಯರ್ಥಾಲಾಪ. ರಾಮನಾಮವು

ಕಾಯುವಲ್ಲಿ ಬರಬೇಕು. ಈ ದೃಷ್ಟಿಯಿಂದ ಪರಿಶೀಲಿಸಿದರೆ ಅದು ನಿಜವಾದ ನಿಸರ್ಗ ಚಿಕಿತ್ಸೆಯು ಒಳಗೆ ಅಡಗುತ್ತದೆ. ಅಂತಹವನು ಮಣ್ಣು, ನೀರು, ಗಾಳಿ, ಬಿಸಿಲು, ಆಕಾಶ ಇಷ್ಟರಲ್ಲಿ ತೃಪ್ತಿಪಡುತ್ತಾನೆ; ಆಗ ಭಾರೀ ಆಸ್ಪತ್ರೆಗಳೂ ಸಲಕರಣಗಳೂ ಬೇಕಾಗುವುದಿಲ್ಲ."

"ನಿಸರ್ಗಚಿಕಿತ್ಸೆಯು ನಮ್ಮನ್ನು ಪರಮಾತ್ಮನ ಸಮೀಪ ಕೊಂಡೊಯ್ಯುತ್ತದೆ, ಡಾಕ್ಟರರು ಅವನಿಂದ ದೂರ ಸರಿಸುತ್ತಾರೆ" ಎಂಬುದಾಗಿ ಹೇಳಿ ನಿಸರ್ಗಚಿಕಿತ್ಸೆಯು ಎಷ್ಟು ಪವಿತ್ರವಾದುದೆಂಬುದನ್ನು ಗಾಂಧೀಜಿ ವಿವರಿಸಿದರು.

"ನಿಜವಾದ ರಾಮನಾಮವನ್ನನುಸರಿಸುವವರು ಕಾಯಿಲೆಗಳಿಗೆ ತುತ್ತಾಗುವುದಿಲ್ಲ. ಅಥವಾ ತುತ್ತಾದರೂ ಅವರು ನಿಸರ್ಗದ ಮೂಲಕವೇ ಅದನ್ನು ಸರಿಗೊಳಿಸುತ್ತಾರೆ. ಧಾರ್ಮಿಕ ಪುರುಷನೆಂದು ಹೇಳಿಕೊಳ್ಳುವವನು ಕಾಯಿಲೆಗೆ ತುತ್ತಾದರೆ ಅವನು ಎಲ್ಲಿಯೋ ಯಾವುದೋ ಒಂದು ತಪ್ಪುಮಾಡಿದ್ದಾನೆ ಎಂಬುದು ಖಂಡಿತ. ಕಾಯಿಲೆಯು ಪ್ರಕೃತಿಯ ನಿಯಮೋಲ್ಲಂಘನೆಯ ಚಿಹ್ನೆ" ಎಂದರು ಗಾಂಧೀಜಿ.

ಸಕಲ ರೋಗಗಳಿಗೂ ರಾಮನಾಮವು ಏಕಮೇವ ಔಷಧಿಯೆಂದು ಗಾಂಧೀಜಿ ಹೇಳಿದ್ದನ್ನು ಕೇಳಿ ಒಬ್ಬ ಮಹನೀಯರು ತನ್ನ ಮಗಳು ಮಲೇರಿಯಾ ಪೀಡಿತಳಾದಾಗ ತಟಸ್ಥರಾಗಿ ಕುಳಿತು ರಾಮ ಜಪಮಾಡಿದರಂತೆ. ಗುಣವಾಗಲಿಲ್ಲ. ಗಾಂಧೀಜಿಯನ್ನು ಆರೋಪಿಸಿದರು. ಆದರೆ ಗಾಂಧೀಜಿ ದೇವರ ಧ್ಯಾನದೊಂದಿಗೆ ಅವನ ನಿಯಮಗಳನ್ನೂ ಪಾಲಿಸಬೇಕು—ಮಣ್ಣು, ನೀರು, ಗಾಳಿ, ಬಿಸಿಲುಗಳಿಂದ ಚಿಕಿತ್ಸೆಯನ್ನೂ ಮಾಡಬೇಕು—ಎಂದು ರಾಮನಾಮದ ನಿಜವಾದ ಅರ್ಥವನ್ನು ವಿವರಿಸಿ ಹೇಳಿ ಹಾಗೆ ಮಾಡಿದಾಗ ಸುಖವಾಯಿತು. "ಅತ್ಯಾಹಾರಕ್ಕೆ ಮದ್ದು ರಾಮ ಜಪವಲ್ಲ; ಉಪವಾಸ" ಎಂದರು ಗಾಂಧೀಜಿ. ಗಾಂಧೀಜಿ ಹೇಳುವ ರಾಮನಾಮವು ಬರೇ ಅದೃಷ್ಟವಾದವಲ್ಲ. ಅದು ಸರಿಯಾದ ನಿಸರ್ಗಜೀವನ. ಈ ಜೀವನ ನಡೆಸುವವರು ೧೨೫ ವರ್ಷ ಬದುಕಬಹುದೆಂದು ಅವರ ಅಭಿಪ್ರಾಯವಾಗಿತ್ತು.

ನಿಸರ್ಗಚಿಕಿತ್ಸೆಯು ಒಂದು ಜೀವನ ತತ್ವ, ಧರ್ಮ. ಈ ತತ್ವವನ್ನು ತನ್ನ ಜೀವನದಲ್ಲಿ ಒಂದು ಸಕ್ರಿಯ ಶಕ್ತಿಯನ್ನಾಗಿ ಮಾಡಿಕೊಂಡು ತದ್ರೀತಿ ನಡೆದುಕೊಂಡರೆ ಸಕಲ ರೋಗಗಳೂ ಮಾಯವಾಗಲೇ ಬೇಕು. "ಭಾರತವು ಎಂದಿಗೆ ಇದನ್ನು ತಿಳಿಯುವುದೋ ಅಂದಿಗೆ ನಾವು ಸ್ವತಂತ್ರರಾಗಿ ಆರೋಗ್ಯದ ಬೀಡಾಗಬಲ್ಲೆವು; ಇಂದಿನಂತೆ ಅಂಟುಜಾಡ್ಯಗಳ ನಾಡಲ್ಲ" ಎಂದು ಗಾಂಧೀಜಿ ಸಾರಿದರು; ೧೯೪೬ರಲ್ಲಿ.

**ಗಾಂಧೀಜಿ ಇಂದು ಇರುತಿದ್ದರೆ??** ೧೯೪೭ನೇ ಜೂನ್ ತಿಂಗಳಲ್ಲಿ "ಭಾರತದ ಕೋಟ್ಯಾಂತರ ಬಡಜನತೆಗೆ ಸರಿಯಾಗುವಂತೆ ನಿಸರ್ಗಚಿಕಿತ್ಸೆಯ ಯೋಜನೆಯೊಂದನ್ನು ತಯಾರಿಸುತ್ತಿದ್ದೇನೆ" ಎನ್ನುತ್ತಾರೆ ಗಾಂಧೀಜಿ. ಗಾಂಧೀಜಿಗೆ ತನ್ನ ಲೆಕ್ಕದಲ್ಲಿ ಮತ್ತೂ ೫೦ ವರ್ಷ ಆಯುಸ್ಸು ಉಳಿದಿತ್ತು; ೧೨೫ಕ್ಕೆ.

೧೯೪೬ರಲ್ಲಿ ಹೀಗಂದಿದ್ದರು: "ನಿಸರ್ಗಚಿಕಿತ್ಸೆಯು ಹಳ್ಳಿ ಹಳ್ಳಿಗೂ ಹೋಗಬೇಕು ಕೋಟ್ಯಾಂತರ ಮಂದಿಗೆ ಇದರ ಲಾಭ ದೊರೆಯುವಂತಾಗಬೇಕು. ನಿಸರ್ಗ ಸೇವಾನಿಲಯಗಳು ಅಲ್ಲಲ್ಲಿ ಮೂಡಿ ಬರಬೇಕು; ಬಂದೀತು. ನಮಗೆ ದೈವ ಕೃಪೆಯಿದೆ. ಇದಕ್ಕೆ ತುಂಬಾ ತ್ಯಾಗವೂ ಸೇವೆಯೂ ಅಗತ್ಯ."

ನಿಸರ್ಗಚಿಕಿತ್ಸಾ ವಿಶ್ವವಿದ್ಯಾಲಯವೂ ಗಾಂಧೀಜಿಯವರ ರಾಮರಾಜ್ಯದ ಕನಸಿನಲ್ಲಿ ಸೇರಿತ್ತು. ಸರದಾರ ಪಟೇಲರಿಗೊಮ್ಮೆ ಆ ಕುರಿತು ಅವರು ಸೂಚಿಸಿದ್ದರು.

ಗಾಂಧೀಜಿ ಇರುತ್ತಿದ್ದರೆ ನಿಸರ್ಗಚಿಕಿತ್ಸೆಯ ದಿವ್ಯ ವರವು ಸಕಲ ಜನತೆಗೂ ತಲಪುತ್ತಿತ್ತೋ ಏನೋ. ಆದರೆ ಎಷ್ಟೋ ಅಜ್ಞಾನೀ ಹೃದಯಗಳು ನಮ್ಮ ಮಧ್ಯೆ ಇನ್ನೂ ಇರುವಾಗ? ಗಾಂಧೀಜಿ ಒಂದು ಸಾಗರದಂತೆ. ಒಬ್ಬನಿಗೆ ಅಲ್ಲಿ ಕಲ್ಲು ಮುಳ್ಳುಗಳೇ ಕಾಣಿಸಿದುವು. ಅಂದು ಜನವರಿ ಮೂವತ್ತು. ಮೂರು ಬಾರಿ ಗುಂಡು ಹಾರಿತು; ಗಾಂಧೀಜಿ ಬಿದ್ದರು. ಅವರ ಜೀವನವೂ ಆಗಲೇ ಮುಗಿದಿತ್ತು. ಎಂತೂ ಕಳೆದುಹೋದ ಜೀವಕ್ಕಾಗಿ ಡಾ॥ ಭಾರ್ಗವರು ಮದ್ದು ಹುಡುಕಬೇಕಾಗಿರಲಿಲ್ಲ.

# ಪ್ರಸ್ತಾವನೆ

ನಿಸರ್ಗ ಜೀವನದ ಪವಿತ್ರ ಸಂದೇಶವನ್ನು ಸಾರುವ ಉಚ್ಚಧ್ಯೇಯದಿಂದ ಈ ಚಿಕ್ಕ ಲೇಖನ ಬರೆದಿದ್ದೇನೆ. ಮಹಾಜನರು ಪ್ರೋತ್ಸಾಹಿಸಬೇಕಾಗಿ ವಿನಂತಿಸುತ್ತೇನೆ. ಈ ಬರಹವನ್ನು ಪ್ರಕಟಿಸಲು ನೆರವಾದ ಶ್ರೀ। ಎಚ್. ಎಂ. ನಾರಾಯಣ ಭಟ್ ಇವರಿಗೂ, ಪ್ರಕಟಿಸಿದ ಶ್ರೀ। ಶೆಣ್ಯಾಯವರಿಗೂ ಕೃತಜ್ಞನಾಗಿದ್ದೇನೆ.

ಈ ಪುಸ್ತಕದ ಪ್ರತಿಗಳು ಬೇಕಾದವರು ಅಂಚೆ ವೆಚ್ಚ 0-1-0 ಸಹಿತ, ಒಟ್ಟು ಎರಡಾಣೆ ಅಂಚೆ ಚೀಟಿನೊಂದಿಗೆ, ಕೆಳಗಿನ ವಿಳಾಸಕ್ಕೆ ಬರೆದೂ ತರಿಸಿಕೊಳ್ಳಬಹುದು.

ಶ್ರೀ। ಬಿ. ಸುಬ್ರಾಯ ಭಟ್,
ಶ್ರೀ ನಿಸರ್ಗ ಸೇವಾ ನಿಲಯ,
ಬಾವಟಿಗುಡ್ಡೆ, ಮಂಗಳೂರು, (ದ. ಕ.)
27—3—1956.

ಲೇಖಕ.

# ಮಂಗಳೂರಿಂದ ಮಧುರೆಗೆ
## ಮತ್ತು ಭಾರತದ ಗುಹಾಲಯುಗಳು



ಮಧುರೆಯು ತಿರುಮಲನಾಯಕನ ಅರಮನೆಯು ಒಂದು ಭಾಗ.

ಬೆಲೆ: ಆಣೆ ೧. ಲೇಖಕ: ಶ್ರೀ। ಟಿ. ಚಂದ್ರರಾಜ ಸೆಟ್ಟಿ.

# 'ಒಂದಾಣೆ ಮಾಲೆ'ಯ ಪ್ರಕಟಣೆಗಳು:

೧ *ಕೆಪ್ಪಟಿರಾಯ; ೨ *ನಾರೀಶ್ವರರು; ೩ ಕಳ್ಳನಿಗೆ ಸಂಭಾವನೆ(ದ್ವಿ.ಮುದ್ರಣ) ೪ *ಸದ್ರಿಸುಬ್ಬ; ೫ ಅದ್ಭುತ ತ್ಯಾಗ (ದ್ವಿ.ಮುದ್ರಣ); ೬ *ಚುನಾವಣೆ ಅರ್ಥಾತ್ ಬಸಾ ವಣೆ; ೭ *ಬೀಡಿ ಸೇದಬೇಡಿ ಮತ್ತು ಆ ಮಗು; ೮ *ಇಂಗ್ಲಿಷ್–ಕನ್ನಡ ಅರ್ಥಕೋಶ; ೯ ಲಂಚಕ್ಕೆ ಸಂಚಕಾರ (ದ್ವಿ.ಮುದ್ರಣ); ೧೦ *ಟಿಶ್ಯೂ ಔಷಧಿಗಳ ಕೈಪಿಡಿ; ೧೧ ಶ್ರೀ ಕ್ಷೇತ್ರ ಧರ್ಮಸ್ಥಳ (ತೃ. ಮುದ್ರಣ); ೧೨ ಜೀವದ ಮೌಲ್ಯ ಮತ್ತು ಇತರ ಕಥೆಗಳು; ೧೩ ಸತ್ತವನ ಸೇಡು ಮತ್ತು ಇತರ ಕಥೆಗಳು; ೧೪ *ವೆಂಕಟನ ಸಂಕಟ; ೧೫ ಬಾಜಿಗ ಬಾಸಿಂಗ (ದ್ವಿ.ಮುದ್ರಣ); ೧೬ ವೇಣೂರಿನ ಗತವೈಭವ(ದ್ವಿ ಮುದ್ರಣ); ೧೭ ಒಗಟುಗಳು (ದ್ವಿ. ಮುದ್ರಣ); ೧೮ ಜಗಳಗಂಟಿ ಮತ್ತು ಇತರ ಕಥೆಗಳು; ೧೯ ರಥೋತ್ಸವ; ೨೦ ಕರಿನಾಯಿ ಮತ್ತು ಮುಪ್ಪು; ೨೧ ಭಾರತದ ಮಹಾನಗರ–I (ದ್ವಿ.ಮುದ್ರಣ); ೨೨ ಶಿರು ಕ್ಕುರಲ್ (ದ್ವಿ.ಮುದ್ರಣ); ೨೩ ಸೂರ್ಯನ ಸಂಸಾರ; ೨೪ ಭಾರತದ ಮಹಾನಗರ-II (ದ್ವಿ.ಮುದ್ರಣ); ೨೫ ಧೈರ್ಯ ಮತ್ತು ಇತರ ಸತ್ಯಕಥೆಗಳು; ೨೬ ಮಾರಾವತಾರ(ದ್ವಿ. ಮುದ್ರಣ); ೨೭ ಹಾಸವಿಲಾಸ; ೨೮ ಸತ್ಯವಂತ ಬಾಬಿ [ದ್ವಿ.ಮುದ್ರಣ]; ೨೯ ಜಾಣ್ಮೆಯ ಒಗಟುಗಳು ೩೦ ಜಾತಕ ಕಥೆಗಳು; ೩೧ ಕಾರ್ಕಳದ ಚರಿತ್ರೆ; ೩೨ ಮರ್ಜಿ; ೩೩ ದರ್ಶ ನದ ಕಥೆಗಳು; ೩೪ ಅಳುವಿನ ಹೊಳೆ ಮತ್ತು ಕೇಶವಭೂಪ; ೩೫ ಶರಾಬಿನ ಪೀಪಾ ಯಿಗಳು; ೩೬ ಉಪದೇಶ ಶತಕ; ೩೭ ನಿಮಗೆ ಗೊತ್ತಿದೆಯೇ?; ೩೮ ಚತುರ ಚಮ ತ್ಕಾರ; ೩೯ ಸತೀ ಸಾವಿತ್ರಿ; ೪೦ ಆಭರಣಗಳ ಪೆಟ್ಟಿಗೆ ಮತ್ತು ಇತರ ಕಥೆಗಳು; ೪೧ ಭಾರತದ ಮಂತ್ರಿಮಂಡಲಗಳು (ದ್ವಿ.ಮುದ್ರಣ); ೪೨ ಕಾಲುಬಳೆಯ ಕಥೆ; ೪೩ ಭಾರ ತದ ನಾಲ್ಕು ಕಲಶಗಳು; ೪೪ ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು; ೪೫ ಸುಭಾ ಷಿತ; ೪೬ ೧೮೫೭ರ ಸಿಪಾಯಿದಂಗೆ; ೪೭ ಅಕಾಂಡ ತಾಂಡವ; ೪೮ ಸಾಹಸದ ಕಥೆಗಳು; ೪೯ ಸಂಜ್ಞಾಜ್ಞಾನಕೋಶ; ೫೦ ಪಂಡಿತನ ಪಿಟೀಲು; ೫೧ ಭೋಗಯಾತ್ರೆ; ೫೨ ಸಂಗ್ರಾಮ ಸಿಂಹ; ೫೩ ಧರ್ಮಶಿಕ್ಷಾ; ೫೪ ಮಹಾತ್ಮ; ೫೫ ಮೀರಾಬಾಯಿ; ೫೬ ವೀರರಮಣಿ ಕರ್ಮದೇವಿ. ೫೭ ಅರಳಿದ ನಗು; ೫೮ ಸಚಿತ್ರ ಜಪಾನ್; ೫೯ ಚುಟ್ಟಿಬಿಟ್ಟಿಧಿಟ್ಟಿ; ೬೦ ನಿರಪರಾಧಿ; ೬೧ ಭಕ್ತವಾಣಿ; ೬೨ ಜಾನಪದ ಸಾಹಿತ್ಯ; ೬೩ ಡಾಕ್ಟರ್ ಆರೋಗ್ಯಮ್; ೬೪ ಲೌಕಿಕ ನ್ಯಾಯಗಳು; ೬೫ ಶಿಶುಪಾಲ ಮಾನಭಂಗ; ೬೬ ಜರಾಸಂಧ ವಧೆ; ೬೭ ಜವಾಹರಲಾಲರ ಜೀವನ ಚರಿತ್ರೆ; ೬೮ ಕರುಣೆ ಮತ್ತು ಇತರ ಕಥೆಗಳು; ೬೯ ಶ್ರೀಕ್ಷೇತ್ರ ಉಡುಪಿ; ೭೦ ವಿನೋದ ವಿಹಾರ; ೭೧ ಭಾರತದ ಗತವೈಭವ; ೭೨ ಸತ್ಯ ಹರಿಶ್ಚಂದ್ರ; ೭೩ ಸೂಕ್ತಿಗಳು; ೭೪ ದ.ಕ.ದ ಯಕ್ಷಗಾನ ಕಲಾವಿದರು; ೭೫ ದೇವರ ಸಾಮ್ರಾಜ್ಯ ದಲ್ಲಿ...; ೭೬ ಕ್ರಾಂತಿಕಂಠೀರವ ಭಗತ್‌ಸಿಂಘ್; ೭೭ ಜಾತಕಪಠನ ಮತ್ತು ಇತರ ಕಥೆ ಗಳು; ೭೮ ಅಮೃತವಾಣಿ; ೭೯ ಮಾಯಾಮೃಗ; ೮೦ ಡಾಕ್ಟರ್ ಗಾಂಧೀಜಿ; ೮೧ ಆದಿಶ್ರೀ ಶಂಕರಾಚಾರ್ಯರ ಜೀವನ ಚರಿತ್ರೆ; ೮೨ ಆದಿಶ್ರೀ ಶಂಕರಾಚಾರ್ಯ ವಿರಚಿತ ಸ್ತೋತ್ರಗಳು (ಅರ್ಥ ಸಹಿತ); ೮೩ ಬೆಡಗಿನ ನಾಡು ಕೊಡಗು; ೮೪ ಆನೆಯ ಚಿಪ್ಪು ಮತ್ತು ಇತರ ಸತ್ಯಕಥೆಗಳು; ೮೫ ಮಂಗಳೂರಿಂದ ಮಧುರೆಗೆ;

*ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ, ಮಂಗಳೂರು-೧.

# ಮಂಗಳೂರಿಂದ—ಮಧುರೆಗೆ
ಮತ್ತು
# ಭಾರತದ ಗುಹಾಲಯುಗಳು

## ಮಂಗಳೂರಿಂದ—ಮಧುರೆಗೆ

ಸಜ್ಜನರ ಸಹವಾಸದಲ್ಲಿ ಸ್ವಲ್ಪ ಕಾಲವನ್ನು ಕಳೆಯಬೇಕಾದರೂ ಪೂರ್ವ ಪುಣ್ಯವಿರಬೇಕಂತೆ. ಆ ಮಾತು ನಿಜವಾಗಿದ್ದರೆ, ನಾನು ಕೂಡಾ ಅದೃಷ್ಟಶಾಲಿಗಳಲ್ಲೊಬ್ಬನಾಗಿರಬೇಕು. ಸಮಾಜವಿಕಾಸ ಯೋಜನೆ ಯವರು ಜಿಲ್ಲೆಯಿಂದ ಆರಿಸಿದ ಕೆಲ ಗ್ರಾಮ ಮುಖಂಡರನ್ನು ಒಟ್ಟು ಗೂಡಿಸಿ ಕಲ್ಲುಪಟ್ಟಿ, ಗಾಂಧಿಗ್ರಾಮ, ಮಧುರೆ ಮೊದಲಾದ ಸ್ಥಳಗಳಿಗೆ ವಿದ್ಯಾ ಸಮ್ಮಂಧವಾದ ಪ್ರವಾಸ ಕರೆದುಕೊಂಡು ಹೋದರು. ಅವರಲ್ಲಿ ನಾನೊಬ್ಬನಾಗಿದ್ದೆನು.

೧೯೫೬ನೇ ಮಾರ್ಚ ೧೩ನೇ ದಿನ ನಾವು ಒಟ್ಟು ಹದಿನೆಂಟು ಮಂದಿ ಮಂಗಳೂರಿನಿಂದ ಸಂಜೆ ೭ ಗಂಟೆಯ ರೈಲಿನಲ್ಲಿ ಹೊರಟು ಒಳವಕ್ಕೋಡು—ಪೊಲ್ಲಾಚಿ—ಡಿಂಡಿಗಲ್ಲುಗಳಲ್ಲಿ ರೈಲನ್ನು ಬದಲಿಸಿ, ಮರುದಿನ ಮಧ್ಯಾಹ್ನಕ್ಕೆ ಅಂಬಾತುರೈ ಎಂಬ ನಿಲ್ದಾಣವನ್ನು ಸೇರಿದೆವು. ಗಾಂಧಿಗ್ರಾಮದ ಸ. ವಿ. ಯೋಜನೆಯ ಅಧಿಕಾರಿಗಳು ನಿಲ್ದಾಣದಲ್ಲಿ ನಮ್ಮನ್ನು ಎದುರುಗೊಂಡು, ತಮ್ಮ ಜೀಪು ಗಾಡಿಗಳಲ್ಲಿ ನಮ್ಮನ್ನು ಗಾಂಧಿಗ್ರಾಮಕ್ಕೆ ಕರೆದೊಯ್ದರು.

ನವಜನಾಂಗವನ್ನು ರಚಿಸಲು ಹೊರಟ ಮಹಾತ್ಮ ಗಾಂಧಿಯವರ ಪವಿತ್ರ ತತ್ವಗಳ ಬುನಾದಿಯ ಮೇಲೆ ರಚಿತವಾದ ಈ ಗಾಂಧಿಗ್ರಾಮದ ಆಶ್ರಮವು ನೋಡತಕ್ಕುದಾಗಿದೆ. ಶಾಂತವಾದ ವಾತಾವರಣದಿಂದ ಕೂಡಿ ಕೊಂಡು, ಪ್ರತಿಯೊಂದು ಕೆಲಸವೂ ಶಿಸ್ತಿನಿಂದ ನಡೆಯುತ್ತಿರುವ ಇಲ್ಲಿಯ ಕಾರ್ಯಕಲಾಪಗಳನ್ನು ಪರಿಶೀಲಿಸಲು ಬಹಳ ಸಂತೋಷವಾಗುವುದು. ಹಿಂದಿನ ಕಾಲದ ಗುರುಕುಲಗಳಂತೆ, ವಿದ್ಯಾರ್ಥಿಗಳು ಇಲ್ಲಿ ಸ್ವಾವಲಂಬನೆ ಯಿಂದ, ಸಾದಾ ಜೀವನವನ್ನು ನಡೆಸಿಕೊಂಡು ಬರುತ್ತಿರುವುದನ್ನು ಕಂಡು, ನಮ್ಮ ಮನಸ್ಸು ಉಲ್ಲಾಸಗೊಳ್ಳುವುದು. ಎಲ್ಲೆಲ್ಲೂ ಎದ್ದು ಕಾಣುವ ವಿಷಯವೆಂದರೆ ಶಿಸ್ತು. ಶಿಸ್ತೇ ಇಲ್ಲಿನ ಜೀವಾಳ. ಜಾತೀಯತೆಯ ಭೂತ ವಾಗಲೀ, ಬಡವ ಬಲ್ಲಿದನೆಂಬ ತಾರತಮ್ಯವಾಗಲೀ ಇಲ್ಲಿ ಕಾಣುವುದಿಲ್ಲ.

ಮೂಲ ಶಿಕ್ಷಣ ಯೋಜನೆಯ ಅಂತಿಮ ಧ್ಯೇಯವು ದೇಶದ ಸಮಸ್ತ ಮಕ್ಕಳಿಗೂ ಉಚಿತವಾದ ಒತ್ತಾಯ ಶಿಕ್ಷಣವನ್ನು ಕೊಡುವುದಾದರೂ, ಮಕ್ಕಳ ವಿದ್ಯಾಭ್ಯಾಸವನ್ನು ಸಾರ್ವತ್ರಿಕವಾಗಿಯೂ, ಒತ್ತಾಯವಾಗಿಯೂ ನಡೆಸಬೇಕೆಂದು ಕಾನೂನು ಮಾಡದೆ ತಕ್ಷಣ ಈ ದೇಶದ ಏಳು ಲಕ್ಷ ಹಳ್ಳಿಗಳಲ್ಲಿ ಈ ಶಾಲೆಗಳನ್ನು ತೆರೆಯಲು ಸಾಧ್ಯವಿಲ್ಲವಾದುದರಿಂದ ಈ ಹೊಸ ಶಿಕ್ಷಣ ಎಷ್ಟರ ಮಟ್ಟಿಗೆ ಫಲಪ್ರದವಾದೀತೆಂದು ತಿಳಿಯಲು ಪ್ರಾಯೋಗಿಕವಾಗಿ ಕೆಲವು ಶಾಲೆಗಳನ್ನು ನಡೆಸಬೇಕೆಂದು ತಾಲಿಮಿ ಸಂಘವು ಯೋಚಿಸಿ, ಕೆಲವು ಖಾಸಗಿ ಸಂಸ್ಥೆಗಳಲ್ಲಿಯೂ, ಪ್ರಾಂತ ಸರಕಾರಗಳ ಶಿಕ್ಷಣ ಶಾಖೆಯ ಮೂಲಕವೂ ಯೋಜನೆಯನ್ನು ಕಾರ್ಯರೂಪಕ್ಕೆ ತಂದಿತು. ಈ ತಳಹದಿಯ ಮೇಲೆ ಗಾಂಧಿಗ್ರಾಮದ ಆಶ್ರಮವು ತೆರೆಯಲ್ಪಟ್ಟಿದೆ.

ಗಾಂಧಿಗ್ರಾಮದಲ್ಲಿ ನೋಡಿ ತಿಳಿಯಬೇಕಾದುವು ಹಲವಿವೆ. ಸಮಯಾಭಾವದಿಂದ ನಮಗೆ ಎಲ್ಲವನ್ನು ನೋಡಲಾಗದಿದ್ದರೂ, ನಾವು ಊಟ ತಿಂಡಿಯ ಗೊಡವೆಯನ್ನು ಬಿಟ್ಟು, ನಮ್ಮ ಮುಂದಾಳುಗಳನ್ನನುಸರಿಸಿ, ಅಲ್ಲಿಯ ಹಲವು ಕೈಗಾರಿಕೆ, ಕೃಷಿ, ಬಾಲವಿಹಾರ ಮೊದಲಾದುವುಗಳನ್ನು ನೋಡಿ ಆನಂದಿಸಿದೆವು. ಅಂದು ಸಂಜೆ ಗಾಂಧಿಗ್ರಾಮಕ್ಕೆ ಸುಮಾರು ಒಂದೂವರೆ ಮೈಲು ದೂರವಿರುವ ಚಿನ್ನಾಲ ಪಟ್ಟಿ (ಪಟ್ಟಿ ಎಂದರೆ ಗ್ರಾಮವೆಂದರ್ಥ) ಎಂಬ ಊರನ್ನು ಅಲ್ಲಿಯ ಮ. ವಿ. ಯೋಜನೆಯ ಮುಂದಾಳುಗಳು ನಮ್ಮನ್ನು ತಮ್ಮ ಜೀಪುಗಳಲ್ಲಿ ಕರೆಕೊಂಡು ಹೋಗಿ, ತೋರಿಸಿದರು. ಚಿನ್ನಾಲಪಟ್ಟಿಯು ದೊಡ್ಡ ಪಟ್ಟಣವಲ್ಲವಾದರೂ, ಕೃತಕ ರೇಶ್ಮೆಯ ಸೀರೆಗಳನ್ನು ತಯಾರಿಸುವ ಪ್ರಾಮುಖ್ಯ ಕೇಂದ್ರವಾಗಿದೆ. ಆ ಊರಲ್ಲಿ ಇಂಥಾ ಸೀರೆಗಳನ್ನು ನೇಯುವ ಸುಮಾರು ೪೦೦೦ ಮಗ್ಗಗಳಿವೆಯಂತೆ. ಈ ಸೀರೆಗಳು ಬಹು ನಾಜೂಕಾಗಿಯೂ ಅಗ್ಗವಾಗಿಯೂ ಇವೆ.

ಸಂಜೆಯ ಪ್ರಾರ್ಥನಾವೇಳೆಗೆ ಸರಿಯಾಗಿ ನಾವು ಚಿನ್ನಾಲಪಟ್ಟಿಯಿಂದ ಹಿಂದಿರುಗಿ, ಆಶ್ರಮದ ಪ್ರಾರ್ಥನೆಯಲ್ಲಿ ಭಾಗವಹಿಸಿದೆವು. ಎತ್ತರವಾದ ಸ್ಥಂಬದ ಮೇಲಿರುವ ಉಜ್ವಲವಾದ, ಹಸಿರು ವಿದ್ಯುಚ್ಛಕ್ತಿಯ ದೀಪದ ಬೆಳಕಿನಲ್ಲಿ ಅಲ್ಲಿಯವರು ವೇದಿಕೆಯ ಸುತ್ತಲೂ ಶಿಸ್ತಿನಿಂದ ಮಂಡಿಸಿದ್ದರು. ಪ್ರಾರ್ಥನಾ ಗಂಟೆಯು ಬಾರಿಸಲ್ಪಟ್ಟೊಡನೆ ಮೌನ ಪ್ರಾರ್ಥನೆಯಾದ

ಮೇಲೆ ಕೆಲವು ಹಾಡುಗಳು ಸಾಮೂಹಿಕವಾಗಿ ಹಾಡಲ್ಪಟ್ಟವು. ಹಾಡುವ ಗತಿಯು ಮಂದವಾಗಿಯೂ ಸುಲಲಿತವಾಗಿಯೂ ಇದ್ದು, ದಿಗಂತಗಳಿಂದ ನಿಧಾನವಾಗಿ ಎದ್ದು ಮೇಲೇರುವ ಧ್ವನಿಯಂತೆ ಇಂಪಾಗಿ ಕೇಳಿಸುತಿತ್ತು. ಬೈಬಲ್, ಕುರಾನ್ ಮತ್ತು ಗಾಂಧಿಜಿಯವರ ಜೀವನಚರಿತ್ರೆಗೆ ಸಮ್ಬಂಧಿಸಿದ ಕೆಲವು ವಾಕ್ಯಗಳನ್ನು ಹೇಳಿದ ಮೇಲೆ ಪ್ರಾರ್ಥನಾಸಭೆಯು ಚದರಿತು.

ಮರುದಿನ ನಾವು ಅಲ್ಲಿಂದ ಹೊರಟು ಜೀಪುಗಳಲ್ಲಿ ಬರುವಾಗ ದಾರಿಯಲ್ಲಿ ಸ. ವಿ. ಯೋಜನೆಯ ಸಹಕಾರದಿಂದಾದ ಹೆರಿಗೆ ಕೇಂದ್ರ, ಕೋಳಿ ಸಾಕಣೆ, ಹಲವು ಜಾತಿಯ ಸುಧಾರಿತ ತಳಿಯ ಎತ್ತು–ಕೋಣಗಳು, ಒಂದೆತ್ತಿನ ಗಾಣ, ಬೆಲ್ಲ ತಯಾರಿಸುವಿಕೆ, ನೀರೆತ್ತುವ ನವೀನ ಯೋಜನೆ ಮೊದಲಾದುವನ್ನು ನೋಡಿಕೊಂಡು, ಮಧುರೆಗೆ ಬಂದು ಮಂಗಮ್ಮಾಳ್ ಛತ್ರದಲ್ಲಿ ಬಿಡಾರಮಾಡಿದೆವು.

ಮಧುರೆಯು ದೊಡ್ಡ ಪಟ್ಟಣ. ಇದು ದಕ್ಷಿಣ ಹಿಂದುಸ್ಥಾನದ ಪ್ರಾಮುಖ್ಯ ಚಾರಿತ್ರಿಕ ಸ್ಥಳವಾಗಿಯೂ, ಕೈಗಾರಿಕಾ ಕೇಂದ್ರವಾಗಿಯೂ ಇದೆ. ಈ ಪಟ್ಟಣವು ಹಲವು ಶತಮಾನಗಳಿಂದ, ಹಲವು ರಾಜರ ರಾಜಧಾನಿಯಾಗಿದ್ದು, ಬೆಳೆಯುತ್ತ ಬಂದಿದೆ. ಆದರೆ ಕ್ರಿ.ಶ.೧೩೧೦ರಲ್ಲಿ ಮಲ್ಲಿಕಾಫೂರನ ಧಾಳಿಗೆ ಗುರಿಯಾಗಿ ಮೀನಾಕ್ಷಿ ದೇವಾಲಯದ ಕೋಟೆ ಮತ್ತು ಹದಿನಾಲ್ಕು ಗೋಪುರಗಳು ಹಾಳಾದುವು. ಆ ಮೇಲೆ ೧೬೨೩–೧೬೫೯ರ ವರೆಗೆ ರಾಜ್ಯಭಾರ ಮಾಡಿದ ತಿರುಮಲ ನಾಯಕನ ಕಾಲದಲ್ಲಿ ಮಧುರೆಯು ನಾಲ್ಕೂ ನಿಟ್ಟಿನಲ್ಲಿ ಬೆಳೆದುಬಂತು. ಅವನು ಅರಮನೆ, ತೆಪ್ಪಾಕುಲಂ, ಸುಂದರವಾದ ಪುದುಮಂಟಪ, ರಾಯಗೋಪುರ ಮೊದಲಾದುವನ್ನು ಕಟ್ಟಿಸಿದನು. ೧೬೮೯—೧೭೦೪ರ ವರೆಗೆ ರಾಜ್ಯಾಧಿಕಾರವನ್ನು ವಹಿಸಿದ ಮಂಗಮ್ಮಾಳ್ ರಾಣಿಯು ಹಲವು ರಸ್ತೆಗಳನ್ನೂ, ಧರ್ಮಛತ್ರಗಳನ್ನೂ ಕಟ್ಟಿಸಿದಳು. ೧೭೦೪ರಲ್ಲಿ ರಾಜಪಟ್ಟಕ್ಕೆ ಅರ್ಹನಾದ ಅವಳ ಮೊಮ್ಮಗನು ಪ್ರಾಯಪ್ರಬುದ್ಧನಾಗಲು, ಅವಳು ಪಟ್ಟವನ್ನು ಬಿಟ್ಟುಕೊಡದುದರಿಂದ, ರಾಣಿಯನ್ನು ಜೀವಾಂತ್ಯದ ವರೆಗೆ ಸೆರೆಯಲ್ಲಿಟ್ಟು, ನರಳಿ ಸಾಯುವಂತೆ ಮಾಡಿದರು.

# ಮೀನಾಕ್ಷಿ ದೇವಾಲಯ

ಮೀನಾಕ್ಷಿ ದೇವಾಲಯವು ಮಧುರಾ ಪಟ್ಟಣದ ನಟ್ಟನಡುವಿನಲ್ಲಿದೆ. ಅದು ಒಂದು ದೇವಾಲಯವಾಗಿರದೆ, ಹಲವು ದೇವಾಲಯಗಳ ಒಂದು ಗುಂಪಿನಂತೆ ಕಾಣುತ್ತದೆ. ಹೊಸಬನೊಬ್ಬನು ದೇವಾಲಯವನ್ನು ಪ್ರವೇಶಿಸಿ, ಎಲ್ಲವನ್ನೂ ನೋಡಿಕೊಂಡು ಬಂದ ದಾರಿಯಲ್ಲಿ ಹಿಂದಿರುಗಲು ಸಾಧ್ಯವಾಗಲಾರದು. ದೇವಾಲಯದ ಹೊರ ಮಂಟಪಗಳಲ್ಲೆಲ್ಲಾ ಬಗೆಬಗೆಯ ಸಾಮಾನುಗಳ ಅಂಗಡಿಗಳಿವೆ. ಇದರಿಂದ ದೇವಾಲಯಕ್ಕೆ ತುಂಬಾ ಆದಾಯವಿದೆ.



ಮೀನಾಕ್ಷಿ ದೇವಾಲಯ.

ದೇವಾಲಯವು ಸುಮಾರು ೮೩೦ × ೭೩೦ ಅಡಿ ವಿಸ್ತಾರವಾಗಿ ಸುತ್ತಲೂ ಎತ್ತರವಾದ ಕೋಟೆಯಿಂದ ಆವರಿಸಲ್ಪಟ್ಟಿದೆ. ಅದರೊಳಗೆ ಅಂದವಾದ ಕೆರೆಯೂ, ಹಲವು ಕೆತ್ತನೆಯ ಮಂಟಪಗಳೂ, ದೇವಾಲಯಗಳೂ ಇವೆ. ಈ ನಾಲ್ಕು ಕೋಟೆಗಳ ಮಧ್ಯದಲ್ಲಿ ಸುಮಾರು ೩೩ ಮಿಲಿಯಕ್ಕೆ ಮಿಕ್ಕಿ ಕೆತ್ತಿದ ಮತ್ತು ಗಚ್ಚಿನಿಂದ ರಚಿಸಿದ ಚಿತ್ರಿಕೆಗಳಿವೆಯೆಂದು ಹೇಳುತ್ತಾರೆ.

ದೇವಾಲಯದ ಮುಖ್ಯಮೂರ್ತಿಯು ಮೀನಾಕ್ಷಿಯದು. ದೇವರ ಮೈಯ್ಯಲ್ಲಿ ನವರತ್ನ ಖಚಿತವಾದ ಆಭರಣಗಳಿವೆ. ತಿರುಮಲ ನಾಯಕನು ಮಾಡಿಸಿದ ನವರತ್ನದ ಕಿರೀಟವೂ, ಸುಮಾರು ೨೦,೦೦೦ ರೂಪ್ಯಾ ಬೆಲೆ ಬಾಳಬಹುದಾದ ಮೂಗುತಿಯ ಮಾಣಿಕ್ಯವೂ, ೧೮೧೨-೧೮೨೮ರ

ವರೆಗೆ ಅಲ್ಲಿಯ ಕಲೆಕ್ಟರರಾಗಿದ್ದ ಪೀಟರ್ ರೋಸ್ ಎಂಬವರು ಮಾಡಿಸಿದ ಆಭರಣಗಳೂ ನೋಡತಕ್ಕವು.

ನಾವು ರೈಲಿನಲ್ಲಿ ಬರುವಾಗ ಹಲವು ಮೈಲುಗಳ ದೂರದಿಂದಲೇ ಮೀನಾಕ್ಷಿ ದೇವಾಲಯದ ಮುಗಿಲು ಮುಟ್ಟುವ ಗೋಪುರಗಳನ್ನು ಕಾಣಬಹುದು. ಎತ್ತರವಾದ ನಾಲ್ಕು ಗೋಪುರಗಳ ಪೈಕಿ, ದಕ್ಷಿಣ ದಿಕ್ಕಿನ ಗೋಪುರವು ಅತ್ಯುನ್ನತವಾದುದು. ಇವುಗಳ ಕೆಳಭಾಗವು ಶಿಲೆಯದಾಗಿದ್ದು, ಮೇಲಿನ ಭಾಗವು ಇಟ್ಟಿಗೆ ಮತ್ತು ಗಚ್ಚಿನಿಂದ ಮಾಡಲ್ಪಟ್ಟಿದೆ. (ಈ ಊರಲ್ಲಿ ಮಳೆ ಕಡಿಮೆ.) ದೇವಾಲಯದೊಳಗಿನ ಹಲವು ಮಂಟಪಗಳಲ್ಲಿ ೧೬ನೇ ಶತಮಾನದಲ್ಲಿ ಆರ್ಯನಾಥನೆಂಬ ಅಮಾತ್ಯನೊಬ್ಬನಿಂದ ಕಟ್ಟಿಸಲ್ಪಟ್ಟ ಸಾವಿರ ಕಂಬದ ಮಂಟಪವು ಸರ್ವಾಂಗ ಸುಂದರವಾಗಿದೆ. ಅದರಲ್ಲಿ ೯೮೫ ಕೆತ್ತನೆಯ ಕಂಬಗಳಿವೆ.

## ತಿರುಮಲ ನಾಯಕನ ಅರಮನೆ

ಎತ್ತರವಾದ ಕಮಾನುಗಳ ಸಾಲಿನಿಂದ ರಂಜಿಸುವ, ತಿರುಮಲ ನಾಯಕನ ಅರಮನೆಯು ನೋಡತಕ್ಕದಾಗಿದೆ. ಈಗ ಅದು ಸರಕಾರಿ ಕಚೇರಿಗಳನ್ನೊಳಗೊಂಡಿದ್ದರೂ, ಪ್ರವಾಸಿಗಳಿಗೆ ನೋಡಲು ಬಿಡುತ್ತಾರೆ. ಅರಮನೆಯ ಮುಖ್ಯ ಗುಮಟವು ೬೦ ಅಡಿ ಸುತ್ತಳತೆಯಿದ್ದು, ನೆಲದಿಂದ ೭೩ ಅಡಿ ಎತ್ತರವಿದೆ. ಎದುರಿನ ಹಜಾರದ ಕಂಬಗಳು ೫೫ ಅಡಿ ಎತ್ತರವಾಗಿವೆ. ಬರೇ ಇಟ್ಟಿಗೆ ಮತ್ತು ಗಚ್ಚಿನಿಂದ ಮಾಡಿದ ಕೆತ್ತನೆ ಕೆಲಸಗಳು ನಮ್ಮನ್ನು ದಂಗುಬಡಿಸುತ್ತವೆ. ಅರಮನೆಯ ಸಭಾಭವನವು ೧೩೫ × ೭೦ ಅಡಿ ವಿಸ್ತಾರವಾಗಿದ್ದು, ಕಮಾನುಗಳಿಂದಲೂ ಚಿತ್ರಿಕೆಗಳಿಂದಲೂ ಕೂಡಿದೆ.

## ತೆಪ್ಪಾಕುಲಂ

ತಿರುಮಲ ನಾಯಕನು ಮಾಡಿಸಿದ ೧೦೦೦ × ೯೫೦ ಅಡಿ ವಿಸ್ತಾರವಾದ, ಅತ್ಯಂತ ಸುಂದರವಾದ ಕೆರೆಯು ತೆಪ್ಪಾಕುಲಂ ಎಂದು ಕರೆಯಲ್ಪಡುತ್ತದೆ. ಮಧುರೆಯ ಬಳಿ ಹರಿಯುವ ವೈಗೈ ನದಿಯಿಂದ ಕಾಲುವೆಯ ಮುಖಾಂತರ ಇದಕ್ಕೆ ನೀರು ಬರುವಂತೆ ಮಾಡಿದ್ದಾರೆ. ಈ ಕೆರೆಯ ನಾಲ್ಕು ಬದಿಗಳಲ್ಲೂ ಸುಂದರವಾದ ಆವರಣವಿದ್ದು, ೫ ಅಡಿ ಅಗಲವಿರುವ

ದಾರಿಯೂ, ಕೆರೆಗೆ ಇಳಿಯಲು ಪಾವಟಿಗೆಗಳೂ ಇವೆ. ಈ ಕೆರೆಯ ಮಧ್ಯ ದಲ್ಲಿ ಚೌಕಾಕಾರವಾದ ದ್ವೀಪವಿದ್ದು, ಅದರಲ್ಲಿ ಎತ್ತರವಾದ ಮೂರು ಅಂತಸ್ತುಗಳಿರುವ ಗೋಪುರದ ಮಂಟಪವಿದೆ. ಇದರ ಸುತ್ತಲೂ ಅಂದ ವಾದ ಉದ್ಯಾನವನವಿದೆ. ನಾವು ಟಿಕೇಟನ್ನು ಪಡಕೊಂಡು ದೋಣಿಯಲ್ಲಿ ಈ ನಡುಗಡ್ಡೆಯನ್ನು ಸೇರಬಹುದು. ಈ ದ್ವೀಪದ ನಾಲ್ಕು ಮೂಲೆಗ ಳಲ್ಲೂ ಸುಂದರವಾದ ಮಂಟಪಗಳಿವೆ. ಜಾತ್ರೆಯ ಸಮಯದಲ್ಲಿ ಶಿವ ಮತ್ತು ಮೀನಾಕ್ಷಿಯ ಮೂರ್ತಿಗಳನ್ನು ಮೆರವಣಿಗೆಯಲ್ಲಿ ತಂದು, ಈ ಕೆರೆ ಯಲ್ಲಿ ತೆಪ್ಪೋತ್ಸವವಾಗುತ್ತದೆ. ಆಗ ಕೆರೆಯ ಸುತ್ತಲೂ ದೀಪವನ್ನಿಟ್ಟು ದೀಪೋತ್ಸವವನ್ನಾಚರಿಸುತ್ತಾರೆ.

## ಕಲ್ಲುಪಟ್ಟಿ

ಕೆಲವು ವರ್ಷಗಳ ಮೊದಲು ಕಲ್ಲುಪಟ್ಟಿ ಎಂಬ ಗ್ರಾಮವು ತಮಿಳು ನಾಡಿನಲ್ಲಿಯೇ ಹಿಂದುಳಿದ ಗ್ರಾಮವಾಗಿತ್ತು. ಅಲ್ಲಿಯ ಜನರು ಕಡು ಬಡವರಾಗಿದ್ದು, ಕುಡಿಕರಾಗಿಯೂ, ಅನಾಗರಿಕರಾಗಿಯೂ ಇದ್ದರು. ಕಲ್ಲು ಪಟ್ಟಿಯ ಗಾಂಧಿನಿಕೇತನ ಆಶ್ರಮದ ಗೌರವ ಪ್ರಿನ್ಸಿಪಾಲರಾಗಿರುವ ಶ್ರೀ ಗುರುಸ್ವಾಮಿ ನಾಡಾರರು ತಮ್ಮ ಸಂಗಡಿಗರೊಂದಿಗೆ ಕೆಲವರ್ಷಗಳ ಹಿಂದೆ ಇಲ್ಲಿ ಬಂದು ಮಾರ್ಗದ ಬದಿಯಲ್ಲಿ ಒಂದು ಚರಕವನ್ನಿಟ್ಟುಕೊಂಡು ನೂಲಲು ಪ್ರಾರಂಭಿಸಿದರು. ಇವರನ್ನು ನೋಡಿದ ಗ್ರಾಮಸ್ಥರು, ನೂಲು ವಿಕೆಯಲ್ಲಿ ವಿಶ್ವಾಸವಿಲ್ಲದವರಾಗಿ, ಇವರನ್ನು ಹುಚ್ಚರೆಂದು ತಿಳಿದು, ಯಾರೂ ಹತ್ತಿರ ಹೋಗಲಿಲ್ಲ. ಇವರ ನಿಶ್ಚಲವಾದ ಆತ್ಮಶಕ್ತಿ ಮತ್ತು ತಾಳ್ಮೆಗೆ ಮಾರುಹೋದ ಗ್ರಾಮಸ್ಥರು ಕ್ರಮೇಣ ಒಬ್ಬೊಬ್ಬರಾಗಿ ಸಹಕರಿಸಿ, ಈಗಿನ ಆಶ್ರಮವನ್ನು ರಚಿಸುವಂತಾಯಿತು.

ಈ ಆಶ್ರಮವು ೧೭-೧-೧೯೪೭ರಲ್ಲಿ ಬರೇ ೩೦ ವಿದ್ಯಾರ್ಥಿಗಳು ಮತ್ತು ಇಬ್ಬರು ಉಪಾಧ್ಯಾಯರುಗಳಿಂದ ಪ್ರಾರಂಭವಾಯಿತು. ಇದು ಬೆಳೆದು ಬಂದು ಇಂದು ಸುಮಾರು ೪೧೭ ವಿದ್ಯಾರ್ಥಿಗಳೂ ೧೭ ಮಂದಿ ಉಪಾಧ್ಯಾಯರೂ ಇದ್ದಾರೆ. ಇಲ್ಲಿ ೩—೬ ಪ್ರಾಯದ ಮಕ್ಕಳಿ ಗಾಗಿ ಬಾಲವಾಡಿ ದರ್ಜೆಗಳೂ, ೬—೧೪ರ ವರೆಗಿನವರಿಗಾಗಿ ಪ್ರಾಥ ಬುನಾದಿ ಶಿಕ್ಷಣ ಶಾಲೆಯೂ, ೧೪ರ ಮೇಲಿನವರಿಗಾಗಿ ಕೈಗಾರಿಕಾ ದರ್ಜೆ

ಗಳೂ ಇವೆ ಇಲ್ಲಿಯ ಮಾತೃಭಾಷೆ ತಮಿಳು. ಇಲ್ಲಿ ಸ್ವಾವಲಂಬನೆ ಮತ್ತು ಶಿಸ್ತಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡಲಾಗಿದೆ. ದುರಭ್ಯಾಸಗಳಿಗೆ ಇಲ್ಲಿ ಎಡೆಯಿಲ್ಲ. ಇಲ್ಲಿರುವವರು ಕಡ್ಡಾಯವಾಗಿ ಖಾದಿಯನ್ನೇ ಉಪಯೋಗಿಸಬೇಕು. ಕಳೆದ ವರುಷ ಇಲ್ಲಿಯ ಮಕ್ಕಳು ೧೮೩೭-೧೨-೦ ಯನ್ನು ಲಾಭವಾಗಿ ಸಂಪಾದಿಸಿದ್ದಾರೆ.

ಇಲ್ಲಿಯ ಪ್ರತಿಯೊಂದು ಕ್ರಮವೂ ಗಾಂಧಿ ಗ್ರಾಮದಂತೆಯೇ ಇರುವುದಲ್ಲದೆ, ಕೈಗಾರಿಕೆಯಲ್ಲಿ ಇಲ್ಲಿ ಹೆಚ್ಚಿನ ವೈವಿಧ್ಯತೆಯಿದೆ. ಇಲ್ಲಿಯ ಮಣ್ಣು ಫಲವತ್ತಾಗಿ ಸುತ್ತುಮುತ್ತಲೂ ತುಂಬಾ ಹತ್ತಿಯು ಬೆಳೆಯುವುದರಿಂದ, ಖಾದಿ ವ್ಯವಸಾಯಕ್ಕೆ ಇಲ್ಲಿ ತುಂಬಾ ಅನುಕೂಲತೆಯಿದೆ. ಆಶ್ರಮದ ಮಕ್ಕಳು ತಾವೇ ನೂತು ನೇದ ಬಟ್ಟೆಯನ್ನೇ ಧರಿಸುತ್ತಾರೆ. ಇಲ್ಲಿ ಪ್ರತಿಯೊಂದು ಕೈಗಾರಿಕೆಯೂ ಇರುವುದಲ್ಲದೆ, ನಾವು ಇತರರನ್ನು ಹೊಂದಿಕೊಂಡಿರದೆ ಸ್ವತಂತ್ರಜೀವನವನ್ನು ನಡೆಸಲು ಉಪಯೋಗವಾಗುವಂತಹ ಹಲವು ತರದ ಗುಡಿ ಕೈಗಾರಿಕೆಗಳು ಇವೆ. ಒಬ್ಬನೇ ಕೈಯಿಂದ ತಿರುಗಿಸುವ ಸಣ್ಣ ಗಾಣದ ಮಾದರಿಯು ಇಲ್ಲಿದೆ.

ನಯಿ ತಾಲಿಮ್ ಅಥವಾ ಹೊಸ ಶಿಕ್ಷಣದ ಭಾವನೆಯನ್ನು ಗಾಂಧಿಜಿಯವರು ೧೯೩೭ನೇ ಜುಲೈಯಲ್ಲಿ ತಯಾರಿಸಿ ದೇಶದ ಮುಂದಿಟ್ಟರು. ಅದೇ ವರ್ಷ ಒಕ್ಟೋಬರಿನಲ್ಲಿ ಈ ಹೊಸ ಶಿಕ್ಷಣವನ್ನು ವಿಚಾರ ಮಾಡುವುದಕ್ಕಾಗಿ ವರ್ಧಾದಲ್ಲಿ "ದೇಶೀಯ ಶಿಕ್ಷಣ ಸಭೆ" ಎಂಬ ಹೆಸರಿನಲ್ಲಿ ಅಧಿವೇಶನ ಸೇರಿತು. ಗಾಂಧಿಜಿಯವರೇ ಸಭೆಯ ಅಧ್ಯಕ್ಷತೆಯನ್ನು ವಹಿಸಿ, ಹಳ್ಳಿಯ ಕೈ ಕಸುಬುಗಳ ಮೂಲಕ ದೇಶೀಯ ಶಿಕ್ಷಣವನ್ನು ಕೊಡುವ ತಮ್ಮ ಹೊಸ ಯೋಜನೆಯನ್ನು ಸಭೆಯ ಮುಂದೆ ಇಟ್ಟರು. ಚರ್ಚೆಯಾದ ಮೇಲೆ ಒಂದು ಸಮಿತಿಯನ್ನು ಮಾಡಿ ವಿವರವಾದ ಪಾಠ ವಿಷಯಗಳನ್ನು ನಿರ್ಧರಿಸಿ, ಗಾಂಧಿಜಿಯವರಿಗೆ ಕಳುಹಿಸಿಕೊಡಬೇಕೆಂದು ತೀರ್ಮಾನವಾಯಿತು. ಮುಂದೆ ೧೯೩೮ನೆಯ ಫೆಬ್ರವರಿಯಲ್ಲಿ ಈ ಸಮಿತಿಯು ತನ್ನ ವರದಿಯನ್ನು ಗಾಂಧಿಜಿಯವರಿಗೆ ಕಳುಹಿಸಿಕೊಟ್ಟಿತು. ಅದೇ ವರ್ಷ ಮಾರ್ಚಿಯಲ್ಲಿ ನಡೆದ ಹರಿಪುರದ ಕಾಂಗ್ರೆಸ್ ಅಧಿವೇಶನವು ಆ ಯೋಜನೆಯನ್ನು ಒಪ್ಪಿ ಅಖಿಲ ಭಾರತಕ್ಕೆ ಈ ಶಿಕ್ಷಣ ದೊರೆಯುವಂತೆ ತಕ್ಕ ಕಾರ್ಯಕ್ರಮ ಕೈಗೊಳ್ಳಲು ಸಮಿತಿಯನ್ನು ಏರ್ಪಡಿಸಿತು. ಆ

ಸಮಿತಿಯು ಮುಂದಿನ ಎಪ್ರಿಲ್ ತಿಂಗಳಲ್ಲಿ "ಹಿಂದುಸ್ಥಾನಿ ತಾಲಿಮಿ ಸಂಘ" ಎಂಬ ಹೆಸರಿನಲ್ಲಿ ತನ್ನ ಕೇಂದ್ರ ಕಛೇರಿಯನ್ನು ಸೇವಾಗ್ರಾಮದಲ್ಲಿ ಸ್ಥಾಪಿಸಿತು.

ಮದ್ರಾಸು ಸರಕಾರದಿಂದ ಮಂಜೂರಾದ ನಯಿಾ ತಾಲಿಮ್ ಇಲಾಖೆಯ ಪಾಠಪಟ್ಟಿಗಳಿಗನುಸಾರವಾಗಿ ಇಲ್ಲಿಯ ಪಾಠಗಳು ನಡೆಯುತ್ತವೆ.

ಇಲ್ಲಿಯ ಮುಂದಾಳುಗಳು ನಮ್ಮನ್ನು ಆದರಿಸಿ, ಇಲ್ಲಿಯ ಹಲವು ಗುಡಿ ಕೈಗಾರಿಕಾ ಕ್ಷೇತ್ರಗಳನ್ನು ತೋರಿಸಿ ವಿವರಿಸಿದರು. ಕಬ್ಬಿಣದ ಕೆಲಸ, ಮರದ ಕೆಲಸ, (ಉತ್ತಮ ತರದ ಕಿಸಾನ್ ಚರಕಗಳು) ಚರ್ಮ ಹದಮಾಡುವಿಕೆ, ಬಟ್ಟೆ ನೇಯುವಿಕೆ, ಸಾಬೂನು ತಯಾರಿ, ಕೈಯಿಂದ ತಯಾರಿಸುವ ಕಾಗದ, ಸುಧಾರಿತ ಗಾಣ, ಮಣ್ಣಿನ ಕೆಲಸ, ಕೋಳಿ ಸಾಕಣೆ, ಜೇನು ಸಾಕಣೆ, ಸುಧಾರಿತ ಕೃಷಿ ಮೊದಲಾದುವೆಲ್ಲವನ್ನೂ ವಿವರಿಸಿ, ನಮ್ಮ ಪ್ರಯಾಣದ ಉದ್ದೇಶವು ಸಫಲತೆ ಹೊಂದಲು ಸಹಕರಿಸಿದರು.

ನಾವು ಅದೇ ದಿನ ಸಂಜೆ ಅಲ್ಲಿಂದ ಹೊರಟು ಪುನಃ ಮಧುರೆಗೆ ಬಂದೆವು. ಪ್ರತಿ ಮಂಗಳವಾರ ಮತ್ತು ಶುಕ್ರವಾರಗಳಲ್ಲಿ ಮಿಾನಾಕ್ಷಿ ದೇವಸ್ಥಾನದ ಎದುರಿಗೆ ತಲೆಯ ಮೇಲೆ ಕುಂಭಗಳನ್ನಿಟ್ಟುಕೊಂಡು ಕುಣಿಯುವ "ಅಮ್ಮನ ಕೊಡ" ಎಂಬ ಅತ್ಯಂತ ಆಶ್ಚರ್ಯಕರವಾದ ಕುಣಿತವನ್ನು ನೋಡಿದೆವು.

ಸ. ವಿ. ಯೋಜನೆಯವರು ನಮ್ಮ ಜಿಲ್ಲೆಯ ಕೆಲವು ಮುಖಂಡರನ್ನು ಆರಿಸಿ, ಇತರ ಜಿಲ್ಲೆಗಳಲ್ಲಿ ತಮ್ಮ ಯೋಜನೆಯಿಂದಾದ ಪ್ರಗತಿಯನ್ನು ತೋರಿಸುವ ಉದ್ದೇಶವನ್ನಿಟ್ಟುಕೊಂಡು ಈ ಪ್ರವಾಸದ ಕಾರ್ಯಕ್ರಮವನ್ನು ರಚಿಸಿದ್ದರು. ಅದರಲ್ಲಿ ರಾಮೇಶ್ವರದ ಪ್ರವಾಸವು ಸೇರಿರಲಿಲ್ಲ. ಆದರೆ ಹೆಚ್ಚಿನವರು ಅಲ್ಲಿಯ ದೇವಸ್ಥಾನವನ್ನೂ, ಕಡಲಿನಲ್ಲಿ ಕಟ್ಟಿದ ಪಾಂಬನ್ ಸೇತುವೆಯನ್ನೂ ನೋಡಬೇಕಾಗಿ ಕೇಳಿಕೊಂಡದ್ದರಿಂದ, ದಯಾಳುಗಳಾದ ನಮ್ಮ ಮುಂದಾಳುಗಳು ನಮ್ಮ ಆಸೆಯನ್ನು ನೆರವೇರಿಸಲು ಒಪ್ಪಿ, ನಾವು ಅಲ್ಲಿಂದ ರಾಮೇಶ್ವರಕ್ಕೆ ಹೋಗುವಂತಾಯಿತು.

ನಾವು ಮಧುರೆಯಲ್ಲಿ ರಾತ್ರಿ ರೈಲಿನಲ್ಲಿ ಕೂತು, ಮರುದಿನ ಬೆಳಗ್ಗೆ ೭ ಗಂಟೆಗೆ ಪಾಂಬನ್ ಸೇತುವೆಯನ್ನು ತಲ್ಪಿದೆವು. ರಾಮೇಶ್ವರವು ದ್ವೀಪ

ವಾಗಿದೆ. ರಾವಣನು ಕಪಿಗಳ ಸಹಾಯದಿಂದ ಕಟ್ಟಿದ ಸೇತುವೆಯ ತುಂಡೊಂದು ರಾಮೇಶ್ವರವೆಂದು ಹಿಂದುಗಳು ನಂಬುತ್ತಾರೆ. ಆ ನಂಬಿಕೆಗೆ ಪುಷ್ಟಿ ದೊರೆಯುವಂತೆ ಸೇತುವೆಯ ಬದಿಯಲ್ಲಿ ದೊಡ್ಡ ದೊಡ್ಡ ಕಲ್ಲುಗಳನ್ನು ಸಮುದ್ರದುದ್ದಕ್ಕೂ ಹಾಸಿದಂತೆ ಕಾಣುತ್ತದೆ. ಈ ಜಲಸಂಧಿಯಲ್ಲಿ ಸುಮಾರು ೧೪೫ ಕುಂದಗಳನ್ನು ಹಾಕಿ ರೈಲು ಸಂಕವನ್ನು ರಚಿಸಿದ್ದಾರೆ. ರೈಲು ಇದರ ಮೇಲೆ ಹೋಗುವಾಗ ಬರೇ ನಾಲ್ಕು ಮೈಲುಗಳ ವೇಗದಲ್ಲಿ ನಿಧಾನವಾಗಿ ಚಲಿಸುತ್ತದೆ. ಆಗ ಇಕ್ಕಡೆಗಳಲ್ಲಿ ಕಾಣುವ ಸಮುದ್ರದ ದೃಶ್ಯವು ವರ್ಣನಾತೀತವಾದುದು. ಈ ಸೇತುವೆಯು ಮಧ್ಯಭಾಗದಲ್ಲಿ ಬೇಕಾದಾಗ ತೆರೆದು ಹಡಗುಗಳಿಗೆ ಹೋಗಲು ದಾರಿ ಮಾಡಿಕೊಡುವಂತೆ ನಿರ್ಮಿಸಲ್ಪಟ್ಟಿದೆ.

ರಾಮೇಶ್ವರ ದೇವಸ್ಥಾನದ ಗೋಪುರವು ಎತ್ತರವಾಗಿಯೂ, ಸುಂದರವಾಗಿಯೂ ಇದೆ. ನಾವು ಸಮುದ್ರದಲ್ಲಿ ಸ್ನಾನಮಾಡಿ, ದೇವಸ್ಥಾನವನ್ನು ಬಲಗೊಂಡು, ಮಂಟಪಗಳಲ್ಲಿರುವ ಅಂಗಡಿಗಳಿಂದ ವಿವಿಧ ತರದ ಕವಡಿ, ಶಂಖ, ಚಿಪ್ಪು ಮೊದಲಾದುವನ್ನು ಕೊಂಡುಕೊಂಡೆವು. ದೇವಸ್ಥಾನದ ಸುತ್ತಿನಲ್ಲಿ ಸಾಲಾಗಿರುವ ಕಂಬಗಳು ಮಧುರೆಯ ಸಾವಿರಕಂಬದ ಮಂಟಪವನ್ನು ನೆನಪಿಗೆ ತರುವುವು. ಅಂದು ಮಧ್ಯಾಹ್ನ ರೈಲಿನಲ್ಲಿ ಕೂತು ಮಧುರೆಯನ್ನು ಹಿಂದಿಕ್ಕಿ, ಮರುದಿನ ಬೆಳಗ್ಗೆ ಪಾಲ್ಘಾಟನ್ನು ಸೇರಿದೆವು.

ಅಲ್ಲಿಯ ಸ. ವಿ. ಯೋಜನೆಯ ಅಧಿಕಾರಿಗಳು ನಮ್ಮನ್ನು ಜೀಪುಗಳಲ್ಲಿ ಕೂರಿಸಿಕೊಂಡು, ಬಿಡಾರಗಳಲ್ಲಿಳಿಸಿದರು. ನಾವು ಅಲ್ಲಿ ಸ. ವಿ. ಯೋಜನೆಯ ಸಹಕಾರದಿಂದ ನಡೆಯುತ್ತಿರುವ ವ್ಯಾಯಾಮ ಶಾಲೆಗಳಲ್ಲಿ ಬಗೆಬಗೆಯ ಆಸನ ಮೊದಲಾದ ಚಟುವಟಿಕೆಗಳನ್ನು ಪರಿಶೀಲಿಸಿ, "ಕಳರಿ" ಎಂದು ಕರೆಯಲ್ಪಡುವ ಆತ್ಮರಕ್ಷಣೆಗೆ ಸಹಾಯಕವಾದ ಕತ್ತಿವರಸೆ ಮೊದಲಾದವುಗಳನ್ನು ಕಲಿಸುವ ಶಾಲೆ ಮತ್ತು ಅದರ ಚಟುವಟಿಕೆಗಳನ್ನು ನೋಡಿದೆವು. ದಾರಿಯಲ್ಲಿ ಮಹಿಳಾಕೇಂದ್ರ, ಹೆರಿಗೆಯ ಆಸ್ಪತ್ರೆ, ಪಶುವೈದ್ಯಶಾಲೆ, ಟಿಪ್ಪುವು ಕಟ್ಟಿಸಿದ ಕೋಟೆ, ಹೊಳೆಯ ಮೇಲಿಂದ ಹರಿದು ಹೋಗುತ್ತಿರುವ ಅಣೆಕಟ್ಟಿನ ಕಾಲುವೆ ಮೊದಲಾದುವನ್ನು ನೋಡಿಕೊಂಡು ಬಿಡಾರಕ್ಕೆ ಬಂದೆವು. ಅವೆಲ್ಲವನ್ನೂ ತೋರಿಸಿ ವಿವರಿಸಿ ಹೇಳುತ್ತಿರುವ

ಅಲ್ಲಿಯ ಅಧಿಕಾರಿಗಳಿಂದ ನಮಗೆ ಸಿಕ್ಕಿದ ಅನುಭವಗಳನ್ನು ಬರೆದು ತಿಳಿಸಲು ನಮ್ಮ ಆಯುರ್ವರ್ಷನ ಸಾಕಾಗದು.

ಮಧ್ಯಾಹ್ನದ ಮೇಲೆ ಜೀಪುಗಳಲ್ಲಿ ಕೂತುಕೊಂಡು, ಅಲ್ಲಿಂದ ಸುಮಾರು ೮ ಮೈಲು ದೂರವಿರುವ "ಮಾಲಂಪುಝ" (Malampuzha) ಎಂಬ ಅಣೆಕಟ್ಟು ಮತ್ತು ಅದರ ಹತ್ತಿರವಿರುವ ಕೂಲಿಕಾರರ ವಸತಿ, ಕಾಲುವೆ, ತೋಟ, ಪೆವಿಲಿನ್, ಅಣೆಕಟ್ಟಿನ ಸುರಂಗ ಮೊದಲಾದುವನ್ನು ನೋಡಿ ಆನಂದಿಸಿದೆವು. ಆ ಅಣೆಕಟ್ಟಿಗೆ ೫೨೫ ಲಕ್ಷ ರೂಪಾಯಿಗಳು ಖರ್ಚಾಯಿತೆಂದು ಅಲ್ಲಿಯ ದಾಖಲೆಯೊಂದು ಹೇಳುತ್ತದೆ.

ಪಾಲ್ಘಾಟಿನಿಂದ ಸಂಜೆಯ ರೈಲಿಗೆ ಹೊರಟು ರಾತ್ರಿ ಸುಮಾರು ೮ ಗಂಟೆಗೆ ಪಟ್ಟಾಂಬಿಯನ್ನು ತಲ್ಪಿದೆವು. ಇಲ್ಲಿ ಸುಧಾರಿತ ಕೃಷಿಸಂಶೋಧನಾ ಕೇಂದ್ರವೂ, ಬೆಂಕಿಪೆಟ್ಟಿಗೆಯ ಕಾರ್ಖಾನೆಯೂ ನೋಡತಕ್ಕವಿವೆ.

ನಾವು ರಾತ್ರಿ ೮-೩ಂಕ್ಕೆ ಪಟ್ಟಾಂಬಿಯಿಂದ ಬಸ್ಸಿನಲ್ಲಿ ಗುರುವಾಯೂರಿಗೆ ಹೋಗಿ ಒಂದು ಛತ್ರದಲ್ಲಿ ತಂಗಿದೆವು. ಮರುದಿನ ಬೆಳಗ್ಗೆ ನಾಲ್ಕು ಗಂಟೆಗೆ ಎದ್ದು ದೇವಸ್ಥಾನದ ಹತ್ತಿರವಿರುವ ಕೆರೆಯಲ್ಲಿ ಸ್ನಾನಮಾಡಿ, ಮಡಿಯಲ್ಲಿ ದೇವಸ್ಥಾನವನ್ನು ಪ್ರವೇಶಿಸಿದೆವು. ಇಲ್ಲಿ ಅಂಗಿ ಹಾಕಿಕೊಂಡವರನ್ನು ದೇವಸ್ಥಾನದೊಳಗೆ ಹೋಗಲು ಬಿಡುವುದಿಲ್ಲ. ನಾಲ್ಕೂವರೆ ಗಂಟೆಗೆ ನೈವೇದ್ಯವಾಗಿ ದೇವಾಲಯದ ಬಾಗಿಲು ತೆರೆಯಲ್ಪಡುವುದು. ಆಗ ಸ್ನಾನ ಮಾಡಿಕೊಂಡು ಮಡಿಯಿಂದ ಕಾದು ನಿಂತಿದ್ದ ಭಕ್ತವರ್ಗವು ದೇವರ ದರ್ಶನವನ್ನು ಪಡೆಯುವುದು. ಈ ದೇವಾಲಯದ ಯಾವ ಭಾಗದಲ್ಲೂ ಭಿಕ್ಷುಕರು ಕಾಣಿಸದಿರುವುದು ಸೋಜಿಗ.

ನಾವು ದೇವರ ದರ್ಶನಮಾಡಿ ೬-೧೫ಕ್ಕೆ ಹೊರಡುವ ಬಸ್ಸಿನಲ್ಲಿ ಪಟ್ಟಾಂಬಿಗೆ ಬಂದು, ಅಲ್ಲಿಯ ಕೃಷಿಸಂಶೋಧನಾ ಕೇಂದ್ರವನ್ನು ನೋಡಿ, ಸಂಜೆಯ ರೈಲಿನಲ್ಲಿ ಕಣ್ಣಾನೂರಿನಲ್ಲಿ ಬಂದಿಳಿದೆವು. ಅಲ್ಲಿ ಕೊಂಚ ವಿಶ್ರಾಂತಿಯನ್ನು ಪಡೆದು ಬೆಳಗ್ಗೆ ೪-೧೫ಕ್ಕೆ ಹೊರಡುವ ರೈಲಿನಲ್ಲಿ ಕೂತು, ತಾ. ೨೦—೩—೫೬ನೇ ಬೆಳಗ್ಗೆ ೯ ಗಂಟೆಗೆ ಮಂಗಳೂರಿಗೆ ತಲ್ಪಿದೆವು.

--------

# ಭಾರತದ ಗುಹಾಲಯಗಳು

ಭಾರತದ ಕೆಲವು ಜಗತ್ಪ್ರಸಿದ್ಧ, ಅತಿಪುರಾತನ, ಅದ್ಭುತಶಿಲ್ಪದ ಗುಹಾಲಯಗಳ ಸಂಕ್ಷಿಪ್ತ ವಿವರವನ್ನು ಇಲ್ಲಿ ಕೊಡಲಾಗಿದೆ.

## ೧. ಅಜಂತ

ಅಜಂತ ಗುಹಾಲಯಗಳ ಕೀರ್ತಿಯು ಜಗತ್ತಿನಾದ್ಯಂತ ಹರಡಿದೆ. ಈ ಗುಹೆಗಳೂ ಅದರೊಳಗಿನ ಚಿತ್ರಗಳೂ ಸುಮಾರು ಮೂರನೆಯ ಶತಮಾನದಿಂದ ಬೆಳೆದು ಬಂದಿರಬೇಕೆಂಬುದಾಗಿ ನಿಶ್ಚಯಿಸಿದ್ದಾರೆ. ಐದನೇ ಮತ್ತು ಏಳನೇ ಶತಮಾನದಲ್ಲಿ ಭಾರತವನ್ನು ಸಂದರ್ಶಿಸಿದ ಚೀನಾದೇಶದ ಪ್ರವಾಸಿಗಳಾದ ಫಾಹಿಯಾನ್ ಮತ್ತು ಹ್ಯೂಯನ್‌ಸಾಂಗರು ಈ ಕಲಾ ಕೃತಿಗಳ ವರ್ಣನೆಯನ್ನು ಮಾಡಿರುತ್ತಾರೆ. ಇಲ್ಲಿ ಒಟ್ಟು ೨೯ ಗುಹೆಗಳಿವೆ. ಇವುಗಳಲ್ಲಿ ೯ನೆಯ ಮತ್ತು ೧೦ನೆಯ ಗುಹೆಗಳು ಅತ್ಯಂತ ಹಳೆಯವು. ಇವುಗಳ ಚಿತ್ರಗಳು ಸಾಂಚಿ ಮತ್ತು ಅಮರಾವತಿಗಳ ಶಿಲ್ಪವನ್ನು ಹೋಲುತ್ತವೆ. ಅಜಂತಾ ಗುಹೆಗಳು ಹೈದರಾಬಾದ ಸಂಸ್ಥಾನದ ಉತ್ತರ ಮೇರೆಯಲ್ಲಿರುವ ಫರದಾಪುರ ಎಂಬ ಗ್ರಾಮಕ್ಕೆ ಸಮೀಪ, ಗುಡ್ಡಗಳಲ್ಲಿವೆ. ಮುಂಬಯಿಯಿಂದ ರೈಲಿನಲ್ಲಿ ಬರುತ್ತ, ಪಾಚೋರಾ ಎಂಬ ನಿಲ್ದಾಣದಲ್ಲಿಳಿದು, ಮೀಟರ್‌ಗೇಜ್ ರೈಲಿನಲ್ಲಿ ಪಹೂರ್ ಎಂಬ ನಿಲ್ದಾಣಕ್ಕೆ ಬಂದು, ಸುಮಾರು ಏಳು ಮೈಲು ದೂರದ ಫರದಾಪುರ ಗ್ರಾಮಕ್ಕೆ ಹೋಗಬಹುದು. ಫರದಾಪುರದಿಂದ ನಾಲ್ಕು ಮೈಲುಗಳ ದೂರದಲ್ಲಿ ಹುಟ್ಟುವ ಬಾಗೋರ ಎಂಬ ನದಿಯನ್ನು ದಾಟಿ, ಈ ಗುಹಾಲಯಗಳಿದ್ದೆಡೆ ಹೋಗಬೇಕಾಗುವುದು. ಗುಹಾಲಯಗಳ ವರೆಗೆ ಮೋಟಾರು ರಸ್ತೆಯಿದೆ.

ಇಲ್ಲಿಯ ಗುಹಾಲಯಗಳಲ್ಲಿ ಮುಖ್ಯವಾದ ಎರಡು ಭೇದಗಳನ್ನು ಕಾಣಬಹುದು. ಇವನ್ನು ಚೈತ್ಯ ಮತ್ತು ವಿಹಾರಗಳೆಂದು ಕರೆಯಬಹುದು. 'ಚೈತ್ಯ'ವು ಪ್ರಾರ್ಥನೆಗಾಗಿಯೂ ವಿಹಾರಗಳು ಸಾಧುಗಳ ಪಾಠಪ್ರವಚನಗಳಿಗೂ ಚರ್ಚಾಕೂಟಗಳಿಗೂ ಉಪಯೋಗಿಸಲ್ಪಡುತಿದ್ದವೆಂದು ತಿಳಿಯಬಹುದು. ೧೬ನೇ ಗುಹಾಲಯವು ಎಲ್ಲದಕ್ಕಿಂತ ದೊಡ್ಡದು. ಇದರ

ಅಂಗಳವು ವಿಶಾಲವಾಗಿದೆ. ಅಲ್ಲಿ ಬಲಭಾಗಕ್ಕೆ ತಿರುಗಿದರೆ, ಉಳಿದ ಎಲ್ಲ ಗುಹೆಗಳು ಕಾಣುವುವು. ಈ ಗುಹಾಲಯದ ಪ್ರವೇಶಮಾರ್ಗವು ೬೫ ಅಡಿ ಉದ್ದವಾಗಿಯೂ ೧೨ ಅಡಿ ಅಗಲವಾಗಿಯೂ ಇದೆ. ಈ ಗುಹೆಯ ಒಳಭಾಗದ ಮಾಡು ಇಪ್ಪತ್ತು ಕಂಭಗಳ ಮೇಲೆ ಆಧರಿಸಿರುವಂತೆ ಕೊರೆಯಲ್ಪಟ್ಟಿದೆ. ಈ ಕಂಭಗಳು ಅನುಪಮವಾದ ಚಿತ್ರಿಕೆಗಳಿಂದ ಕೂಡಿವೆ. ಕಂಭಗಳು ಒಂದು ಇನ್ನೊಂದರಿಂದ ಎಂಟಡಿ ಅಂತರದಲ್ಲಿದೆ. ಅಲ್ಲಿರುವ ಧ್ಯಾನಮುದ್ರೆಯ ಬುದ್ಧನ ಪ್ರತಿಮೆಗಳು ಅನುಪಮ ಸೌಂದರ್ಯವುಳ್ಳವು. ಈ ಗುಹೆಯ ಹೊರಗಿನ ಸಭಾಮಂಟಪದ ಮಾಡು ಚಿತ್ರಿಕೆಗಳಿಂದ ಕೂಡಿದೆ. ಗಗನಗಾಮಿಯಾದ ದೇವೇಂದ್ರ ಮತ್ತು ಅವನ ಪರಿವಾರದ ಚಿತ್ರವು ನೋಡತಕ್ಕದ್ದಿದೆ. ಇಲ್ಲಿ ಬರೆದ ಚಿತ್ರಗಳಲ್ಲಿ ಎಷ್ಟೋ ಹಾಳಾಗಿದ್ದರೂ, ಅಳಿದುಳಿದವುಗಳಿಂದ ನಾವು ಹಿಂದಿನ ಕಾಲದ ರಾಜರ ಸಭೆ, ಅವರ ಸಂಸ್ಕೃತಿ, ಭಿಕ್ಷೆ ನೀಡುವ ರಾಜಕುಮಾರರು, ಭಿಕ್ಷೆಪಡೆಯುವವರು, ಪುಷ್ಪವೃಷ್ಟಿ ಸುರಿಸುತ್ತಿರುವ ಸುರಸುಂದರಿಯರು ಮೊದಲಾದುವನ್ನು ಕಾಣಬಹುದು. ಯಶೋಧರ, ಬುದ್ಧ ಮತ್ತು ರಾಹುಲರ ದೊಡ್ಡ, ಅತ್ಯಂತ ಸುಂದರ ಪ್ರತಿಮೆಗಳನ್ನಲ್ಲದೆ, ಬುದ್ಧನ ಜಾತಕಕತೆಗಳಿಗೆ ಸಂಬಂಧಿಸಿದ ಸಾವಿರಾರು ಚಿತ್ರಗಳನ್ನು ಕಂಡು, ಅವುಗಳ ಆಕೃತಿ, ಬಣ್ಣ, ಭಾವ ಮುಂತಾದವುಗಳಿಗಾಗಿ ಕಲಾವಿದರು ಅಚ್ಚರಿಪಡುತ್ತಿರುವರು.

ಹತ್ತೊಂಭತ್ತನೆಯ ಗುಹೆಯು ಎಲ್ಲದಕ್ಕಿಂತ ದೊಡ್ಡ ಚೈತ್ಯಾಲಯವಾಗಿದೆ. ಇದರ ಪ್ರವೇಶದ್ವಾರವು ಅತ್ಯಂತ ರಮಣೀಯವಿದೆ. ಬಲಭಾಗದ ಗೋಡೆಗಳಲ್ಲಿ ನಾಗರಾಜನ ಸಮಸ್ತ ಪರಿವಾರದವರ ಚಿತ್ರಗಳನ್ನು ಚಮತ್ಕಾರಿಕವಾಗಿ ಕೆತ್ತಿದ್ದಾರೆ.

ಒಂದನೇ ನಂಬ್ರದ ಗುಹೆಯು ವಿಶಾಲವಾಗಿದೆ. ಇದರೊಳಗೆ ಬಹಳ ಆಶ್ಚರ್ಯಕರವಾದ ಚಿತ್ರಿಕೆಗಳಿವೆ. ಇಲ್ಲಿರುವ ಬುದ್ಧನ ಸರ್ವಾಂಗಸುಂದರ ವಿಗ್ರಹವು ಪ್ರೇಕ್ಷಕರನ್ನು ದಂಗುಬಡಿಸುವುದು. ಸಿದ್ಧಾರ್ಥನು ಬುದ್ಧನಾಗಿ ಪರಿವರ್ತನೆಹೊಂದಲು ಗೃಹತ್ಯಾಗವನ್ನು ಮಾಡುವ ಸಮಯದಲ್ಲಿ ಬಲಗೈಯಲ್ಲಿ ನೈದಿಲೆಯನ್ನು ಹಿಡಿದುಕೊಂಡು, ಸುಕೋಮಲವಾದ ಮುಖಕಮಲದಿಂದೊಡಗೂಡಿದ ಭಾವಪೂರಿತ ಪ್ರತಿಮೆಯಿದು. ಶಿಲ್ಪಿಯ ಹೃದಯವನ್ನೂ ಹಸ್ತಕೌಶಲ್ಯವನ್ನೂ ಪ್ರತಿಬಿಂಬಿಸುತ್ತಿದೆ. ಇದರ ಕಿರೀಟವು

ಸೂಕ್ಷ್ಮವಾದ ಕೆತ್ತನೆಯಿಂದೊಡಗೂಡಿದೆ. ಮೇಣದಿಂದ ಕೂಡ ಬಿಡಿಸಲಾಗದಷ್ಟು ಸುಂದರವಾಗಿಯೂ ಸೂಕ್ಷ್ಮವಾಗಿಯೂ ಈ ವಿಗ್ರಹವು ಕಡೆಯಲ್ಪಟ್ಟಿದೆ. ಇದರ ಬಾಗಿಲಲ್ಲಿ, ಪ್ರೇಮದಿಂದೊಡಗೂಡಿದ ಯಕ್ಷದಂಪತಿಗಳ ನಿರ್ದೋಷವಾದ ಚಿತ್ರವೂ ಎಡಬದಿಯಲ್ಲಿ ಕಾಶಿರಾಜರ ಮತ್ತು ನಾಗರಾಜರ ಭೇಟಿಯ ಉತ್ತಮವಾದ ಚಿತ್ರವೂ ಇದೆ. ಈ ಗುಹಾಲಯಗಳ ಚಿತ್ರಿಕೆಗಳಲ್ಲಿ ಒಂದೇ ಒಂದಾದರೂ ಅಶ್ಲೀಲ ಚಿತ್ರವಿಲ್ಲ.

ಅನ್ಯದೇಶೀಯರಿಗೆ ಅಜಂತದ ಅಸ್ತಿತ್ವವು ಕ್ರಿ. ಶ. ೧೮೨೪ರ ಮೊದಲು ತಿಳಿದಿರಲಿಲ್ಲ. ಸರ್ ಜೇಮ್ಸ್ ಎಂಬ ವಿದೇಶೀಯನು (ಆಂಗ್ಲೇಯನು) ಈ ಚಿತ್ರಗಳನ್ನು ಕಂಡು ಬೆರಗಾಗಿ, ಅವುಗಳ ಪರಿಚಯ ಬರೆದು "ರೊಯಲ್ ಏಷ್ಯಾಟಿಕ್ ಸೊಸೈಟಿ"ಗೆ ಕೊಟ್ಟನು. ಆ ಮೇಲೆ ಹಲವು ವಿದೇಶೀಯರು ಅಜಂತಕ್ಕೆ ಬಂದು, ಅಲ್ಲಿ ಕೆಲಕಾಲ ವಾಸಿಸಿ, ಅಲ್ಲಿಯ ಚಿತ್ರದ ಪ್ರತಿಗಳನ್ನು ಎತ್ತಿರುತ್ತಾರೆ. ಪ್ರಾಚೀನ ಶಿಲ್ಪಗಳ ತಜ್ಞರಾದ ಫರ್ಗ್ಯುಸನ್ ಸಾಹೇಬರು ಸುಮಾರು ೫೦,೦೦೦ ರೂಪಾಯಿಗಳಿಗೂ ಮಿಕ್ಕಿದ ಖರ್ಚಿನಿಂದ ಇಲ್ಲಿಯ ಚಿತ್ರಗಳ ನಕಲು ತೆಗೆಸಿದರು.* (ಅಂದಿನ ಆ ೫೦,೦೦೦ ರೂಪಾಯಿಗಳೆಂದರೆ, ಇಂದಿನ ಸುಮಾರು ಐದು ಲಕ್ಷ ರೂಪಾಯಿಗಳಿಗೂ ಹೆಚ್ಚು ಎನ್ನಬಹುದು.)

ಹೈದರಾಬಾದ ಸರಕಾರವು ಗುಹೆಗಳ ರಕ್ಷಣೆಗಾಗಿ ಪ್ರತ್ಯೇಕ ಸಿಬಂಧಿಯನ್ನಿಟ್ಟಿದೆ.

## ೨. ಎಲ್ಲೋರ

ಎಲ್ಲೋರ ಗುಹಾಲಯಗಳು ಹೈದರಾಬಾದು ಸಂಸ್ಥಾನದ ಉತ್ತರ ಮೇರೆಯಲ್ಲಿರುವ ಎಲ್ಲೋರ ಎಂಬ ಗ್ರಾಮದ ಸಮೀಪ ಇವೆ. ಎಲ್ಲೋ

---

*ಔಂಧದ ಮಹಾರಾಜರು ಸುಮಾರು ಮೂವತ್ತು ವರ್ಷಗಳಿಗೂ ಹಿಂದೆ, ಮುಂಬಯಿಯ ಕೆಲವು ಕಲಾವಿದರನ್ನು ಕರೆದುಕೊಂಡು ಅಜಂತಕ್ಕೆ ಹೋಗಿ ನಿಂತು, ಅಲ್ಲಿಯ ಚಿತ್ರಗಳನ್ನು—ಅಲ್ಲಿ ತೋರುವ ಬಣ್ಣಗಳಿಂದಲೇ ಬರೆಸಿ, ಅಜಂತದ ವಿಷಯವಾಗಿ ಪ್ರಕಟಿಸಿರುವ ದೊಡ್ಡ ಗ್ರಂಥದಲ್ಲಿ ಅಚ್ಚುಹಾಕಿಸಿರುವರು. ಆ ಪ್ರಕಟಣೆಯಲ್ಲಿ, ಮುಂಬಯಿಯಲ್ಲೀಗ ಚಿತ್ರಕಲಾವಿದರಾಗಿರುವ ಶ್ರೀ। ವಿ. ಜಿ. ಶೆಣೈ—ಅವರು ಚಿತ್ರಿಸಿದ ಮೂರು ಚಿತ್ರಗಳಿವೆ. ಶ್ರೀ। ವಿ. ಜಿ. ಶೆಣೈಯವರು ಮಂಗಳೂರಿನವರು. ಸಂಪಾದಕ: ಒಂದಾಣೆ ಮಾಲೆ.

ರವು ಔರಂಗಾಬಾದು ನಿಲ್ದಾಣದಿಂದ ಹದಿನೇಳು ಮೈಲುಗಳ ದೂರದಲ್ಲಿದೆ. ಅಲ್ಲಿಯ ವರೆಗೆ ಚಲೋ ಮೋಟಾರ್ ರಸ್ತೆ ಇದೆ. ಈ ಗುಹಾಲಯಗಳು ಉತ್ತರದಿಂದ ದಕ್ಷಿಣಕ್ಕೆ ಸುಮಾರು ಒಂದೂಕಾಲು ಮೈಲುಗಳ ವರೆಗೆ ಹರಡಿಕೊಂಡಿವೆ. (ಅಜಂತಾ ಗುಹೆಗಳು ಇಲ್ಲಿಂದ ಸುಮಾರು ೮೦ ಮೈಲುಗಳ ದೂರದಲ್ಲಿವೆ.)

ಎಲ್ಲೋರದಲ್ಲಿ ಒಟ್ಟು ೩೪ ಗುಹೆಗಳಿವೆ. ಅವುಗಳಲ್ಲಿ ಉತ್ತರ ಭಾಗದಲ್ಲಿರುವ ಹನ್ನೆರಡು ಗುಹೆಗಳು ಬೌದ್ಧರವು; ದಕ್ಷಿಣದಲ್ಲಿರುವ ಐದು ಮಂದಿರಗಳು ಜೈನರವು; ಮಧ್ಯಭಾಗದಲ್ಲಿರುವ ಹದಿನೇಳು ಗುಹಾಲಯಗಳು ಬ್ರಾಹ್ಮರಣವು. ಈ ಮೂರು ಮತದವರ ಗುಹಾಲಯಗಳು ಇಲ್ಲಿ ಒಟ್ಟಾಗಿರುವುದು ಸರ್ವಮತ ಸಮಭಾವಕ್ಕೊಂದು ಉಜ್ವಲವಾದ ನಿದರ್ಶನವಾಗಿದೆ.

ಕಲಾದೃಷ್ಟಿಯಿಂದ ಈ ಗುಹಾ ಮಂದಿರಗಳು ಅತ್ಯುತ್ಕೃಷ್ಟವಾದುವುಗಳು. ಇಲ್ಲಿಯ ಮಂದಿರಗಳಲ್ಲೆಲ್ಲ ಬ್ರಾಹ್ಮಣರ ಗುಹಾಲಯದಲ್ಲಿರುವ ಕೈಲಾಸ ಮಂದಿರವೆಂಬುದು ವಿಶಾಲವೂ ಗಂಭೀರವೂ ಸುಂದರವೂ ಆಗಿದ್ದು, ಜಗತ್ತಿನ ಎಂಟನೇ ಅದ್ಭುತವೆಂದರೂ ಸಲುವುದು. ಈ ಕೈಲಾಸ ಮಂದಿರವನ್ನು ರಾಷ್ಟ್ರಕೂಟ ದೊರೆಯಾದ ಕೃಷ್ಣರಾಜನೆಂಬವನು ಕ್ರಿ. ಶ. ೭೬೦—೭೭೫ರ ಸುಮಾರಿಗೆ ಕಡಿಸಿದನು.

ಈ ಮಂದಿರದಲ್ಲಿರುವ ಸುಂದರ ಕಂಬಗಳ ನಿಯಮಿತ ಪಂಕ್ತಿಗಳಿಂದ ನಿರ್ಮಿಸಲ್ಪಟ್ಟ ಮೂರು ಮನೋಹರ ಪ್ರತಿಮಾ ಮಂಟಪಗಳಲ್ಲಿ ೪೭ ಚಿತ್ತಾಕರ್ಷಕವಾದ ಪೌರಾಣಿಕ ಚಿತ್ರಗಳು ಕೆತ್ತಲ್ಪಟ್ಟಿವೆ. ಒಂದು ಕಡೆ ರಾವಣನು ಕೈಲಾಸವನ್ನು ಎತ್ತುತ್ತಿದ್ದಾನೆ; ಪಾರ್ವತಿಯು ಭಯಗ್ರಸ್ತಳಾಗಿದ್ದಾಳೆ; ಶಿವನು ಕಾಲುಬೆರಳಿನಿಂದ ಕೈಲಾಸವನ್ನು ಒತ್ತಿ ಹಿಡಿದು, ರಾವಣನ ಕೈಗಳೆರಡನ್ನೂ ಸೆರೆಸಿಕ್ಕಿಸಿ ಅವನ ಗರ್ವಭಂಗ ಮಾಡುತ್ತಿದ್ದಾನೆ. ಇನ್ನೊಂದು ಕಡೆ ನೃಸಿಂಹಾವತಾರ, ಶಿವಪಾರ್ವತಿಯರ ವಿವಾಹ, ಮಾರ್ಕಂಡೇಯನ ಉದ್ಧಾರ—ಮೊದಲಾದ ಚಿತ್ರಗಳು ಸರ್ವಾಂಗ ಸುಂದರವಿವೆ. ಅಲ್ಲಲ್ಲಿ ಆಕಾಶದಲ್ಲಿ ಹಾರಾಡುವಂತೆ ಚಿತ್ರಿಸಿದ ಸೇವತೆಗಳು, ಕೈಲಾಸಾಧಿಪತಿಗೆ ಕಾಣಿಕೆಯನ್ನು ಹೊತ್ತುಕೊಂಡ ದೃಶ್ಯಗಳು, ಚಾಮರ ವಾಹಕರು, ಪ್ರಣಯ ಕೇಳಿಯಲ್ಲಿರುವ ಕಿನ್ನರ ದಂಪತಿಗಳು, ಪರಿಚಾರಿಕೆಯರು—

ಮೊದಲಾದುವು ಇವೆ. ಇನ್ನೊಂದೆಡೆಯಲ್ಲಿ ಎತ್ತರದಲ್ಲಿ ಆನೆಗಳೆರಡು ಒಂದು ತಾವರೆಯ ಕೊಳದಲ್ಲಿ ವಿನೋದ ಕೇಳಿಯಲ್ಲಿವೆ. ಈ ಕೊಳದಲ್ಲಿ ಇಬ್ಬರು ಕುಬ್ಜರು ವಿಹರಿಸುತಿದ್ದಾರೆ. ಕುಬ್ಜನೊಬ್ಬನ ಕೈಯು ಅರಳಿದ ತಾವರೆಯಂತಿದ್ದು ಕೊಳದೊಳಗೆ ಅರಳಿದ ಇತರ ತಾವರೆಗಳ ನಡುವೆ, ಪ್ರಥಮ ದೃಷ್ಟಿಗೇ ಪೃಥಕ್ಕರಿಸಿ ಹೇಳಬರುವುದಿಲ್ಲ.

ಎತ್ತರದಲ್ಲಿ ಕೈಲಾಸಾಧಿಪತಿಯಾದ ಪರಮೇಶ್ವರನ ಮನೋಹರ ವಾದ ಪ್ರತಿಮೆಯಿದೆ. ಅದರ ಸಮೀಪದಲ್ಲಿ ವಿಘ್ನೇಶ್ವರ--ಕಾರ್ತಿಕೇಯರು ತಂತಮ್ಮ ವಾಹನಗಳನ್ನೇರಿದ್ದಾರೆ.

ಬೌದ್ಧ ಮಂದಿರಗಳಲ್ಲಿಯೂ ೨, ೫, ೭, ೮ ಮತ್ತು ೯ನೆಯ ಮಂದಿರ ಗಳು ನೋಡತಕ್ಕವು. ಎರಡನೆಯ ಮಂದಿರದಲ್ಲಿ ಸುಂದರವಾದ ಕಂಭಗಳೂ, ಅನೇಕ ಚಿತ್ರಗಳೂ, ಮಧ್ಯದಲ್ಲಿ ಗೌತಮ ಬುದ್ಧನ ವಿಶಾಲ ಮೂರ್ತಿಯೂ ಇವೆ. ಮೂರನೇ ಮತ್ತು ನಾಲ್ಕನೇ ಗುಹೆಗಳು ಭಿಕ್ಷುಗಳ ವಿಶಾಲ ವಿಹಾರಗಳಾಗಿವೆ. ಏಳನೆ, ಎಂಟನೆ ಮತ್ತು ಎರಡನೆಯ ಗುಹೆಗಳು 'ವಿಶ್ವಕರ್ಮ' ಎಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ಇವುಗಳ ಚಿತ್ರಿಕೆಗಳೂ ಸುಂದರವಾಗಿವೆ. ಬುದ್ಧನು ವಿಶ್ವಕರ್ಮನ ಅವತಾರವೆಂದೂ ಅವನೇ ಈ ಗುಹೆಗಳನ್ನು ರಚಿಸಿರುವುದಾಗಿಯೂ ಹಲವರ ನಂಬಿಕೆ. ಪ್ರತಿ ವರ್ಷವೂ ಸಾವಿರಾರು ಕುಶಲ ಕರ್ಮಚಾರಿಗಳು, ವಿಶ್ವಕರ್ಮನ ಪ್ರಾರ್ಥನೆ ಗಾಗಿ ಇಲ್ಲಿಗೆ ಬರುತ್ತಾರೆ. ಹತ್ತನೆಯ ಗುಹೆಯ ಪ್ರಾಂಗಣವು ನೂರು ಅಡಿ ಉದ್ದವಾಗಿಯೂ ನಲ್ವತ್ತೈದು ಅಡಿ ಅಗಲವಾಗಿಯೂ ಇದೆ. ಇದರ ದಕ್ಷಿಣದಲ್ಲಿ ಅವಲೋಕಿತೇಶ್ವರನ ಮೂರ್ತಿಯಿದ್ದು, ಇಕ್ಕಡೆಗಳಲ್ಲೂ ಸ್ತ್ರೀಯರು ಕುಳಿತುಕೊಂಡಿರುವುದನ್ನು ಚಿತ್ರಿಸಲಾಗಿದೆ. ಈ ಗುಹೆಗಳ ಕಾಲವು ಒಂದನೆಯ ಅಥವಾ ಎರಡನೆಯ ಶತಮಾನವಾಗಿದ್ದಿರಬೇಕೆಂದೂಹಿ ಸಲಾಗಿದೆ.

ದಕ್ಷಿಣ ಭಾಗದಲ್ಲಿ ಜೈನರ ಗುಹೆಗಳಿವೆ. ಇವುಗಳಲ್ಲಿಯೂ ತುಂಬ ಚಿತ್ರಿಕೆಗಳಿವೆ. ಇದರಲ್ಲಿ ಇಂದ್ರಸಭೆ ಎಂಬ ಮಂದಿರವು ಅತ್ಯಂತ ಚಿತ್ತಾಕರ್ಷಕವಾದುದು. ವಿವಿಧ ವರ್ಣಗಳಲ್ಲಿ ಚಿತ್ರಿಸಿರುವ ಈ ಮಂದಿರದ ಚಿತ್ರಗಳು ಎಲ್ಲವುಗಳಿಗಿಂತ ಮಿಗಿಲಾಗಿವೆ. ದೇವಾಲಯದಲ್ಲಿ ಮಹಾವೀರ ಸ್ವಾಮಿಯ ವಿಶಾಲ, ಮನೋಹರ ಮೂರ್ತಿಯೂ, ಮೇಲ್ಗಡೆಯಲ್ಲಿ

ಹಾಡುವ ಮತ್ತು ಬಾರಿಸುವ ಇಂದ್ರಾದಿಗಳೂ; ಒಂದುಗಡೆಯ ಗೋಡೆಯಲ್ಲಿ ದೇವೇಂದ್ರನು ಆನೆಯ ಮೇಲೆ ಶಚಿಯ ಜತೆಯಲ್ಲಿ ಕುಳಿತಿರುವುದೂ, ಅವರ ಅಕ್ಕಪಕ್ಕಗಳಲ್ಲಿ ಅನುಚರರಿಬ್ಬರು ನಿಂತಿರುವುದೂ ಕೆತ್ತಲ್ಪಟ್ಟಿದೆ. ಮಧ್ಯದಲ್ಲಿ ಕಂಭಗಳಿವೆ. ಹೊರಭಾಗದಲ್ಲಿ ಇಂದ್ರ ಮತ್ತು ಶಚಿದೇವಿಯವರ ಮೂರ್ತಿಗಳಿವೆ; ಇಂದ್ರನು ಐರಾವತದ (ಆನೆಯ) ಮೇಲೂ ಶಚಿಯು ಸಿಂಹದ ಮೇಲೆಯೂ ಕುಳಿತಂತೆ ಚಿತ್ರಿಸಲಾಗಿದೆ. ಈ ಚಿತ್ರಗಳ ಕಾಲವು ೮ರಿಂದ ೧೦ನೆಯ ಶತಮಾನದೊಳಗಿನದು ಎಂದು ನಿರ್ಣಯಿಸಿರುವರು.

ಹತ್ತೊಂಭತ್ತನೆ ಶತಮಾನದ ಅಂತ್ಯದ ವರೆಗೆ ಎಲ್ಲೋರಾ ಗುಹೆಗಳ ಕುರಿತು ಅನ್ಯದೇಶೀಯರಿಗೆ ತಿಳಿದಿರಲಿಲ್ಲ. ೧೯೨೪ರಲ್ಲಿ, ಅಮೆರಿಕದ ವಿದ್ವಾಂಸನೊಬ್ಬನು ಎಲ್ಲೋರಕ್ಕೆ ಹೋಗಿ, ಅಲ್ಲಿಯ ಕಲಾಚಾತುರ್ಯ ವನ್ನು ಕಂಡು ಮುಗ್ಧನಾಗಿ, ಹೈದರಾಬಾದದ ಪ್ರಾಚೀನ ವಸ್ತು ಸಂಶೋಧನಾ ಇಲಾಖೆಯ ಅನುಮತಿ ಪಡೆದು, ಅಲ್ಲಿಯ ಚಿತ್ರಗಳ ಪ್ರತಿಗಳನ್ನು ತೆಗೆದುಕೊಂಡನು. ಆ ಚಿತ್ರಗಳು ಪ್ರಕಟವಾದುವು. ಆ ಮೇಲೆ ಎಲ್ಲೋರ ಗವಿಗಳು ಲೋಕವಿಖ್ಯಾತವಾದುವು.

## ಎಲಿಫೆಂಟಾ

ಮುಂಬಯಿಯ ಮಹಾದ್ವಾರದಿಂದ ಪಶ್ಚಿಮಕ್ಕೆ, ಸಮುದ್ರದಲ್ಲಿ, ಸುಮಾರು ಏಳು ಮೈಲು ದೂರದಲ್ಲಿರುವ ಒಂದು ಚಿಕ್ಕ ದ್ವೀಪದಲ್ಲಿ ಈ ಎಲಿಫೆಂಟಾ ಗುಹಾಲಯಗಳಿವೆ. ಈ ದ್ವೀಪವು ಸುಮಾರು ಐದು ಮೈಲು ಸುತ್ತಳತೆಯುಳ್ಳುದು. ಈ ದ್ವೀಪದ ಕರಾವಳಿಯಿಂದ ಸುಮಾರು ಐದು ಮೈಲು ದೂರದಲ್ಲಿ ಗುಹಾಲಯಗಳಿವೆ.

ಇದರ ಹೆಸರು ಘರಾಪುರಿ ಎಂದಿತ್ತು. ಭಾಗವತದಲ್ಲಿ, ಕೃಷ್ಣನ ಮೊಮ್ಮಗನಾದ ಅನಿರುದ್ಧನನ್ನು ಮೋಹಿಸಿ, ಅವನನ್ನು ಅಂತಃಪುರದಲ್ಲಿ ತಂದಿರಿಸಿಕೊಂಡು ವರಿಸಿದ ಉಷೆಯ ತಂದೆಯಾದ ಬಾಣಾಸುರನ ರಾಜಧಾನಿಯಾದ ಶೋಣಿತಪುರವೇ ಇದು ಎಂದು ಜನರು ಹೇಳುವುದುಂಟು.

ಸುಮಾರು ೪೦೦ ವರ್ಷಗಳಿಗೆ ಮೊದಲು ಇಲ್ಲಿಗೆ ಬಂದ ಪೋರ್ತುಗೀಸರು, ಹದಿಮೂರು ಅಡಿ ಉದ್ದವೂ ಏಳುವರೆ ಅಡಿ ಎತ್ತರವೂ ಇದ್ದ—

ಅಖಂಡ ಶಿಲೆಯಲ್ಲಿ ಕೊರೆಯಲ್ಪಟ್ಟ ಆನೆಯ ಪ್ರತಿಮೆಯೊಂದನ್ನು ಕಂಡು, ಈ ದ್ವೀಪಕ್ಕೆ "ಎಲಿಫೆಂಟಾ" ಎಂದು ಹೆಸರಿಟ್ಟರು. (ಈ ಆನೆಯ ಪ್ರತಿಮೆಯು ಈಗ, ಮುಂಬಯಿ ನಗರದ ರಾಣಿಬಾಗ್"ದಲ್ಲಿ, ಭಗ್ನಾವಸ್ಥೆಯಲ್ಲಿದೆ) ಸಮುದ್ರಪಾತಳಿಯಿಂದ ೨೫೦ ಅಡಿ ಎತ್ತರದಲ್ಲಿ, ಉತ್ತರಾಭಿಮುಖವಾಗಿ ಈ ಗುಹಾಲಯಗಳಿವೆ ಗುಹೆಯು ೧೩೦ ಚದರಡಿ ವಿಸ್ತಾರವಿದೆ; ಸುಮಾರು ೧೭ ಅಡಿ ಎತ್ತರವಿದೆ; ೨೬ ಕಂಭಗಳಿವೆ. ಕಂಭಗಳ ಮೇಲೆ ಕೆತ್ತನೆಯ ಕೆಲಸವಿದೆ. ತ್ರಿಮೂರ್ತಿಗಳ ಪ್ರತಿಮೆಯೇ, ಅಲ್ಲಿಯ ಕೆತ್ತನೆಗಳ ಕೆಲಸಗಳಲ್ಲಿ ವಿಶೇಷ ಆಕರ್ಷಕವಾಗಿದೆ. ಎರಡುವರೆ ಅಡಿ ಎತ್ತರವಾದ ಪೀಠದ ಮೇಲೆ ಸುಮಾರು ೧೮ ಅಡಿ ಎತ್ತರದ ಈ ಪ್ರತಿಮೆಯಿದೆ. ತಾಂಡವ ನೃತ್ಯಮಾಡುವ ಶಿವನಮೂರ್ತಿಯೂ, ೧೫ ಅಡಿ ಎತ್ತರಕ್ಕೆ ದ್ವಾರಪಾಲಕನ ಒಂದು ವಿಗ್ರಹವೂ ಇವೆ. ಗುಹಾಲಯಗಳ ಪೂರ್ವದಿಕ್ಕಿನಲ್ಲಿ ೬೦×೨೫ ಅಡಿ ವಿಸ್ತಾರವಾದ ಒಂದು ಮಂಟಪವಿದ್ದು, ಅದರಲ್ಲಿ ವಿಘ್ನೇಶ್ವರ ಮೊದಲಾದ ಪ್ರತಿಮೆಗಳಿವೆ. ಎಲ್ಲವೂ ಶೈವರದು.

## ೩. ಉಸ್ಮಾನಾಬಾದು

ಉಸ್ಮಾನಾಬಾದು, ತುಳಜಾಪುರದಿಂದ ಹನ್ನೆರಡು ಮೈಲು ದೂರದಲ್ಲಿ, ಬಾಲಾ ಘಾಟೆಂಬ ಬೆಟ್ಟದ ಸಾಲಿನ ಕೊನೆಯಲ್ಲಿದೆ ಈ ಗವಿಗಳ ಗುಂಪಿಗೆ 'ದರಬಾರ ಲೇಣಾ' ಅಥವಾ 'ತೋರಲಾ ಲೇಣಾ' ಎಂದು ಕರೆಯುತ್ತಾರೆ. ಇದರೊಳಗೆ ಜೈನ ಮೂರ್ತಿಗಳಿರುವುವು.

## ೪. ಭುವನೇಶ್ವರ

ಒಡಿಸ್ಸಾ ಪ್ರಾಂತದಲ್ಲಿ ಭುವನೇಶ್ವರದಿಂದ ತುಸು ದೂರವಿರುವ ಉದಯಗಿರಿ ಎಂಬ ಶಿಖರವಿದೆ. ಅಲ್ಲಿ ತುಂಬ ಗುಹಾಲಯಗಳಿರುವುವು. ಹಾತಿ (ಆನೆ) ಗುಹೆ, ಹುಲಿಯ ಗುಹೆ ಮೊದಲಾದುವು ತುಂಬ ಕೆತ್ತನೆಯ ಕೆಲಸವನ್ನುಳ್ಳುವು.



Edited, Printed & Published by K. V. Shenoy
at The Prabhat Printers, Ltd., Mangalore.

ಒಂದಾಣೆ ಮಾಲೆ. ೪೨

ಆದಿ ಶ್ರೀ ಶಂಕರಾಚಾರ್ಯ ವಿರಚಿತ

# ಸ್ತೋತ್ರಗಳು (ಅರ್ಥ ವಿವರ ಸಹಿತ)



ಆದಿ ಶ್ರೀ ಶಂಕರಾಚಾರ್ಯರು.

ಲೇಖಕರು: ಡಾ। ಪಿ. ಎಸ್. ವಾಸುದೇವ ಶರ್ಮ, ಮಂಗಳೂರು

ಬೆಲೆ: ಆಣೆ ೧. ★ 1956

# 'ಒಂದಾಣೆ ಮಾಲೆ'ಯ ಪ್ರಕಟಣೆಗಳು:

೧. *ಕೆಪ್ಪಟಿರಾಯ (ವಿನೋದ ಕಥೆ)
೨. *ನಾರೀಶ್ವರರು (ಏಕಾಂಕ ಪ್ರಹಸನ)
೩. ಕಳ್ಳನಿಗೆ ಸಂಭಾವನೆ (ದ್ವಿ. ಮುದ್ರಣ)
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ)
೫. ಅದ್ಭುತ ತ್ಯಾಗ (ದ್ವಿತೀಯ ಮುದ್ರಣ)
೬. *ಚುನಾವಣೆ ಅರ್ಥಾತ್ ಬನಾವಣೆ
೭. *'ಬೀಡಿ ಸೇದಬೇಡಿ' ಮತ್ತು 'ಆ ಮಗು'
೮. *ಇಂಗ್ಲಿಷ್-ಕನ್ನಡ ಅರ್ಥಕೋಶ
೯. *ಲಂಚಕ್ಕೆ ಸಂಚಕಾರ
೧೦. *ಟಿಶ್ಯೂ ಔಷಧಿಗಳ ಕೈಪಿಡಿ.
೧೧. ಶ್ರೀಕ್ಷೇತ್ರ ಧರ್ಮಸ್ಥಳ (ತೃ. ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು
೧೪. *ವೆಂಕಟನ ಸಂಕಟ (ಏಕಾಂಕ ಪ್ರಹಸನ)
೧೫. ಬಾಬಿಗೆ ಬಾಸಿಂಗ (ದ್ವಿತೀಯ ಮುದ್ರಣ)
೧೬. ವೇಣೂರಿನ ಗತವೈಭವ (ದ್ವಿ. ಮುದ್ರಣ)
೧೭. ಒಗಟುಗಳು [ದ್ವಿತೀಯ ಮುದ್ರಣ]
೧೮. ಜಗಳಗಂಟಿ ಮತ್ತು ಇತರ ಕಥೆಗಳು
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಪ್ಪು
೨೧. ಭಾರತದ ಮಹಾನಗರ (ದ್ವಿ. ಮುದ್ರಣ)
೨೨. ತಿರುಕ್ಕುರಲ್ (ದ್ವಿತೀಯ ಮುದ್ರಣ)
೨೩. ಸೂರ್ಯನ ಸಂಸಾರ (ಕಥೆಗಳು)
೨೪. ಭಾರತದ ಮಹಾನಗರ (ದ್ವಿ. ಮುದ್ರಣ)
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳು
೨೬. ಮಾರಾವತಾರ (ದ್ವಿತೀಯ ಮುದ್ರಣ)
೨೭. ಹಾಸವಿಲಾಸ (ನಗೆಹನಿಗಳು)
೨೮. *ಸತ್ಯವಂತ ಬಾಜಿ (ಏಕಾಂಕ ಪ್ರಹಸನ)
೨೯. ಜಾಣ್ಮೆಯ ಒಗಟುಗಳು
೩೦. ಜಾತಕ ಕಥೆಗಳು
೩೧. ಕಾರ್ಕಳದ ಚರಿತ್ರೆ
೩೨. ಮರ್ಜಿ (ಏಕಾಂಕ ಪ್ರಹಸನ)
೩೩ ದರ್ಶನದ ಕಥೆಗಳು
೩೪. ಅಳುವಿನ ಹೊಳೆ ಮತ್ತು ಕೇಶವಭೂಪ
೩೫. ಶರಾಬಿನ ಸಿಪಾಯಿಗಳು (ಕಥೆ)
೩೬. ಉಪದೇಶ ಶತಕ (ನೀತಿ ವಚನಗಳು)
೩೭. ನಿಮಗೆ ಗೊತ್ತಿದೆಯೇ?
೩೮. ಚತುರ ಚಮತ್ಕಾರ
೩೯. ಸತೀ ಸಾವಿತ್ರಿ (ಪೌರಾಣಿಕ ನಾಟಕ)
೪೦. ಆಭರಣಗಳ ಪೆಟ್ಟಿಗೆ, ಇತರ ಕಥೆಗಳು
೪೧. ಭಾರತದ ಮಂತ್ರಿಮಂಡಲಗಳು (ದ್ವಿ. ಮುದ್ರಣ)
೪೨ ಕಾಲುಬಳೆಯ ಕಥೆ
೪೩. ಭಾರತದ ನಾಲ್ಕು ಕಲಶಗಳು
೪೪. ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು
೪೫. ಸುಭಾಷಿತ
೪೬. ೧೮೫೭ರ "ಸಿಪಾಯಿ ದಂಗೆ"
೪೭. ಅಕಾಂಡ ತಾಂಡವ (ರೇಡಿಯೋ ನಾಟಕ)
೪೮. ಸಾಹಸದ ಕಥೆಗಳು.
೪೯. ಸಂಜ್ಞಾ ಜ್ಞಾನ ಕೋಶ
೫೦. ಪಂಡಿತನ ಪಿಟೀಲು (ಕಥೆಗಳು)
೫೧. ಭೋಗಯಾತ್ರೆ (ವಿನೋಬಾ ತತ್ತ್ವ)
೫೨. ಸಂಗ್ರಾಮಸಿಂಹ (ಐ। ಕಥೆ)
೫೩. ಧರ್ಮಶಿಕ್ಷಾ (ಧರ್ಮ ತತ್ತ್ವಗಳು)
೫೪. ಮಹಾತ್ಮ (ಗಾಂಧೀಜಿ)
೫೫. ಮೀರಾಬಾಯಿ (ಏಕಾಂಕ ನಾಟಕ)
೫೬. ವೀರರಮಣಿ ಕರ್ಮದೇವಿ (ಕಥೆ)
೫೭. ಅರಳಿದ ನಗು (ವಿನೋದ ಕಥೆಗಳು)
೫೮. ಸಚಿತ್ರ ಜಪಾನ್
೫೯. ಚುಟ್ಟಿಬಿಟ್ಟ ಘಟ್ಟಿ (ಏಕಾಂಕ ಪ್ರಹಸನ)
೬೦. ನಿರಪರಾಧಿ (ರಾಜಾಜಿಯವರ ಕಥೆ)

(ಪುಟ 17ಕ್ಕೆ ಮುಂದುವರಿದಿದೆ)

# ಪೀಠಿಕೆ

ಶ್ರೀ ಶಂಕರಾಚಾರ್ಯರು ನೂರಾರು ಗ್ರಂಥಗಳನ್ನು ರಚಿಸಿರುತ್ತಾರೆ. ಸಾಮಾನ್ಯವಾಗಿ ಪಾಮರರಿಗೂ ಅರ್ಥವಾಗಬಹುದಾದ ಅವರ ಸ್ತೋತ್ರ ಗಳಲ್ಲಿಯೂ ವೇದಾಂತದ ಕಿಡಿಗಳು ಕಾಣಸಿಗುವವು. ಉದಾಹರಣೆಗಾಗಿ ಅರ್ಥವಿವರಸಮೇತ "ಶ್ರೀ ಲಕ್ಷ್ಮೀನರಸಿಂಹ ಸ್ತೋತ್ರ", "ಚರ್ಪಟಪಂಜ ರಿಕಾ ಸ್ತೋತ್ರ" (ಅಥವಾ "ಭಜಗೋವಿಂದಂ"), "ಸಾಧನ ಪಂಚಕ" ಮತ್ತು "ಶಿವಮಾನಸ ಪೂಜೆ" ಎಂಬ ನಾಲ್ಕು ಸ್ತೋತ್ರಗಳನ್ನು ಇಲ್ಲಿ ಕೊಟ್ಟಿದೆ. "ಶ್ರೀ ಲಕ್ಷ್ಮೀನರಸಿಂಹ ಸ್ತೋತ್ರ"ದ ವಿಷಯವಾಗಿ ಈ ಕೆಳಗಿನ ಕಥೆಯಿದೆ:

ಉಭಯಭಾರತಿಯನ್ನು ಸೋಲಿಸಲು ಆಚಾರ್ಯರು ಅಮರುಕನ ದೇಹಪ್ರವೇಶ ಮಾಡಿ ರಾಜಸಭೆ ಪ್ರವೇಶಿಸಲು, ರಾಜ್ಯವು ಸುಖಸಮೃದ್ಧ ವಾದುದನ್ನು ಅಲ್ಲಿಯ ಮಂತ್ರಿಗಳು ಕಂಡು, ರಾಜನ ದೇಹದೊಳಗೆ ಯಾರೋ ಪುಣ್ಯಪುರುಷನ ಆತ್ಮವು ಪ್ರವೇಶಿಸಿರಬೇಕೆಂದೂ, ಅದುವೇ ಚಿರ ಕಾಲ ನಮ್ಮಲ್ಲಿ ಇರಲಿ ಎಂತಲೂ ಅವರು ಭಾವಿಸಿ, ತಮ್ಮ ಗುಪ್ತಚಾರರಿಗೆ ರಾಜ್ಯದಲ್ಲಿ ಮೃತದೇಹಗಳಿದ್ದರೆ ಅದನ್ನು ಹೇಗಾದರೂ ಮಾಡಿ ಸುಟ್ಟುಬಿಡ ಬೇಕೆಂದು ಆಜ್ಞಾಪಿಸಿದರು. ಚಾರರು ಆಚಾರ್ಯರ ದೇಹವನ್ನು ಗುಹೆ ಯಲ್ಲಿ ಕಂಡು, ಶಿಷ್ಯರು ಸ್ನಾನಾದಿ ಆಹ್ನಿಕ ಕರ್ಮಕ್ಕೆ ಹೋದಾಗ, ಆಚಾ ರ್ಯರ ದೇಹವನ್ನು ಅಪಹರಿಸಿ ಸುಡುವವರಾದರು. ಯೋಗಬಲದಿಂದ ಈ ವಿಷಯವನ್ನು ಆಚಾರ್ಯರು ತಿಳಿದು ಅಮರುಕನ ದೇಹದಿಂದ ತನ್ನ ಪೂರ್ವ ದೇಹವನ್ನು ಶ್ರೀ ಲಕ್ಷ್ಮೀನರಸಿಂಹ ಸ್ತೋತ್ರ ಪೂರ್ವಕ ಧ್ಯಾನಿಸಿ ತನ್ನ ದೇಹಕ್ಕೆ ಬಂದ ಕಂಟಕದಿಂದ ಪಾರಾದರು. ಗುಹೆಯೊಳಗಿನ ತನ್ನ ದೇಹ ವನ್ನು ರಕ್ಷಿಸಲು ಗುಹೆಯೊಳಗೆ ವಾಸಮಾಡುವ ಸಿಂಹಮುಖನು (ನರ ಸಿಂಹ) ಯೋಗ್ಯನಲ್ಲವೇ?

ಮಂಗಳೂರು, ಎಪ್ರಿಲ್, 1956.

**ಡಾ| ಪಿ. ಎಸ್. ವಿ. ಶರ್ಮ,**
ಆಯುರ್ವೇದ ಶಿರೋಮಣಿ.

▪▪▪▪▪▪▪▪▪

# ಶ್ರೀ ಲಕ್ಷ್ಮೀನರಸಿಂಹ ಸ್ತೋತ್ರಂ

ಶ್ರೀಮತ್ಪಯೋನಿಧಿನಿಕೇತನ ಚಕ್ರಪಾಣೇ
ಭೋಗೀಂದ್ರ ಭೋಗಮಣಿ ರಂಜಿತ ಪುಣ್ಯಮೂರ್ತೇ !
ಯೋಗೀಶ ಶಾಶ್ವತ ಶರಣ್ಯ ಭವಾಬ್ಧಿಪೋತ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ ॥ ೧ ॥

ಅರ್ಥ: ಎಲೈ ಕ್ಷೀರಾಬ್ಧಿಮಂದಿರನೇ! ಚಕ್ರಪಾಣಿಯೇ! ಆದಿ ಶೇಷನ ದೇಹದ ಮಣಿಗಳಿಂದ ರಂಜಿತವಾದ ದೇಹವುಳ್ಳವನೇ! ಯೋಗೀಶ! ಶಾಶ್ವತ! ರಕ್ಷಕ! ಸಂಸಾರಸಾಗರವನ್ನು ದಾಟಿಸುವವನೇ! ಹೇ ಲಕ್ಷ್ಮೀ ನೃಸಿಂಹ, ನನಗೆ ಹಸ್ತಾವಲಂಬನವನ್ನು ಕೊಡು.

ಬ್ರಹ್ಮೇಂದ್ರ ರುದ್ರ ಮರುದರ್ಕ ಕಿರೀಟ ಕೋಟಿ
ಸಂಘಟ್ಟಿತಾಂಘ್ರಿ ಕಮಲಾಮಲ ಕಾಂತಿ ಕಾಂತ ।
ಲಕ್ಷ್ಮೀಲಸತ್ಕುಚಸರೋರುಹರಾಜಹಂಸ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ ॥ ೨ ॥

ಬ್ರಹ್ಮ ಇಂದ್ರ ವಾಯು ಸೂರ್ಯರುಗಳ ಕಿರೀಟಗಳ ತುದಿಯಿಂದ ಒರಸಲ್ಪಟ್ಟ ತಾವರೆಯಂತಿರುವ ಕಾಲಿನಿಂದ ಮನೋಹರನಾದವನೇ! ಲಕ್ಷ್ಮಿಯ ಸ್ತನಗಳೆಂಬ ತಾವರೆಗಳಿಗೆ ರಾಜಹಂಸದಂತಿರುವವನೇ! ಹೇ ಲಕ್ಷ್ಮೀನರಸಿಂಹ, ನನಗೆ ಹಸ್ತಾವಲಂಬನವನ್ನು ಕೊಡು.

ಸಂಸಾರ ಘೋರಗಹನೇ ಚರತೋ ಮುರಾರೇ
ಮಾರೋಗ್ರ ಭೀಕರ ಮೃಗಪ್ರವರಾರ್ದಿತಸ್ಯ ।
ಆರ್ತಸ್ಯ ಮತ್ಸರ ನಿದಾಘನಿಪೀಡಿತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ ॥ ೩ ॥

ಸಂಸಾರವೆಂಬ ಭಯಂಕರ ಕಾಡಿನಲ್ಲಿ ತಿರುಗಾಡುವ ಮನ್ಮಥನೆಂಬ ಸಿಂಹದಿಂದ ಪೀಡಿಸಲ್ಪಟ್ಟ, ಬಳಲಿ, ಬೆಂಡಾದ ಮಾತ್ಸರ್ಯವೆಂಬ ಸೆಕೆಗಾಲ ದಿಂದ ಪೀಡಿತನಾದ ನನಗೆ ಹಸ್ತಾವಲಂಬನವನ್ನು ಕೊಡು.

ಸಂಸಾರ ಕೂಪಮತಿ ಘೋರಮಗಾಧ ಮೂಲಂ
ಸಂಪ್ರಾಪ್ಯ ದುಃಖ ಶತಸರ್ಪಸಮಾಕುಲಸ್ಯ ।
ದೀನಸ್ಯ ದೇವ ಕೃಪಣಾಪದಮಾಗತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ ॥ ೪ ॥

ಭಯಂಕರವಾದ ಬಹಳ ಆಳವಾದ ಸಂಸಾರವೆಂಬ ಬಾವಿಯನ್ನು ಹೊಂದಿ ನೂರಾರು ದುಃಖಗಳೆಂಬ ಸರ್ಪಗಳಿಂದ ಸುತ್ತಲ್ಪಟ್ಟ ದೀನನಾದ, ಶೋಚಿತನವನ್ನು ಹೊಂದಿದ ನನಗೆ, ರಕ್ಷಕನಾಗಿ ಹಸ್ತಾವಲಂಬನವನ್ನು ಕೊಡು.

ಸಂಸಾರಸಾಗರ ವಿಶಾಲ ಕರಾಲ ಕಾಲ
ನಕ್ರ ಗ್ರಹ ಗ್ರಸನ ನಿಗ್ರಹ ವಿಗ್ರಹಸ್ಯ ।
ವ್ಯಗ್ರಸ್ಯ ರಾಗರಸನೋರ್ಮಿನಿ ಪೀಡಿತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ ॥ ೫ ॥

ಸಂಸಾರವೆಂಬ ಸಾಗರದಲ್ಲಿ ಭಯಂಕರವಾದ ಮೃತ್ಯುವೆಂಬ ಮೊಸಳೆಯಿಂದ ಹಿಡಿಯಲ್ಪಟ್ಟ ದೇಹವುಳ್ಳ, ಕಾಮಾದಿ ವಿಷಯಗಳೆಂಬ ಅಲೆಗಳಿಂದ ಪೀಡಿತನಾದ ನನಗೆ, ಹೇ ಲಕ್ಷ್ಮೀನೃಸಿಂಹ, ನಿನ್ನ ಕೈಯನ್ನು, ಆಧರಿಸಲು ನನಗೆ ಕೊಡು.

ಸಂಸಾರ ವೃಕ್ಷಮಘ ಬೀಜಮನಂತ ಕರ್ಮ
ಶಾಖಾಶತಂ ಕರಣ ಪತ್ರಮನಂಗ ಪುಷ್ಪಂ ।
ಆರುಹ್ಯ ದುಃಖ ಫಲಿತಂ ಪತತೋ ದಯಾಲೋ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ ॥ ೬ ॥

ಸಂಸಾರವೆಂಬ ಮರಕ್ಕೆ ಪಾಪವೇ ಬೀಜ. ನಾನಾ ಕ್ರಿಯೆಗಳೇ ನೂರಾರು ಕೊಂಬೆಗಳು. ಇಂದ್ರಿಯಗಳೇ ಎಲೆ. ಮನ್ಮಥನೇ ಹೂ. ದುಃಖವೇ ಫಲ. ಇಂತಹ ಮರವನ್ನು ಹತ್ತಿ ಕೆಳಗೆ ಬಿದ್ದ ನನಗೆ, ಎಲೈ ದಯಾನಿಧಿಯಾದ ಲಕ್ಷ್ಮೀನೃಸಿಂಹ, ನಿನ್ನ ಕೈಯನ್ನು ಮುಂದೆ ಮಾಡು.

ಸಂಸಾರ ಸರ್ಪ ಘನ ವಕ್ತ್ರ ಭಯೋಗ್ರ ತೀವ್ರ
ದಂಷ್ಟ್ರಾಕರಾಲ ವಿಷದಗ್ಧ ವಿನಷ್ಟ ಮೂರ್ತೇಃ ।

ನಾಗಾರಿವಾಹನ ಸುಧಾಬ್ಧಿ ನಿವಾಸ ಶೌರೇ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ ॥ ೭ ॥

ಸಂಸಾರವೆಂಬ ಭಯಂಕರವಾದ ಸರ್ಪದ ವಿಷಹಲ್ಲುಗಳಿಂದ ಸುಡಲ್ಪಟ್ಟ ನಷ್ಟಹೊಂದಿದ ದೇಹವುಳ್ಳ ನನಗೆ, ಎಲೈ ಗರುಡಧ್ವಜ! ಎಲೈ ಕ್ಷೀರಾಬ್ಧಿಶಾಯಿಯೇ! ಎಲೈ ಲಕ್ಷ್ಮೀನೃಸಿಂಹ! ನಿನ್ನ ಹಸ್ತಾವಲಂಬನವನ್ನು ಕೊಡು.

ಸಂಸಾರದಾವದಹನಾತುರ ಭೀಕರೋರು
ಜ್ವಾಲಾವಲೀಭಿರತಿದಗ್ಧ ತನೂರುಹಸ್ಯ ।
ತ್ವತ್ಪಾದ ಪದ್ಮಸರಸೀ ಶರಣಾಗತಸ್ಯ
ಲಕ್ಷ್ಮೀ ನೃಸಿಂಹ ಮಮ ದೇಹಿ ಕರಾವಲಂಬಂ ॥ ೮ ॥

ಸಂಸಾರವೆಂಬ ಕಾಡ್ಗಿಚ್ಚಿನ ಭಯಂಕರವಾದ ಜ್ವಾಲೆಗಳ ಸಮೂಹದಿಂದ ಸುಡಲ್ಪಟ್ಟ ರೋಮವುಳ್ಳ, ನಿನ್ನ ಪಾದಪದ್ಮವೆಂಬ ಸರೋವರವನ್ನು ಆಶ್ರಯಿಸಿದ, ಹೇ ಲಕ್ಷ್ಮೀನರಸಿಂಹ! ನನಗೆ, ನಿನ್ನ ಕೈಯನ್ನು ಆಧಾರವಾಗಿ ಕೊಡು.

ಸಂಸಾರಜಾಲ ಪತಿತಸ್ಯ ಜಗನ್ನಿವಾಸ
ಸರ್ವೇಂದ್ರಿಯಾರ್ಥ ಬಡಿಶಾರ್ಥ ಝುಷೋಪಮಸ್ಯ
ಪ್ರೋತ್ಖಂಡಿತ ಪ್ರಚುರತಾಲುಕ ಮಸ್ತಕಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ ॥ ೯ ॥

ಸಂಸಾರವೆಂಬ ಬಲೆಯಲ್ಲಿ ಸಿಕ್ಕಿಬಿದ್ದ ಕಾಮಾದಿ ವಿಷಯಗಳೆಂಬ ಗಾಳಕ್ಕೆ ಸಿಕ್ಕಿಬಿದ್ದ ಮೀನಿನಂತಿರುವ ಕತ್ತರಿಸಲ್ಪಡುವ ಶಿರಸ್ಸುಳ್ಳ ನನಗೆ ಎಲೈ ಲಕ್ಷ್ಮೀನೃಸಿಂಹ, ಹಸ್ತಾವಲಂಬನವನ್ನು ಕೊಡು.

ಸಂಸಾರ ಭೀಕರ ಕರೀಂದ್ರ ಕರಾಭಿಘಾತ
ನಿಷ್ಪಿಷ್ಟ ಮರ್ಮವಪುಷಃ ಸಕಲಾರ್ತಿನಾಶ ।
ಪ್ರಾಣಪ್ರಯಾಣ ಭವಭೀತಿ ಸಮಾಕುಲಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ ॥ ೧೦ ॥

ಎಲೈ, ಸಕಲ ಕಷ್ಟಗಳನ್ನು ನಾಶಿಸುವವನೇ! ಸಂಸಾರವೆಂಬ ಭಯಂಕರ ಆನೆಯು ಸೊಂಡಿಲಿನ ಹೊಡೆತದಿಂದ ಪುಡಿಪುಡಿಯಾದ ಮರ್ಮಸ್ಥಾನವುಳ್ಳ ಮತ್ತು ಸಾಯುವುದರಿಂದ ಉಂಟಾಗುವ ಹೆದರಿಕೆಯುಳ್ಳ ನನಗೆ ನಿನ್ನ ಕೈಯನ್ನು ಕೊಡು.

ಅಂಧಸ್ಯಮೇ ಹೃತವಿವೇಕ ಮಹಾಧನಸ್ಯ
ಚೋರೈಃ ಪ್ರಭೋ ಬಲಿಭಿರಿಂದ್ರಿಯ ನಾಮಧೇಯೈಃ ।
ಮೋಹಾಂಧ ಕೂಪಕುಹರೇ ವಿನಿಪಾತಿತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ ॥ ೧೧ ॥

ವಿವೇಕವೆಂಬ ಸಂಪತ್ತು ಬಲಿಷ್ಠರಾದ ಇಂದ್ರಿಯಗಳೆಂಬ ಕಳ್ಳರಿಂದ ಅಪಹರಿಸಲ್ಪಟ್ಟು ನಾನು ಅಂಧನಾಗಿದ್ದೇನೆ. ಎಲೈ ಪ್ರಭುವೇ! ಅಜ್ಞಾನವೆಂಬ ಬಾವಿಯಲ್ಲಿ ಬಿದ್ದಿದ್ದೇನೆ. ಹೇ ಲಕ್ಷ್ಮೀನೃಸಿಂಹ, ನನಗೆ ಹಸ್ತಾವಲಂಬನವನ್ನು ಕೊಡು.

ಲಕ್ಷ್ಮೀಪತೇ ಕಮಲನಾಭ ಸುರೇಶವಿಷ್ಣೋ
ವೈಕುಂಠ ಕೃಷ್ಣ ಮಧುಸೂದನ ಪುಷ್ಕರಾಕ್ಷ ।
ಬ್ರಹ್ಮಣ್ಯ ಕೇಶವ ಜನಾರ್ದನ ವಾಸುದೇವ
ದೇವೇಶ ದೇಹಿ ಕೃಪಣಸ್ಯ ಕರಾವಲಂಬಂ ॥ ೧೨ ॥

ಎಲೈ ಲಕ್ಷ್ಮೀರಮಣ, ಪದ್ಮನಾಭ, ಸುರಪತೇ, ವಿಷ್ಣೋ, ವೈಕುಂಠನಿಲಯ, ಕೃಷ್ಣ, ಮಧುವೈರಿಯೇ, ಕಮಲಲೋಚನ, ಪರಬ್ರಹ್ಮ, ಕೇಶವ, ಜನಾರ್ದನ, ವಾಸುದೇವ! ದೀನನಾದ ನನಗೆ ನಿನ್ನ ಕೈಯನ್ನು ಆಧಾರವಾಗಿ ಕೊಡು.

ಯನ್ಮಾಯಯೋರ್ಜಿತವಪುಃ ಪ್ರಚುರ ಪ್ರವಾಹ
ಮಗ್ನಾರ್ಥ ಮತ್ರನಿವಹೋರು ಕರಾವಲಂಬಂ ।
ಲಕ್ಷ್ಮೀನೃಸಿಂಹ ಚರಣಾಬ್ಜ ಮಧುವ್ರತೇನ
ಸ್ತೋತ್ರಂ ಕೃತಂ ಸುಖಕರಂ ಭುವಿ ಶಂಕರೇಣ ॥ ೧೩ ॥

ಮಾಯೆಯಿಂದಲಾಗಿ ದೃಢವಾದ ಅಜ್ಞಾನದಲ್ಲಿ ಮುಳುಗಿದವನನ್ನು ಉದ್ಧರಿಸಲೋಸುಗ ಶ್ರೀ ಶಂಕರಾಚಾರ್ಯರಿಂದ ಲಕ್ಷ್ಮೀನೃಸಿಂಹ ಸ್ತೋತ್ರವು ರಚಿಸಲ್ಪಟ್ಟಿತು.

■■■■■■■■■

# ಚರ್ಪಟಪಂಜರಿಕಾ ಸ್ತೋತ್ರಂ

**ದಿನಮಪಿ ರಜನೀ ಸಾಯಂಪ್ರಾತಃ ಶಿಶಿರವಸಂತೌ ಪುನರಾಯಾತಃ ।**
**ಕಾಲಃಕ್ರೀಡತಿ ಗಚ್ಛತ್ಯಾಯುಸ್ತದಪಿ ನ ಮುಂಚತ್ಯಾಶಾವಾಯುಃ ॥ ೧ ॥**

ಕಾಲಪುರುಷನು ಹೆಜ್ಜೆಯಿಂದ ಹೆಜ್ಜೆಗೆ ಕಾಲನ್ನಿಡುತ್ತಾ ಸುಖವಾಗಿ ಆಟವಾಡುತ್ತಾನೆ. ಹಗಲು, ರಾತ್ರಿ; ಬೆಳಗ್ಗೆ, ಸಾಯಂಕಾಲ; ಶಿಶಿರಋತು, ವಸಂತಋತು; ಆಗುತ್ತದೆ ಹೋಗುತ್ತದೆ. ಪುನಃ ಆಗುತ್ತದೆ ಹೋಗುತ್ತದೆ. ಕ್ಷಣದಿಂದ ಕ್ಷಣಕ್ಕೆ ನಮ್ಮ ಆಯುಷ್ಯವು ಕಮ್ಮಿಯಾಗುವದು. ಹಾಗಿದ್ದರೂ ಮನುಷ್ಯನಿಗೆ ಆಶೆಯೆಂಬ ಉಸಿರು ಬಿಟ್ಟುಹೋಗುವದಿಲ್ಲ.

**ಭಜಗೋವಿಂದಂ ಭಜಗೋವಿಂದಂ ಭಜಗೋವಿಂದಂ ಮೂಢಮತೇ**
**ಪ್ರಾಪ್ತೇ ಸನ್ನಿಹಿತೇ ಮರಣೇ ನಹಿ ನಹಿ ರಕ್ಷತಿ ಡುಕೃಞ್ಕರಣೇ ॥ಪಲ್ಲವಿ॥**

ಎಲೋ ಮೂಢಾತ್ಮನೇ! ಮರಣವು ಪ್ರಾಪ್ತವಾದಾಗ ಅಥವಾ ಸಮೀಪಕ್ಕೆ ಬಂದಾಗ ವ್ಯಾಕರಣದ ಯಾವ ಸೂತ್ರವಾಗಲೀ ನಮ್ಮನ್ನು ರಕ್ಷಿಸುವದಿಲ್ಲ. ಅವುಗಳನ್ನೇ ಹೇಳಿಕೊಂಡು ನಾವು ನಮ್ಮ ಆಯುಷ್ಯವನ್ನು ಮುಗಿಸಬಾರದು. ಭೂಲೋಕವನ್ನು ಕಾಪಾಡುವ, ಧರ್ಮವನ್ನು ಕಾಪಾಡುವ, ಗುರು ಗೋವಿಂದನನ್ನು ಭಜಿಸು.

**ಅಗ್ರೇವಹ್ನಿಃ ಪೃಷ್ಠೇ ಭಾನೂ ರಾತ್ರೌ ಚುಬುಕ ಸಮರ್ಪಿತ ಜಾನುಃ**
**ಕರತಲಭಿಕ್ಷಾ ತರುತಲ ವಾಸಸ್ತದಪಿ ನ ಮುಂಚತ್ಯಾಶಾಪಾಶಃ ॥ ೨ ॥**
**ಭಜಗೋವಿಂದಂ ಭಜ.... ॥**

ಹಿಂದೆ ಮತ್ತು ಮುಂದೆ ನಮ್ಮ ಬಳಗವೆಂದರೆ ಆಕಾಶಗತ ಸೂರ್ಯ ಇಲ್ಲವೆ ಮುಂದಿಡಲ್ಪಟ್ಟ ಬೆಂಕಿ, ರಾತ್ರಿಯಲ್ಲಿ ಮೊಣಕಾಲನ್ನು ಆಧರಿಸಿ ಇಟ್ಟುಕೊಂಡ ಚುಬುಕ ಭಾಗ (ಚುಬುಕ=ಕೆಳತುಟಿಯ ಕೆಳಗಿನ ಭಾಗ) ಹಗಲು ಕೈಯಿಂದ ಭಿಕ್ಷೆಬೇಡುವದು. ಮರದ ಬುಡದಲ್ಲಿ ವಾಸಿಸುವದು. ಇಷ್ಟೊಂದು ದೀನದೆಶೆಯಲ್ಲಿರುವವನಿಗೂ ಆಶಾಪಾಶವೆಂಬುದು ಬಿಟ್ಟು ಹೋಗುವದಿಲ್ಲ. ಇದನ್ನು ಗೆಲ್ಲುವದಕ್ಕೋಸ್ಕರ ಗೋವಿಂದಭಜನೆಯನ್ನು ಮಾಡು.

---

ವಿ. ಸೂ: 'ಚರ್ಪಟಪಂಜರಿಕಾ ಸ್ತೋತ್ರ'ವು 'ಭಜಗೋವಿಂದ' ಸ್ತೋತ್ರವೆಂತ ಪ್ರಸಿದ್ಧವಾಗಿದೆ.

ಯಾವದ್ವಿತ್ತೋಪಾರ್ಜನ ಸಕ್ತಸ್ತಾವನ್ನಿಜಪರಿವಾರೋ ರಕ್ತಃ ।
ಪಶ್ಚಾದ್ಧಾವತಿ ಜರ್ಜರದೇಹೆ ವಾರ್ತಾಂ ಪೃಚ್ಛತಿ ಕೋಽಪಿ ನ ಗೇಹೇ ॥

ಭಜಗೋವಿಂದಂ.... ॥ ೩ ॥

ಎಷ್ಟರ ವರೆಗೆ ನಾವು ಹಣಗಳಿಸುವದರಲ್ಲಿ ಆಸಕ್ತರಾಗಿದ್ದೇವೋ ಅಷ್ಟರ ವರೆಗೆ ನಮ್ಮ ಪರಿವಾರವು ನಮ್ಮನ್ನು ಪ್ರೀತಿಸುವದು. ದೇಹವು ಮುದಿತನದಿಂದ ಜರ್ಜರಿತವಾದಾಗ್ಯೆ ನಮ್ಮ ಪರಿವಾರವು ನಮ್ಮನ್ನು ಬಿಟ್ಟು ಓಡುವದು. ಮನೆಯಲ್ಲಿ ನಮ್ಮ ವರ್ತಮಾನವನ್ನು ಯಾರೂ ಕೇಳುವ ದಿಲ್ಲ. ಆದುದರಿಂದ ಗೋವಿಂದನನ್ನು ಭಜಿಸು.

ಜಟಿಲೋ ಮುಂಡೀ ಲುಂಚಿತಕೇಶಃ ಕಾಷಾಯಾಂಬರಬಹುಕೃತ ವೇಷಃ ।
ಪಶ್ಯನ್ನಪಿ ಚ ನ ಪಶ್ಯತಿ ಮೂಢ । ಉದರನಿಮಿತ್ತಂ ಬಹುಕೃತವೇಷಃ ।

ಭಜಗೋವಿಂದಂ.... ॥ ೪ ॥

ಹೊಟ್ಟೆಯ ಪಾಡಿಗಾಗಿ ನಾನಾ ತರದ ವೇಷಧಾರಿಯಾಗುತ್ತಾನೆ. ಒಮ್ಮೆ ಜಡೆಯನ್ನು ಬೆಳೆಸುತ್ತಾನೆ. ಕೆಲವೊಮ್ಮೆ ಸಂಪೂರ್ಣ ಬೋಳು ಕ್ಷೌರಮಾಡಿಸಿಕೊಳ್ಳುತ್ತಾನೆ. ಕೆಲವೊಮ್ಮೆ ಸೆಳೆಯಲ್ಪಟ್ಟ ಕೇಶವುಳ್ಳವ ನಾಗುತ್ತಾನೆ. ಕಾವಿಬಣ್ಣದ ವಸ್ತ್ರಗಳಿಂದ ವಿಚಿತ್ರವೇಷವನ್ನು ಮಾಡಿ ಕೊಳ್ಳುತ್ತಾನೆ. "ಜಗತ್ತು ನಶ್ವರವಾದುದು" ಎಂಬುದನ್ನು ನೋಡುತ್ತಾನೆ. ತಾನು ಯಾರು? ಎಂಬುದನ್ನು ನೋಡುವದಿಲ್ಲ. ಆದುದರಿಂದ ಗೋವಿಂದನ ಭಜನೆಯನ್ನು ಮಾಡು.

ಭಗವದ್ಗೀತಾ ಕಿಂಚದಧೀತಾ ಗಂಗಾಜಲಲವಕಣಿಕಾ ಪೀತಾ ।
ಸಕೃದಪಿ ಯಸ್ಯ ಮುರಾರಿಸಮರ್ಚಾ ತಸ್ಯ ಯಮಃ ಕಿಂ ಕುರುತೇ ಚರ್ಚಾ॥

ಭಜಗೋವಿಂದ.... ॥ ೫ ॥

ಸ್ವಲ್ಪಮಟ್ಟಿಗೆ ಭಗವಾನ್ ಶ್ರೀಕೃಷ್ಣನ ಭಗವದ್ಗೀತೆಯನ್ನು ಓದಿದರೆ ಗಂಗಾನದಿಯ ನೀರಿನ ಕೆಲವು ತುಂತುರುಗಳನ್ನು ಸೇವಿಸಿದರೆ, ಮಹಾವಿಷ್ಣು ವಿನ ಪೂಜೆಯನ್ನು ಒಮ್ಮೆಯಾದರೂ ಮಾಡಿದ್ದರೆ ಯಮನು ಅವನೊಡನೆ ಯಾವ ಚರ್ಚೆಯನ್ನೂ ಮಾಡುವದಿಲ್ಲ. ಆದುದರಿಂದ ಈ ಮೂರು ಕೆಲಸ ಗಳನ್ನು ನಡಿಸಿ ಗೋವಿಂದನನ್ನು ಭಜಿಸು.

ಅಂಗಂ ಗಲಿತಂ ಪಲಿತಂ ಮುಂಡಂ ದಶನವಿಹೀನಂ ಜಾತಂ ತುಂಡಂ ।
ವೃದ್ಧೋ ಯಾತಿ ಗೃಹೀತ್ವಾ ದಂಡಂ ತದಪಿ ನ ಮುಂಚತ್ಯಾಶೀಪಿಂಡಂ ॥
ಭಜಗೋವಿಂದಂ.... ॥ ೬ ॥

ಕೈಕಾಲುಗಳು ಉದುರುತ್ತವೆ. ತಲೆಕೂದಲುಗಳು ಬಿಳಿಯಾಗಿವೆ. ಬಾಯಿಯಿಂದ ಹಲ್ಲುಗಳು ಬಿದ್ದುಹೋಗಿವೆ. ಮುದುಕನಾಗಿ ಕೋಲನ್ನು ಊರಿ ನಡೆಯುತ್ತಾನೆ. ಇನ್ನೂ ಮಿಥ್ಯಾಕಲ್ಪಿತವಾದ ಆಶೆಯು ಬಿಟ್ಟು ಹೋಗುವದಿಲ್ಲ. ಗೋವಿಂದ ಭಜನೆಯನ್ನು ಮಾಡು.

ಬಾಲಸ್ತಾವತ್ಕ್ರೀಡಾಸಕ್ತಸ್ತರುಣಸ್ತಾವತ್ತರುಣೀರಕ್ತಃ ।
ವೃದ್ಧಸ್ತಾವಚ್ಚಿಂತಾಮಗ್ನಃ ಪರೇಬ್ರಹ್ಮಣಿ ಕೋಽಪಿ ನ ಲಗ್ನಃ ॥
ಭಜಗೋವಿಂದಂ.... ॥ ೭ ॥

ಮನುಷ್ಯನ ಬಾಲ್ಯವು ಆಟದಲ್ಲಿ ಮುಗಿಯಿತು. ತಾರುಣ್ಯವು ವಿಷಯೋಪಭೋಗಗಳಲ್ಲಿ ಮುಗಿಯಿತು. ವಾರ್ಧಕ್ಯವು ಸಂಸಾರ ಚಿಂತೆಯಲ್ಲಿ ಮುಳುಗಿತು. ಇನ್ನು ಪರಬ್ರಹ್ಮ ಚಿಂತೆಯಲ್ಲಿ ಆಸಕ್ತಿಗೊಂಡವರು ಯಾರೂ ಯಾವ ಕಾಲದಲ್ಲಿಯೂ ಇಲ್ಲ. ಗೋವಿಂದನನ್ನು ಭಜಿಸು.

ಪುನರಪಿ ಜನನಂ ಪುನರಪಿ ಮರಣಂ ಪುನರಪಿ ಜನನೀಜಠರೇ ಶಯನಂ ।
ಇಹ ಸಂಸಾರೆ ಖಲು ದುಸ್ತಾರೇ ಕೃಪಯಾಽಪಾರೇ ಪಾಹಿ ಮುರಾರೇ ॥
ಭಜಗೋವಿಂದಂ.... ॥ ೮ ॥

ಸಂಸಾರ ಸಾಗರವನ್ನು ದಾಟಲು ಸಾಧ್ಯವಿಲ್ಲ. ಪುನಃ ಜನನ ಪುನಃ ಮರಣ, ಪುನಃ ತಾಯಿಯ ಜಠರದಲ್ಲಿ ಶಯನ—ಹೀಗೆ ನಡೆದಿದೆ. ಈ ಸಂಸಾರವು ನಿಶ್ಚಯವಾಗಿ ದುಸ್ತಾರವಾಗಿದೆ. ಹೇ ಮುರಾರಿಯೇ! ಕೃಪೆಯಿಂದ ರಕ್ಷಿಸು. ಗೋವಿಂದನನ್ನು ಭಜಿಸು.

ಪುನರಪಿ ರಜನೀ ಪುನರಪಿ ದಿವಸಃ ಪುನರಪಿ ಪಕ್ಷಃ ಪುನರಪಿ ಮಾಸಃ ।
ಪುನರಪ್ಯಯನಂ ಪುನರಪಿ ವರ್ಷಂ ತದಪಿ ನ ಮುಂಚತ್ಯಾಶಾಮರ್ಷಂ ॥
ಭಜಗೋವಿಂದಂ.... ॥ ೯ ॥

ರಾತ್ರಿ ಮುಗಿಯಿತು, ಪುನಃ ಬಂತು. ಹಗಲು ಮುಗಿಯಿತು, ಪುನಃ ಬಂತು. ಪಕ್ಷವು ಮುಗಿಯಿತು, ಪುನಃ ಬಂತು. ತಿಂಗಳು ಕಳೆದು ಹೋಯಿತು,

ಪುನಃ ಬಂತು. ದಕ್ಷಿಣಾಯನ ಉತ್ತರಾಯಣವೆಂಬ ಅಯನಗಳೂ ಮುಗಿದುವು. ಪುನಃ ಬಂತು. ಸಂವತ್ಸರವು ಕಳೆದುಹೋಯಿತು. ಹೊಸ ವರ್ಷವು ಪುನಃ ಬಂತು. ಈ ಪ್ರಕಾರ ಕಾಲವು ನಿಲ್ಲುವದಿಲ್ಲ. ಆಯುಷ್ಯವು ಕ್ಷಯಿಸುತ್ತಿದೆ. ಅಭಿಲಾಷೆ ಕ್ರೋಧಗಳು ಮಾತ್ರ ನಮ್ಮನ್ನು ಇನ್ನೂ ಬಿಟ್ಟು ಹೋಗುವದಿಲ್ಲ. ಎಲೈ ಮನವೇ! ಗೋವಿಂದನನ್ನು ಭಜಿಸು.

ವಯಸಿ ಗತೆ ಕಃ ಕಾಮವಿಕಾರಃ ಶುಷ್ಕೇ ನೀರೇ ಕಃ ಕಾಸಾರಃ |
ನಷ್ಟೇ ದ್ರವ್ಯೇ ಕಃ ಪರಿವಾರೋ ಜ್ಞಾತೇ ತತ್ತ್ವೇ ಕಃ ಸಂಸಾರಃ ||
ಭಜಗೋವಿಂದಂ.... || ೧೦ ||

ಮುದಿತನದಲ್ಲಿ ಮನ್ಮಥವಿಕಾರವು ಏತರದು? ನೀರು ಬತ್ತಿಹೋದ ಮೇಲೆ ಕೊಳವು ಯಾವುದು? ಹಣವು ಮುಗಿದಾಗ ನಮಗೆ ಯಾವ ಪರಿವಾರವು ಇರುವದು? ಬ್ರಹ್ಮಜ್ಞಾನವು ಒದಗಿದರೆ ಸಂಸಾರವು ಯಾವುದು? ಎಲೇ ಮನವೇ! ಗೋವಿಂದನನ್ನು ಭಜಿಸು.

ನಾರೀಸ್ತನಭರನಾಭಿನಿವೇಶಂ ಮಿಥ್ಯಾಮಾಯಾಮೋಹಾವೇಶಂ |
ಏತನ್ಮಾಂಸವಸಾದಿವಿಕಾರಂ ಮನಸಿ ವಿಚಾರಯ ವಾರಂವಾರಂ ||
ಭಜಗೋವಿಂದ.... || ೧೧ ||

ಎಲೈ ಮನವೇ! ನೀನು ಆಗ್ಯಾಗ್ಯೆ ನಿನ್ನಲ್ಲಿಯೇ ಸರಿಯಾಗಿ ವಿಚಾರಮಾಡು. ಸ್ತ್ರೀಯರ ಕುಚಭಾಗ ನಾಭಿಮೂಲ ಇವೆಲ್ಲಾ ಮಾಂಸ, ಮತ್ತು ವಸಾಮಯವಾದುದು. ಅಜ್ಞಾನ ಮಾಯೆಗಳ ಜನ್ಮಸ್ಥಾನ. ಅವುಗಳನ್ನು ಆಶಿಸಬೇಡ. ಗೋವಿಂದನನ್ನು ಭಜಿಸು.

ಕಸ್ತ್ವಂ ಕೋಽಹಂ ಕುತ ಆಯಾತಃ ಕಾ ಮೇ ಜನನೀ ಕೋ ಮೇ ತಾತಃ |
ಇತಿ ಪರಿಭಾವಯ ಸರ್ವಮಸಾರಂ ವಿಶ್ವಂತ್ಯಕ್ತ್ವಾ ಸ್ವಪ್ನವಿಚಾರಂ ||
ಭಜಗೋವಿಂದಂ.... || ೧೨ ||

ನೀನು ಯಾರು? ನಾನು ಯಾರು? ಎಲ್ಲಿಂದ ಬಂದಿ? ನನ್ನ ತಾಯಿಯು ಯಾರು? ನನ್ನ ತಂದೆಯು ಯಾರು? ಇವನ್ನೆಲ್ಲಾ ವಿಮರ್ಶಿಸು. ವಿಮರ್ಶಿಸಿದರೆ ಎಲ್ಲವೂ ನಿಸ್ಸಾರವಾಗಿ ಕಾಣುವದು. ಜಗತ್ತು ಸ್ವಪ್ನದಲ್ಲಿ

ಕಂಡಂತೆ ಕಾಣುವದು. ಆದುದರಿಂದ, ಎಲೇ ಮನವೇ! ಸಂಸಾರ ಮಿಥ್ಯಾ ಲೋಕವನ್ನು ಬಿಟ್ಟು ಗೋವಿಂದನನ್ನು ಭಜಿಸು.

ಗೇಯಂ ಗೀತಾ ನಾಮಸಹಸ್ರಂಧ್ಯೇಯಂ ಶ್ರೀಪತಿರೂಪಮಜಸ್ರಂ ।
ನೇಯಂ ಸಜ್ಜನಸಂಗೇ ಚಿತ್ತಂ ದೇಯಂ ದೀನಜನಾಯ ಚ ವಿತ್ತಂ ॥

ಭಜಗೋವಿಂದಂ.... ॥ ೧೩ ॥

ಭಗವದ್ಗೀತೆ, ವಿಷ್ಣುಸಹಸ್ರನಾಮ ಇವನ್ನೆಲ್ಲಾ ಓದತಕ್ಕದ್ದು. ಯಾವಾಗಲೂ ಮಹಾವಿಷ್ಣುವಿನ ಸ್ವರೂಪವನ್ನು ಧ್ಯಾನಿಸತಕ್ಕದ್ದು. ಸತ್ಸಂಗದಲ್ಲಿ ಮನಸ್ಸನ್ನು ಕೊಂಡುಹೋಗತಕ್ಕದ್ದು. ದೀನಜನರಿಗೆ ದ್ರವ್ಯವನ್ನು ನಿಷ್ಕಾಮ ಬುದ್ಧಿಯಿಂದ ದಾನಮಾಡತಕ್ಕದ್ದು. ಎಲೇ ಮನವೇ, ಗೋವಿಂದನನ್ನು ಭಜಿಸು.

ಯಾವಜ್ಜೀವೋ ನಿವಸತಿ ದೇಹೇ ಕುಶಲಂ ತಾವತ್ಪೃಚ್ಛತಿ ಗೇಹೇ ।
ಗತವತಿ ವಾಯೌ ದೇಹಾಪಾಯೇ ಭಾರ್ಯಾ ಬಿಭ್ಯತಿ ತಸ್ಮಿನ್ ಕಾಯೇ ॥

ಭಜಗೋವಿಂದಂ.... ॥ ೧೪ ॥

ನಾವು ಜೀವಂತರಾಗಿರುವ ತನಕ ಮನೆಯಲ್ಲಿ ನಮ್ಮ ಕುಶಲವಾರ್ತೆಯನ್ನು ಕೇಳುವರು. ಪ್ರಾಣವಾಯುವು ಹೋದರೆ ದೇಹಕ್ಕೆ ಅಪಾಯ ಒದಗಿದಾಗ ಅದೇ ದೇಹವನ್ನು ಹೆಂಡತಿಯು ಕಂಡು ಹೆದರುವಳು. ಎಲೇ ಮನವೇ, ಗೋವಿಂದನನ್ನು ಭಜಿಸು.

ಸುಖತಃ ಕ್ರಿಯತೇ ರಾಮಾಭೋಗಃ ಪಶ್ಚಾದ್ಧಂತ ಶರೀರೇ ರೋಗಃ ।
ಯದ್ಯಪಿ ಲೋಕೇ ಮರಣಂ ಶರಣಂ ತದಪಿ ನ ಮುಂಚತಿ ಪಾಪಾಚರಣಂ ॥

ಭಜಗೋವಿಂದಂ.... ॥ ೧೫ ॥

ಸ್ತ್ರೀವಿಷಯೋಪಭೋಗವು ಮನುಷ್ಯರಿಂದ ಸುಖವಾಗಿ ಆಚರಿಸಲ್ಪಡುತ್ತದೆ. ಅನಂತರ ದೇಹದಲ್ಲಿ ರೋಗವು ಸಂಭವಿಸುತ್ತದೆ. ಕಷ್ಟವೇ! ಹೇಗಾದರೂ ಲೋಕದಲ್ಲಿ ನಮ್ಮ ದೇಹವು ಮರಣಕ್ಕೆ ತುತ್ತಾಗಲೇಬೇಕು. ಹಾಗಾದರೂ ಪಾಪಾಚರಣೆಯನ್ನು ನಾವು ಬಿಡುವುದಿಲ್ಲ. ಎಲೇ ಮನವೇ! ನೀನು ಗೋವಿಂದನನ್ನು ಭಜಿಸು.

ರಥ್ಯಾ ಚರ್ಪಟ ವಿರಚಿತಕಂಥಃ ಪುಣ್ಯಾಪುಣ್ಯವಿವರ್ಜಿತಪಂಥಃ
ನಾಹಂ ನ ತ್ವಂ ನಾಯಂ ಲೋಕಸ್ತದಪಿ ಕಿಮರ್ಥಂ ಕ್ರಿಯತೇ ಶೋಕಃ ||
ಭಜಗೋವಿಂದಂ.... || ೧೬ ||

ಮಾರ್ಗದಲ್ಲಿ ಬಿದ್ದ ಚಿಂದಿಗಳಿಂದ ರಚಿಸಿದ ವಸ್ತ್ರಉಳ್ಳವನಾದರೂ, ಪಾಪಪುಣ್ಯವೆಂಬ ಭೇದವಿಲ್ಲದ ದಾರಿಯನ್ನಾಶ್ರಯಿಸಿದರೂ ನಾನು ನೀನು ಇವನು ಎಂಬದು ಇಲ್ಲದವನಾದರೂ, ಯಾವುದಕ್ಕೋಸ್ಕರ ದುಃಖವು ಮಾಡಲ್ಪಡುತ್ತದೆ? ಎಲೇ ಮನವೇ! ಗೋವಿಂದನನ್ನು ಭಜಿಸು.

ಕುರುತೇ ಗಂಗಾಸಾಗರಗಮನಂ ವ್ರತಪರಿಪಾಲನಮಥವಾ ದಾನಂ |
ಜ್ಞಾನವಿಹೀನೇ ಸರ್ವಮನೇನ ಮುಕ್ತಿರ್ನ ಭವತಿ ಜನ್ಮಶತೇನ || ೧೭ ||

ಪವಿತ್ರವಾದ ಗಂಗಾಸಾಗರ ಸಂಗಮದಲ್ಲಿ ಸ್ನಾನಮಾಡಿದರೂ, ಕೃಚ್ಛ್ರ ವ್ರತಗಳನ್ನು ಆಚರಿಸಿದರೂ, ನಾನಾ ವಿಧದ ದಾನಗಳನ್ನು ಕೊಟ್ಟರೂ, ನೂರಾರು ಜನ್ಮ ಸಂದುಹೋದರೂ ಇವೆಲ್ಲವುಗಳಿಂದಲೂ ಜ್ಞಾನವಿಲ್ಲದವನಿಗೆ ಮೋಕ್ಷವು ಲಭಿಸಲಿಕ್ಕಿಲ್ಲ.

ಇತಿ ಶ್ರೀಮಚ್ಛಂಕರಾಚಾರ್ಯ ವಿರಚಿತ ಚರ್ಪಟಪಂಜರಿಕಾಸ್ತೋತ್ರವು ಸಮಾಪ್ತಂ

■■■■■■■■

# ಸಾಧನಪಂಚಕ

## ಶ್ರೀ ಶಂಕರಾಚಾರ್ಯರ ಹಿತೋಪದೇಶ

ವೇದೋ ನಿತ್ಯ ಮಧೀಯತಾಂ ತದುದಿತಂ ಕರ್ಮಸ್ವನುಷ್ಠೀಯತಾಂ
ತೇನೇಶಸ್ಯ ವಿಧೀಯತಾಮಪಚಿತಿಃ ಕಾಮ್ಯೇಮತಿಸ್ತ್ಯಜ್ಯತಾಂ |
ಪಾಪೌಘಃ ಪರಿಧೂಯತಾಂ ಭವಸುಖೇ ದೋಷೋಽನುಸಂಧೀಯತಾಂ
ಆತ್ಮೇಚ್ಛಾವ್ಯವಸೀಯತಾಂ ನಿಜಗೃಹಾತ್ತೂರ್ಣಂ ವಿನಿರ್ಗಮ್ಯತಾಂ || ೧ ||

ಪ್ರತಿದಿನವೂ ಗುರುಮುಖದಿಂದ ನಾವು ವೇದಾಧ್ಯಯನವನ್ನು ಮಾಡತಕ್ಕದ್ದು. ವೇದದಲ್ಲಿ ಹೇಳಿದ ಕರ್ಮಗಳನ್ನು ಆಚರಿಸತಕ್ಕದ್ದು. ಪರ

ಮೇಶ್ವರನ ಪೂಜೆಯನ್ನು ಮಾಡತಕ್ಕದ್ದು. ಸಕಾಮಕರ್ಮವು ಬಿಡಲ್ಪಡ ತಕ್ಕದ್ದು. ನಿಷ್ಕಾಮಕರ್ಮಾಚರಣೆಯು ಯುಕ್ತವಾದುದು. ಪಾಪಗಳ ಸಮೂಹವನ್ನು ಹೋಗಲಾಡಿಸತಕ್ಕದ್ದು. ಸಂಸಾರ ಸುಖದಲ್ಲಿ ನಿಜವಾದ ಸುಖವಿಲ್ಲ. ಅದು ಕ್ಷಣಿಕವಾದುದು. ದುಃಖದಲ್ಲಿ ಪರ್ಯವಸಾನ ಹೊಂದು ವದು. ಪರಬ್ರಹ್ಮ ಚಿಂತನೆಯಲ್ಲಿ ವ್ಯಾಪೃತರಾಗಬೇಕು. ಬೇಗನೇ ತನ್ನ ಮನೆಯಿಂದ ಹೊರಟು ನಿವೃತ್ತಿಮಾರ್ಗವನ್ನು ಅನುಸರಿಸಬೇಕು.

ಸಂಗಃ ಸತ್ಸು ವಿಧೀಯತಾಂ ಭಗವತೋ ಭಕ್ತಿ ರ್ದೃಢಾ ಧೀಯತಾಂ
ಶಾಂತ್ಯಾದಿಃ ಪರಿಚೀಯತಾಂ ದೃಢತರಂ ಕರ್ಮಾಶು ಸಂತ್ಯಜ್ಯತಾಂ ।
ಸದ್ವಿದ್ವಾನುಪಸರ್ಪ್ಯತಾಂ ಪ್ರತಿದಿನಂ ತತ್ಪಾದುಕೇ ಸೇವ್ಯತಾಂ
ಬ್ರಹ್ಮೈಕಾಕ್ಷರಮರ್ಥ್ಯತಾಂ ಶ್ರುತಿಶಿರೋವಾಕ್ಯಂ ಸಮಾಕರ್ಣ್ಯತಾಂ ॥ ೨ ॥

ಸಜ್ಜನರ ಸಹವಾಸವನ್ನು ಮಾಡತಕ್ಕದ್ದು. ಪರಮಾತ್ಮನಲ್ಲಿ ದೃಢ ಭಕ್ತಿಯಿಂದ ಇರಬೇಕು. ಶಮದಮಾದಿ ಗುಣಗಳನ್ನು ಅಭ್ಯಾಸಮಾಡ ಬೇಕು. ವೇದೋಕ್ತವಲ್ಲದ ಕರ್ಮವನ್ನು ಬಿಡಬೇಕು. ಒಳ್ಳೇ ವಿದ್ವಾಂಸ ರನ್ನು ಆಶ್ರಯಿಸಬೇಕು. ಗುರುಪಾದುಕಗಳನ್ನು ಪೂಜಿಸಬೇಕು. ಓಂಕಾರದ ಅರ್ಥವನ್ನು ತಿಳಕೊಳ್ಳಬೇಕು. ಉಪನಿಷದ್ವಾಕ್ಯಗಳನ್ನು ಕೇಳಬೇಕು.

ವಾಕ್ಯಾರ್ಥಶ್ಚ ವಿಚಾರ್ಯತಾಂ ಶ್ರುತಿಶಿರಃ ಪಕ್ಷಃ ಸಮಾಶ್ರೀಯತಾಂ
ದುಸ್ತರ್ಕಾತ್ಸುವಿರಮ್ಯತಾಂ ಶ್ರುತಿಮತಸ್ತರ್ಕೋಽನುಸಂಧೀಯತಾಂ ।
ಬ್ರಹ್ಮೈವಾಸ್ಮಿ ವಿಭಾವ್ಯತಾಮಹರಹರ್ಗರ್ವಃ ಪರಿತ್ಯಜ್ಯತಾಂ
ದೇಹೇಽಹಂ ಮತಿರುಝ್ಯತಾಂ ಬುಧಜನೈರ್ವಾದಃ ಪರಿತ್ಯಜ್ಯತಾಂ ॥ ೩ ॥

ಉಪನಿಷದ್ವಾಕ್ಯಗಳ ಅರ್ಥವನ್ನು ಗುರುವಿನೊಡನೆ ವಿಚಾರಿಸಬೇಕು. ವೇದಾಂತಸಮ್ಮತವಾದ ಪಕ್ಷವನ್ನು ಆಶ್ರಯಿಸಬೇಕು. ಕುತರ್ಕಗಳಿಂದ ಏನೂ ಪ್ರಯೋಜನವಿಲ್ಲ. ಅವನ್ನು ನಿಲ್ಲಿಸಬೇಕು. ಶಾಸ್ತ್ರೀಯ ತರ್ಕವು ಗ್ರಾಹ್ಯವಾದುದು. ತಾನೇ ಪರಬ್ರಹ್ಮನೆಂದು ಭಾವಿಸಬೇಕು. ಗರ್ವವನ್ನು ಅನುದಿನ ಬಿಡಬೇಕು. ನಮ್ಮ ದೇಹದಲ್ಲಿ ಅಹಂಭಾವನೆಯು ಇರಬಾರದು. ಗುರುಸಮಾನರಾದ ವಿದ್ವಜ್ಜನರೊಡನೆ ವಾದಮಾಡಬಾರದು.

ಕ್ಷುದ್ವ್ಯಾಧಿಶ್ಚ ಚಿಕಿತ್ಸ್ಯತಾಂ ಪ್ರತಿದಿನಂ ಭಿಕ್ಷೌಷಧಂ ಭುಜ್ಯತಾಂ
ಸ್ವಾದ್ವನ್ನಂ ನತುಯಾಚ್ಯತಾಂ ವಿಧಿವಶಾತ್ಪ್ರಾಪ್ತೇನ ಸಂತುಷ್ಯತಾಂ ।
ಶೀತೋಷ್ಣಾದಿ ವಿಷಹ್ಯತಾಂ ನ ತು ವೃಥಾ ವಾಕ್ಯಂ ಸಮುಚ್ಚಾರ್ಯತಾಂ
ಔದಾಸೀನ್ಯಮಭೀಪ್ಸ್ಯತಾಂ ಜನಕೃಪಾನೈಷ್ಠುರ್ಯ ಮುತ್ಸೃಜ್ಯತಾಂ ॥೪॥

ನಮಗೆ ಹಸಿವು ಎಂಬುದು ನಿತ್ಯರೋಗ. ಇದಕ್ಕೆ ಔಷಧಿಮಾಡಬೇಕು. ಪ್ರತಿದಿನ ಭಿಕ್ಷೆ ಗಳಿಸಿದ ಅನ್ನವೇ ಉತ್ತಮವಾದ ಔಷಧಿ. ಮಧುರಾನ್ನವನ್ನು ಕೇಳಬೇಡ. ಆಕಸ್ಮಿಕವಾಗಿ ಒದಗಿದುದರಿಂದ ಆತ್ಮತೃಪ್ತಿಯನ್ನು ಮಾಡಿಕೊಳ್ಳಬೇಕು. ಶೀತ ಉಷ್ಣಗಳೆಂಬ ದ್ವಂದ್ವವನ್ನು ಸಹಿಸಬೇಕು. ನಿರರ್ಥಕವಾಗಿ ವಾಕ್ಯವನ್ನು ನುಡಿಯಬಾರದು. ಪ್ರವೃತ್ತಿಯಿಂದ ಉದಾಸೀನನಾಗಬೇಕು. ಜನರ ದಯೆಯಿಂದಲೂ ಕೋಪದಿಂದಲೂ ದೂರವಿರಬೇಕು.

ಏಕಾಂತೇ ಸುಖಮಾಸ್ಯತಾಂ ಪರತರೇ ಚೇತಃ ಸಮಾಧೀಯತಾಂ
ಪೂರ್ಣಾತ್ಮಾ ಸುಸಮೀಕ್ಷ್ಯತಾಂ ಜಗದಿದಂ ತದ್ಬಾಧಿತಂ ದೃಶ್ಯತಾಂ ।
ಪ್ರಾಕ್ಕರ್ಮ ಪ್ರವಿಲಾಪ್ಯತಾಂ ಚಿತಿಬಲಾನ್ನಾಪ್ಯುತ್ತರೈಃ ಶ್ಲಿಷ್ಯತಾಂ
ಪ್ರಾರಬ್ಧಂ ತ್ವಿಹಭುಜ್ಯತಾಮಥಪರ ಬ್ರಹ್ಮಾತ್ಮನಾ ಸ್ಥೀಯತಾಂ ॥ ೫ ॥

ಒಬ್ಬಂಟಿಗನಾಗಿ ಸುಖದಿಂದಿರಬೇಕು. ಪರಬ್ರಹ್ಮನಲ್ಲಿ ಚಿತ್ತವನ್ನು ಇಡಬೇಕು. "ಬ್ರಹ್ಮವು ಪೂರ್ಣವಾದುದು" ಎಂಬದನ್ನು ಕಾಣಬೇಕು. ಕಾಣುವ ಜಗತ್ತು ಮಾಯೆಗೆ ಒಳಗಾದುದು ಎಂಬುದನ್ನು ತಿಳಕೊಳ್ಳಬೇಕು. ಪ್ರಾಕ್ಕರ್ಮವನ್ನು ಅನುಭವಿಸತಕ್ಕದ್ದು. ಪರಬ್ರಹ್ಮ ಸ್ವರೂಪಿಯಾಗಿ ಇರತಕ್ಕದ್ದು.

ಯಃಶ್ಲೋಕ ಪಂಚಕಮಿದಂ ಪಠತೇ ಮನುಷ್ಯಃ
ಸಂಚಿಂತಯತ್ಯನುದಿನಂ ಸ್ಥಿರತಾಮುಪೇತ್ಯ ।
ತಸ್ಯಾಶು ಸಂಸೃತಿ ದವಾನಲ ತೀವ್ರ ಘೋರ-
ತಾಪಃ ಪ್ರಶಾಂತಿಮುಪಯಾತಿ ಚಿತಿಪ್ರಸಾದಾತ್ ॥ ೬ ॥

ಯಾವಾತನು ಮೇಲೆ ಹೇಳಿದ ಐದು ಶ್ಲೋಕಗಳನ್ನು ಪ್ರತಿ ದಿನ ಓದಿ, ವಿಚಾರಿಸಿ, ಸ್ಥಿರಬುದ್ಧಿಯುಳ್ಳವನಾಗಿ ಜ್ಞಾನವನ್ನು ನಿರ್ಮಲಗೊಳಿಸು

ತ್ತಾನೋ ಅವನು ಕೂಡಲೇ ಸಂಸಾರವೆಂಬ ಕಾಡ್ಗಿಚ್ಚಿನಿಂದ ಉಂಟಾಗುವ ಭಯಂಕರ ತಾಪದಿಂದ ಬಿಡುಗಡೆ ಹೊಂದುವನು.

ಇತಿ ಶ್ರೀಮಚ್ಛಂಕರಾಚಾರ್ಯ ರಚಿತ ಸಾಧನ ಪಂಚಕವು ಸಮಾಪ್ತಂ.

▪▪▪▪▪▪▪▪

# ಶಿವಮಾನಸ ಪೂಜಾ

ರತ್ನೈಃ ಕಲ್ಪಿತಮಾಸನಂ ಹಿಮಜಲೈಃ ಸ್ನಾನಂ ಚ ದಿವ್ಯಾಂಬರಂ
ನಾನಾರತ್ನವಿಭೂಷಿತಂ ಮೃಗಮದಾಮೋದಾಂಕಿತಂ ಚಂದನಂ ।
ಜಾತೀಚಂಪಕಬಿಲ್ವಪತ್ರರಚಿತಂ ಪುಷ್ಪಂ ಚ ಧೂಪಂ ತಥಾ
ದೀಪಂ ದೇವದಯಾನಿಧೇ ಪಶುಪತೇ ಹೃತ್ಕಲ್ಪಿತಂ ಗೃಹ್ಯತಾಂ ॥ ೧ ॥

ಎಲೈ ದಯಾಸಾಗರ! ಹೇ ಪಶುಪತಿಯೇ! ನಿನ್ನನ್ನು ಪೂಜಿಸಲು ನನ್ನ ಮನಸ್ಸಿನಿಂದಲೇ ನಿರ್ಮಿಸಲ್ಪಟ್ಟ ರತ್ನಮಯವಾದ ಆಸನವು ಸ್ವೀಕರಿಸಲ್ಪಡಲಿ. ಹಿಮಜಲದಿಂದ ಸ್ನಾನವೂ, ಉತ್ತಮೋತ್ತಮವಾದ ವಸ್ತ್ರವೂ, ನಾನಾವಿಧದ ರತ್ನಾಭರಣವೂ, ಕಸ್ತೂರಿ ಮಿಶ್ರಿತವಾದ ಶ್ರೀಗಂಧವೂ, ಜಾಜಿ, ಸಂಪಿಗೆ, ಬಿಲ್ವಪತ್ರ ಮೊದಲಾದ ಪತ್ರಪುಷ್ಪಗಳೂ, ಧೂಪ ದೀಪಗಳೂ ಸ್ವೀಕರಿಸಲ್ಪಡಲಿ.

ಸೌವರ್ಣೇ ನವರತ್ನಖಂಡರಚಿತೇ ಪಾತ್ರೇ ಘೃತಂ ಪಾಯಸಂ
ಭಕ್ಷ್ಯಂ ಪಂಚವಿಧಂ ಪಯೋದಧಿಯುತಂ ರಂಭಾಫಲಂ ಪಾನಕಂ ।
ಶಾಕಾನಾಮಯುತಂ ಜಲಂ ರುಚಿಕರಂ ಕರ್ಪೂರಖಂಡೋಜ್ವಲಂ
ತಾಂಬೂಲಂ ಮನಸಾ ಮಯಾ ವಿರಚಿತಂ ಭಕ್ತ್ಯಾ ಪ್ರಭೋ ಸ್ವೀಕುರು॥ ೨ ॥

ನವರತ್ನಗಳಿಂದ ಖಚಿತವಾದ ಚಿನ್ನದ ಪಾತ್ರದಲ್ಲಿ ತುಪ್ಪದಿಂದ ತಯಾರಿಸಿದ ಪಾಯಸ, ಐದು ವಿಧದ ಭಕ್ಷ್ಯ, ಹಾಲು, ಮೊಸರು, ಬಾಳೆಹಣ್ಣು, ಪಾನಕ, ನಾನಾವಿಧದ ತರಕಾರಿ, ನಿರ್ಮಲವಾದ ನೀರು, ಪಚ್ಚೆಕರ್ಪೂರದಿಂದೊಡಗೊಂಡ ವೀಳ್ಯದೆಲೆ ಇವನ್ನೆಲ್ಲ ಮನಸ್ಸಿನಿಂದಲೇ

ರಚಿಸಿ ಭಕ್ತಿಯಿಂದಲಾಗಿ ಹೇ ಪ್ರಭೋ! ನಿನಗೆ ಅರ್ಪಿಸಿರುತ್ತೇನೆ. ಸ್ವೀಕರಿಸು.

ಛತ್ರಂ ಚಾಮರಯೋರ್ಯುಗಂ ವ್ಯಜನಕಂ ಚಾದರ್ಶಕಂ ನಿರ್ಮಲಂ
ವೀಣಾಭೇರಿಮೃದಂಗಕಾಹಲಕಲಾಗೀತಂ ಚ ನೃತ್ಯಂ ತಥಾ ।
ಸಾಷ್ಟಾಂಗಂ ಪ್ರಣತಿಃ ಸ್ತುತಿರ್ಬಹುವಿಧಾ ಹ್ಯೇತತ್ಸಮಸ್ತಂ ಮಯಾ
ಸಂಕಲ್ಪೇನ ಸಮರ್ಪಿತಂ ತವ ವಿಭೋ ಪೂಜಾಂ ಗೃಹಾಣ ಪ್ರಭೋ॥ ೩ ॥

ಛತ್ರ, ಚಾಮರಗಳ ಯುಗ್ಮ, ಬೀಸಣಿಗೆ, ನಿರ್ಮಲವಾದ ಕನ್ನಡಿ, ವೀಣೆ, ಭೇರಿ, ಮದ್ದಳೆ, ಕಹಳೆ, ನರ್ತನ, ಸಾಷ್ಟಾಂಗ ನಮಸ್ಕಾರ, ನಾನಾವಿಧದ ಸ್ತೋತ್ರ ಇವನ್ನೆಲ್ಲ ಮನಸ್ಸಿನಿಂದಲೇ ನಿರ್ಮಿಸಿ ಅರ್ಪಿಸಿರುತ್ತೇನೆ. ಹೇ ಪ್ರಭೊ! ನನ್ನ ಪೂಜೆಯನ್ನು ಸ್ವೀಕರಿಸು.

ಆತ್ಮಾ ತ್ವಂ ಗಿರಿಜಾ ಮತಿಃ ಸಹಚರಾಃ ಪ್ರಾಣಾಃ ಶರೀರಂ ಗೃಹಂ
ಪೂಜಾ ತೇ ವಿಷಯೋಪಭೋಗರಚನಾ ನಿದ್ರಾ ಸಮಾಧಿಸ್ಥಿತಿಃ ।
ಸಂಚಾರಃ ಪದಯೋಃ ಪ್ರದಕ್ಷಿಣವಿಧಿಃ ಸ್ತೋತ್ರಾಣಿ ಸರ್ವಾ ಗಿರೋ
ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಂ ॥ ೪ ॥

ಎಲೈ ಶಂಭುವೇ! ನನ್ನ ದೇಹದೊಳಗಿರುವ ಆತ್ಮನೇ ನೀನು. ಬುದ್ಧಿಯಲ್ಲಿ ಪಾರ್ವತಿಯು. ನನ್ನ ಪಂಚಪ್ರಾಣಗಳು ನಿನ್ನ ಗಣಗಳು. ನನ್ನ ದೇಹವು ನಿನ್ನ ಮನೆ. ವಿಷಯಾನುಭವಕ್ಕೆ ಅನುಕೂಲವಾದ ರಚನೆಯೇ ನಿನ್ನ ಪೂಜೆ. ನಿದ್ರೆಯು ಸಮಾಧಿ. ನನ್ನ ಸಂಚಾರವು ನಿನ್ನ ಚರಣಾರವಿಂದಗಳಿಗೆ ನಾನು ಮಾಡುವ ಪ್ರದಕ್ಷಿಣೆ. ನನ್ನ ಮಾತುಗಳು ನಿನ್ನ ಸ್ತುತಿ. ನಾನು ಯಾವ ಕಾರ್ಯವನ್ನು ಮಾಡಿದರೂ ಅವೆಲ್ಲ ನಿನ್ನ ಆರಾಧನೆಯಲ್ಲಿ ಪರಿಣಮಿಸಲಿ.

ಕರಚರಣಕೃತಂ ವಾಕ್ಕಾಯಜಂ ಕರ್ಮಜಂ ವಾ
ಶ್ರವಣನಯನಜಂ ವಾ ಮಾನಸಂ ವಾಪರಾಧಮ್ ।

ವಿಹಿತಮವಿಹಿತಂ ವಾ ಸರ್ವಮೇತತ್ಕ್ಷಮಸ್ವ

ಜಯ ಜಯ ಕರುಣಾಬ್ಧೆ ಶ್ರೀ ಮಹಾದೇವ ಶಂಭೋ ॥ ೫ ॥

ಕೈಕಾಲುಗಳಿಂದ, ಮಾತಿನಿಂದ, ದೇಹದಿಂದ, ಕಾರ್ಯದಿಂದ, ಕಿವಿ ಕಣ್ಣುಗಳಿಂದ, ಮನಸ್ಸಿನಿಂದ, ಮಾಡಿದ ವಿಧಿಸಿದ ಯಾ ನಿಷೇಧಿಸಿದ ಎಲ್ಲ ಅಪರಾಧವು ಕ್ಷಮಿಸಲ್ಪಡತಕ್ಕದ್ದು. ಹೇ ಕರುಣಾಸಾಗರ! ಶ್ರೀ ಮಹಾದೇವ! ಹೇ ಶಂಭೋ! ನೀನು ಸರ್ವತ್ರ ವಿಜಯಿಯಾಗು.

ಇತಿ ಶ್ರೀಮಚ್ಛಂಕರಾಚಾರ್ಯ ವಿರಚಿತ ಶಿವಮಾನಸಪೂಜಾ ಸಮಾಪ್ತಂ.



# 98

# ಸ್ವಾತಂತ್ರ್ಯ

(ಏಕಾಂಕ ನಾಟಕ)

ಮೂಲ ಲೇಖಕರು:

ಶ್ರೀ। ಸುರೇಂದ್ರ ಕುಮಾರ ಮಲ್ಹೋತ್ರ.

ಅನುವಾದಕರು:

ಶ್ರೀ। ಕೆ. ಎನ್. ಭಟ್, ಶಿರಾಡಿಪಾಲ್.

**1956.**

ಒಂದಾಣೆ 

ಮಾಲೆ

## ಒಂದಾಣೆ ಮಾಲೆಯಲ್ಲಿ ಪ್ರಕಟವಾದ ಪುಸ್ತಕಗಳು:

೧. *ಕೆಪ್ಪಟಿರಾಯ (ವಿನೋದ ಕಥೆ)
೨. ನಾರೀಶ್ವರರು (ದ್ವಿತೀಯ ಮುದ್ರಣ)
೩. ಕಳ್ಳನಿಗೆ ಸಂಭಾವನೆ (ದ್ವಿ. ಮುದ್ರಣ)
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ)
೫. ಅದ್ಭುತ ತ್ಯಾಗ (ದ್ವಿತೀಯ ಮುದ್ರಣ)
೬. *ಚುನಾವಣೆ ಅರ್ಥಾತ್ ಬನಾವಣೆ
೭. *'ಬೀಡಿ ಸೇದಬೇಡಿ' ಮತ್ತು 'ಅ ಮಗು'
೮. *ಇಂಗ್ಲಿಷ್–ಕನ್ನಡ ಅರ್ಥಕೋಶ
೯. ಲಂಚಕ್ಕೆ ಸಂಚಕಾರ (ದ್ವಿ. ಮುದ್ರಣ)
೧೦. *ಟಿಶ್ಯೂ ಔಷಧಿಗಳ ಕೈಪಿಡಿ.
೧೧. *ಶ್ರೀಕ್ಷೇತ್ರಧರ್ಮಸ್ಥಳ (ತೃ. ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು
೧೪. *ವೆಂಕಟನ ಸಂಕಟ (ಏಕಾಂಕ ಪ್ರಹಸನ)
೧೫. ಬಾಬಿಗೆ ಬಾಸಿಂಗ (ದ್ವಿತೀಯ ಮುದ್ರಣ)
೧೬. ವೇಣೂರಿನ ಗತವೈಭವ (ದ್ವಿ. ಮುದ್ರಣ)
೧೭. ಒಗಟುಗಳು [ದ್ವಿತೀಯ ಮುದ್ರಣ]
೧೮. ಜಗಳಗಂಟ ಮತ್ತು ಇತರ ಕಥೆಗಳು
೧೯. ರಥೋತ್ಸವ.
೨೦. *ಕರಿನಾಯಿ ಮತ್ತು ಮುಪ್ಪು
೨೧. ಭಾರತದ ಮಹಾನಗರ (ದ್ವಿ. ಮುದ್ರಣ)
೨೨. ತಿರುಕ್ಕುರಲ್ (ದ್ವಿತೀಯ ಮುದ್ರಣ)
೨೩. ಸೂರ್ಯನ ಸಂಸಾರ (ಕಥೆಗಳು)
೨೪. ಭಾರತದ ಮಹಾನಗರ (ದ್ವಿ. ಮುದ್ರಣ)
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳು.
೨೬. ಮಾರಾವತಾರ (ದ್ವಿತೀಯ ಮುದ್ರಣ)
೨೭. ಹಾಸವಿಲಾಸ (ನಗೆಹನಿಗಳು)
೨೮. ಸತ್ಯವಂತ ಬಾಜಿ (ದ್ವಿತೀಯ ಮುದ್ರಣ)
೨೯. ಚಾಣಕ್ಯಯ ಒಗಟುಗಳು
೩೦. ಜಾತಕ ಕಥೆಗಳು
೩೧. ಕಾರ್ಕಳದ ಚರಿತ್ರೆ
೩೨. ಮರ್ಜಿ (ಏಕಾಂಕ ಪ್ರಹಸನ)
೩೩. ದರ್ಶನದ ಕಥೆಗಳು
೩೪. ಅಳುವಿನ ಹೊಳೆ ಮತ್ತು ಕೇಶವಭೂ
೩೫. ಶರಾಬಿನ ಪೀಪಾಯಿಗಳು (ಕಥೆ)
೩೬. ಉಪದೇಶ ಶತಕ (ನೀತಿ ವಚನಗಳು)
೩೭. ನಿಮಗೆ ಗೊತ್ತಿದೆಯೇ?
೩೮. ಚತುರ ಚಮತ್ಕಾರ
೩೯. ಸತೀ ಸಾವಿತ್ರಿ (ದ್ವಿತೀಯ ಮುದ್ರಣ)
೪೦. ಆಭರಣಗಳ ಪೆಟ್ಟಿಗೆ, ಇತರ ಕಥೆಗ
೪೧. ಭಾರತದ ಮಂತ್ರಿಮಂಡಲಗಳು (ದ್ವಿ
೪೨. ಕಾಲುಬಳೆಯ ಕಥೆ [ಮುದ್ರ
೪೩. ಭಾರತದ ನಾಲ್ಕು ಕಲಶಗಳು.
೪೪. ವ್ಯಸನದಿಂದ ಲಾಭ ಮತ್ತು ಇತರ
೪೫. ಸುಭಾಷಿತ [ಕಥೆಗ
೪೬. ೧೮೫೭ರ "ಸಿಪಾಯಿ ದಂಗೆ"
೪೭. ಅಕಾಂಡ ತಾಂಡವ (ರೇಡಿಯೋ ನಾಟ
೪೮. ಸಾಹಸದ ಕಥೆಗಳು.
೪೯. ಸಂಜ್ಞಾ ಜ್ಞಾನಕೋಶ
೫೦. ಪಂಡಿತನ ಪಿಟೀಲು (ಕಥೆಗಳು)
೫೧. ಭೋಗಯಾತ್ರೆ (ವಿನೋಬಾ ತತ್ತ್ವ)
೫೨. ಸಂಗ್ರಾಮಸಿಂಹ (ಐ। ಕಥೆ)
೫೩. ಧರ್ಮಶಿಕ್ಷಾ (ಧರ್ಮ ತತ್ವಗಳು)
೫೪. ಮಹಾತ್ಮ (ಗಾಂಧೀಜಿ)
೫೫. ಮೀರಾಬಾಯಿ (ಏಕಾಂಕ ನಾಟಕ)
೫೬. ವೀರರಮಣಿ ಕರ್ಮದೇವಿ (ಕಥೆ)
೫೭. ಅರಳಿದ ನಗು (ವಿನೋದ ಕಥೆಗಳು)
೫೮. ಸಚಿತ್ರ ಜಪಾನ್
೫೯. ಚುಟ್ಟ ಬಿಟ್ಟ ಧಿಟ್ಟ (ಏಕಾಂಕ ಪ್ರಹಸನ)
೬೦. ನಿರಪರಾಧಿ (ರಾಜಾಜಿಯವರ ಕಥೆ)
೬೧. ಭಕ್ತವಾಣಿ (ಸಂಕಲನ)
೬೨. ಜಾನಪದ ಸಾಹಿತ್ಯ
೬೩. ಡಾಕ್ಟರ್ ಆರೋಗ್ಯಮ್ (ಕಥೆ)
೬೪. ಲೌಕಿಕ ನ್ಯಾಯಗಳು

[ಪುಟ 17ನ್ನು ನೋಡಿ

# ಮುನ್ನುಡಿ

ಇಂದು, 'ಸ್ವಾತಂತ್ರ್ಯ'ವೆಂಬುದರ ವಿಪರೀತಾರ್ಥವಾಗುವ ನಿದರ್ಶನಗಳು ಅಲ್ಲಲ್ಲಿ ತೋರಿಬರುತ್ತಿವೆ. "ಪ್ರಜಾಪ್ರಭುತ್ವವೂ ಸ್ವಾತಂತ್ರ್ಯವೂ ಇಂದು ಎಷ್ಟು ಮುಂದುವರಿದಿದೆಯೆಂದರೆ--ಒಂದು ಅಂಗುಲದಷ್ಟೂ ಮುಂದಕ್ಕೆ ನಡೆವುದು ಅಸಾಧ್ಯವಾಗಿದೆ" ಎಂದು ರಾಜಾಜಿಯವರು ಎರಡು ವರ್ಷಗಳ ಹಿಂದೆ ವ್ಯಂಗ್ಯೋಕ್ತಿ ಆಡಿದ್ದರು. ಗೃಹದೊಳಗೆ ಸ್ವಾತಂತ್ರ್ಯ—ಶಿಕ್ಷಣಾಲಯದೊಳಗೆ ಸ್ವಾತಂತ್ರ್ಯ—ರಸ್ತೆಯಲ್ಲಿ ಸ್ವಾತಂತ್ರ್ಯ—ಸರಕಾರದಲ್ಲಿ ಸ್ವಾತಂತ್ರ್ಯ—ಹೀಗೆ ಎಲ್ಲೆಲ್ಲೂ 'ಸ್ವಾತಂತ್ರ್ಯ'ದ ತಾಂಡವವಾಗುತ್ತಿದೆ.

ಶ್ರೀ। ಸುರೇಂದ್ರ ಕುಮಾರ ಮಲ್ಹೋತ್ರರವರು ಈ 'ಸ್ವಾತಂತ್ರ್ಯ'ದ ಒಂದು ಉದಾಹರಣೆಯಾಗಿ ಒಂದು ವ್ಯಂಗ್ಯನಾಟಕವನ್ನು ಬರೆದಿರುವರು. ಈ ಚಿಕ್ಕ ನಾಟಕವು, ಮೂರು ರಂಗಗಳಲ್ಲಿನ ಚಿತ್ರಣವನ್ನು ಸಂಕ್ಷೇಪವಾಗಿ ಚಿತ್ರಿಸುತ್ತಿದೆ. ಇನ್ನೊಬ್ಬನ ಸ್ವಾತಂತ್ರ್ಯವನ್ನು ಅಪಹರಿಸಿ ಒಬ್ಬನು ತನ್ನ ಸ್ವಾತಂತ್ರ್ಯವನ್ನು ಮೆರೆಯಿಸುವುದು 'ಸ್ವಾತಂತ್ರ್ಯ'ದ ಅಣಕವಾಡಿದಂತಲ್ಲವೇ ಎಂದು ಈ ಏಕಾಂಕವು ಪ್ರಶ್ನಿಸುವಂತಿದೆ.

ಇದು, ಪ್ರಹಸನವಾಗಿ ಆರಂಭವಾಗಿ ಮುಂದರಿದು, ವಿಷಾದಕರ ಘಟನೆಯಿಂದ ಕೊನೆಗೊಳ್ಳುತ್ತದೆ. ಆದುದರಿಂದ ಪ್ರಹಸನವೆನ್ನುವುದಕ್ಕಿಂತ ದುರಂತವೆನ್ನುವುದು ಸರಿಹೋಗಬಹುದು. 'ಎಲ್ಲೆಲ್ಲೂ ಸ್ವಾತಂತ್ರ್ಯ' ಎಂಬ ವ್ಯಂಗ್ಯೋಕ್ತಿಯಿಂದ, ಸಮಸ್ಯಾತ್ಮಕವಾಗಿ ಇದನ್ನು ಅಂತ್ಯಗೊಳಿಸಲಾಗಿದೆ.

ಸ್ವಾತಂತ್ರ್ಯಕ್ಕೂ ಕಟ್ಟುನಿಟ್ಟುಗಳಿವೆ; ಎಲ್ಲೆಗಳಿವೆ. ಸ್ವಾತಂತ್ರ್ಯದ ಹೆಸರಿನಲ್ಲಿ ಯಾರೂ ಸ್ವೇಚ್ಛೆಯಾಗಿ ನಡೆಯಬಾರದು, ನಡೆಯಲಾರರು. ಶ್ರೀ। ಕೆ. ಎನ್. ಭಟ್, ಶಿರಾಡಿಪಾಲ್–ಅವರು ಇದನ್ನು, ಮೂಲಲೇಖಕರ ಅನುಮತಿಯಿಂದ ಲಲಿತವೆನಿಸುವಂತೆ ಕನ್ನಡಿಸಿಕೊಟ್ಟಿರುವರು.

**ಪ್ರಕಾಶಕರು.**

# ಸ್ವಾತಂತ್ರ್ಯ

— ಪಾತ್ರಗಳು —

ಡಾ| ರಮಣ್ — ವಿಶ್ವವಿದ್ಯಾಲಯದ ಉಪಕುಲಪತಿಗಳು.
ಕಮಲ — ರಮಣ್‌ರವರ ಪತ್ನಿ.
ರಾಮು — ಅಡಿಗೆಯವನು.
ಬೇಬಿ — ರಮಣ್‌ರವರ ಪುಟ್ಟ ಮಗು.
ವಿದ್ಯಾರ್ಥಿಗಳ ತಂಡ — ವಿಶ್ವವಿದ್ಯಾಲಯದವರು.
ಪೋಲೀಸರ ಗುಂಪು — ಪೋಲೀಸ್ ಇನ್ಸ್‌ಪೆಕ್ಟರ್ ಮಿ| ಸಂಪತ್ ಮೊದಲಾದವರು.

## ದೃಶ್ಯ ೧

ಸಮಯ: ಅಪರಾಹ್ನ ಗಂಟೆ ೩ರ ಸಮಯ.

(ವಿಶ್ವವಿದ್ಯಾಲಯದ ಉಪಪತಿಗಳಾದ ಡಾ| ರಮಣ್‌ರವರ ಡ್ರಾಯಿಂಗ್ ರೂಂ, ಅತ್ಯಾಧುನಿಕ ಶೃಂಗಾರ ಸೌಕರ್ಯಗಳಿಂದ ಶೋಭಿಸುತ್ತಿರುವುದು. ಗೋಡೆಗಳಲ್ಲಿ, ಗಾಂಧಿ, ಸರದಾರ್ ಮೊದಲಾದ ಮಹಾ ನಾಯಕರ ಚಿತ್ರಗಳು ತೂಗಹಾಕಲ್ಪಟ್ಟಿವೆ. ಕುರ್ಚಿ ಮೇಜುಗಳು ಒಪ್ಪವಾಗಿ ಇಡಲ್ಪಟ್ಟು ಮೇಜೊಂದರ ಮೇಲೆ ಟಿಲಿಫೋನು ಇಡಲ್ಪಟ್ಟಿದೆ. ಆ ಕೋಣೆಗೆ ಎರಡು ಬಾಗಿಲುಗಳಿವೆ; ಒಂದು ಹೊರಗಿನ ಬೀದಿಗೆ ಹೋಗಲಿಕ್ಕಾಗಿ; ಮತ್ತೊಂದು ಮನೆಯೊಳಗೆ ಹೋಗುವುದಕ್ಕಾಗಿ. ಡಾ| ರಮಣ್‌ರವರು ತಮ್ಮ ೩ ವರ್ಷದ ಬೇಬಿಯನ್ನು ಸಮಾಧಾನ ಪಡಿಸುತ್ತ ಅತ್ತಿತ್ತ ತಿರುಗುತ್ತಿದ್ದಾರೆ. ಅಳುತ್ತಿದ್ದ ಬೇಬಿ, ಮತ್ತೂ ಮತ್ತೂ ಜೋರಾಗಿಯೇ ಅಳುತ್ತಿರುವುದು.)

ರಮಣ್: (ಮಗುವನ್ನು ಸಮಾಧಾನಗೊಳಿಸಲಾರದೆ ಜಿಗುಪ್ಸೆಯೊಡನೆ) ಛಿಃ ಕೆಟ್ಟ ಮಗುವೆ! ಯಾವಾಗ ನೋಡ್ಲಿ, ನಿನಗೆ ಅಳುತ್ತಿರುವುದೊಂದೇ ಕೆಲಸ. ನನಗೆ ಗೊತ್ತಿದೆ; ನಿನ್ನ ತಾಯಿಯ ತೋಳತೆಕ್ಕೆಗಾಗಿಯೇ ನೀನು ಹೀಗೆ ಅಳುತ್ತಿರುವುದು. ಆದರೆ ಅವಳಿಗೆಲ್ಲಿದೆ ಸಮಯ? ಶೋಕೀ ಝೋಕು! ಮೇಕಪ್ ಮೀಟಿಂಗುಗಳ ದೆಸೆಯಿಂದ ನಿನ್ನನ್ನು ಒಂದು ಸಲ

ನೋಡಿಹೋಗುವಷ್ಟು ಪುರುಸತ್ತು ಕೂಡ ಆ ನಿನ್ನ ಅಮ್ಮನಿಗಿಲ್ಲ. (ಮೃದು ಸ್ವರದಿಂದ) ಪಾಪ! ನಿನ್ನ ಹಣೇಬರಹವೇ ಹೀಗಿರಬಹುದು. ತಾಯಿಯ ಸುಖವನ್ನು ಆ ಬ್ರಹ್ಮನೇ ಬರೆದಿಲ್ಲವಾದರೆ ನಾನೇನು ಮಾಡಲಪ್ಪ? (ಮಗು ಮತ್ತೂ ಜೋರಾಗಿ ಅಳುವುದು) ನೀನೆಷ್ಟು ಕಿರಿಚಿಕೊಂಡರೂ ನಾನು ನಿನ್ನ ಅಮ್ಮನಾಗಲಾರೆ. (ಬೇಸರದಿಂದ ಯೋಚಿಸುತ್ತ ಕುಳಿತುಕೊಳ್ಳುವನು. ಧಡಾರ್ರನೆ ಹೊರಬಾಗಿಲು ತಳ್ಳಲ್ಪಡುವದು. ನ್ಯೂ ಫ್ಯಾಶನ್‌ಗಳಿಂದ ಅಲಂಕೃತಳಾಗಿದ್ದ ಕಮಲ ಒಳಪ್ರವೇಶಿಸಿ) ಇದರ ಕೂಗಾಟವನ್ನು ಕೇಳಿ ಕೇಳಿ ನನ್ನ ಕಿವಿಯಂತೂ, ಕಿವುಡಾಗಿ ಹೋಗಿದೆ. (ಹುಬ್ಬುಗಂಟಿಕ್ಕಿ ಸೆರಗನ್ನು ಹಾರಿಸುತ್ತ) ಯಾವಾಗ ಮನೆಗೆ ಬಂದ್ರೂ ಹೀ........ಗೆ ಸುಖವಾಗಿ ಒಂದುಸಿರೆಳೆಯುವುದಕ್ಕೂ ಬಿಡದು; ಈ ಪೀಡೆ! (ಮಗುವಿನ ಹತ್ತಿರ ಬಂದು ಪ್ರೀತಿಯ ಅಭಿನಯದಿಂದ ಪತಿಯೊಡನೆ) ನೋಡ್ರಿ, ಇವಳು ಎಂಥ ಬೇಬಿ! ನಿಮ್ಮನ್ನು ಕೂಡ ಎಷ್ಟು ಪೀಡಿಸುತ್ತಾಳೆ! (ಮುಗುಳುನಗುತ್ತ) ಅಯ್ಯೋ! ನನ್ನಿಂದಾಗೊಲ್ಲಪ್ಪ.. ಇವಳನ್ನೊಮ್ಮೆ ಡಾಕ್ಟ್ರಿಗಾದರೂ ತೋರಿಸಿರಿ ನನಗೇಕೋ ದಿಗಿಲಾಗುತ್ತಿದೆ ಡಿಯರ್! ಇದಕ್ಕೆ ಲಿವರ್ ಆಗಿಬಿಟ್ಟಿದೆಯೋ ಏನೋ? (ಮಗುವನ್ನು ತನ್ನ ತೊಡೆಯ ಮೇಲಿಟ್ಟುಕೊಳ್ಳುವಳು.)

ರಮಣ್: ಕಮಲಾ........ಕಮಲಾ.......ಈ ಮಗುವಿಗೆ ಡಾಕ್ಟ್ರು ಅಗತ್ಯವಿಲ್ಲ ಕಣೆ! ಇದಕ್ಕೀಗ ನಿನ್ನ ಅಗತ್ಯವಿದೆ. ನಿನ್ನದೇ ಮುದ್ದು ಬೇಕಿದಕ್ಕೆ. ನೀನೇ ಡಾಕ್ಟ್ರು! ನೋಡು, ಈಗ ನಿನ್ನ ತೊಡೆಮೇಲೆ ಹೇಗೆ ಆಡುತ್ತಿದೆ!

ಕಮಲ: ನಾನೇನ್ಮಾಡ್ಲಿ ಡಿಯರ್! ನೋಡಿ, ಅವರೆಲ್ಲ ನನ್ನ ಬೆನ್ನು ಬಿಟ್ರೆ ತಾನೆ? ದಾಕ್ಷಿಣ್ಯಕ್ಕಾಗಿಯಾದರೂ, ಕರೆಯೋವಾಗ ಹೋಗಲೇ ಬೇಕಾಗುತ್ತೆ. ನಾನೇನು ಹೆಚ್ಚು ಹೊತ್ತು ಹೋಗುವುದಿಲ್ಲ. (ಚಿಟಿಕೆ ಹೊಡೆದು) ಹೋದೆ....ಬಂದೆ....ಅಷ್ಟೆ.

ರಮಣ್: ಈಗ ನೀನು ಹೊರಟಿರುವುದಾದ್ರೂ ಎಲ್ಲಿಗೆ?

ಕಮಲ: ಅಯ್ಯೋ! ಇಷ್ಟೂ ತಿಳಿಯದೆ? ಇಂದು ಸರ್ವ ಮಹಿಳಾ ಅಧಿಕಾರ ರಕ್ಷಣಾ ಸಂಘದ ವಾರ್ಷಿಕೋತ್ಸವ! ಎಲ್ಲವೂ ಸರಿಯಾಗಿ ಏರ್ಪಾಡಾಗಬೇಕು. ಸಂಘದ ಕಾರ್ಯದರ್ಶಿನಿಯೇ ನಾನಾಗಿರುವುದರಿಂದ ಎಲ್ಲ ಜವಾಬ್ದಾರಿಯೂ, ನನ್ನ ತಲೆಯಮೇಲಿದೆ.

ರಮಣ್: ನೀನು ಹೋಗಬಾರದು, ಮಾಡಬಾರದು ಎಂದು ನಾನು ಹೇಳಲಾರೆ. ಆದರೆ, ಎಷ್ಟೋ ದಿನಗಳಿಂದ ಹೇಳಬೇಕೆಂದಿದ್ದ ಮಾತುಗಳನ್ನು ಈಗ ನನಗೆ ಹೇಳಲೇ ಬೇಕಾಗಿದೆ. ನೀನು ಆ ನಿಮ್ಮ ಮಹಿಳಾ ಸಂಘದ ಕಾರ್ಯದರ್ಶಿನಿಯಾದ ಮೇಲೆ, ನಿನಗೆ ಮನೆ, ಮಠ, ಮಕ್ಕಳು ಎಂದರೆ ಏನೆಂಬುದೇ ಗೊತ್ತಿಲ್ಲದಂತಾಗಿದೆ. ನೀನು ಒಂದು ಮನೆಯ ಭಾಗ್ಯ ಲಕ್ಷ್ಮಿ! ಒಂದು ಮಗುವಿನ ತಾಯಿ! ಎಂದ ಮೇಲೆ, ಹೀಗಾದರೆ ಗತಿ ಯೇನು? ನಾ ಕಾಣೆ. (ನಿಟ್ಟುಸಿರು ಬಿಡುವನು.)

ಕಮಲ: (ತೀಕ್ಷ್ಣ ಸ್ವರದಿಂದ) ಸಾಕು. ನಿಲ್ಲಿಸಿರಿ. ಈ ನಿಮ್ಮ ಉಪ ದೇಶ ನನಗೆ ಅಗತ್ಯವಿಲ್ಲ. ನಿಮಗೆ ಸಾಧ್ಯವಿದ್ರೆ ನನ್ನನ್ನು ಕೋಣೆಯೊಳಗೆ ಹಾಕಿ ಭದ್ರವಾಗಿ ಬೀಗ ಹಾಕಿಬಿಡಿರಿ!

ರಮಣ್: (ರೋಷಗೊಂಡರೂ ತೋರ್ಪಡಿಸದೆ) ಏನೆಂದೆ?........ ನನ್ನನ್ನು ಅಂತಹ ಮೂರ್ಖನೆಂದು ತಿಳಿದೆಯಾ? ನಾನು ಸ್ವಲ್ಪ ಸಡಿಲು ಬಿಟ್ಟದ್ದಕ್ಕೆ ಈಗ ನನ್ನ ತಲೆಮೇಲೇ ಏರಿಬಿಟ್ಟೆ! ಭಲಾ! ಚಿಂತೆಯಿಲ್ಲ! ನಾಲ್ಕು ಗೋಡೆಗಳ ಹೊರಗೆ ಹೋಗಿ, ಸಾಧ್ಯವಾದಷ್ಟು ಸಮಾಜಸೇವೆ ಮಾಡೆಂದು ಹೇಳಿದ್ದಕ್ಕೆ ನೀನು ಇಷ್ಟು ಮೇಲೇರಿ ಬಿಟ್ಟೆ! ಇದು ಗುರುವಿಗೆ ತಿರುಮಂತ್ರ. ಅಬ್ಬಾ ಹೆಂಗಸರ ಸೊಕ್ಕೆ!

ಕಮಲ: (ತಿರಸ್ಕಾರದಿಂದ) ನಾನು ಹೇಗಾದ್ರೂ ಇಷ್ಟು ಮುಂದು ವರಿದಿದ್ದೇನೆ. ಸಾಮಾಜಿಕ ಕಾರ್ಯಕ್ಷೇತ್ರಗಳಲ್ಲಿ ಕೀರ್ತಿ ಗಳಿಸುತ್ತಿದ್ದೇನೆ. ಹೀಗಿರುವಾಗ ಒಂದೇ ಸಮನೇ ನನ್ನನ್ನು ಪುನಃ ಹಿಂದಕ್ಕೆಳೆದು ಜೈಲುವಾಸ ಮಾಡಿಸಬೇಕೆಂದಿರುವಿರಾ....? ಹಾಗಾದರೆ ನಾನು........(ದುಃಖಿತೆಯಾಗಿ) ನಾನು........ಇನ್ನುಮೇಲೆ (ಕಣ್ಣೀರು ಸುರಿಸಿ) ಖಂಡಿತವಾಗಿಯೂ,........ ನೋಡಿ........ನೀವೇ ನೋಡ್ತಿರಿ.

ರಮಣ್: (ಕರುಣೆಯಿಂದ) ಕಮಲಾ........ಛೆ ಛೆ! ಏನಿದು?

ಕಮಲ: (ಕಣ್ಣೊರಸಿಕೊಂಡು, ಆವೇಶದಿಂದ) ನೋಡಿ, ನಾನೀಗ ಇದನ್ನು ಸ್ಪಷ್ಟವಾಗಿ ಹೇಳುತ್ತೇನೆ. ಶಾಸ್ತ್ರ ಪುರಾಣಗಳ ಸಂಪ್ರದಾಯಗ ಳಿಂದ ಭಾರತೀಯ ನಾರಿಯರ ಪ್ರಗತಿಗೆ ಆತಂಕ ಬರುತ್ತಿದೆ. ಸ್ವತಂತ್ರ ಭಾರತದಲ್ಲಿ ಸ್ತ್ರೀ ಸ್ವಾತಂತ್ರ್ಯಕ್ಕೆ ತಡೆಯನ್ನುಂಟುಮಾಡಲು ಯಾರಿಂದಲೂ ಸಾಧ್ಯವಿಲ್ಲ. ಜೈಲುವಾಸಕ್ಕೆ ಹೇಸಿ, ಕೈಕೋಳಗಳನ್ನೂ ನಿರ್ಭೀತಿಯಿಂದ

ಕಿತ್ತೆಸೆದು, ಪ್ರಗತಿಪಥದಲ್ಲಿ ಮುನ್ನುಗ್ಗುತ್ತಿರುವ ಸ್ತ್ರೀ ಸಮಾಜ! ಇನ್ನೆಂದಿಗೂ ಹಿಮ್ಮೆಟ್ಟಲಾರದು. ಪುರುಷರ ಗರ್ವ ದರ್ಪಗಳಿಗೆ ಹೆದರಿ ಅವರ ದಾಸಿಯಾ ರಂತಿದ್ದ ಸ್ತ್ರೀಯರಲ್ಲಿ ಇಂದು ಜ್ಞಾನೋದಯವಾಗಿದೆ. ರೋಷಗೊಂಡ ಅವರು ಬುಸುಗುಟ್ಟುವ ಹಾವಿನಂತೆ ಮುಂದೆ ಬರುತ್ತಿದ್ದಾರೆ. ಇನ್ನು ಆ ನಿಮ್ಮ ದರ್ಪ ನನ್ನೆದುರು ನಡೆಯಲಾರದು. ಪುರುಷರಂತೆ ಸ್ತ್ರೀಯರಿಗೂ ವ್ಯಕ್ತಿತ್ವವಿದೆ. ಸಮಾನ ಸ್ವಾತಂತ್ರ್ಯದ ಅವಕಾಶವಿದೆ. ಸ್ತ್ರೀಯರೂ ಕೂಡ ಪುರುಷರಂತೆಯೇ ಸ್ವತಂತ್ರ ಜೀವನ ನಡೆಸಬೇಕೆಂದು ಮನಗಂಡಿ ದ್ದಾರೆ. ನೋಡಿ, ನೀವು ಇದನ್ನೆಲ್ಲ ಇನ್ನೂ ತಿಳಿದುಕೊಂಡಂತಿಲ್ಲ.

ರಮಣ್: (ತುಸು ಏರಿದ ಸ್ವರದಿಂದ) ಕಮಲಾ, ನೀನು ಹೇಳುತ್ತಿರು ವುದು ಸರಿ ಎಂದು ಬೇಕಾದರೆ ಒಪ್ಪಿಕೊಳ್ಳೋಣ. ಆದರೆ, ಯಾವುದಕ್ಕೂ ಒಂದು ಮಿತಿ ಎಂಬುದಿದೆ. ಎಂದಿನಿಂದ ನೀನು ಮಹಿಳಾ ಸಂಘಕ್ಕೆ ಹೋಗ ಲಾರಂಭಿಸಿದೆಯೋ ಅಂದಿನಿಂದ ನಿನಗೊಂದು "ಮಗು" ಇದೆ ಎಂಬುದೂ ಕೂಡ ನೆನಪಿಲ್ಲವಲ್ಲ? ಆ ಮಗುವನ್ನು ಕಂಡರೆ, ಹಗೆಯನ್ನು ಕಂಡಹಾಗೆ ಕೆಂಗಣ್ಣುಗಳನ್ನು ತೋರಿಸುತ್ತಿರುವೆ. ಮೂರು ದಿನಗಳಿಂದ ಬೇಬಿಗೆ ಸೌಖ್ಯವಿಲ್ಲ. "ಅಯ್ಯೋ ಅಮ್ಮಾ....ಅಮ್ಮಾ...." ಎಂದು ಒಂದೇ ಸಮನೆ ಅದು ಗೋಳಾಡುತ್ತಿದೆ. ಆದರೆ ಪ್ರೀತಿಯಿಂದ ಅದನ್ನೊಮ್ಮೆ ಮಾತನಾಡಿ ಸಲೂ ನಿನಗೆ ಸಮಯವಿಲ್ಲವೆಂದರೆ! ಹೆತ್ತ ತಾಯಿ ನೀನು! ಕರುಣೆಯು ಮುದ್ದೆ! ನಿನ್ನ ಹೃದಯ ಪಾಷಾಣಹೃದಯವೆಂದು ನಾನಿದುವರೆಗೆ ತಿಳಿದಿರ ಲಿಲ್ಲ!

ಕಮಲ: (ಸಿಟ್ಟಿನಿಂದ) ನೀವು........ನೀವು ಇಷ್ಟೆಲ್ಲ ಹೇಳುತ್ತಿರುವಿ ರಲ್ಲ? ಮಗುವಿನ ತಂದೆಯಾದ ನಿಮಗೆ ಸಂಬಂಧವೇ ಇಲ್ಲವೇ? ಮಗುವಿಗೆ ಸೌಖ್ಯವಿಲ್ಲದಿದ್ದರೆ, ತಂದೆಯಾದವನ ಕರ್ತವ್ಯ ಏನೂ—ಏನೇನೂ— ಇಲ್ಲ, ಅಲ್ಲವೇ? ಎಲ್ಲೋ ಒಂದು ದಿನದ ಮಟ್ಟಿಗೆ ನಾನು ಹೊರಗೆ ಹೋದುದಕ್ಕೆ ಇನ್ನೇನು ಆಕಾಶವೇ ಕಳಚಿ ತಲೆಯ ಮೇಲೆ ಬಿತ್ತು—ಅನ್ನೋ ಹಾಗೆ ಮಾತನಾಡ್ತಾ ಇದ್ದೀರಿ! ನೀವು, ಅಲ್ಲ........ಈಗ ಇಲ್ಲಿ ಏನಾಗಿದೆ?

ರಮಣ್: (ವ್ಯಂಗ್ಯವಾಗಿ) ಆಹಾ....ಹಃ! ಈಗ ಇಲ್ಲಿ ಏನೂ.... ಆಗಿಲ್ಲ....ಅಲ್ವೆನೇ....? ಹೆಂಗಸರ ಬುದ್ಧಿಚಾತುರ್ಯವೆಂದರೆ ಹೀಗೆನೆ! ತಮ್ಮ ಸ್ವಪ್ರಯೋಜನಕ್ಕಾಗಿಯಾದರೆ, ಹಿಂದಿನದೆಲ್ಲವನ್ನೂ ಅರೆಕ್ಷಣದಲ್ಲಿ

ಮರೆತುಬಿಡುತ್ತಾರೆ! ಏನೂ ಅರಿಯದವಳಂತೆ ಮಾತನಾಡುತ್ತಿರುವೆಯಲ್ಲ? ಮಹಾ ಮಾಯಾವಿ ನೀನು! ಅಂದು ಬೇಬಿಗೆ ಬೆಂಕಿ ಹಾಗೆ ಜ್ವರ ಸುಡುತ್ತಿತ್ತು. ನಿನಗೆ ಕ್ಲಬ್ಬಿನಲ್ಲಿ ಗೆಜ್ಜೆಕಟ್ಟಿ ಕುಣಿಯಲಿಕ್ಕಿತ್ತು. ಮನೆ ಸೇರುವಾಗ ಗಂಟೆ ಹನ್ನೊಂದಾಗಿತ್ತು. ಆ ದಿನ ಬೇಬಿಯನ್ನು ನೋಡಿಕೊಂಡವರು ಯಾರೆಂದು ಕೂಡ ನಿನಗೆ ನೆನಪೇ ಇಲ್ಲವಲ್ಲ? ಇರಲಿ........ಇರಲಿ........

ಕಮಲ: (ಉದ್ವಿಗ್ನಳಾಗಿ) ಛೀ, ನೀವೀಗ ಹೇಳೋದಾದ್ರೂ ಏನು? ನಿಮ್ಮ ಮಾತು ನನಗೊಂದೂ ಅರ್ಥವೇ ಆಗುತ್ತಿಲ್ಲ; ಅಲ್ಲ....ಒಂಭತ್ತು ತಿಂಗಳು ಹೊತ್ತುಕೊಂಡು ಕಷ್ಟ ಅನುಭವಿಸಿ ಹೆತ್ತು ಪಾಡುಪಟ್ಟು ಸಾಕಿ ಸಲಹಿದ ನನ್ನ ಮಗುವಿನ ಮೇಲೆ, ನನಗೇ ಪ್ರೀತಿ ಇಲ್ಲ ಎನ್ನುವಿರಲ್ಲಾ? ಆಹಾಹಾ....ಚೆನ್ನಾಗಿದೆ ನಿಮ್ಮ ಮಾತು.

ರಮೇಶ್: ನಿನಗೆ ಪ್ರೀತಿ ಇರಬಹುದೇನೋ; ಆದರೆ ಅದಕ್ಕೆ ನಿನಗಿಂತಲೂ ಹೆಚ್ಚಾಗಿದೆ ಪ್ರೀತಿ. ನಿನ್ನ ಸ್ಪರ್ಶಕ್ಕಾಗಿ ಅದು ಹಾತೊರೆಯುತ್ತಿದೆ. ಆದರೆ, ನಿನಗೆ, ಮೇಕಪ್ ವಾಕಿಂಗ್ ಸಿನೇಮಾ ಇದೇ ಆಗಿಹೋಗಿದೆ. ಅದೇ ಹೀಗೆಲ್ಲ ಮಾಡಿಸುತ್ತಿದೆ. ಹೋಗಲಿ. ಹಗಲೆಲ್ಲ ಬೇಕಾದರೆ ಅಲೆದಾಡುತ್ತಿರು. ಆದರೆ ಸಂಜೆಗಾದರೂ ನೀನು ಮನೆ ಸೇರಬೇಡವೇ?

ಕಮಲ: ಅಲ್ಲಾ....ನೀವೇಕೆ ಹೀಗೆ ನನ್ನ ಹಿಂದೆಯೇ ದೃಷ್ಟಿ ಇಡುತ್ತೀರಿ? ನನಗೆ ಮನಸ್ಸಾದರೆ ಹೊರಗೆ ಹೋಗುವೆ. ಪಾರ್ಟಿ ಸೇರಿಸುವೆ. ಭಾಷಣಮಾಡುವೆ. ಅಷ್ಟಲ್ಲದೆ ಈ ಮಕ್ಕಳು ಮತ್ತು ಸಂಸಾರಕ್ಕಾಗಿ ನನ್ನ ಇಡೀ ಜೀವನಮಾನವನ್ನೇ ಹಾಳುಮಾಡಿಕೊಳ್ಳಲು ನಾನು ಎಷ್ಟಕ್ಕೂ ಅಪೇಕ್ಷಿಸುವುದಿಲ್ಲ. ನನ್ನ ಸ್ಪರ್ಶವಾದೊಡನೆ ಹುಶಾರಾಗಲಿಕ್ಕೆ ನಾನೇನು ಡಾಕ್ಟರಲ್ಲ. ನಾನು ಮುಟ್ಟಿದರೆ ಮಗು ಹುಶಾರಾಗಿಬಿಡುತ್ತೆ ಎನ್ನುತ್ತೀರಲ್ಲ? ನನ್ನಲ್ಲಿ ಸಂಜೀವಿನಿ ಇದೆಯೇ? ಆ ರಾಮೂಗೆ ಕರೆದು ಹೇಳಿ ನೋಡೋಣ. ಬೇಬೀನ ಕರೆದುಕೊಂಡು ಹೋಗಿ, ಡಾಕ್ಟ್ರಿಗೆ ತೋರಿಸಿ ಔಷಧಿ ತರಲಿ, ಹೊತ್ತಿಗೆ ಸರಿಯಾಗಿ ಮದ್ದು ಕುಡಿಸಿ, ಆಹಾರ ಕೊಟ್ಟು ಮಲಗಿಸಲಿ. ತನ್ನಿಂದ ತಾನೆ ಸೌಖ್ಯವಾಗುತ್ತೆ. (ಕೈಗಡಿಯಾರ ನೋಡುತ್ತಾ 'ಓಹ' ಎಂದು ಹೊರಡಲುದ್ಯುಕ್ತಳಾಗುವಳು.)

ರಮೇಶ್: ಹೂಂ, ಆಗಲಿ, ಹೋಗು.

ಕಮಲ: (ಪತಿಯ ಹತ್ತಿರ ಬಂದು) ನೋಡಿ ಗಂಟೆ ೪ ಆಗುತ್ತಾ ಬಂತು. (ಮಗುವಿನ ಮೈಮೇಲೆ ಕೈಯಾಡಿಸುತ್ತ) ನಮ್ಮ ಬೇಬಿ ಎಷ್ಟು ಕ್ಷೀಣವಾಗಿದೆ! ಡಾಕ್ಟ್ರಿಗೆ ಬೇಗ ತೋರಿಸಬೇಕು.

ರಮಣ್: ಆಗದೆ ಮತ್ತೇನಾಗುತ್ತೆ? ಅದಕ್ಕೆ ಬೇಕಾದ ತಾಯಿಯ ಹಾಲಿದ್ದರೆ ತಾನೆ?

ಕಮಲ: (ಕೊರಳು ಕೊಂಕಿಸಿ) ಬಿಡಿ, ಬಿಡಿ. ನೀವು ಪುನಃ ಸುಮ್ಮನೆ ಜಗಳಾಡಲು ಕಾರಣ ಹುಡುಕುತ್ತೀರಿ ಅಷ್ಟೆ. ರಾಮೂ, ಓ ರಾಮೂ.... (ಅಡಿಗೆಯ ರಾಮು ಓಡಿಬರುವನು.)

ಕಮಲ: ನೋಡು, ಈ ಬೇಬೀನ ಸರಿ ನೋಡ್ಕೊಬೇಕಪ್ಪ ಏನೂ? ಹುಂ ಮತ್ತೆ ಮರ್ತಿದ್ದೆ....ನಾನು ಈವೊತ್ತು ರಾತ್ರೆ ಊಟ ಮಾಡೋದಿಲ್ಲ. ಹೋಗು, ಬೇಬೀನ ಕೊಂಚ ಹೊರಗೆ ಕರಕೊಂಡು ಹೋಗು. (ತನ್ನ ಪತಿಯ ಕಡೆ ತಿರುಗಿ ವೈಯ್ಯಾರದೊಡನೆ) ನೋಡ್ರೀ....ಆ ಹಾಳು ಸತೀಶ ನನ್ನ ಹಾಗೇ ಪೀಡಿಸ್ತಿದ್ದಾನೆ. "ಈವತ್ತು ಸಿನೀಮಾ ಚೆನ್ನಾಗಿದೆ ಬನ್ನಿ" ಎಂದ. ಬೇಡ ಬೇಡವೆಂದು ಎಷ್ಟು ಸಲ ಹೇಳಿದರೂ, ಟಿಕೇಟು ಬೇರೆ ತೆಕೊಂಡುಬಿಟ್ಟಿದ್ದಾನಂತೆ. ಏನ್ಮಾಡ್ಲಿ ಹೇಳಿ? ಹೋಗಲೇ?........

ರಮಣ್: (ತಿರಸ್ಕಾರಭಾವದಿಂದ) ಆ ಸತೀಶ ಯಾರವನು? (ಯೋಚಿಸಿ) ಅವನೇ ತಾನೆ ಆ ಮುಠ್ಠಾಳ! ಮೊದಲನೇ ಹೆಂಡಿ ಯನ್ನು ಬಿಟ್ಟು ಎರಡನೆಯ ಮದುವೆಮಾಡಿಕೊಂಡ ಮೂರ್ಖ! ಛೀ! ಇರಲಿ ಏನೂ ಮಾಡು. ನನ್ನ ಮಾತು ಕೇಳಿದರೆ ತಾನೆ ನಾ ಹೇಳುವುದು! ನಿನ್ನಿಚ್ಛೆ.

ಕಮಲ: (ಪ್ರೀತಿಯಿಂದ ಕುಲು ಕುಲು ನಗುತ್ತ 'ಹೊ ಮೈ ಡೀಯರ್' ಎನ್ನುತ್ತ ಹೊರಟುಹೋಗುವಳು.)

ರಮಣ್: (ಸ್ವಗತ) ಏನಾದರೇನು? ನನ್ನ ಮಾತಿಗೆ ಬೆಲೆಯಿಲ್ಲದ ಮೇಲೆ ಪ್ರಯೋಜನವಿಲ್ಲ. (ಸ್ವೇಚ್ಛಾಚಾರಿಣಿಯಾಗಿ ಹೊರಟುಹೋಗು ತ್ತಿರುವ ತನ್ನ ಮೋಹನಾಂಗಿಯನ್ನು ನೋಡುತ್ತ ಅಧೋವದನನಾಗಿ ಕುಳಿತು ಯೋಚಿಸುವನು. ಆ ಬಳಿಕ ರಾಮುವನ್ನು ಕರೆಯುವನು.)

## ದೃಶ್ಯ ೨.

ರಮಣ್: ರಾಮೂ....ರಾಮೂ....(ರಾಮು ಬರುವನು). ರಾಮೂ.... ಈಗ ಮಗು ಅಳುತ್ತಿಲ್ಲ. ಈ ದಿನ ಹವೆ ಎಷ್ಟು ಚಲೋದಿದೆ! ಹೋಗು.... ಮಗೂನ ಸ್ವಲ್ಪ ಹೊರಗೆ ವಾಕಿಂಗ್ ಕರೆದುಕೊಂಡು ಹೋಗಿ ಬೇಗ ಬಂದು ಬಿಡು. ಈ ದಿನ ರಾತ್ರೆ ಊಟಕ್ಕೆ ನನ್ನ ಸ್ನೇಹಿತರು ಬರಬಹುದು. ಇಬ್ಬರಿಗಾಗುವಷ್ಟು ಅಡಿಗೆ ಜಾಸ್ತಿ ಮಾಡಿಬಿಡು. ಅಡಿಗೆ ಚೆನ್ನಾಗಿ ಮಾಡು.... ಸಾರು....ಹುಳಿ....ಇದ್ರೆ ಸಂಡಿಗೇನೂ ಕರ್ದಿಟ್ಟುಬಿಡು. ಅಂ....ಗೊತ್ತಾಯ್ತೆ?

ರಾಮು: (ಸಿಡುಕಿನಿಂದ ತನ್ನಷ್ಟಕ್ಕೆ) ಇವರ ಮನೇಲಿ ಯಾವಾಗ್ಲೂ ಹೀಗೆ....ಇವರ ಮನೆ....! (ಎಂದು ಪಿರಿಪಿರಿ ಮಾಡುತ್ತ ಹೊರಡುವನು. ಮುಂದೆ ಹೋಗುತ್ತಿದ್ದವನು ಸರಕ್ಕನೆ ಎರಡು ಹೆಜ್ಜೆ ಹಿಂದೆ ಬಂದು) ಸಾರ್....ನನ್ನ....ನನ್ನ ಲೆಕ್ಕ ನೋಡಬೇಕಾಗಿತ್ತು ಸಾರ್....ನಾನು....ನಾನು.......

ರಮಣ್: (ಚಕಿತನಾಗಿ) ಹಾಂ....ಏನು? ಏನಂದೆ? ಲೆಕ್ಕ ನೋಡಬೇಕೇ? ಏಕಪ್ಪ? ಏಕೆ?

ರಾಮು: (ಒರಟಾಗಿ) ತಮ್ಮಲ್ಲಿಗೆ ಬರುವವರು–ಹೋಗುವವರು ಇದಕ್ಕೆ ಮಿತಿಯೇ ಇಲ್ಲ. ನಾನು ತಮ್ಮ ಮನೆಯವರನ್ನು ಮೂವರನ್ನು ಮಾತ್ರ ನೋಡಿಕೊಂಡು ಕೆಲಸಕ್ಕೆ ಸೇರಿದ್ದು. ಈಗ ನೋಡಿದ್ರೆ ಇದೇನು ನನ್ನಿಂದಾಗೊ ಕೆಲ್ಸವಲ್ಲ.

ರಮಣ್: ನೀನು ಬೊಗಳುತ್ತಿರುವುದೇನು? ರಾಸ್ಕಲ್! ನಿನಗೆ ಬುದ್ಧಿ ಸರಿಯಾಗಿದೆಯೋ ಇಲ್ವೊ?

ರಾಮು: ಸಾರ್....ನನ್ನಿಂದಾಗೊಲ್ಲ ಸಾರ್....ಯಾವಾಗ ನೋಡ್ಲಿ ಇಲ್ಲಿ ನೆಂಟ್ರು ತಪ್ಪಿದ್ದೇ ಇಲ್ಲ. ಇದರೆಡೆಯಲ್ಲಿ ಈ ಮಗುವನ್ನೂ ನಾನೇ ನೋಡ್ಕೊಬೇಕೆಂದ್ರೆ, ಇದೆಲ್ಲ ಯಾರಿಂದ ಸಾಧ್ಯವಾಗುತ್ತೆ? ನನಗೆ ಮೈ ಚೆನ್ನಾಗಿಲ್ಲ! ರಜೆ ಬೇಕು ಸಾರ್....ನನಗೆ....ರಜೆ.

ರಮಣ್: (ಕೋಪದಿಂದ) ಬಾಯ್ಮುಚ್ಚು—ಈಡಿಯಟ್!

ರಾಮು: (ತುಸು ಏರಿದ ಸ್ವರದಿಂದ) ಹುಂ....ಹಾಗೆಲ್ಲ ಬಾಯಿಗೆ ಬಂದ ಹಾಗೆ ಬಯ್ಯಬೇಡಿ ಸಾರ್. ಹಾಗೆ ದುಡಿಯೋದಕ್ಕೆ ನಾನೇನು ಯಂತ್ರವೇ? ಕೆಲಸದವರೆಂದರೆ ಅಷ್ಟು ತಾತ್ಸಾರ! ಹಿಂದಿನ ಹಾಗೆ ಈಗಲೂ

ನಾವು ಕತ್ತಲೆ ಕೋಣೆಯೊಳಗೇ ಇದ್ದೇವೆಂದು ತಿಳಿಯಬೇಡಿ. ಕೆಲಸದವ ರಿಗೂ ಮಾನಮರ್ಯಾದೆ ಇದೆ. ಸ್ವಾತಂತ್ರ್ಯ ಲಭಿಸಿದೆ! ಸ್ವಾತಂತ್ರ್ಯ! ತಮ್ಮ ಬೈಗಳನ್ನು ಕೇಳುವವರು ಯಾರಿದ್ದಾರೋ ಅವರೊಡನೆ ಜಗಳಾಡಿರಿ. (ಮಗು ಜೋರಾಗಿ ಅಳುವುದಕ್ಕೆ ಪ್ರಾರಂಭಿಸುವುದು. ಕೋಪಗೊಂಡಿದ್ದ ರಮಣ್‌ರವರು ಔಡುಗಚ್ಚಿಕೊಂಡು ರಾಮೂನ ಹತ್ತಿರಕ್ಕೆ ಬರುವಷ್ಟರಲ್ಲಿ ....ಟ್ರಿಣ್ ಟ್ರಿಣ್ ಟ್ರಿಣ್, ಟೆಲಿಫೋನು ಶಬ್ದವಾಗುವುದು.)

ರಮಣ್: (ಹಲ್ಕಡಿಯುತ್ತ) ಇರಲಿ, ನಿನ್ನ ಸೊಕ್ಕು ಇಳಿಸ್ತೀನಿ (ಎನ್ನುತ್ತ ಟೆಲಿಫೋನು ಕೈಗೆತ್ತಿಕೊಳ್ಳುವರು.)

ರಮಣ್: ಹಲೊ....ಹಲೊ....ಯಾರು? ನಾನು ರಮಣ್ ಮಾತ ನಾಡುತ್ತಿದ್ದೇನೆ. (ದಿಗಿಲುಗೊಂಡವರಂತೆ)—ಹಾಂ! ಏನು? ವಿದ್ಯಾರ್ಥಿ ಗಳು ಟೆಲಿಗ್ರಾಫ್ ತಂತಿಗಳನ್ನು ತುಂಡರಿಸಿದರೇ? ಹುಂ....ಸರಿ. ಹೋ, ಈ ದಿನ ಅವರೆಲ್ಲರ ಮುಷ್ಕರ ತಾನೆ? ಎಲ್ಲಾ ತಿಳಿಗೇಡಿಗಳು. ಹಾಂ ಏನು? (ಭಯಗೊಂಡವರಂತೆ) ವಿದ್ಯಾರ್ಥಿಗಳ ಗುಂಪು ಇತ್ತ ಬರುತ್ತಿದೆಯೇ? ಎಲ್ಲಿಗೆ? ನಮ್ಮ ನಿವಾಸದ ಕಡೆಗೆ? ಹಾಗಾದರೆ ಪೋಲೀಸಿನವರನ್ನು ಬೇಗ ಕರೆಯಬೇಕು, ಬೇಗ ಕರೆಸಿ, ಹುಂ! ಬೇಗ ಬರಲಿ, ಸರಿ, ಆಲ್ ರೈಟ್, ಥೇಂಕ್ಸ್! (ಎನ್ನುತ್ತ ಫೋನನ್ನು ಕೆಳಗಿಡುವರು.)

ರಮಣ್: (ಅತ್ತಿತ್ತ ನೋಡುತ್ತ) ರಾಮೂ....ರಾಮೂ....(ಬರು ವನು) ನೋಡು ನಿನ್ನ ತಂಟೆ ತಕರಾರು, ಅದೆಲ್ಲ ಈಗ ಬೇಡ. ಈಗ ಅಮ್ಮ ನವರು ಹೊರಗೆ ಹೋಗಿದ್ದಾರೆ. ಅವರು ಮನೆಗೆ ಬಂದ ಮೇಲೆ ನಿನ್ನ ಲೆಕ್ಕಾಚಾರ ಮಾಡೋಣ. ಎಲಾ! ಮಗು ಇನ್ನೂ ಅಳುತ್ತಲೇ ಇದೆ ಯಲ್ಲ? ಛೆ! ನೀನೇನು ಬಂಡೆಕಲ್ಲಿನಂತೆ ನಿಂತುಬಿಟ್ಟಿದ್ದಿಯಲ್ಲ! ಹೋಗು, ಸ್ವಲ್ಪ ಎತ್ತಿಕೋ. ಸಮಾಧಾನಪಡಿಸು. (ರಾಮು ಮಗುವನ್ನೆತ್ತಿಕೊಂಡು ಹೋಗುವನು.)

ರಮಣ್: (ಯೋಚನಾಕ್ರಾಂತನಾಗಿ) (ಸ್ವಗತ) ಓಹ್! ನಮ್ಮ ದೇಶಕ್ಕೆ ಸ್ವಾತಂತ್ರ್ಯ ಏಕೆ ಪ್ರಾಪ್ತವಾಯಿತೋ! ಪ್ರತಿಯೊಬ್ಬರೂ ಅವಿಧೇಯ ರಾಗಿ ಸ್ವಾತಂತ್ರ್ಯದ ಹೆಸರಿನಿಂದ ಸ್ವೇಚ್ಛಾಚಾರಿಗಳಾಗುತ್ತಿದ್ದಾರೆ! ಆಳುಗಳಿಗೆ ಕೂಡ ಪಿತ್ಥ ನೆತ್ತಿಗೇರಿದೆ. ತಾನೇ ಮೇಲೆಂಬ ಅಹಂಕಾರ ತುಂಬಿಬಿಟ್ಟಿದೆ. (ಸಿಟ್ಟಿನಿಂದ)-ಬದ್‌ಮಾಷ್! ಇವನು... ಇವನನ್ನು ಈಗಲೇ ಒದ್ದು ಓಡಿಸು

ತ್ತಿದ್ದೆ. ಆದರೆ, ಈ ಮಗು ಒಂದೆಡೆಯಿಂದ ಅಳುತ್ತಿದೆ! ಇಲ್ಲಿ ಅವಳೂ ಇಲ್ಲ. ಈ ವಿದ್ಯಾರ್ಥಿಗಳ 'ಸ್ಟ್ರೈಕ್' ಇದೊಂದು ಬೇರೆ. ಹುಂ! ಏನು ಮಾಡಲಿ....? (ಖಿನ್ನವದನನಾಗುವನು. (ವಿದ್ಯಾರ್ಥಿಗಳ 'ಘೋಷಣೆ ಕೇಳಿಬರುವುದು. ಡಾ! ರಮಣ್‌ರವರು ವಿಹ್ವಲರಾಗಿ ಹೊರಗೆ ನೋಡು ವರು.)

ರಮಣ್: (ಸ್ವಗತ) ಹೊ! ವಿದ್ಯಾರ್ಥಿಗಳ ತಂಡ ಸಮಿಾಪಿಸುತ್ತಿದೆ! ಬಾಯಿಗೆ ಬಂದ ಹಾಗೆ ಜೊಗಳುತಿದ್ದಾರೆ! ಬೊಬ್ಬಿಡುತ್ತಿದ್ದಾರೆ! (ಅತ್ತಿತ್ತ ತಿರುಗಿ ನೋಡುತ್ತ ಗಾಬರಿಗೊಂಡು) ಹೊ! ಎಲ್ಲ? ಎಲ್ಲಿ ಪೋಲೀಸಿನವರು? ಇನ್ನೂ ಬರಲೇ ಇಲ್ವೇ....? (ಸ್ವಲ್ಪ ಧೈರ್ಯಗೊಂಡು)—ಅದೋ ಬರು ತ್ತಿದ್ದಾರೆ! ಎರಡು....ಮೂರು ಪೋಲೀಸು ವ್ಯಾನುಗಳು ಬರುತ್ತಿವೆ. ಸಂಪತ್ ಎಲ್ಲಿ?....(ನೋಡುತ್ತ ನೋಡುತ್ತ ಒಳಗೆ ಬರುವರು).

(ಪೊಲೀಸ್ ಇನ್ಸ್‌ಪೆಕ್ಟರ್, ಸಂಪತ್ ಬಾಗಿಲ ಬಳಿ ಬಂದು ವಂದಿಸಿ) ಮಿ! ರಮಣ್, ನೀವೇನೂ ಗಾಬರಿಪಡಬೇಡಿ. ಅವರನ್ನೆಲ್ಲ ನಾನು ನೋಡಿ ಕೊಳ್ಳುತ್ತೇನೆ. ಹ್ಹ ಹ್ಹಾ!

ರಮಣ್: ಥೇಂಕ್ಯು ಮಿ! ಸಂಪತ್! ಹುಂ, ಇದೆಲ್ಲ ಏಕೆ ಹೀಗಾಗು ವುದೋ? ಎಲ್ಲದಕ್ಕೂ ಹಟ! ಎಲ್ಲದಕ್ಕೂ 'ಸ್ಟ್ರೈಕ್!' ಇದೇ ಸ್ವಾತಂತ್ರ್ಯದ ಶುಭ ಫಲ!

ಸಂಪತ್: ಈಗೀಗ ಪ್ರತಿಯೊಬ್ಬರೂ, ತಾನೇ ಗವರ್ನರ್ ಜನರಲ್ ಎಂದು ತಿಳಿದುಕೊಂಡಂತಿದೆ. ಈ ವಿದ್ಯಾರ್ಥಿಗಳಂತೂ ಈಗೀಗ ಬಹಳ ಸೊಕ್ಕಿಬಿಟ್ಟಿದ್ದಾರೆ. ಪ್ರತಿಯೊಬ್ಬನಲ್ಲೂ, ಮುಂದೆ ತಾನೇ ಮಂತ್ರಿ ಪದವಿಗೇರತಕ್ಕವರೆಂಬ ಹೆಮ್ಮೆ ತಲೆಗಡರಿದೆ. ನಾಗರಿಕರ ಜೀವನಕ್ಕೆ ಗಂಡಾಂತರ ತಂದೊಡ್ಡುವ ಈ ತಿಳಿಗೇಡಿಗಳು! ಇವರ ಎಲುಬು ಮುರಿದು ಹುಡಿ ಹಾರಿಸದಿದ್ದರೆ, ನನ್ನ ಹೆಸರು ಬದಲಿಸಬೇಕು. ಹ್ಹಾ ಹ್ಹಾ. (ಗುಂಪು ಸಮಿಾಪಿಸುವುದು) ನಮಸ್ತೆ ಮಿ! ರಮಣ್. ನಾನೀಗ ಬರುತ್ತೇನೆ. ಇನ್ನು ನಿಧಾನ ಮಾಡಲಾಗದು. (ಸಂಪತ್ ಸರಸರನೆ ಹೋಗುವನು.)

## ದೃಶ್ಯ ೩.

(ಮುಷ್ಕರ ಹೂಡಿದ ವಿದ್ಯಾರ್ಥಿಗಳ ದೊಡ್ಡ ಗುಂಪು ಡಾ| ರಮಣ್‌ರವರ ಮನೆ ಮುಂದೆ ನಿಂತಿದೆ. 'ವಿದ್ಯಾರ್ಥಿಗಳಿಗೆ ಜಯವಾಗಲಿ!' ಎಂಬ ಜಯಘೋಷವು ಕಿವಿ ಕುಕ್ಕುವಂತೆ ಕೇಳಿಸುವುದು. ಡಾ| ರಮಣ್‌ರವರು ಬಾಗಿಲು ತೆರೆದು ನೋಡುವರು. ಆಗ ಘೋಷಣೆಯ ಸ್ವರ ಮತ್ತೂ ಏರುವುದು.)

ರಮಣ್: (ಹೊರಗೆ ಬಂದು ನಿಂತು ಕೈಗಳನ್ನು ಮೇಲಕ್ಕೆತ್ತಿ 'ಶಾಂತರಾಗಿ! ಶಾಂತರಾಗಿ' ಎಂದು ಕೂಗಿ ಹೇಳುವರು. ಗದ್ದಲ ಮತ್ತೂ ಜೋರಾಗುವುದು. ಆಗ ಏರಿದ ಸ್ವರದಲ್ಲಿ) "ಪ್ರಿಯ ವಿದ್ಯಾರ್ಥಿಗಳೇ ಕೇಳಿರಿ! ಈ ನಿಮ್ಮ ವರ್ತನೆಯಿಂದ ಏನೂ ಪ್ರಯೋಜನವಾಗಲಾರದು. ನಿಮ್ಮ ಅಪೇಕ್ಷೆ ಪೂರೈಸಬೇಕಿದ್ದರೆ, ಶಾಂತಚಿತ್ತರಾಗಿ, ನಿಮ್ಮ ಪ್ರತಿನಿಧಿಗಳ ಮೂಲಕ ನಿಮ್ಮ ಕೇಳಿಕೆಗಳನ್ನು ನಮ್ಮ ಮುಂದಿಡಬೇಕು." (ಸ್ವಲ್ಪ ಹೊತ್ತು ಸುಮ್ಮನಿದ್ದು ಯಾರೂ ಮುಂದೆ ಬಾರದುದನ್ನು ಕಂಡು) ಯಾರೂ ಮುಂದೆ ಬರುವುದಿಲ್ಲ? ಏನು, ನೀವೆಲ್ಲರೂ ನಾಯಕರೇ ಆಗಿದ್ದೀರೋ? ನಿಮ್ಮ ಪ್ರತಿನಿಧಿಗಳು ಯಾರೂ ಇಲ್ಲವೋ? (ಗುಂಪಿನಲ್ಲಿ ವಿಪರೀತ ಗಜಿಬಿಜಿ ಆಗುವುದು. ಸ್ವಲ್ಪ ಹೊತ್ತಿನ ಬಳಿಕ, ಮೂವರು ವಿದ್ಯಾರ್ಥಿಗಳು, ಪ್ರತಿನಿಧಿಗಳಾಗಿ ಮುಂದೆ ಬರುವರು.)

ಮೊದಲನೆ ವಿದ್ಯಾರ್ಥಿ: (ಅಲಕ್ಷ್ಯದೊಡನೆ) ನಾವು ಎಷ್ಟೋ ದಿನಗಳ ಹಿಂದೆಯೇ ನಮ್ಮ ಕೇಳಿಕೆಯನ್ನು ತಮ್ಮ ಮುಂದಿಟ್ಟಿದ್ದೇವೆ. ಈಗಲೂ ತಮಗೆ ಕೇಳಿಸುತ್ತಲೇ ಇದೆ. ನಮ್ಮ ಕೇಳಿಕೆ ಏನೆಂಬುದು ತಮಗೆ ಗೊತ್ತೇ ಇದೆ.

ಎರಡನೆ ವಿದ್ಯಾರ್ಥಿ: ಈ ತಮ್ಮ ಅನ್ಯಾಯದ ವರ್ತನೆ ಇನ್ನು ಮೇಲೆ ನಡೆಯಲಾರದು ಸಾರ್. (ತೀಕ್ಷ್ಣ ಸ್ವರದಿಂದ) ಕಾಲ ಬದಲಾಯಿಸಿದೆ. ಸ್ವತಂತ್ರ ಭಾರತದ ಧೀರ ವಿದ್ಯಾರ್ಥಿಗಳಲ್ಲಿ ನವಚೈತನ್ಯವುಂಟಾಗುತ್ತಿದೆ. ಅನ್ಯಾಯದ ಪ್ರತಿಭಟನೆಗಾಗಿ ನಮ್ಮ ಬಿಸಿರಕ್ತ ಕುದಿಯುತ್ತಿದೆ! ಸ್ವತಂತ್ರ ಭಾರತದ ವೀರ ವಿದ್ಯಾರ್ಥಿಗಳು ಈ ತಮ್ಮ ಸ್ವೇಚ್ಛಾಚಾರವನ್ನು ಸಹಿಸಲಾರರು. ಜನತಾ ಶಾಸನಪದ್ಧತಿಯನ್ನು ಮೀರಲು ತಮಗೆ ಅಧಿಕಾರವಿಲ್ಲ. ಆತ್ಮತ್ಯಾಗದಿಂದಲಾದರೂ, ನ್ಯಾಯ ಪರಿಪಾಲನೆಯನ್ನು ಮಾಡದೆ ಬಿಡಲಾರೆವು.

ರಮಣ್: (ವ್ಯಂಗ್ಯವಾಗಿ) ಒಹೋ ಸರಿ, ಚೆನ್ನಾಗಿಯೇ ಹೇಳಿದಿರಿ. ಜನತಾಶಾಸನದ ಕ್ರಮವೆಂದರೆ, ಪುಂಡುಪೋಕರಿಗಳಂತೆ, ಅಧ್ಯಾಪಕರನ್ನು ಬೆದರಿಸುವುದು; ಟೆಲಿಫೋನು–ತಂತಿಗಳು ಮೊದಲಾದುವನ್ನು ಕಿತ್ತುಹಾಕುವುದು. ಜನರ ಸಂಪತ್ತನ್ನು ನಾಶಗೊಳಿಸಿ ಸಾಮಾಜಿಕರಿಗೆ ಕ್ಷೇಮವಿಲ್ಲದಂತೆ ಮಾಡುವುದು, ನಿಮ್ಮೊಡನೆ ಈ ದುಷ್ಕರಕ್ಕೆ ಸೇರದ ವಿದ್ಯಾರ್ಥಿಗಳನ್ನು ಹೊಡೆಯುವುದು; ಪೋಲೀಸರ ಮೇಲೆ ಕೈ ಮಾಡುವುದು, ಮುಂತಾದ ಈ ಕೆಲಸಗಳಲ್ಲಿ ತೊಡಗಿದರೆ, ಜನತಾ ಶಾಸನಪದ್ಧತಿಯು ಸಫಲವಾದಂತಾಗುವುದು. ಅಲ್ಲವೇ? ಹಾ! ಬಹಳ ಬುದ್ಧಿವಂತಿಕೆಯಿಂದ ಮಾತನಾಡಿದಿರಿ.

ಮೊದಲನೆ ವಿದ್ಯಾರ್ಥಿ: (ಆವೇಶದೊಡನೆ) ತಾವು ಹೇಳುವ ಆರೋಪಗಳಿಗೆಲ್ಲ ವಿದ್ಯಾರ್ಥಿಗಳೇ ಜವಾಬ್ದಾರರಲ್ಲ. ಅವರು ಏನೆಲ್ಲ ಮಾಡಿದ್ದಾರೊ, ಅದೆಲ್ಲ ತಮ್ಮ ಅನ್ಯಾಯದ ವರ್ತನೆಗೆ ಪ್ರತಿಭಟನೆಯನ್ನು ತೋರಿಸುವುದಕ್ಕಾಗಿ ಸ್ವಾಭಾವಿಕವಾಗಿ ಮಾಡಿದ್ದಾರೆ. ಜನರ ನೆಮ್ಮದಿಗೆ ಭಂಗ ಬಂದುದಕ್ಕೆ ವಿದ್ಯಾರ್ಥಿಗಳಲ್ಲ,—ತಾವೇ ಕಾರಣರಾಗಿದ್ದೀರಿ. ಅದಕ್ಕೆಲ್ಲ ತಾವೇ ಹೊಣೆ. ಸಾಮಾನ್ಯವಾದ ಚಿಕ್ಕ ಪುಟ್ಟ ಕಾರಣಗಳಿಗಾಗಿ ವಿದ್ಯಾರ್ಥಿಗಳನ್ನು ವಿದ್ಯಾಲಯದಿಂದ ತೆಗೆದು ಹಾಕಿ, ಅನ್ಯಾಯವೆಸಗುವುದು, ಅದು ಜನತಾ ಶಾಸನ ಪದ್ಧತಿಯೇ? ಸ್ವಾತಂತ್ರ್ಯದ ಸದುಪಯೋಗವೇ?

ರಮಣ್: (ಸ್ವರವನ್ನೇರಿಸಿ ವ್ಯಂಗೋಕ್ತಿಗಳಿಂದ) ಇಲ್ಲ......ಇಲ್ಲ...... ನೀವೆಲ್ಲ ಮಾಡುತ್ತಿರುವುದೂ ಹೇಳುತ್ತಿರುವುದೂ, ಅದೇ ಸರಿ! ಅಲ್ಲವೇ? ಕ್ಲಾಸಿನಲ್ಲಿ ಕುಳಿತುಕೊಂಡು, ಅಧ್ಯಾಪಕರನ್ನು ಹಾಸ್ಯ ಮಾಡುವುದು; ಶಿಳ್ಳು ಹಾಕುವುದು; ಇದೆಲ್ಲ, ಸ್ವತಂತ್ರ ಭಾರತದ ವಿದ್ಯಾರ್ಥಿಗಳಾದ ನಿಮ್ಮಲ್ಲಿರುವ ಉತ್ತಮ ಲಕ್ಷಣಗಳು! ಅಲ್ಲವೇ? ಕ್ಲಾಸಿನಲ್ಲಿ ಎದುರಿಗೆ ಕುಳಿತಿರುವ ಹುಡುಗಿಯರಿಗೆ ಕುಚೇಷ್ಟೆ ಮಾಡುವುದು; ಉಪಾಧ್ಯಾಯರು ಆಜ್ಞೆಯಿತ್ತ ಮೇಲೂ, ಅಲಕ್ಷ್ಯವಾಗಿ ಅವಿಧೇಯತೆಯನ್ನು ತೋರಿಸುವುದು. ಇವೆಲ್ಲ ಕೃತ್ಯಗಳು, ಪ್ರಜಾರಾಜ್ಯದ ಶಾಸಕರೆಂದು ಹೇಳಿಕೊಳ್ಳುವ ನಿಮ್ಮಲ್ಲಿರುವ ಸದ್ಗುಣಗಳು, ಎಂದು ನೀವೆಲ್ಲ ತಿಳಿದಿರುವಿರಿ! ಎಷ್ಟೋ ಸಲ ಎಚ್ಚರಿಸಿ, ಹೇಳಿ ಹೇಳಿ ಸಾಕಾಗಿ, ಕೊನೆಗೆ ಉಪಾಯವಿಲ್ಲದೆ, ಕೆಲವು ವಿದ್ಯಾರ್ಥಿಗಳನ್ನು ವಿದ್ಯಾಲಯದಿಂದ ಹೊರಗೆ ಹಾಕಿದುದು, ಅದು ಮಾತ್ರ ಜನತಾ ಶಾಸನಪದ್ಧತಿಗೆ ವಿರೋಧವಾದುದೆಂದು ಹೇಳುವಿರಾ? ದುಷ್ಕೃತ್ಯ

ಗಳನ್ನಾಚರಿಸುತ್ತ ಅಲ್ಲದ ಸಲ್ಲದ ವಿಚಾರಗಳಿಗಾಗಿ, ಹಟ ಹಿಡಿದು ಮುಷ್ಕರ ಹೂಡಿ, ಸಮಾಜ ಘಾತುಕರಂತೆ ವರ್ತಿಸಿ ಹೆಮ್ಮೆಯಿಂದ ಮೆರೆಯುತ್ತಿರುವ ನಿಮ್ಮೆಲ್ಲರ ಈ ವರ್ತನೆಗಳು, ಪ್ರಜಾರಾಜ್ಯದ ಸುಖಶಾಂತಿಗಳಿಗೆ ಕಳಂಕ ವಾಗಿವೆ. ದೇಶಕ್ಕೆ ದೊರೆತ ಸ್ವಾತಂತ್ರ್ಯವನ್ನು ದುರುಪಯೋಗಪಡಿಸುವ ನೀಚಕೃತ್ಯಗಳಾಗಿವೆ. ಇಂತಹ ವೀರ ವಿದ್ಯಾರ್ಥಿಗಳಾದ ನಿಮ್ಮ ಕೊರಳಿಗೆ ಹಾರಗಳನ್ನು ಹಾಕಿ, ಹೆಗಲ ಮೇಲೇ ಅಲ್ಲ; ತಲೆಯ ಮೇಲೆ ಕೂರಿಸಿ ಕುಸ್ತಿಯಲ್ಲಿ ಗೆದ್ದ ಪಹಿಲ್ವಾನರಂತೆ, ಮೆರೆವಣಿಗೆ ಮಾಡಿಸಬೇಕು. ಇದೇ ತಾನೆ ನಿಮ್ಮ ಇಚ್ಛೆ?

ಮೂರನೇ ವಿದ್ಯಾರ್ಥಿ: (ಆವೇಶದಿಂದ ನಡುಗುತ್ತ ಕೋಪೋದ್ದೀಪಿತ ನಾಗಿ) ಸಾಕು........ನಿಲ್ಲಿಸಿ........ನಿಮ್ಮ ಉದ್ದುದ್ದ ಭಾಷಣಗಳನ್ನು ಕೇಳಿ ಕೇಳಿ ಕಿವಿಗಳು ಕಿವುಡಾಗಿ ಹೋಗಿ ಬಿಟ್ಟಿವೆ. ನಮಗೆ ನಿಮ್ಮ ಉಪದೇಶಗಳು ಈಗ ಬೇಕಾಗಿಲ್ಲ. ಅಹಂಕಾರ ದರ್ಪದಿಂದ ಅನ್ಯಾಯವನ್ನೆಸಗಿ, ಮತ್ತೂ ಮತ್ತೂ ತನ್ನದೇ ಸರಿಯೆಂದು ಸಾಧಿಸುವುದು ನಿಮ್ಮ ಯೋಗ್ಯತೆಗೆ ಭೂಷಣ ವಾದುದಲ್ಲ. ನಿಮ್ಮ ತಪ್ಪನ್ನು ಈಗಲಾದರೂ ಒಪ್ಪಿಕೊಂಡು ವಿದ್ಯಾಲಯ ದಿಂದ ತಳ್ಳಿಹಾಕಲ್ಪಟ್ಟ ವಿದ್ಯಾರ್ಥಿಗಳನ್ನು ಕೂಡಲೇ ಸೇರಿಸಿಕೊಳ್ಳುತ್ತೀರೋ? ಇಲ್ಲವೋ? ಅದು ನಮಗೀಗ ತಿಳಿಯಬೇಕಾಗಿದೆ. ಅದಕ್ಕಾಗಿಯೇ ನಾವು ಮುಂದೆಬಂದಿದ್ದೇವೆ. ನಿಮ್ಮ ಉಪದೇಶಗಳನ್ನು ಯಾರೂ ಇಲ್ಲಿ ಕೇಳುವವರಿಲ್ಲ.

ರಮಣ್: (ಅದೇ ಸ್ವರದಿಂದ) ಇಲ್ಲ....ಇಲ್ಲ....ಆ ವೀರ ಪುತ್ರರನ್ನು ಸ್ವಾಗತಿಸಿ ಸತ್ಕರಿಸುವ ಯೋಗ್ಯತೆ ನಮಗಿಲ್ಲ.

(ವಿದ್ಯಾರ್ಥಿಗಳ ಗುಂಪಿನಲ್ಲಿ ವಿಪರೀತ ಗಲಾಟೆಯಾಗುವುದು. 'ಅನ್ಯಾಯದ ಪ್ರತಿಭಟನೆಯಾಗಲಿ!' ಎಂಬ ಘೋಷಣೆ ನಾಲ್ದೆಸೆಗಳಲ್ಲಿ ಪ್ರತಿಧ್ವನಿಸುವುದು. 'ಹಾ! ರಮಣ್!' ಎಂಬ ಸ್ವರದೊಡನೆ "ಹಾಯ್! ಹಾಯ್!" ಎಂಬ ದೀನಸ್ವರವೊಂದು ಕೇಳಿಬರುವುದು. ರಮಣ್‌ರವರ ತಲೆಗೆ ತಗಲ ಬೇಕಿದ್ದ ಕಲ್ಲುಗಳು ಅದೃಷ್ಟವಶಾತ್ ತಪ್ಪಿಹೋಗಿ, ಅವರ ಕೋಣೆಯ ಗಾಜಿನ ಕಿಟಿಕಿ ಚೂರು ಚೂರಾಗುವುದು. ಹೆದರಿ, ನಡುಗುತ್ತ ರಮಣ್‌ ರವರು ಒಳಗೆ ಹೋಗಿ ಕದಮುಚ್ಚುವರು. ಗುಂಪಿನ ಹೊರಗಿದ್ದ ಮೂವರು ವಿದ್ಯಾರ್ಥಿಗಳು ಕೈಗಳನ್ನು ಮೇಲೆತ್ತಿ "ಶಾಂತರಾಗಿ, ಶಾಂತರಾಗಿ" ಎನ್ನು

ವರು. ಆದರೆ ವ್ಯರ್ಥ. ಎಲ್ಲೆಲ್ಲೂ ಕಲ್ಲುಗಳ ಸುರಿಮಳೆಯಾಗುವುದು. ಪೋಲೀಸಿನವರು ಲಾಠೀಚಾರ್ಜು ಮಾಡುವರು.)

ಮೊದಲನೆ ವಿದ್ಯಾರ್ಥಿ: (ಬಾಗಿಲ ಬಳಿ ಬಂದು ರಮಣ್‌ರವರನ್ನು ಉದ್ದೇಶಿಸಿ, ದಿಗ್ಭ್ರಾಂತನಾಗಿ) ಹಾ! ಹಾ! ಲಾಠಿಚಾರ್ಜು ಆಗುತ್ತಿದೆ! ನೀವು ಒಳಗೆ ಅವಿತುಕೊಂಡಿದ್ದೀರ! ಆಗಲಿ....ಹುಂ ಆಗಲಿ....(ಆವೇಶದಿಂದ) ಕೊನೆಯ ಸಲ ಸಾರಿ ಹೇಳುತ್ತೇನೆ. ಈ ಸ್ವೇಚ್ಛಾಚಾರದಿಂದ ವಿದ್ಯಾರ್ಥಿಗಳನ್ನು ಬಲಿ ತೆಗೆದುಕೊಂಡರೂ, ಸತ್ಯಕ್ಕೆ ಅಪಜಯವಾಗಲಾರದು.

ಮೂರನೆಯ ವಿದ್ಯಾರ್ಥಿ: (ಕೋಪದಿಂದ ವೈಮರೆತು ಕ್ರೂರಸ್ವರದಿಂದ ಬೊಬ್ಬಿಡುವನು.) ಸಾರ್....ನೋಡಿ ಸಾರ್....ಕಣ್ತುಂಬ ನೋಡಿ.... ಹೇಗಾದ್ರೂ ತಮಗೆ ಸಂತೋಷವಾಗಲಿ! ಇದರ ಮೇಲೆ, ಮುಂದೆ ಏನಾಗುವುದೋ ಆಗಲಿ! ಪಾಪ ಪುಣ್ಯ ಎಲ್ಲ ತಮಗೇ ಇರಲಿ! (ಪ್ರತಿನಿಧಿಗಳಾಗಿ ಹೊರಗಿದ್ದ ಮೂವರು ವಿದ್ಯಾರ್ಥಿಗಳೂ, ಗುಂಪಿನಲ್ಲಿ ಸೇರಿಕೊಳ್ಳುವರು. ಹೊಡೆದಾಟ ಬಡಿದಾಟಗಳು ವಿಷಮಾವಸ್ಥೆಗೇರುವವು! ಭಯಭೀತರಾಗಿ ಬಾಗಿಲ ಹಿಂದೆ ಇದ್ದ ರಮಣ್‌ರವರಿಗೆ ಗುಂಡಿನ "ಢಮ್ ಢಮ್" ಶಬ್ದ ಕೇಳಿಸುವುದು. ಆಗ ಅವರು ಅಲ್ಲೇ ಕುರ್ಚಿಯಲ್ಲಿ ಕುಸಿದುಬಿದ್ದು-ನಡುಗುತ್ತ ಹಾ! ಗುಂಡೂ ಹೊಡೆದುಬಿಟ್ರೋ? (ಮೇಲೆದ್ದು, ಪುಡಿಯಾದ ಕಿಟಕಿಯಿಂದ ನೋಡುತ್ತ) ಅಯ್ಯೋ! ಗುಂಡುಹಾರಿಸಿದರು! (ಎನ್ನುತ್ತ ಉದ್ವಿಗ್ನತೆಯಿಂದ ಅತ್ತಿತ್ತ ತಿರುಗುವರು ನಿಧಾನವಾಗಿ ಗಲಾಟೆಯು ಶಾಂತವಾಗುತ್ತಿರುವಂತೆ ತೋರುವುದು. ಐದು ನಿಮಿಷಗಳ ನಂತರ, ಪೊಲೀಸ್ ಇನ್ಸ್‌ಪೆಕ್ಟರ್ ಮಿ| ಸಂಪತ್‌ರವರು ಬಂದು ಬಾಗಿಲು ತಟ್ಟುವರು.)

ರಮಣ್: (ಬಾಗಿಲು ತೆರೆದು) ಬನ್ನಿ....ಒಳಗೆ ಬನ್ನಿ....ಏನು? ಏನಾಯಿತು?

ಸಂಪತ್: (ಬೆವರನ್ನೊರಸಿ "ಉಸ್" ಎಂದು ಕುಳಿತುಕೊಳ್ಳುತ್ತ) ತಿಳಿಗೇಡಿಗಳು! ಮುಠ್ಠಾಳರು! ಪೋಲೀಸರ ಮೇಲೂ ಕೈಮಾಡಲಿಕ್ಕೆ ಹಿಂಜರಿಯಲಿಲ್ಲ. ಈಗ ಎಲ್ಲವೂ ಸ್ತಬ್ಧವಾಯಿತು!........

ರಮಣ್: (ದುಃಖದೊಡನೆ) ಇದೆಲ್ಲ ಏಕೆ ಹೀಗಾಯಿತು ಮಿ| ಸಂಪತ್? ಇಂತಹ ಸಣ್ಣ ಪುಟ್ಟ ಗುಂಪುಗಳನ್ನು ಚದರಿಸಲು, ಕೇವಲ ಲಾಠಿಚಾರ್ಜಿನಿಂದಲೇ ಸಾಧ್ಯವಾಗುವುದಿಲ್ಲವೇ?.... ...

ಸಂಪತ್: (ಪಶ್ಚಾತ್ತಾಪದ ಸ್ವರದಿಂದ) ಗುಂಡಿಗೇ ಆಹುತಿಯಾದ ನಾಲ್ಕು ವಿದ್ಯಾರ್ಥಿಗಳ ಕುರಿತು ನನಗೂ ಬಹಳ ವ್ಯಸನವಾಗುತ್ತದೆ ಡಾ। ರಮಣ್! ಆದರೆ........ಉಪಾಯವಿಲ್ಲ.

ರಮಣ್: (ಬೆಚ್ಚಿಬಿದ್ದು) ಹಾಂ! ನಾಲ್ಕು ಜನ........(ದುಃಖದಿಂದ ಗಂಟಲು ಕಟ್ಟಿ) ವಿದ್ಯಾರ್ಥಿಗಳು ಮರಣ ಹೊಂದಿದರೇ?........

ಸಂಪತ್: (ನಿಸ್ಸಹಾಯಕನಂತೆ) ಏನುಮಾಡಲಿ? ಡಾ। ರಮಣ್! ಪರಿಸ್ಥಿತಿ ವಿಷಮಾವಸ್ಥೆಗೇರಿತು. ಬೇರೆ ಉಪಾಯವಿಲ್ಲದಂತಾಯಿತು. ಎಚ್ಚರಿಕೆಯನ್ನು ಅಲಕ್ಷಿಸುವ ಪುಂಡುಪೋಕರಿಗಳ ಮೇಲೆ ಪ್ರಭಾವವನ್ನು ಬೀರಿ ಹೆದರಿಕೆಯನ್ನು ಹುಟ್ಟಿಸಲು, ಇದನ್ನೆಲ್ಲ ಮಾಡಲೇ ಬೇಕಾಗುತ್ತದೆ. ಕಲಿಯುವ ಹುಡುಗರು, ಪೋಲೀಸರ ಮೇಲೆ ಕೈಮಾಡುವಷ್ಟು ಮುಂದುವರಿದರೆ, ಮುಂದೆ ಹೇಗೆ....? ಇನ್ನು ಮೇಲೆ ನೋಡಿ, ಅವರ ಘೋಷಣೆ, ಗುಂಪು ಎಲ್ಲ ಅಡಗಿಹೋಗುವುದೋ ಇಲ್ಲವೋ? ಎಂದು.

ರಮಣ್: ಹುಂ....ತಾವು ಅದಕ್ಕಾಗಿಯೇ ನಾಲ್ಕು ವಿದ್ಯಾರ್ಥಿಗಳನ್ನು ಗುಂಡಿಕ್ಕಿ ಕೊಂದುಹಾಕಿದಿರಿ, ಅಲ್ಲವೇ? ಸುಮ್ಮನೆ ಬಂದೂಕು ತೋರಿಸಿ, ಅಥವಾ ಆಕಾಶದಲ್ಲಿ ಗುಂಡು ಚಲಾಯಿಸಿಯೂ, ಈ ಗಲಾಟೆಯನ್ನಡಗಿಸ ಬಹುದಾಗಿತ್ತು. (ಗಂಭೀರವಾಗಿ) ಶಾಭಾಸ್! ಇನ್ಸ್‌ಪೆಕ್ಟರ್ ಸಾಹೇಬ್! ಸ್ವತಂತ್ರ ಭಾರತದ ಭವಿಷ್ಯವು ತಮ್ಮಂಥವರಿಂದ ಸುರಕ್ಷಿತವಾಗ ಬಹುದು!

ಸಂಪತ್: (ಮುಗುಳುನಗುತ್ತ) ವಾಹ್! ವಾಹ್! ಡಾ। ಸಾಹೇಬ್! ತಮ್ಮ ಅಭಿಪ್ರಾಯವನ್ನೂ ತಿಳಿದಹಾಗಾಯಿತು. ತಮ್ಮ ಹಾಗೆ ಪೋಲೀಸಿನವರೂ ಭಾವಪರವಶರಾಗಿ ಆದರ್ಶತ್ವವನ್ನು ತೋರಿಸುತ್ತಿದ್ದರೆ, ಭಲಾ! ತಮ್ಮ ಕೆಲಸವನ್ನು ಹೇಗೆ ತೃಪ್ತಿಕರವಾಗಿ ನಿರ್ವಹಿಸುವರೋ? ಭಾವುಕತೆಗೆ ಮಾರಿಹೋದರೆ, ಸಮಾಜರಕ್ಷಣೆ ಮತ್ತು ದೇಶರಕ್ಷಣೆ ಮಾಡುವುದು ಸಾಧ್ಯವಾಗದು, ಡಾ। ರಮಣ್!

ರಮಣ್: ಆದರೆ ತಾವು, ನ್ಯಾಯವಾದ ಜನತೆಯ ಪ್ರಶ್ನೆಗೆ ಏನು ಉತ್ತರ ಕೊಡುವಿರಿ........?

ಸಂಪತ್: ಜನತೆಯ ನ್ಯಾಯವಾದ ಪ್ರಶ್ನೆಗೆ ನ್ಯಾಯವಾದ........

ರಮೇಶ್: (ಮುಂದೆ ಮಾತಾಡಗೊಡದೆ) ಛೆ, ಬಿಡಿ ಬಿಡಿ, ನೀವೇನು ಹೇಳುತ್ತೀರಿ........? ಕೊನೆಗೆ........"ಆತ್ಮರಕ್ಷಣೆಗಾಗಿ ಗುಂಡು ಹಾರಿಸ ಲಾಯಿತು" ಎಂದು ಹೇಳಬಹುದು. ಅಷ್ಟೆ ತಾನೆ?

ಸಂತೋಷ್: (ಗಾಂಭೀರ್ಯದಿಂದ) ಮಿ| ರಮೇಶ್........ತಾವೇನು ಸಾಮಾನ್ಯ ಜನರಂತೆ ಮಾತನಾಡುತ್ತಿರುವಿರಲ್ಲ........? ಪೋಲೀಸಿನವರಿಗೆ ಆತ್ಮರಕ್ಷಣೆಯ ಬಗ್ಗೆ ಭಯವೆ ಇರುವುದಿಲ್ಲ. ಜನತೆಯ ಧನ, ಮಾನ, ರಕ್ಷಣೆ ಮತ್ತು ದೇಶರಕ್ಷಣೆಗಾಗಿ, ಆತ್ಮಾರ್ಪಣೆ ಮಾಡಲೂ ಸಿದ್ಧವಾಗಿರುತ್ತದೆ— ಪೋಲೀಸು ಪಡೆ! ತಾವೇನೋ ಅರಿಯದವರಂತೆ, ಭಾವಾವೇಶದಿಂದ ಮಾತನಾಡುತ್ತಿರುವಿರಿ. ನಾನೀಗ ಹೊರಡಲೇ........? (ಎನ್ನುತ್ತ ವಂದಿಸಿ ಹೊರಟುಹೋಗುವರು.)

ರಮೇಶ್: (ಮೌನನಾಗಿ, ಚಿಂತಾಕ್ರಾಂತರಾಗಿ, ಸುಮ್ಮನೆ ಅತ್ತಿತ್ತ ಹಜ್ಜೆ ಹಾಕುತ್ತಿರುವರು. ದುಃಖದಿಂದ ತಲೆತಗ್ಗಿಸಿ ದೀನಸ್ವರದಿಂದ) ಓಹ್! ಓಹ್! ಈ ಜನತಾಶಾಸನ ಪದ್ಧತಿ!........ಈ ಸ್ವಾತಂತ್ರ್ಯ........ಈ ಹತ್ಯಾ ಕಾಂಡ! (ತಲೆಕೊಡವಿ) ಛಿಃ ಈ ಬಡ ವಿದ್ಯಾರ್ಥಿಗಳು ಪೋಲೀಸರ ಮೇಲೆ ಏರಿಹೋಗುವಷ್ಟು ಸ್ವತಂತ್ರರಾದರಲ್ಲ....? ಅಬ್ಬಾ! ಅವರ ಧೈರ್ಯ! ಹುಂ, (ಸಮಾಧಾನ ಸ್ವರದಿಂದ) ಧೈರ್ಯವಿಲ್ಲದೆ ಏನು? ಎಲ್ಲರೂ ತಂತಮ್ಮ ಮನಸ್ಸಿಗೆ ಬಂದ ಹಾಗೆ ಆಚರಿಸುತ್ತ "ಸ್ವಾತಂತ್ರ್ಯ-ಪ್ರಗತಿ ಪಥ" ಎಂದು, ಅದನ್ನೇ ಸ್ವಾತಂತ್ರ್ಯ ಎಂದು ಹೇಳುತ್ತಿರುವಾಗ ಪೋಲೀಸಿನವರು ಹಿಂಜರಿ ಯುವುದು ಎಲ್ಲಾದರೂ ಉಂಟೇ? ಅವರೂ ಸಹ ಸ್ವತಂತ್ರ ಭಾರತದ, ಸಂರಕ್ಷಣಾಕಾರ್ಯವನ್ನು ಹೊತ್ತಿರುವ ಸ್ವತಂತ್ರರೇ ಅಲ್ಲವೆ? ಹುಂ........ ಹೌದು........ಹೌದು....ಈಗ ಅದನ್ನೇ ಒಪ್ಪಿಕೊಳ್ಳಬೇಕಾಗಿದೆ! ಈಗ ಎಲ್ಲ ರಿಗೂ ಸ್ವಾತಂತ್ರ್ಯವಿದೆ! ಎಲ್ಲರೂ ಸ್ವತಂತ್ರರು! ಅದೇ ಸ್ವಾತಂತ್ರ್ಯ!!

(ಪರದೆ ಬೀಳುವುದು.)

ಜೈ ಹಿಂದ್!



# ವಿವೇಕಾನಂದ ವಾಣಿ



ಸ್ವಾಮಿ ವಿವೇಕಾನಂದರು.

ಲೇಖಕ: ಶ್ರೀ| ಎಮ್. ಕೃಷ್ಣರಾವ್, ಬಿ. ಎ., ಸಾಪ್ರೊಕ್ಲು (ಕೊಡಗು).

1956 ★ ಬೆಲೆ: ಒಂದಾಣೆ.

ಒಂದಾಣೆ ಮಾಲೆ — ಮಂಗಳೂರು.

# ಒಂದಾಣೆ ಮಾಲೆಯಲ್ಲಿ—

ತಾ. 1-12-1956ರ ವರೆಗೆ ಪ್ರಕಟವಾದ ಪುಸ್ತಕಗಳು 114.

ಪ್ರತಿ ಶನಿವಾರ ಒಂದು ಹೊಸ ಪುಸ್ತಕ ಹೊರಡುತ್ತಲೇ ಇದೆ.

●

ಈ 114 ಪುಸ್ತಕಗಳಲ್ಲಿ

ಇಪ್ಪತ್ತೆರಡು ಏಕಾಂಕ ನಾಟಕಗಳು ಪ್ರಕಟವಾಗಿವೆ.

●

ಭಕ್ತವಾಣಿ, ಅಮೃತವಾಣಿ, ಗುಮಾನಿ ಕವಿಯ ನೀತಿಕಥೆ,
ಸುಭಾಷಿತ, ಸೂಕ್ತಿಗಳು—ಹೀಗೆ ಅನೇಕ ನೀತಿಪರ—
ತತ್ತ್ವಪರ ಪ್ರಕಟಣೆಗಳು ಹೊರಟಿವೆ.

●

'ಒಂದಾಣೆ ಮಾಲೆ'ಯ ಪ್ರತಿಯೊಂದು ಪುಸ್ತಕವನ್ನೂ
ಕೊಂಡುಕೊಳ್ಳಿರಿ.

ವಾರಕ್ಕೊಂದು ಹೊಸ ಪುಸ್ತಕ!
ಪ್ರತಿಯೊಂದಕ್ಕೆ ಒಂದಾಣೆ!!

●

**ಒಂದಾಣೆ ಮಾಲೆ,**
**ರಥಬೀದಿ, ಮಂಗಳೂರು-೧.**

# ಮೊದಲ ಮಾತು

---

ಸ್ವಾಮಿ ವಿವೇಕಾನಂದರ ಹೆಸರನ್ನು ಯಾರು ಕೇಳಿಲ್ಲ? ಕ್ರಿಸ್ತಶಕ ೧೮೬೩ನೇ ಜನವರಿ ತಾ. ೧೨ರಲ್ಲಿ, ಕಲ್ಕತ್ತಾನಗರದಲ್ಲಿ ಭುವನೇಶ್ವರಿದೇವಿಯ ಪುಣ್ಯಗರ್ಭದಲ್ಲಿ ಜನಿಸಿದರು. ಅವರು ಕಲ್ಕತ್ತದ ಬಳಿ ಇರುವ ದಕ್ಷಿಣೇಶ್ವರದ ಶ್ರೀರಾಮಕೃಷ್ಣ ಪರಮಹಂಸರ ಪಟ್ಟಶಿಷ್ಯರಾಗಿ, ತಮ್ಮ ಗುರುಗಳು ದೈವಾಧೀನರಾದ ಮೇಲೆ ಪಾಶ್ಚಿಮಾತ್ಯ ದೇಶಗಳಲ್ಲಿ ಸಂಚರಿಸಿದರು. ಹಿಂದೂಮತ, ಧರ್ಮ, ಸಂಸ್ಕೃತಿ, ನಾಗರೀಕತೆ,ವೇದಾದಿಗಳ ಮಹತ್ತನ್ನು ಆ ಜನಾಂಗಕ್ಕೆ ಬಿತ್ತರಿಸಿದರು. ಪ್ರಾಪಂಚಿಕ ವಿಷಯದಲ್ಲಿ ಹೊರಳಾಡಿ ಬಳಲಿದ್ದ ಆ ಜನಾಂಗಕ್ಕೆ ಸ್ವಾಮೀಜಿಯವರು ಆಧ್ಯಾತ್ಮಿಕ ಅಮೃತಪಾನವನ್ನು ಮಾಡಿಸಿದರು. ೧೮೯೩ನೆಯ ವರ್ಷದ ಸೆಪ್ಟಂಬರ್ ತಿಂಗಳು ೧೧ನೆಯ ಸೋಮವಾರ ಅಮೆರಿಕದ ಚಿಕಾಗೋನಗರದಲ್ಲಿ ಸೇರಿದ ಪ್ರಾಚ್ಯ ಪಾಶ್ಚಾತ್ಯ ವಿಭಿನ್ನ ಮತಸಂಪ್ರದಾಯಗಳ ಸಮ್ಮೇಳನದಲ್ಲಿ ಸ್ವಾಮೀಜಿಯವರು ಮಾಡಿದ ಭಾಷಣವು ಚಿರಸ್ಮರಣೀಯವಾಗಿರುವಂಥದ್ದು. ಅಲ್ಲಿ ಜಯಭೇರಿಯನ್ನು ಮೊಳಗಿಸಿ, ಅವರು ೧೯೦೨ರಲ್ಲಿ ತಾಯ್ನಾಡಿನಲ್ಲಿ ದೈವಾಧೀನರಾದರು.

ತಮ್ಮ ಸ್ಫೂರ್ತಿದಾಯಕವಾದ ಭಾಷಣದಿಂದ ನವಕುರಿಗಳೆದೆಯಲ್ಲಿ ಸಿಂಹ ಪರಾಕ್ರಮವನ್ನು ಬೀರಿದರು. ದೀನರಿಗೆ, ದಲಿತರಿಗೆ, ಪಾಪಿಗಳಿಗೆ ಮರುಗುವಂತೆ ಮಾಡಿದರು. ದರಿದ್ರನಾರಾಯಣನ ಸೇವೆ ಎಂಬ ಮಂತ್ರವನ್ನು ಘೋಷಿಸಿದರು. "ವಿವೇಕಾನಂದರು ಸನ್ಯಾಸಿಯಾದರೂ ಜೀವನವನ್ನು ತುಚ್ಛವೆಂದೆಣಿಸಿದವರಲ್ಲ. ಈ ಜಗತ್ತು ಭಗವಂತನದು; ಆದಕಾರಣ ಬದುಕಿನ ವಿಷಯದಲ್ಲಿ ಆದರ ಗೌರವ ಗಳಿರಬೇಕು; ಬದುಕು ಕೆಡುಕೆನ್ನದಿರಿ; ಪೌರುಷದಿಂದ ಬದುಕಿರಿ—ಹೀಗೆಂಬ ಜೀವನೋತ್ಸಾಹ ವಿವೇಕಾನಂದರ ಭೇರಿಯಿಂದ ಧ್ವನಿತವಾಗುತ್ತಿದೆ" ಎಂಬುದಾಗಿ ಡಿ. ವಿ. ಜಿ.ಯವರು ಒಂದು ಕಡೆ ಹೇಳಿದ್ದಾರೆ.

ಇಂತಹ ಮಹಾವ್ಯಕ್ತಿಯ ಆಂಗ್ಲಭಾಷೆಯಲ್ಲಿರುವ ಕೆಲವು ಸ್ಫೂರ್ತಿದಾಯಕವಾದ ಭಾಷಣಗಳ ಅನುವಾದವನ್ನು ಮಾಡಲು ಇಲ್ಲಿ ಯತ್ನಿಸಿದ್ದೇನೆ. ಆ ಸಿಂಹ ವಾಣಿಯು ಸದಾ ನಮ್ಮನ್ನು ಜಾಗ್ರತಗೊಳಿಸುತ್ತಿರಲೆಂಬುದೇ ನನ್ನ ಆಸೆ.

ನಾಪೊಕ್ಲು, (ಕೊಡಗು). ಎಂ. ಕೃಷ್ಣರಾವ್.

# ವಿವೇಕಾನಂದ ವಾಣಿ

ಜ್ಞಾನಜ್ಯೋತಿಯು ಲೋಕದಲ್ಲಿ ಮೊತ್ತಮೊದಲು ಬೆಳಗಿದ್ದು ಈ ನಮ್ಮ ಪುರಾತನ ದೇಶದಲ್ಲಿಯೇ. ಮಂಜಿನಿಂದ ಆವರಿಸಲ್ಪಟ್ಟು ಸದಾ ನಯನಮನೋಹರವಾಗಿ ಕಾಣುತ್ತಾ ನಾನಾ ಜೀವನದಿಗಳಿಗೆ ಜೀವದಾನ ಮಾಡುತ್ತಿರುವ ಹಿಮಾಲಯ ಪರ್ವತವು ನಮ್ಮದೇಶದ್ದು. ಸಾವಿರಾರು ಋಷಿಪುಂಗವರ ಪಾದಧೂಳಿಯಿಂದ ಪವಿತ್ರವಾದ ಭೂಮಿ ಈ ನಮ್ಮಭೂಮಿ. ಆತ್ಮದ ಅಮರತ್ವದ ವಿಷಯವು ಮೊತ್ತಮೊದಲು ನಮ್ಮ ದೇಶದಲ್ಲಿಯೇ ಉದ್ಭವವಾಯಿತು. ಮತ ಮತ್ತು ತತ್ತ್ವಶಾಸ್ತ್ರವು ಮರಳಿಮರಳಿ ಸಮುದ್ರದ ಅಲೆಯೋಪಾದಿಯಲ್ಲಿ ಬಂದು ಇಡೀ ಲೋಕಕ್ಕೆ ತನ್ನ ಪ್ರತಿಭೆಯನ್ನು ಬೀರಿದ ದೇಶ ಈ ನಮ್ಮ ದೇಶ. ನೂರಾರು ವರ್ಷಗಳಿಂದಲೂ ನಾನಾ ಪರಕೀಯರ ಧಾಳಿಯನ್ನೂ, ನಾನಾ ಅಚಾರವಿಚಾರಗಳ ಧಾಳಿಯನ್ನೂ ಅನುಭವಿಸಬೇಕಾಯಿತು. ಅಷ್ಟಾದರೂ ಸ್ವಲ್ಪವೂ ಹಿಗ್ಗದೆ ಕುಗ್ಗದೆ ಸಮುದ್ರದ ಮಧ್ಯದಲ್ಲಿರುವ ಬಂಡೆಯೋಪಾದಿಯಲ್ಲಿ ನಿಂತಿರುವುದು ಈ ನಮ್ಮ ಭಾರತದೇಶ. ನಮ್ಮ ಈ ದೇಶಕ್ಕೆ ಆತ್ಮದೋಪಾದಿಯಲ್ಲಿ ಆದಿಯೂ ಇಲ್ಲ, ಅಂತ್ಯವೂ ಇಲ್ಲ. ಇಂತಹ ದೇಶದ ಪುತ್ರರತ್ನಗಳಾಗಿದ್ದೇವೆ ನಾವು.

o o o o o

ನಾನು ಈ ನನ್ನ ಭಾರತದೇಶವನ್ನು ಎಷ್ಟೇ ಪ್ರೀತಿಸಿದರೂ, ಎಷ್ಟೇ ನನಗೆ ದೇಶಪ್ರೇಮವಿದ್ದರೂ, ಎಷ್ಟೇ ನಮ್ಮ ಪುರಾತನ ಋಷಿವರ್ಯರನ್ನು ನಾನ್ನ ಆರಾಧಿಸಿದರೂ, ಪರರಾಷ್ಟ್ರಗಳಿಂದ ನಾವು ಕಲಿಯಬೇಕಾದ್ದು ಬಹಳ ಇದೆಯೆಂದು ನಾನು ಹೇಳಬಯಸುತ್ತೇನೆ. ನಾವು ಯಾವಾಗಲೂ ಪ್ರತಿಯೊಬ್ಬರ ಪಾದಗಳ ಬಳಿಯೂ ಕುಳಿತು ಕಲಿಯಲು ಸಿದ್ಧರಿರಬೇಕು. ಏಕೆಂದರೆ, ಈ ಲೋಕದಲ್ಲಿ ಪ್ರತಿಯೊಬ್ಬನೂ ನಿಮಗೆ ಒಂದಲ್ಲ ಒಂದು ದೊಡ್ಡ ಪಾಠವನ್ನು ಕಲಿಸಬಲ್ಲನು. ನಮ್ಮ ನ್ಯಾಯಮೂರ್ತಿ ಮನು "ಅತೀ ನೀಚಜಾತಿಯವನಿಂದಲೂ ಒಳ್ಳೆಜ್ಞಾನವನ್ನು ಪಡೆ. ಸೇವೆಯ ಮೂಲಕ ಸ್ವರ್ಗದ ಹಾದಿಯನ್ನು ತಂದುಕೊ'' ಎಂಬುದಾಗಿ ಹೇಳಿದ್ದಾನೆ. ಅದೇ

ಸಮಯದಲ್ಲಿ ನಾವು ಕೂಡ ಲೋಕಕ್ಕೆ ಬೇಕಾದಷ್ಟು ಕಲಿಸಲಿದೆ ಎಂಬು ದನ್ನು ಮರೆಯಬಾರದು. ಭಾರತವನ್ನು ಬಿಟ್ಟು ಹೊರದೇಶಗಳಿಗೆ ಹೋಗು ವುದು ತಪ್ಪು ಎಂಬ ನಮ್ಮ ಜನಗಳ ಮನೋಭಾವನೆಯು ಹುಚ್ಚುತನ ವಲ್ಲದೆ ಮತ್ತೇನು? ಹೊರಗಿನ ದೇಶಗಳಲ್ಲಿ ಸಂಚರಿಸಿ ಅನುಭವಪಡೆಯ ಬೇಕು. ಅದು ನಮಗೂ ಮತ್ತು ನಮ್ಮ ದೇಶಕ್ಕೂ ಲಾಭದಾಯಕವಾದುದು. ವಿಕಾಸವೇ ಜೀವನ. ಸಂಕುಚಿತತೆಯೇ ಮರಣ. ಆದುದರಿಂದ ನೀವು ಜೀವಿಸಲು ಬಯಸುವಿರಾದರೆ ಮೊತ್ತಮೊದಲು ವಿಕಾಸಹೊಂದಿರಿ.

o o o o o

ನಿಮ್ಮಲ್ಲಿ ಯಾರಾದರೂ ಧೈರ್ಯವಾಗಿ "ನಾನು ಈ ಮಗುವಿನ ಅಥವಾ ವಿಧವೆಯ ಸಮಸ್ಯೆಯನ್ನು ಬಿಡಿಸುತ್ತೇನೆ" ಎಂದು ಹೇಳಬಲ್ಲಿರಾ? ಸ್ತ್ರೀಯರ ಸಮಸ್ಯೆಗಳನ್ನು ಬಿಡಿಸಲು ನೀವಾರು? ಎಲ್ಲವನ್ನೂ ನಾನು ತಿಳಿದಿದ್ದೇನೆ ಎಂದು ಹೇಳಲು ನೀನಾರು? ನಿಮ್ಮ ನಿಮ್ಮ ತಲೆಯ ಮೇಲೆ ರಾಶಿರಾಶಿಯಾಗಿ ಬಿದ್ದಿರುವ ಕರ್ಮಗಳನ್ನು ನೋಡಲು ನೀವು ತೊಳೆದು ಕೊಳ್ಳಿ. ಪ್ರತಿಯೊಬ್ಬ ಮನುಷ್ಯನನ್ನೂ ಪ್ರಾಣಿಯನ್ನೂ ದೇವರೆಂದು ತಿಳಿ. ನೀನು ಅವರಿಗಾರಿಗೂ ಸಹಾಯಮಾಡಲಾರೆ, ಆದರ ಬದಲು ಅವರ ಸೇವೆ ಯನ್ನು ಮಾತ್ರ ಮಾಡಬಲ್ಲೆ. ಆ ಪರಮಾತ್ಮನು ಆತನ ಮಕ್ಕಳ ಸೇವೆ ಯನ್ನು ಮಾಡುವ ಸುಸಂದರ್ಭವನ್ನು ನಿನಗೆ ಕಲ್ಪಿಸಿಕೊಟ್ಟರೆ, ನೀನು ಪಾವನನಾಗುವೆ. ನೀನೇ ಸರ್ವಸ್ವವೆಂದು ಮಾತ್ರ ತಿಳಿಯದಿರು. ದೇವರ ಮಕ್ಕಳನ್ನು ಸೇವಿಸುವ ಅವಕಾಶ ಇತರರಿಗೆ ಸಿಗದೆ ನಿನಗೆ ಸಿಕ್ಕಾಗ, ನೀನು ಅದನ್ನು ಸಂತೋಷದಿಂದ ಪೂಜೆಯಂತೆ ಕೈಗೊಳ್ಳಬೇಕು. ದೇವರು ರೋಗಿಯ ರೂಪದಲ್ಲಿಯೂ, ಹುಚ್ಚನ ರೂಪದಲ್ಲಿಯೂ, ಪಾಪಿಯ ರೂಪ ದಲ್ಲಿಯೂ, ದರಿದ್ರನ ರೂಪದಲ್ಲಿಯೂ ಈ ಲೋಕದಲ್ಲಿಯೇ ಇರುವನು. ಇವರುಗಳನ್ನು ನಿನ್ನ ಕೈಲಾದಷ್ಟು ಸೇವಿಸಿ, ತನ್ಮೂಲಕ ದೇವರನ್ನು ಕಾಣು. ದೇವರು ಇವರುಗಳಲ್ಲಿ ಅಲ್ಲದೆ ಮತ್ತೆಲ್ಲಿರುವನು?

ಈ ಲೋಕಕ್ಕೆ ಬೆಳಕನ್ನು ತೆಗೆದುಕೊಂಡು ಬಾ, ಬೆಳಕು! ಬೆಳಕನ್ನು ತೆಗೆದುಕೊಂಡು ಬಾ! ಎಲ್ಲರಿಗೂ ಆ ಬೆಳಕನ್ನು ನೀಡು. ಎಲ್ಲರೂ ದೇವ ರನ್ನು ಕಾಣಲಿ. ದರಿದ್ರನಿಗೆ ಬೆಳಕನ್ನು ನೀಡು. ಐಶ್ವರ್ಯವಂತನಿಗೆ ಮಿಗಿಲಾಗಿ ನೀಡು. ಏಕೆಂದರೆ ಅವರಿಗೆ ಚೆನ್ನಾಗಿ ಅರಿವಾಗಬೇಕು.

ಅಜ್ಞಾನಿಗೆ ಬೆಳಕನ್ನು ನೀಡು, ಅವನಿಗಿಂತ ಮಿಗಿಲಾಗಿ ವಿದ್ಯಾವಂತನಿಗೆ ನೀಡು. ಏಕೆಂದರೆ ಇಂದಿನ ನಮ್ಮ ವಿದ್ಯಾಭ್ಯಾಸದಿಂದ ದುರಹಂಕಾರವು ಹುಲುಸಾಗಿ ಬೆಳೆದು ನಿಂತಿದೆ. ಈ ರೀತಿ ನೀನು ಬೆಳಕನ್ನು ನೀಡಿ ನಿನ್ನ ಕರ್ತವ್ಯವನ್ನು ನೀನು ಮಾಡು. ನಿನ್ನ ಕರ್ತವ್ಯವನ್ನು ನೀನು ಮಾಡಲು ಮಾತ್ರ ನಿನಗೆ ಹಕ್ಕಿದೆ. ಅದರ ಪ್ರತಿಫಲಕ್ಕೆ ನಿನಗೆ ಹಕ್ಕಿಲ್ಲ.

o o o o o

ನಮ್ಮ ಜನಾಂಗವನ್ನು ಬೇರೆ ಜನಾಂಗದೊಡನೆ ಹೋಲಿಸಿ ನೋಡಿದರೆ ನಾವು ಬಹಳ ದುರ್ಬಲರೆಂಬುದಾಗಿ ತಿಳಿದುಬರುತ್ತದೆ. ಅದರಲ್ಲೂ ದೇಹದ ದೌರ್ಬಲ್ಯವು ಮೊತ್ತಮೊದಲನೆಯದು. ಈ ದೇಹದೌರ್ಬಲ್ಯವು ನಮ್ಮ ಎಲ್ಲಾ ವಿಧವಾದ ತಾಪತ್ರಯಗಳಿಗೂ ಕಾರಣವಾಗಿದೆ. ನಾವು ತುಂಬಾ ಸೋಮಾರಿಗಳು, ಕೆಲಸಮಾಡಲಾರೆವು, ಒಟ್ಟಾಗಲಾರೆವು, ಒಬ್ಬರನ್ನೊಬ್ಬರು ಪ್ರೀತಿಸಲಾರೆವು. ನಾವು ಬಹಳ ಸ್ವಾರ್ಥಿಗಳು. ನಮ್ಮಲ್ಲಿ ಕೇವಲ ಮೂರೇ ಮೂರು ಮಂದಿ ಒಂದಾಗಿ ಬಾಳಲಾರೆವು. ಅದರ ಬದಲು ಮೂವರೂ ಒಬ್ಬನನ್ನು ಕಂಡರೆ ಮತ್ತೊಬ್ಬನು ಕರುಬುತ್ತಾನೆ. ನಮ್ಮ ಸ್ಥಿತಿಯು ಈಗ ಈ ರೀತಿ ಚಿಂತಾಜನಕವಾಗಿದೆ. ನೂರಾರು ವರುಷಗಳಿಂದ ಒಬ್ಬನೊಡನೆ ಇನ್ನೊಬ್ಬನು ಕಚ್ಚಾಡುವುದೇ ಆಗಿದೆ. ಹಣೆಯ ಮೇಲೆ ಒಂದು ಗುರುತನ್ನು ಹೀಗಿಡಬೇಕೋ ಹಾಗಿಡಬೇಕೋ ಎಂಬ ವಿಷಯವಾಗಿ ಅಮೂಲ್ಯವಾದ ಸಮಯವನ್ನೆಲ್ಲಾ ವ್ಯರ್ಥವಾದ ವಾದವಿವಾದಗಳಲ್ಲಿ ಕಳೆದಿದ್ದೇವೆ. ಮತ್ತು ಅನೇಕರು ತಮ್ಮ ಸಂಪೂರ್ಣ ಬುದ್ಧಿಶಕ್ತಿಯನ್ನೆಲ್ಲಾ ಈ ಒಂದು ಅಗಾಧವಾದ, ಅತ್ಯಾಶ್ಚರ್ಯಕಾರಕವಾದ ಸಮಸ್ಯೆಯನ್ನು ಬಿಡಿಸಲು ಖರ್ಚುಮಾಡಿದ್ದಾರೆ. ಇದನ್ನು ಕಂಡು ನಮಗೇ ನಾಚಿಕೆಯಾಗಿಲ್ಲ. ನಾವು ಅನೇಕ ವಿಷಯಗಳ ಕುರಿತು ಗಿಳಿಯಂತೆ ಮಾತನಾಡುತ್ತೇವೆ. ನುಡಿಯುವುದೂ, ನುಡಿದಂತೆ ನಡೆಯದಿರುವುದೂ ನಮ್ಮಲ್ಲಿ ಒಂದು ಅಭ್ಯಾಸವಾಗಿ ಹೋಗಿದೆ. ಇದಕ್ಕೆಲ್ಲಾ ಕಾರಣ ದೇಹದ ದೌರ್ಬಲ್ಯ. ಈ ರೀತಿಯ ದುರ್ಬಲವಾದ ಮಿದುಳು ಯಾವ ಕೆಲಸವನ್ನೂ ಸಾಧಿಸುವುದಿಲ್ಲ. ಆದುದರಿಂದ ಅದನ್ನು ನಾವು ಬಲಪಡಿಸಬೇಕು. ಮೊತ್ತಮೊದಲನೆಯದಾಗಿ ನಮ್ಮ ದೇಶದ ತರುಣರು ದೇಹದಾರ್ಢ್ಯವನ್ನು ಹೊಂದಬೇಕು. ಮತ ಮುಂತಾದುವು ತದನಂತರ. ನನ್ನ ದೇಶದ ತರುಣರೇ,

ದೇಹದಾರ್ಢ್ಯವನ್ನು ಹೊಂದಿರಿ. ಇದೇ ನನ್ನ ಬುದ್ಧಿವಾದ. ನೀವು ಗೀತಾ ಪಠನಕ್ಕಿಂತ ಫುಟ್‌ಬಾಲ್ ಆಟದಿಂದ ಸ್ವರ್ಗಕ್ಕೆ ಸಮೀಪವಾಗುವಿರಿ. ಈ ನನ್ನ ಮಾತುಗಳು ನಿಜವಾಗಿಯೂ ದಿಟ್ಟತನದ ಮಾತುಗಳು. ಆದರೂ ನಾನು ಅದನ್ನು ಹೇಳಬೇಕಾಗಿದೆ. ಏಕೆಂದರೆ, ನನಗೆ ನಿಮ್ಮ ಮೇಲೆ ಅಷ್ಟೊಂದು ಪ್ರೀತಿ ಇದೆ. ನೀವು ಗೀತೆಯನ್ನು ನಿಮ್ಮ ಮಾಂಸಖಂಡಗಳು ಬಲಿತ ಮೇಲೆ ಅರ್ಥಮಾಡಿಕೊಳ್ಳಲು ಶಕ್ತರು. ನಿಮ್ಮ ದೇಹದಲ್ಲಿ ಒಳ್ಳೆ ಗಟ್ಟಿಯಾದ ರಕ್ತವನ್ನು ಹೊಂದಿದ ಮೇಲೆ ಚೆನ್ನಾಗಿ ಅರ್ಥಮಾಡಿಕೊಳ್ಳು ವಿರಿ. ಉಪನಿಷತ್ತನ್ನೂ, ಕೃಷ್ಣನ ಮಹಿಮೆಯನ್ನೂ ಆತ್ಮದ ಮಹಿಮೆ ಯನ್ನೂ ನಿಮ್ಮ ದೇಹವು ನಿಮ್ಮ ಕಾಲುಗಳ ಮೇಲೆ ಚೆನ್ನಾಗಿ ನಿಲ್ಲಲು ಶಕ್ತವಾದಾಗ ಅರ್ಥಮಾಡಿಕೊಳ್ಳುವಿರಿ. ಆಗ ಮಾತ್ರ ನೀವು ನಿಜವಾದ ಮಾನವರಾಗುವಿರಿ.

o o o o o

ನಾವು ಹತ್ತಿಯಂತೆ ಮೆತ್ತಗಿರುವ ಕಾಲ ಮುಗಿದುಹೋಯಿತು. ಈಗ ನಮ್ಮ ದೇಶಕ್ಕೆ ಬೇಕಾಗಿರುವುದೇನೆಂದರೆ ಕಬ್ಬಿಣದಂತಹ ಮಾಂಸ ಖಂಡ ಮತ್ತು ಉಕ್ಕಿನಂತಹ ನರಗಳು. ನಮ್ಮಲ್ಲಿ ನಮಗೆ ನಂಬಿಕೆಯಿರ ಬೇಕು. ಮೊದಲು ಈ ಆತ್ಮವಿಶ್ವಾಸವನ್ನು ಪಡೆದು ಅನಂತರ ದೇವರಲ್ಲಿ ನಂಬಿಕೆಯನ್ನಿಡಬೇಕು. ಮಹಾತ್ಕಾರ್ಯಗಳನ್ನು ಸಾಧಿಸುವ ಗುಟ್ಟು ಇದೇ. ನಿಮ್ಮ ಮುನ್ನೂರಮೂವತ್ತು ಮಿಲಿಯ ದೇವರುಗಳಲ್ಲೂ, ಮತ್ತು ಪರಕೀಯರು ತಂದುಕೊಟ್ಟಿರುವ ಎಲ್ಲಾ ದೇವರುಗಳಲ್ಲೂ ನೀವು ನಂಬಿಕೆ ಯನ್ನು ಇಟ್ಟುಕೊಂಡು, ಕೊನೆಗೆ ನಿಮ್ಮಲ್ಲಿ ಆತ್ಮವಿಶ್ವಾಸವಿಲ್ಲದಿದ್ದರೆ ನಿಮಗೆ ಮುಕ್ತಿಯೇ ಇಲ್ಲ. ಈ ಮುನ್ನೂರಮೂವತ್ತು ಮಿಲಿಯ ಭಾರತೀಯರನ್ನು ಕೆಲವೇ ಮಂದಿ ಪರಕೀಯರು ಹೇಗೆ ದರ್ಪದಿಂದ ಆಳಿದರೆಂದರೆ, ಅವರಿಗೆ ಆತ್ಮವಿಶ್ವಾಸವಿತ್ತು ಮತ್ತು ನಮ್ಮಲ್ಲಿರಲಿಲ್ಲ. ನಾನು ಯೂರೋಪ್ ದೇಶ ದಲ್ಲಿ ಕಂಡಿದ್ದೇನು? ಅವರಲ್ಲಿರುವ ಅದ್ಭುತವಾದ ಆತ್ಮಶಕ್ತಿಯನ್ನು. ಒಬ್ಬ ಇಂಗ್ಲಿಷ್ ಬಾಲಕನು "ನಾನು ಇಂಗ್ಲಿಷಿನವನು. ನಾನು ಏನನ್ನು ಬೇಕಾ ದರೂ ಮಾಡಬಲ್ಲೆ" ಎಂಬುದಾಗಿ ಹೇಳುವನು. ಅದೇ ರೀತಿಯಾಗಿ ಅಮೆರಿಕದಲ್ಲಿ. ಆದರೆ, ನಮ್ಮ ಬಾಲಕರು ಹಾಗೆ ಹೇಳಿಯಾರೆ? ಇಲ್ಲ. ನಮ್ಮ ಬಾಲಕರ ಹಿರಿಯರೂ ಹಾಗೆ ಹೇಳುವುದಿಲ್ಲ. ನಾವು ನಮ್ಮಲ್ಲಿ ನಂಬಿಕೆಯನ್ನು ಕಳೆದುಕೊಂಡಿದ್ದೇವೆ.

ಓ! ನನ್ನ ಬಂಧುಗಳೇ, ನಾನು ಕೆಲವಾರು ನಿಷ್ಠುರವಾದ ಮಾತುಗಳನ್ನು ಆಡಬೇಕಾಗಿದೆ. ಒಬ್ಬ ಇಂಗ್ಲಿಷಿನವನು ನಮ್ಮ ಸಹೋದರನೊಬ್ಬನನ್ನು ಕೊಂದನೆಂದೂ ಮತ್ತು ಅವನನ್ನು ಹೀನಾಯಿಸಿದರೆಂದೂ ವರ್ತಮಾನಪತ್ರಿಕೆಗಳಲ್ಲಿ ನಾನು ಓದಿ ಕಣ್ಣೀರಿಟ್ಟೆನು. ಇದಕ್ಕೆಲ್ಲಾ ಕಾರಣರಾರು? ಇಂಗ್ಲಿಷಿನವನಲ್ಲ. ನಮ್ಮವರೇ. ನಮ್ಮ ಈ ಅಧೋಗತಿಗೂ, ತೊಂದರೆಗಳಿಗೂ ನಾವೇ ಕಾರಣರು. ನಮ್ಮ ಹಿಂದಿನ ಶ್ರೀಮಂತ ಹಿರಿಯರು ಜನಸಾಮಾನ್ಯರನ್ನು ಪಶುಗಳಂತೆ ಕಂಡು, ಅವರನ್ನು ತುಳಿದು, ನಿಸ್ಸಹಾಯಕರಾಗುವಂತೆ ಮಾಡಿದರು. ಈ ತುಳಿತದಿಂದ ನಮ್ಮ ಜನರು ತಾವು ಮಾನವರೆಂಬ ಅರಿವನ್ನೇ ಮರೆತುಬಿಟ್ಟರು. ಅವರನ್ನು ಮನೆಗೆ ನೀರು ತಂದು ಹಾಕುವುದಕ್ಕೂ, ಕಟ್ಟಿಗೆ ಕಡಿಯುವುದಕ್ಕೂ ಉಪಯೋಗಿಸಿಕೊಂಡು ಅವರಿಗೆ ಕೊಡಬಾರದ ಕಷ್ಟಗಳನ್ನು ಕೊಟ್ಟರು. ಕೊನೆಗೆ ಆ ನಿಸ್ಸಹಾಯಕರು ತಾವು ಆಜನ್ಮ ಗುಲಾಮರೆಂಬುದಾಗಿಯೇ ತಿಳಿದರು. ನಮ್ಮಲ್ಲಿ ಬೇಕಾದಷ್ಟು ವಿದ್ಯಾವಂತರಿದ್ದೇವೆ. ನಾವು ವಿದ್ಯಾವಂತರೆಂಬುದಾಗಿ ಜಂಬಕೊಚ್ಚಿಕೊಳ್ಳುತ್ತೇವೆ. ಆದರೆ ಈ ಬಡಜನರ ಉದ್ಧಾರಕ್ಕಾಗಿ ಯಾರೊಬ್ಬರೂ ಮುಂದೆಬರುವುದನ್ನು ಕಾಣಲಾರೆ. ಅದರ ಬದಲು ಅದು ವಂಶಪಾರಂಪರ್ಯವಾಗಿ ಬಂದಿರುವ ಸಂಪ್ರದಾಯ ಎಂದು ಮುಂತಾಗಿ ಒಣಟುವಾದವನ್ನು ಮಾಡುತ್ತಾರೆ.

ನಾನು ಚಿಕಾಗೋದಲ್ಲಿ ನಡೆದ ಸರ್ವಮತಗಳ ಸಮ್ಮೇಳನದಲ್ಲಿ ಒಬ್ಬ ಆಫ್ರಿಕದ ನೀಗ್ರೋ ಯುವಕನು ಒಂದು ಸೊಗಸಾದ ಭಾಷಣಮಾಡಿದ್ದನ್ನು ಕೇಳಿದೆನು. ನಾನು ಆ ನೀಗ್ರೋ ಯುವಕನ ವಿಷಯವಾಗಿ ತಿಳಿಯಲು ಕುತೂಹಲಪಟ್ಟೆನು. ಆಗಾಗ್ಗೆ ಅವನನ್ನು ಮಾತನಾಡಿಸಿದೆನು. ಆದರೆ ಅವನಾರೆಂಬುದಾಗಿ ತಿಳಿಯಲಾಗಲಿಲ್ಲ. ಕೆಲವು ದಿನಗಳ ಅನಂತರ ಇಂಗ್ಲೆಂಡಿನಲ್ಲಿ ಕೆಲವು ಅಮೇರಿಕರನ್ನು ಭೇಟಿಯಾದೆನು. ಅವರ ಮೂಲಕ ಆ ಯುವಕನಾರೆಂಬುದಾಗಿ ನನಗೆ ತಿಳಿಯಿತು ಈ ಯುವಕನು ಮಧ್ಯ ಆಫ್ರಿಕದ ಒಬ್ಬ ನೀಗ್ರೋ ನಾಯಕನ ಮಗ. ಅವನ ತಂದೆಗೂ ಮತ್ತೊಬ್ಬ ನಾಯಕನಿಗೂ ಹೊಡೆದಾಟವಾಗಲು, ಈ ಯುವಕನ ತಂದೆ ತಾಯಿಗಳು ಮಡಿದುಹೋದರು. ಅನಂತರ ಈ ಮಗುವನ್ನೂ ಕೊಂದು ಬೇಯಿಸಿ ಊಟಮಾಡಬೇಕೆಂದು ಶತ್ರುಗಳು ಸನ್ನಾಹಮಾಡಿದರು. ಆದರೆ

ಆ ಬಾಲಕನು ತಪ್ಪಿಸಿಕೊಂಡು ಓಡಿಹೋದನು. ಬಹು ಪ್ರಯಾಸದಿಂದ ಬಹು ದೂರ ನಡೆದು ಸಮುದ್ರದ ದಡಕ್ಕೆ ಬಂದು ನಿಂತನು. ಅಲ್ಲಿಗೆ ಬಂದಿದ್ದ ಅಮೇರಿಕಾದೇಶದ ಹಡಗು ಈ ಬಾಲಕನನ್ನು ಅಮೇರಿಕಾದೇಶಕ್ಕೆ ಕರೆದುಕೊಂಡು ಹೋಯಿತು. ಈ ಬಾಲಕನೇ ಆ ಸೊಗಸಾದ ಭಾಷಣ ಮಾಡಿದ್ದು. ಆದುದರಿಂದ ದೀನ ದಲಿತರನ್ನು ತುಳಿಯುವುದು ವಂಶ ಪಾರಂಪರ್ಯವಾಗಿ ಬಂದುದು ಎಂದು ಹೇಳುವವರಿಗೆ ನಾನೇನು ಹೇಳಲಿ?

o o o o o

ಮನಶ್ಶುದ್ಧಿಯಿಲ್ಲದ ಪ್ರಾರ್ಥನೆ ಅಪ್ರಯೋಜಕ. ಮನಶ್ಶುದ್ಧಿಯಿಂದ ಶಿವನನ್ನು ಪ್ರಾರ್ಥಿಸಿದ್ದೇ ಆದರೆ ಆತನು ಮೆಚ್ಚುವನು. ಮನಶ್ಶುದ್ಧಿ ಇಲ್ಲದೆ ಮತಧರ್ಮಗಳ ವಿಷಯವಾಗಿ ಬೋಧಿಸಲು ತೊಡಗಿದವನು ಖಂಡಿತವಾಗಿಯೂ ಪರಾಜಯವನ್ನನುಭವಿಸುವನು. ಜನಗಳು ಈ ಕಲಿಯುಗದಲ್ಲಿ ತಾವು ಮಾಡಿದ ಪಾಪಗಳೆಲ್ಲವೂ ತೀರ್ಥಯಾತ್ರಾಸ್ಥಳಗಳಿಗೆ ಹೋಗುವುದರಿಂದ ನಾಶವಾಗುವುವು ಎಂಬುದಾಗಿ ತಿಳಿದು ಅಧೋಗತಿಗಿಳಿದಿದ್ದಾರೆ. ಮನಶ್ಶುದ್ಧಿ ಇಲ್ಲದೆ ಒಬ್ಬ ಮಾನವನು ಒಂದು ದೇವಸ್ಥಾನಕ್ಕೆ ಹೋಗುವುದರಿಂದ ಅವನು ಪುಣ್ಯಕಟ್ಟಿಕೊಳ್ಳುವುದರ ಬದಲು ಪಾಪವನ್ನು ಕಟ್ಟಿಕೊಂಡು ಮನೆಗೆ ಹಿಂದಿರುಗಬೇಕಾಗುತ್ತದೆ. ಯಾತ್ರಾಸ್ಥಳ ಅಥವಾ ತೀರ್ಥಸ್ಥಳವೆಂದರೆ ಪವಿತ್ರರೂ ಮತ್ತು ಪವಿತ್ರವಸ್ತುಗಳೂ ಇರುವ ತಾಣವೆಂದರ್ಥ. ಪವಿತ್ರರಾದವರು ಎಲ್ಲಿ ಇದ್ದರೂ ಆ ತಾಣವು ತೀರ್ಥಸ್ಥಳವೆನ್ನಿಸಿಕೊಳ್ಳುತ್ತದೆ. ನೂರಾರು ದೇವಸ್ಥಾನಗಳಿರುವೆಡೆ ಅಪವಿತ್ರರು ವಾಸಿಸುತ್ತಿದ್ದರೆ ಆ ಸ್ಥಳವು ತೀರ್ಥಸ್ಥಳವಾಗಲಾರದು. ತೀರ್ಥಸ್ಥಳಗಳಲ್ಲಿ ವಾಸಿಸುವುದು ತುಂಬಾ ಕಡುತರವಾದುದು. ಏಕೆಂದರೆ, ಇಂತಹ ಸ್ಥಳಗಳಲ್ಲಿ ಮಾಡಿದ ಪಾಪವನ್ನು ಹೋಗಲಾಡಿಸಿಕೊಳ್ಳಲು ಆಗುವುದೇ ಇಲ್ಲ. ಇದೇ ಧರ್ಮದ ಗುಟ್ಟು. ಇದೇ ನಿಜವಾದ ದೇವರ ಪೂಜೆಯ ಮರ್ಮ. ಆದುದರಿಂದ ನಾವು ಪರಿಶುದ್ಧರಾಗಿರಬೇಕು. ಮತ್ತು ಇತರರಿಗೆ ಕೈಲಾದ ಸಹಾಯವನ್ನು ಮಾಡಬೇಕು.

ಯಾವನು ಶಿವನನ್ನು ದರಿದ್ರರಲ್ಲೂ, ದೀನರಲ್ಲೂ, ದುರ್ಬಲರಲ್ಲೂ, ರೋಗರುಜಿನಾದಿಗಳಿಂದ ನರಳುತ್ತಿರುವವರಲ್ಲೂ ಕಾಣುವನೋ ಅವನೇ ನಿಜವಾದ ಶಿವಾರಾಧಕ. ಯಾವನು ಜಾತಿ, ಮತ, ಬಣ್ಣ ಮುಂತಾದವು

ಗಳನ್ನು ಎಣಿಸದೆ ದರಿದ್ರನನ್ನು ಸೇವಿಸುತ್ತಾನೋ ಅಂತಹವನನ್ನು ಶಿವನು, ದೇವಸ್ಥಾನಗಳಲ್ಲಿಯೇ ಶಿವನನ್ನು ಕಾಣಲು ಹೊರಡುವ ಜನಗಳಿಗಿಂತ ಪ್ರೀತಿಸುತ್ತಾನೆ.

ಒಬ್ಬ ಧನಿಕನಿಗೆ ಒಂದು ತೋಟವಿದ್ದಿತು; ಮತ್ತು ಅದಕ್ಕಾಗಿ ಈರ್ವರು ಕೆಲಸಗಾರರೂ ಇದ್ದರು. ಇವರೀರ್ವರಲ್ಲಿ ಒಬ್ಬನು ಬಹಳ ಸೋಮಾರಿಯಾಗಿದ್ದನು. ಆದುದರಿಂದ ಕೆಲಸವನ್ನೇ ಮಾಡುತ್ತಿರಲಿಲ್ಲ. ಆದರೆ ತನ್ನ ಯಜಮಾನನು ಬಂದ ಕೂಡಲೇ ಮೇಲೆದ್ದು ತನ್ನ ಎರಡೂ ಕೈಗಳನ್ನು ಜೋಡಿಸಿಕೊಂಡು "ಆಹಾ! ನನ್ನ ಯಜಮಾನನ ಮುಖ ಕಮಲವು ಎಷ್ಟು ಮನೋಹರವಾಗಿದೆ" ಎಂದು ಅವನ ಸುತ್ತಲೂ ಕುಣಿ ಯುತ್ತಿದ್ದನು. ಮತ್ತೊಬ್ಬ ಕೆಲಸಗಾರನು ಹೀಗೆ ಮಾಡುತ್ತಿರಲಿಲ್ಲ. ದುಡಿ ಯುವುದೇ ಅವನ ಬಾಳಗೀತೆಯಾಗಿದ್ದಿತು. ಕಷ್ಟಪಟ್ಟು ಬೆವರು ಸುರಿಸಿ ದುಡಿದು ಫಲವನ್ನು ತನ್ನ ದಣಿಗೆ ಅರ್ಪಿಸುತ್ತಿದ್ದನು. ಇವರೀರ್ವರಲ್ಲಿ ಯಾರು ನಿಜವಾಗಿಯೂ ಯಜಮಾನನಿಗೆ ಪ್ರಿಯರು? ಅದೇ ರೀತಿಯಾಗಿ ಪರಮಾತ್ಮನೇ ನಮ್ಮೆಲ್ಲರ ಒಡೆಯ. ಈ ಲೋಕವೇ ತೋಟವೆನ್ನೋಣ. ಈ ಲೋಕವೆಂಬ ತೋಟದಲ್ಲಿ ಎರಡು ಬಗೆಯ ಜನಗಳಿದ್ದಾರೆ. ಒಂದನೆಯ ದಾಗಿ ಶಿವನ ಮುಖಕಮಲವನ್ನೇ ಹೊಗಳಿಕೊಂಡು, ಮೋಸ, ವಂಚನೆ, ಸುಳ್ಳು ಸಟೆಯನ್ನು ಮಾಡಿಕೊಂಡಿರುವವರು. ಎರಡನೆಯದಾಗಿ ಶಿವನ ಮಕ್ಕಳಾದ ದರಿದ್ರನಾರಾಯಣರನ್ನೂ, ದುರ್ಬಲರನ್ನೂ, ಪ್ರತಿಯೊಂದು ಪ್ರಾಣಿಯನ್ನೂ ಸೇವಿಸುವವರು. ಈ ರೀತಿಯ ಎರಡು ಬಗೆಯ ಜನಗಳಲ್ಲಿ ನಿಜವಾಗಿಯೂ ಶಿವನ ಪ್ರೀತಿಗೆ ಪಾತ್ರರಾರು? ಆದುದರಿಂದ ಯಾರು ದೇವರ ಮಕ್ಕಳನ್ನು ಸೇವಿಸುತ್ತಾರೋ ಅವರೇ ನಿಜವಾದ ದೇವರ ಆರಾಧಕರೆಂದು ನಮ್ಮ ಶಾಸ್ತ್ರಗಳಲ್ಲಿಯೂ ಹೇಳಲಾಗಿದೆ.

ಚಿತ್ತಶುದ್ಧಿಯನ್ನು ಪಡೆಯುವುದು ನಮ್ಮ ಆದ್ಯಕರ್ತವ್ಯ. ಒಂದು ಕನ್ನಡಿಯ ಮೇಲೆ ಕೊಳೆ ಮತ್ತು ಧೂಳು ಇದ್ದರೆ ನಮ್ಮ ಪ್ರತಿಬಿಂಬವು ಚೆನ್ನಾಗಿ ಕಾಣುವುದಿಲ್ಲ. ಅದೇ ರೀತಿ ಅಜ್ಞಾನ ಮತ್ತು ದುರ್ಬುದ್ಧಿಗಳು ನಮ್ಮ ಹೃದಯವೆಂಬ ಕನ್ನಡಿಯ ಮೇಲಿರುವ ಕೊಳೆ ಮತ್ತು ಧೂಳು. ಸ್ವಾರ್ಥತೆಯು ಬಹುಕೆಟ್ಟದ್ದು. ಯಾವನು "ನಾನು ಮೊದಲು ತಿನ್ನುತ್ತೇನೆ. ನಾನು ಮೊದಲು ಎಲ್ಲರಿಗಿಂತಲೂ ಐಶ್ವರ್ಯವಂತನಾಗುತ್ತೇನೆ. ನಾನು

ಮೊದಲು ಎಲ್ಲರಿಗಿಂತಲೂ ಮುಕ್ತಿ ಪಡೆಯುತ್ತೇನೆ" ಎನ್ನುವನೋ ಅವನೇ ಸ್ವಾರ್ಥಿಯು. ಯಾವನು "ಮುಕ್ತಿಯನ್ನು ಪಡೆಯುವುದರಲ್ಲಿ ನಾನೇ ಕೊನೆಯವನಾಗಿರುತ್ತೇನೆ. ನನ್ನ ಸಹೋದರರಿಗೆ ಅನುಕೂಲವಾಗುವ ಸಂದರ್ಭದಲ್ಲಿ ನಾನು ನರಕಕ್ಕೆ ಹೋಗಲೂ ಸಿದ್ಧನಿದ್ದೇನೆ" ಎಂದು ಹೇಳುವನೋ ಅವನು ಶಿವನ ಪ್ರೀತಿಗೆ ಪಾತ್ರನಾಗುತ್ತಾನೆ.

o o o o o

ಜೀವನದಲ್ಲಿ ವೈವಿಧ್ಯವಿರಬೇಕು. ವೈವಿಧ್ಯವೇ ಜೀವನದ ಸಾರ. ವೈವಿಧ್ಯ ಇಲ್ಲದಿದ್ದಲ್ಲಿ ಸೃಷ್ಟಿಯೇ ಅಂತ್ಯವಾಗುವುದು. ವೈವಿಧ್ಯದಿಂದ ನಾವು ಪರಸ್ಪರ ಕಚ್ಚಾಟವಾಡಬಾರದು. ನಿನ್ನ ದಾರಿಯು ನಿನಗೆ ಬಹಳ ಒಳ್ಳೆಯದಾಗಿರಬಹುದು. ಆದರೆ ನನಗೆ ಅದು ಸರಿಬೀಳದಿರಬಹುದು. ನನ್ನ ದಾರಿಯು ನನಗೆ ಒಳ್ಳೆಯದು ಆದರೆ ನಿನಗಿರದಿರಬಹುದು ಆದುದರಿಂದ ನಮ್ಮ ಇಷ್ಟವನ್ನು ನಾವು ಇನ್ನೊಬ್ಬರ ಮೇಲೆ ಬಲವಂತವಾಗಿ ಹೇರಲು ಹೊರಡಬಾರದು.

o o o o o

ಬಹುಕಾಲದಿಂದಲೂ ನಾವುಗಳು ಬಹು ಅಸೂಯೆಯಿಂದ ಕೂಡಿದ್ದೇವೆ. ಒಬ್ಬನನ್ನು ಕಂಡರೆ ಇನ್ನೊಬ್ಬನು ಅಸೂಯೆ ಪಡುತ್ತಾನೆ. ಒಬ್ಬನು ಪ್ರವರ್ಧಮಾನಕ್ಕೆ ಬಂದರೆ ನಾವು ಆ ರೀತಿ ಆಗಲಿಲ್ಲವಲ್ಲಾ ಎಂದು ಪೇಚಾಡುತ್ತೇವೆ. ದೇವರನ್ನು ಪೂಜಿಸುವುದರಲ್ಲಿಯೂ ಮೊದಲನೆಯ ಸ್ಥಾನವನ್ನಪೇಕ್ಷಿಸುತ್ತೇವೆ. ಈ ರೀತಿ ನಾವು ಸಂಪೂರ್ಣವಾಗಿ ಗುಲಾಮರಾಗಿ ಬಿಟ್ಟಿದ್ದೇವೆ. ಇದು ನಮ್ಮಿಂದ ತೊಲಗಬೇಕು. ಭಾರತದಲ್ಲಿ ಇಂದಿನ ಪರಿಸ್ಥಿತಿಯಲ್ಲಿ ಯಾವುದಾದರೊಂದು ಮಹಾಪಾಪಾತ್ಮಕವಾದುದಿದ್ದೇ ಆದರೆ ಅದು ಈ ಗುಲಾಮತನ. ಪ್ರತಿಯೊಬ್ಬನೂ ಅರಸನಾಗಲು ಅಪೇಕ್ಷಿಸುತ್ತಾನೆಯೇ ವಿನಹ ಯಾವನೂ ಆಳಾಗಲು ಇಷ್ಟಪಡುವುದಿಲ್ಲ. ಮೊದಲು ವಿಧೇಯರಾಗುವುದನ್ನು ಕಲಿಯಿರಿ. ವಿಧಿಸುವುದು ತಾನಾಗಿಯೇ ಬರುವುದು. ಮೊದಲು ಆಳಾಗುವುದನ್ನು ಕಲಿಯಿರಿ. ಅನಂತರ ಅರಸನಾಗುವುದು ಬರುವುದು. ಆದುದರಿಂದ ಈ ಅಸೂಯೆಪಡುವುದನ್ನು ಬಿಡಿ. ಅನಂತರ ಮಾಡಲಿರುವ ಮಹಾತ್ಕಾರ್ಯಗಳನ್ನು ಮಾಡುವಿರಿ. ನಮ್ಮ ಹಿರಿಯರು ಆಶ್ಚರ್ಯಕರವಾದ ಕಾರ್ಯಗಳನ್ನು ಮಾಡಿದರು. ಇವರು ಸಾಧಿಸಿದ

ಕಾರ್ಯಗಳೆಡೆಗೆ ನಾವು ತುಂಬಾ ಹೆಮ್ಮೆಯಿಂದ ನೋಡುತ್ತೇವೆ. ನಾವು ಕೂಡ ಸಾಧಿಸುವ ಕಾರ್ಯಗಳು ಬಹಳ ಇವೆ. ಅದನ್ನು ಸಾಧಿಸುವ ಮುಂದಿನ ಪೀಳಿಗೆಯು ನಮ್ಮೆಡೆಗೆ ಹೆಮ್ಮೆಯಿಂದ ನಮ್ಮ ಪಿತೃಗಳಿವರು ಎಂದು ನೋಡಲಿ. ದೇವರ ಆಶೀರ್ವಾದದಿಂದ ನಮ್ಮ ಪಿತೃಗಳಿಗಿಂತ ನಾವು ದೊಡ್ಡ ದೊಡ್ಡ ಕಾರ್ಯಗಳನ್ನು ಮಾಡುವ.

o o o o o

ಸೃಷ್ಟಿಕರ್ತನಾರು? ದೇವರು. ಆತನು ನಿತ್ಯನು. ನಿತ್ಯ ಪರಿಶುದ್ಧನು. ಯಾವಾಗಲೂ ಎಚ್ಚರದಿಂದಿರುವನು. ಸರ್ವಶಕ್ತನು, ಸರ್ವಜ್ಞನು, ಕರುಣಾನಿಧಿ, ನಿರಾಕಾರನು, ವಿಭಜಿಸಲಸಾಧ್ಯನು. ಆತನೇ ಈ ಸೃಷ್ಟಿಕರ್ತನು. ಯಾವಾಗಲೂ ಆತನೇ ಸೃಷ್ಟಿಸಿ ತನ್ನ ಅಧೀನದಲ್ಲಿಟ್ಟುಕೊಂಡಿದ್ದ ಪಕ್ಷದಲ್ಲಿ, ಎರಡು ಸಮಸ್ಯೆಗಳು ನಮ್ಮನ್ನು ಕಾಡುತ್ತವೆ. ನಾವು ಈ ಲೋಕದಲ್ಲಿ ಬೇಧವಿರುವುದನ್ನು ಕಾಣುತ್ತೇವೆ. ಒಬ್ಬನು ಸುಖದಲ್ಲಿ ಹುಟ್ಟುತ್ತಾನೆ. ಮತ್ತೊಬ್ಬನು ಕಷ್ಟದಲ್ಲಿ ಜನಿಸುತ್ತಾನೆ. ಒಬ್ಬನು ಧನಿಕನಾಗಿ ಜನಿಸುತ್ತಾನೆ. ಮತ್ತೊಬ್ಬನು ದರಿದ್ರನಾಗಿ ಜನಿಸುತ್ತಾನೆ. ಇದು ಭೇದವನ್ನು ನಮಗೆ ತೋರಿಸುತ್ತದೆ. ಅನಂತರ ಈ ಲೋಕದಲ್ಲಿ ಕ್ರೌರ್ಯವಿರುವುದನ್ನು ಕಾಣುತ್ತೇವೆ. ಒಂದು ಪ್ರಾಣಿಯು ಇನ್ನೊಂದು ಪ್ರಾಣಿಯನ್ನು ಕೊಂದು ಹರಿದು ಚೂರು ಚೂರು ಮಾಡುತ್ತದೆ. ಅದೇ ರೀತಿಯಾಗಿ ಪ್ರತಿಯೊಬ್ಬನೂ ತನ್ನ ಇನ್ನೊಬ್ಬ ಸಹೋದರನಿಗಿಂತಲೂ ಮೇಲೆ ಬರುವುದಕ್ಕೆ ಪ್ರಯತ್ನಿಸುತ್ತಾನೆ. ಈ ರೀತಿ ನಮ್ಮ ಲೋಕದಲ್ಲಿ ಪ್ರತಿಸ್ಪರ್ಧೆ, ಕ್ರೌರ್ಯ, ರೌದ್ರತೆ, ಮತ್ತು ಹೃದಯವಿದ್ರಾವಕವಾದ ದೃಶ್ಯಗಳನ್ನು ಹಗಲಿರುಳು ನಾವು ಕಾಣುತ್ತೇವೆ. ದೇವರ ಸೃಷ್ಟಿಯು ಇಂತಹದ್ದಾದರೆ ಆ ದೇವರು ದೆವ್ವಗಳಿಗಿಂತ ಕಡೆಯೇ ಸರಿ.

ಈ ಭೇದವಿರುವುದೂ, ಈ ಪ್ರತಿಸ್ಪರ್ಧೆಯಿರುವುದೂ, ದೇವರ ತಪ್ಪಲ್ಲ. ಹಾಗೆಂದರೆ ಇದನ್ನು ಮಾಡಿದವರಾರು? ನಾವೇ. ಗಗನಮಾರ್ಗದಲ್ಲಿ ಮೋಡವು ಬಂದು ಮಳೆಯನ್ನು ಎಲ್ಲಾ ಹೊಲಗಳ ಮೇಲೂ ಸುರಿಸುತ್ತದೆ. ಯಾವ ಭೂಮಿಯನ್ನು ಚೆನ್ನಾಗಿ ಹದಮಾಡುತ್ತಾರೋ ಆ ಭೂಮಿಗೆ ಅನುಕೂಲವಾಗುತ್ತದೆ. ಯಾವ ಭೂಮಿ ಹದಮಾಡಲ್ಪಟ್ಟಿಲ್ಲವೋ ಆ ಭೂಮಿಗೆ ಅನುಕೂಲವಾಗುವುದಿಲ್ಲ. ಅದೇ ರೀತಿಯಾಗಿ ದೇವರ ದಯೆಯು

ನಿತ್ಯವು ಮತ್ತು ಅಚ್ಚಳಿಯದ್ದು. ಆದರೆ ನಾವೇ ಭೇದವನ್ನು ನಮ್ಮ ಮಧ್ಯೆ ತಂದು ಹಾಕಿಕೊಳ್ಳುತ್ತೇವೆ.

o o o o o

ಪ್ರೀತಿಯೆನ್ನುವ ವಸ್ತುವು ಕೊಂಡು ತೆಗೆದುಕೊಳ್ಳುವ ವಸ್ತುವಲ್ಲ. ಪ್ರತಿಫಲವನ್ನಪೇಕ್ಷಿಸದೆ ಎಲ್ಲಿ ಪ್ರೀತಿಸುತ್ತೇವೆಯೋ ಅಲ್ಲಿ ಪ್ರೀತಿಯಿರುವುದಿಲ್ಲ. ಅದು ಕೇವಲ ಮಾರಾಟದ ವಸ್ತುವಾಗುತ್ತದೆ. ಯಾರು ದೇವರನ್ನು ನಿಜವಾದ ಪ್ರೀತಿಯಿಂದ ಪ್ರೀತಿಸದೆ ಪ್ರತಿಫಲಕ್ಕಾಗಿಯೇ ಪ್ರೀತಿಸುತ್ತಾರೋ ಅದು ಖಂಡಿತವಾಗಿಯೂ ಶುದ್ಧವಾದ ಪ್ರೀತಿಯಲ್ಲ. ನಿಜವಾದ ಭಕ್ತನು ಪರಮಾತ್ಮನನ್ನು ಪ್ರೀತಿಗಾಗಿ ಪ್ರೀತಿಸುತ್ತಾನೆಯೇ ಹೊರತು ಯಾವುದೇ ಇಷ್ಟಾರ್ಥ ಸಿದ್ಧಿಗಾಗಿ ಅಲ್ಲ.

ಒಂದು ಸಾರಿ ಒಬ್ಬ ಮಹಾರಾಜನು ಒಂದು ಕಾಡಿಗೆ ಬೇಟೆಗಾಗಿ ಹೋಗಿದ್ದನು. ಅವನು ಅಲ್ಲಿ ಒಬ್ಬ ಋಷಿಯನ್ನು ಭೇಟಿಯಾದನು. ಆ ಋಷಿಯ ಪವಿತ್ರತೆಯನ್ನೂ, ಜ್ಞಾನವನ್ನೂ ಕಂಡು ರಾಜನಿಗೆ ತುಂಬಾ ಸಂತೋಷವಾಯಿತು. ಆಗ ಆ ದೊರೆಯು ಆ ಋಷಿಗೆ ಒಂದು ಉಡುಗೊರೆಯನ್ನು ನೀಡಿ, ದಯವಿಟ್ಟು ಇದನ್ನು ಸ್ವೀಕರಿಸಿ ತನ್ನನ್ನು ಸಂತೋಷಗೊಳಿಸಬೇಕೆಂಬುದಾಗಿ ಬೇಡಿಕೊಂಡನು. ಆದರೆ ಆ ಋಷಿಯು ಅದನ್ನು ತಿರಸ್ಕರಿಸಿ ಹೀಗೆ ಹೇಳಿದನು: "ಈ ಕಾಡಿನ ಹಣ್ಣು ಹಂಪಲುಗಳೇ ನನಗೆ ಸಾಕಷ್ಟು ಆಹಾರವಾಗಿದೆ. ಪರ್ವತಗಳ ಮೇಲಿಂದ ಹರಿದು ಬರುವ ಶುದ್ಧವಾದ ನೀರೇ ನನಗೆ ಸಾಕಷ್ಟಾಗಿದೆ. ಮರದ ಕೊಂಬೆಗಳೇ ನನಗೆ ತಣ್ಣೆಳಲನ್ನು ಕೊಡುತ್ತವೆ ಮತ್ತು ಪರ್ವತಗಳಲ್ಲಿರುವ ಗುಹೆಗಳೇ ನನ್ನ ಮನೆಯಾಗಿರುತ್ತದೆ. ಆದುದರಿಂದ ನಿನ್ನಿಂದಲೇ ಆಗಲೀ, ಯಾರಿಂದಲೇ ಆಗಲೀ ನಾನು ಉಡುಗೊರೆಗಳನ್ನೇಕೆ ಸ್ವೀಕರಿಸಬೇಕು?" ಆಗ ಆ ದೊರೆಯು "ಓ! ಋಷಿಗಳೇ, ನನಗೆ ಸಂತೋಷವಾಗಲಿಕ್ಕಾಗಿ ದಯವಿಟ್ಟು ಸ್ವಲ್ಪವಾದರೂ ತೆಗೆದುಕೊಳ್ಳಿ ಮತ್ತು ದಯಮಾಡಿ ನನ್ನ ಊರಿಗೂ ಮತ್ತು ಅರಮನೆಗೂ ನನ್ನೊಡನೆ ಒಮ್ಮೆಯಾದರೂ ಬನ್ನಿ" ಎಂದನು. ಬಹಳ ಬಲವಂತ ಮಾಡಿದನಂತರ ಆ ಋಷಿಯು ದೊರೆಯ ಮಾತಿಗೆ ಒಪ್ಪಿದನು. ದೊರೆಯು ಸಂತೋಷದಿಂದ ಆ ಉಡುಗೊರೆಯನ್ನು ಕೊಡುವುದಕ್ಕಿಂತ ಮುಂಚಿತವಾಗಿ ಈ ರೀತಿ ಪ್ರಾರ್ಥಿಸಿದನು: "ಓ!

ದೇವರೇ, ನನಗೆ ತುಂಬಾ ಮಕ್ಕಳನ್ನು ಕೊಡು. ದೇವರೇ, ನನಗೆ ಅತುಳವಾದ ಐಶ್ವರ್ಯವನ್ನು ಕೊಡು. ದೇವರೇ, ನನಗೆ ವಿಸ್ತಾರವಾದ ರಾಜ್ಯವನ್ನು ಕೊಡು. ದೇವರೇ, ನನ್ನ ದೇಹಾರೋಗ್ಯವನ್ನು ಇನ್ನೂ ಚೆನ್ನಾಗಿ ಇಡು." ಮುಂತಾಗಿ ಪ್ರಾರ್ಥಿಸ ತೊಡಗಿದನು. ದೊರೆಯು ತನ್ನ ಪ್ರಾರ್ಥನೆಯನ್ನು ಮುಗಿಸುವುದರೊಳಗೆ ಋಷಿಯು ಎದ್ದು ಶಾಂತವಾಗಿ ಹೊರಟು ಹೋದನು. ಕೂಡಲೇ, ಇದನ್ನು ಕಂಡು ರಾಜನು ಚಕಿತನಾಗಿ "ಸ್ವಾಮಿ, ನೀವು ಹೊರಟುಹೋಗುತ್ತಿದ್ದೀರಿ. ತಾವು ನನ್ನ ಉಡುಗೊರೆಯನ್ನು ಸ್ವೀಕರಿಸಲೇ ಇಲ್ಲವಲ್ಲಾ?" ಎಂಬುದಾಗಿ ಜೋರಾಗಿ ಕೂಗಿಕೊಂಡು, ಆ ಋಷಿಯನ್ನೇ ಹಿಂಬಾಲಿಸಿದನು. ಕೂಡಲೇ ಆ ಋಷಿಯು ಹಿಂದಿರುಗಿ "ನಾನು ಭಿಕ್ಷುಕರ ಬಳಿ ಭಿಕ್ಷೆಬೇಡಲು ಇಚ್ಛೆಪಡುವುದಿಲ್ಲ. ನೀನೇ ಒಬ್ಬ ಭಿಕ್ಷುಕನಾಗಿರುವಾಗ, ನನಗೆ ನೀನು ಏನನ್ನು ಕೊಡಬಲ್ಲೆ? ನಿನ್ನಂತಹ ಭಿಕ್ಷುಕನಿಂದ ಭಿಕ್ಷೆಯನ್ನು ಸ್ವೀಕರಿಸುವಷ್ಟು ಹುಚ್ಚನಲ್ಲ ನಾನು. ನನ್ನಿಂದ ದೂರ ತೊಲಗು. ನನ್ನನ್ನು ಹಿಂಬಾಲಿಸಬೇಡ" ಎಂದನು.

o o o o o

ಯಾರು ಪರಮಾತ್ಮನನ್ನು ಆತನಿಗೆ ಹೆದರಿ ಪ್ರೀತಿಸುತ್ತಾರೋ ಅವರು ಮನುಷ್ಯತ್ವವನ್ನು ಪರಿಪೂರ್ಣವಾಗಿ ಪಡೆದವರಲ್ಲ. ಅವರ ದೃಷ್ಟಿಯಲ್ಲಿ ಆ ಪರಮಾತ್ಮನು ಕೈಯಲ್ಲಿ ಒಂದು ಚಾವಟಿಯನ್ನು ಹಿಡಿದು ನಿಂತಿರುವ ಮಹಾವ್ಯಕ್ತಿ. ಇಂತಹ ಮಹಾವ್ಯಕ್ತಿಯನ್ನು ಪ್ರೀತಿಸದಿದ್ದರೆ ಶಿಕ್ಷೆಯಾಗಬಹುದು -- ಚಾವಟಿಯ ಏಟು ಬೀಳಬಹುದು ಎಂಬ ಭಯ ಭೀತಿಗಳಿಂದ ಪೂಜಿಸುತ್ತಾರೆ. ಎಲ್ಲಿಯ ವರೆಗೆ ಹೃದಯದಲ್ಲಿ ಭಯ ಇರುತ್ತದೆಯೋ ಅಲ್ಲಿಯ ವರೆಗೆ ಪ್ರೀತಿಯು ಹೇಗೆ ಬಂದೀತು? ಓರ್ವ ಹೆಂಗಸು ರಸ್ತೆಯಲ್ಲಿ ಹೋಗುತ್ತಿರುವಾಗ ಒಂದು ನಾಯಿಯು ಆವಳನ್ನು ಕಂಡು ಬಗುಳಿತು ಎಂದು ಇಟ್ಟುಕೊಳ್ಳೋಣ. ಆಗ ಆಕೆಯು ಹೆದರಿ ರಸ್ತೆಯ ಪಕ್ಕದಲ್ಲಿರುವ ಒಂದು ಮನೆಯೊಳಗೆ ಓಡಿಹೋಗುತ್ತಾಳೆ. ಆದರೆ, ಮಾರನೆಯ ದಿನ ಅದೇ ಹೆಂಗಸು ತನ್ನ ಮಗುವಿನೊಡನೆ ರಸ್ತೆಯಲ್ಲಿ ಹೋಗುತ್ತಿದ್ದಾಳೆ ಎನ್ನೋಣ. ಆಗ ಒಂದು ಸಿಂಹ ಅವಳ ಮಗುವಿನ ಮೇಲೆ ಹಾರುತ್ತದೆ. ಈಗ ಆಕೆಯ ಸ್ಥಿತಿಯೇನು? ಏನೂ ಇಲ್ಲ. ತನ್ನ ಮುದ್ದು ಮಗುವನ್ನು ಕಾಪಾಡಲು ಅಂಜಿಕೆಯನ್ನೆಲ್ಲಾ ಮರೆತುಬಿಡುತ್ತಾಳೆ.

ಆ ರೀತಿ ಮಗುವಿನ ಮೇಲಿನ ಮಮತೆಯು ಹೆದರಿಕೆಯನ್ನು ಹೋಗಲಾಡಿಸುತ್ತದೆ. ಸ್ವಾರ್ಥತೆಯಿಂದಲೇ ಅಂಜಿಕೆಯು ಬರುವುದು. ನಾವು ಎಷ್ಟು ಸ್ವಾರ್ಥಿಗಳಾಗುತ್ತೇವೆಯೋ ಅಷ್ಟೂ ಅಷ್ಟು ಅಂಜಿಕೆಯು ನಮ್ಮಲ್ಲುಂಟಾಗುತ್ತದೆ. ಯಾವನು ತಾನು ಕೆಲಸಕ್ಕೆ ಬಾರದವನೆಂದು ತನ್ನ ವಿಷಯದಲ್ಲಿ ತಿಳಿದುಕೊಳ್ಳುವನೋ ಅವನಲ್ಲಿ ಈ ಅಂಜಿಕೆಯು ಬೇರೂರುತ್ತದೆ. ಯಾವನು ಈ ರೀತಿ ತಿಳಿದುಕೊಳ್ಳುವುದಿಲ್ಲವೋ ಅವನಲ್ಲಿ ಅಂಜಿಕೆಯು ಕಡಿಮೆಯಾಗುತ್ತದೆ.

o o o o o

ಮೊದಲು ನಾವು ನಮ್ಮ ಧ್ಯೇಯವನ್ನು ಅರ್ಥಮಾಡಿಕೊಳ್ಳಬೇಕು. ನಿಮ್ಮಲ್ಲಿ ಯಾರ್‍ಯಾರು ಸನ್ಯಾಸಿಗಳಾಗಿದ್ದೀರೋ ಅವರು ಪರೋಪಕಾರವನ್ನು ಮಾಡಬೇಕು. ಸನ್ಯಾಸವೆಂದರೆ ಅದೇ ಅರ್ಥ. ಇದರ ವಿಷಯವಾಗಿ ನನಗೆ ಸುಧೀರ್ಘವಾಗಿ ಭಾಷಣಮಾಡಲು ಸಮಯವಿಲ್ಲ. ಆದರೂ ಸ್ಥೂಲವಾಗಿ ಹೇಳುತ್ತೇನೆ. ತ್ಯಾಗವೆಂದರೆ 'ಮರಣವನ್ನು ಇಚ್ಛಿಸುವುದು'. ಪ್ರಾಪಂಚಿಕ ವಿಷಯಾಸಕ್ತರು ಜೀವನವನ್ನು ಬಯಸುತ್ತಾರೆ. ಸನ್ಯಾಸಿಯು ಮರಣವನ್ನು ಬಯಸುತ್ತಾನೆ. ಹಾಗಾದರೆ ನಾವು ಆತ್ಮಹತ್ಯೆಮಾಡಿಕೊಳ್ಳಬೇಕೇ? ಹಾಗಲ್ಲ. ಏಕೆಂದರೆ, ಆತ್ಮಹತ್ಯೆಮಾಡಿಕೊಳ್ಳುವುದು ಮರಣವನ್ನು ಅಪೇಕ್ಷಿಸಿದಂತಲ್ಲ. ಎಷ್ಟೋ ಸಂದರ್ಭಗಳಲ್ಲಿ ಆತ್ಮಹತ್ಯೆ ಮಾಡಿಕೊಳ್ಳುವವರು ಪರಾಜಯವನ್ನನುಭವಿಸಿದ್ದಾರೆ. ಅವರು ಪುನಃ ಎರಡನೆಯ ಬಾರಿಯೂ ಆ ಉದ್ಯಮಕ್ಕೆ ಕೈಹಾಕಿಲ್ಲ. ಹಾಗೆಂದ ಮೇಲೆ ಮರಣವನ್ನು ಪ್ರೀತಿಸುವುದೆಂದರೇನು? ನಾವು ಮೃತರಾಗುವುದು ಶತಸಿದ್ಧ. ಹಾಗೆಂದ ಮೇಲೆ ಒಂದು ಒಳ್ಳೆಯ ಕಾರ್ಯಕ್ಕಾಗಿ ಸಾಯಬೇಕು. ನಮ್ಮ ನಡೆನುಡಿಗಳು, ತಿನ್ನುವುದು, ಕುಡಿಯುವುದು ಸರ್ವಸ್ವವೂ ನಮ್ಮ ಸ್ವಾರ್ಥತ್ಯಾಗದೆಡೆ ಧಾವಿಸಲಿ. ನೀವು ಚೆನ್ನಾಗಿ ತಿಂದು ದೇಹವನ್ನು ಬೆಳೆಯಿಸುತ್ತೀರಿ. ಆ ಬೆಳೆದ ದೇಹವು ಪರೋಪಕಾರಕ್ಕಾಗಿ ಇಲ್ಲದಿದ್ದರೆ ಏನು ಪ್ರಯೋಜನ? ನೀವು ನಾನಾ ಪುಸ್ತಕಗಳನ್ನು ಓದಿ ಜ್ಞಾನಾರ್ಜನೆ ಮಾಡುತ್ತೀರಿ. ಆ ರೀತಿ ಅರ್ಜಿಸಿದ ಜ್ಞಾನವು ಪರೋಪಕಾರಕ್ಕಾಗಿ ಅಲ್ಲದಿದ್ದರೆ ಏನು ಪ್ರಯೋಜನ? ಆದುದರಿಂದ ಸುಖವನ್ನೆಲ್ಲಾ ನೀನೇ ಆಕ್ರಮಿಸುವುದರ ಬದಲು ಅದನ್ನು ನಿನ್ನ ಕೋಟ್ಯಾಂತರ ಸಹೋದರ

ಸಹೋದರಿಯರಿಗೆ ನೀಡುವುದು ನಿನ್ನ ಕರ್ತವ್ಯ. ಆ ರೀತಿಯಲ್ಲಿ ನಾವು ಕಾಲಕ್ರಮೇಣ ಮೃತ್ಯುದೇವತೆಯನ್ನಪ್ಪಬೇಕು. ಅಂತಹ ಮೃತ್ಯು ಪಡೆದವರಿಗೇ ಈ ಮೋಕ್ಷಪ್ರಾಪ್ತಿಯು.

o o o o o

ಅಮೆರಿಕನರು ನಮಗಿಂತಲೂ ವೇದಾಂತವನ್ನು ಜೀವನದಲ್ಲಿ ಉತ್ತಮವಾಗಿ ಆಚರಿಸುವವರೆಂದು ನಾನು ನಿಮಗೆ ಹೇಳಿದರೆ ಅತ್ಯಾಶ್ಚರ್ಯಕರವಾಗಬಹುದು. ನಾನು ನ್ಯೂಯಾರ್ಕಿನ ಸಮುದ್ರದ ದಡದ ಮೇಲೆ ತಳ್ಳಿಯಲ್ಪಟ್ಟ, ಕೆಳಗೆ ಬಿದ್ದು ಒದ್ದಾಡುವ, ನಿರಾಶರಾದ, ಮನುಷ್ಯನ ಮುಖಕ್ಕೆ ಮುಖವನ್ನು ಕೊಡಲು ಅಶಕ್ತರಾದ, ಕೈಯಲ್ಲಿ ಹರಿದ ಛಿದ್ರಛಿದ್ರವಾದ ಬಟ್ಟೆಯ ಗಂಟುಗಳನ್ನು ಹಿಡಿದುಬಂದ ನಿರಾಶ್ರಿತರಾದ, ವಲಸೆಗಾರರನ್ನು ನೋಡುತ್ತಿದ್ದೆ. ಪೋಲಿಸರನ್ನು ಕಂಡರೆ ಬೆದರಿ ಬೇರೆ ದಾರಿಯನ್ನು ಅವರು ಹಿಡಿಯುತ್ತಿದ್ದರು. ಆದರೆ ಕೇವಲ ಆರೇ ಆರು ತಿಂಗಳಲ್ಲಿ ಅದೇ ಜನಗಳು ರಸ್ತೆಯಲ್ಲಿ ತಲೆಯೆತ್ತಿಕೊಂಡು, ಒಳ್ಳೆಯ ಬಟ್ಟೆಯನ್ನು ಧರಿಸಿಕೊಂಡು ಎಲ್ಲರನ್ನೂ ನೋಡುತ್ತಾ ಠೀವಿಯಿಂದ ಹೋಗುತ್ತಿದ್ದರು. ಇಂತಹ ಬದಲಾವಣೆಯಾಗಲು ಕಾರಣವೇನು? ಈ ಮಾನವರು ಆರ್ಮೇನಿಯದಿಂದಲೋ ಎಲ್ಲಿಂದಲೋ ಬಂದವರು. ಅಲ್ಲಿ ಅವರ ಯೋಗ್ಯತೆಯನ್ನು ತಿಳಿದುಕೊಳ್ಳದೆ ಪ್ರತಿಯೊಬ್ಬರೂ "ನೀವು ಹುಟ್ಟುಗುಲಾಮರು. ನೀವು ಸಮಾಜದಲ್ಲಿ ಮೇಲೇರಲಾರದೆ, ಇರುವ ಮಟ್ಟದಲ್ಲಿಯೇ ಇರಬೇಕಾದವರು" ಎಂದರು. "ನೀವು ಗುಲಾಮರು. ಗುಲಾಮರು ಗುಲಾಮರಾಗಿಯೇ ಉಳಿಯಿರಿ. ನೀವು ಅಪ್ರಯೋಜಕರಾಗಿ ಹುಟ್ಟಿದ್ದೀರಿ. ಅಪ್ರಯೋಜಕರಾಗಿಯೇ ಉಳಿಯಿರಿ" ಎಂದು ಎಲ್ಲರೂ ಉಗುಳಿದರು. ಅಂತಹ ನಿರ್ಗತಿಕರ ಸುತ್ತಲೂ ಸುಳಿಯುವ ಗಾಳಿಯೂ ಕೂಡ "ನಿಮಗೆ ಉಳಿಗಾಲವಿಲ್ಲ. ಗುಲಾಮರಾಗಿಯೂ, ಅಪ್ರಯೋಜಕರಾಗಿಯೂ ನೀವು ಇರಲೇಬೇಕು" ಎಂದು ಉಸಿರಿತು. ಆದರೆ, ಪಾತಾಳಕ್ಕೆ ತುಳಿಯಲ್ಪಟ್ಟ ಈ ಮಾನವರು ನ್ಯೂಯಾರ್ಕಿಗೆ ಬಂದಿಳಿದ ಕೂಡಲೇ, ಒಬ್ಬ ಒಳ್ಳೆಯ ಉಡುಪನ್ನು ಧರಿಸಿದ್ದ ಅಮೆರಿಕದ ಸಭ್ಯಸ್ತನು ಆ ನಿರ್ಗತಿಕರ ಚಿಂದಿಯ ಬಟ್ಟೆಯನ್ನು ಗಣಿಸದೆ ಹಸ್ತಲಾಘವವನ್ನಿತ್ತನು. ಅನಂತರ ಆ ಮಾನವನು ಒಂದು ಹೊಟೇಲಿಗೆ ಹೋದನು. ಅಲ್ಲಿಯೂ ಆತನಿಗೆ ಸಮಾನತೆ ದೊರೆಯಿತು. ಕೊನೆಗೆ ಅವನು ಮಾನವ

ತಲ್ಲೊಬ್ಬ ಮಾನವನಾದನು. ಬಹುಶಃ ಅದೇ ಮಾನವನು ವಾಷಿಂಗ್ಟನ್ನಿಗೆ ಹೋಗಿ ಅಲ್ಲಿ ಅಮೇರಿಕದ ಅಧ್ಯಕ್ಷನಿಗೆ ಹಸ್ತಲಾಘವವನ್ನಿತ್ತಿರಬಹುದು.

o o o o o

ನಮ್ಮ ವಿದ್ಯಾಭ್ಯಾಸಕ್ರಮದಲ್ಲಿ ನಮ್ಮ ರಾಷ್ಟ್ರದ ಆಧ್ಯಾತ್ಮಿಕ ಮತ್ತು ಜಾತ್ಯಾತೀತವಾದ ಅಭ್ಯಾಸವೂ ಕೂಡಬೇಕು. ಈ ವಿಷಯವನ್ನು ನೀವು ಚೆನ್ನಾಗಿ ಮನನಪಟ್ಟುಮಾಡಿಕೊಳ್ಳಬೇಕು. ಇದನ್ನು ನೀವು ಕನಸುಕಾಣಬೇಕು. ಇದನ್ನೇ ನೀವು ಮಾತನಾಡಬೇಕು. ಇದನ್ನೇ ನೀವು ಯೋಚಿಸುತ್ತಾ ಇದಕ್ಕಾಗಿಯೇ ಶ್ರಮಿಸಬೇಕ . ಇಲ್ಲವಾದರೆ ನಮ್ಮ ಜನಾಂಗಕ್ಕೆ ಮುಕ್ತಿಯೇ ಇಲ್ಲ. ಈಗ ನೀವು ಪಡೆಯುತ್ತಿರುವ ವಿದ್ಯಾಭ್ಯಾಸಕ್ರಮದಲ್ಲಿ ಕೆಲವು ಒಳ್ಳೆಯ ಅಂಶಗಳಿವೆ. ಆದರೆ ಅದರಲ್ಲಿ ಬಹುವಾಗಿ ನಮಗೆ ಅನಾನುಕೂಲಗಳಿವೆ. ಮೊದಲನೆಯದಾಗಿ ಅದು ಮನುಷ್ಯನನ್ನು ಮನುಷ್ಯನನ್ನಾಗಿ ಮಾಡುವ ವಿದ್ಯಾಭ್ಯಾಸವಲ್ಲ. ಅದು ವಿದ್ಯಾಭ್ಯಾಸ ಎಂಬುದಕ್ಕೆ ಸಂಪೂರ್ಣವಿರುದ್ಧವಾಗಿದೆ. ಮಗುವನ್ನು ಪಾಠಶಾಲೆಗೆ ಸೇರಿಸಿದ ಕೂಡಲೇ ಆ ಮಗುವು ಅಲ್ಲಿ ಮೊದಲನೆಯದಾಗಿ ಕಲಿಯುವುದು ತನ್ನ ತಂದೆಯು ಒಬ್ಬ ಹುಚ್ಚನೆಂಬುದಾಗಿ, ಎರಡನೆಯದಾಗಿ ತನ್ನ ಅಜ್ಜನು ಒಬ್ಬ ಹುಚ್ಚನೆಂಬುದಾಗಿ, ಮೂರನೆಯದಾಗಿ ತನ್ನ ಅಧ್ಯಾಪಕರೆಲ್ಲರೂ ಮೋಸಗಾರರೆಂಬುದಾಗಿ, ನಾಲ್ಕನೆಯದಾಗಿ ತನ್ನ ಎಲ್ಲಾ ಪವಿತ್ರಗ್ರಂಥಗಳೂ ಮಿಥ್ಯವೆಂಬುದಾಗಿ. ಆ ಮಗುವು ಹದಿನಾರನೇ ಪ್ರಾಯಕ್ಕೆ ಬರುವುದರೊಳಗಾಗಿ ಅದು ಪ್ರತೀಕದ ರಾಶಿಯಾಗಿಯೂ, ನಿಸ್ಸಾರವಾದದ್ದೂ, ಆಗಿ ಬಿಡುತ್ತದೆ. ಇದರ ಫಲವೇನೆಂದರೆ ಇಂತಹ ವಿದ್ಯಾಭ್ಯಾಸವು ಐವತ್ತು ವರುಷಗಳು ನಡೆದರೂ, ಒಬ್ಬ ಯೋಗ್ಯ ಮನುಷ್ಯನನ್ನು ತಯಾರಿಸಲಾಗುವುದಿಲ್ಲ. ನಾನಾ ವಿಷಯಗಳನ್ನು ನಿಮ್ಮ ಮಿದುಳಿಗೆ ತುರುಕಿಕೊಂಡು ಅದು ಅಲ್ಲಿ ಜೀರ್ಣವಾಗದೆ ನಿಮ್ಮ ಜೀವನ ಪರ್ಯಂತ ಹೊಲಸೆದ್ದು ಹೋಗುವುದು ವಿದ್ಯಾಭ್ಯಾಸವಲ್ಲ. ನಮ್ಮ ಜೀವನವನ್ನು ಸುಧಾರಿಸುವ, ನಮ್ಮನ್ನು ಅಣಿಗೊಳಿಸುವ, ನಮ್ಮ ಶೀಲವನ್ನು ತಿದ್ದುವ, ಅಭಿಪ್ರಾಯಗಳುಳ್ಳ ವಿದ್ಯಾಭ್ಯಾಸವು ನಮಗೆ ಬೇಕು. ಕೇವಲ ಐದೇಐದು ಒಳ್ಳೆ ವಿಷಯಗಳನ್ನು ತಿಳಿದು ಜೀರ್ಣಿಸಿಕೊಂಡು ಅದರಿಂದ ನಿಮ್ಮ ಶೀಲವನ್ನೂ, ಜೀವನವನ್ನೂ ನೀವು

ಸುಧಾರಿಸಿಕೊಂಡರೆ, ಒಂದು ದೊಡ್ಡ ಪುಸ್ತಕಭಂಡಾರದಲ್ಲಿರುವ ಪುಸ್ತಕ ಗಳನ್ನೆಲ್ಲಾ ಓದಿರುವವನಿಗಿಂತಲೂ ನೀವು ಹೆಚ್ಚು ತಿಳಿದವರಂತೆ. "ಗಂಧದ ಮರದ ಹೊರೆಯನ್ನು ಹೊತ್ತಿರುವ ಕತ್ತೆಯು ಅದರ ಭಾರವನ್ನು ಮಾತ್ರ ತಿಳಿಯುತ್ತದೆಯೇ ಹೊರತು, ಆ ಗಂಧದ ಮರದ ಯೋಗ್ಯತೆಯನ್ನಲ್ಲ." ಪುಸ್ತಕದ ವಿಷಯವೇ ವಿದ್ಯಾಭ್ಯಾಸವೆಂದಾದರೆ ಪುಸ್ತಕಭಂಡಾರದ ಪುಸ್ತಕ ಗಳೆಲ್ಲವೂ ಪ್ರಪಂಚದ ಮಹಾಋಷಿಗಳಾಗುವುವು. ಆದುದರಿಂದ ನಮ್ಮ ವಿದ್ಯಾಭ್ಯಾಸವು ಆಧ್ಯಾತ್ಮಿಕವಾಗಿರಬೇಕು.

o o o o o

ನಾನು ನನ್ನ ಜೀವನದಲ್ಲಿ ದೊಡ್ಡ ದೊಡ್ಡ ಕಾರ್ಯಗಳನ್ನು ಈಡೇರಿಸ ಬೇಕೆಂದಿರುವೆನು. ಆದರೆ ಅವುಗಳನ್ನು ನಾನು ಈಡೇರಿಸಲು ಆಗು ತ್ತದೆಯೋ ಇಲ್ಲವೋ ಹೇಳಲಾರೆ. ಮದ್ರಾಸಿನಲ್ಲಿ ಒಂದು ಹಿಂದೂ ದೇವಾ ಲಯವನ್ನು ನಾವುಗಳು ನಿರ್ಮಿಸಬೇಕು. ಈ ರೀತಿಯಾದರೆ ಎಲ್ಲಾ ಮತ ಗಳೂ ಕಚ್ಚಾಡಬಹುದು ಎಂಬುದಾಗಿ ನೀವು ಹೇಳಬಹುದು. ಆದುದರಿಂದ ಆ ದೇವಸ್ಥಾನದ ಹೆಸರನ್ನು 'ಓಂ' ಎಂಬುದಾಗಿ ಇಡೋಣ. ಇಲ್ಲಿ ಯಾವು ದಾದರೂ ಮತವು ಇದನ್ನು ಖಂಡಿಸಿದ್ದೇ ಆದರೆ ಅದು ಹಿಂದೂ ಮತಕ್ಕೆ ಸೇರಲು ಅಯೋಗ್ಯ. ಪ್ರತಿಯೊಂದು ಮತವೂ ಹಿಂದೂ ಮತಕ್ಕೆ ಸರಿ ಯಾಗಿ ತಮ್ಮ ತಮ್ಮ ಮತ ಧರ್ಮಗಳನ್ನು ಸುಧಾರಿಸಿಕೊಳ್ಳಲು ಹಕ್ಕಿದೆ. ಆದರೆ ನಾವು ಹಿಂದೂ ದೇವಾಲಯವೊಂದನ್ನು ಹೊಂದಲೇ ಬೇಕು. ಇಲ್ಲಿ ಪ್ರತಿಯೊಬ್ಬ ಹಿಂದುವೂ ಬಂದು ಜಗಳವಾಡದೆ ತಮ್ಮ ತಮ್ಮ ಮತಗಳ ಸಾರವನ್ನು ಹೇಳಬಹುದು. ಈ ದೇವಾಲಯಕ್ಕೆ ಸಂಬಂಧಪಟ್ಟಂತೆ ಉಪದೇಶ ಕರ ತಂಡವೊಂದನ್ನು ತಯಾರು ಮಾಡಲು ಒಂದು ತರಬೇತಿನ ಸಂಘವೂ ಆಗಬೇಕು. ಈ ಬೋಧಕರು ದೇಶದ ಎಲ್ಲಾ ಭಾಗಗಳಲ್ಲಿಯೂ ಸಂಚರಿಸಿ ಎಲ್ಲೆಡೆಯೂ ಇಂತಹ ದೇಗುಲಗಳನ್ನು ನಿರ್ಮಿಸಬೇಕು. ಇವುಗಳಿಗೆಲ್ಲಾ ಹಣವೆಲ್ಲಿದೆ ಎಂದು ನೀವು ನನ್ನನ್ನು ಪ್ರಶ್ನಿಸಬಹುದು. ಇದಕ್ಕೆ ಹಣ ಬೇಕಾಗಿಲ್ಲ. ಹಣವು ಯಾವ ಲೆಕ್ಕಕ್ಕೂ ಇಲ್ಲ. ಕಳೆದ ಹನ್ನೆರಡು ವರುಷ ಗಳಿಂದಲೂ ನಾನು ನನ್ನ ಮುಂದಿನ ಊಟವನ್ನು ಎಲ್ಲಿ ಪಡೆಯುತ್ತೇನೆ ಎಂಬುದನ್ನೇ ತಿಳಿಯದವನಾಗಿದ್ದೇನೆ. ನನಗೆ ಬೇಕಾಗಿರುವ ಹಣವು ಬರಲೇ ಬೇಕು. ಏಕೆಂದರೆ ಅದು ನನ್ನ ಗುಲಾಮ. ನಾನು ಅದರ ಗುಲಾಮನಲ್ಲ.

ಯುವಕರೇ! ನನ್ನ ಆಸೆಯು ನಿಮ್ಮಲ್ಲಿದೆ. ನೀವು ನಿಮ್ಮ ರಾಷ್ಟ್ರದ ಕರೆಗೆ ಓ ಕೊಡುವಿರಾ? ನೀವು ನನ್ನನ್ನು ನಂಬಿದ್ದೇ ಆದರೆ ನಿಮ್ಮಲ್ಲಿ ಪ್ರತಿಯೊಬ್ಬರಿಗೂ ಭವ್ಯವಾದ ಭವಿಷ್ಯವಿದೆ. ನಿಮ್ಮಲ್ಲಿ ನೀವು ನಂಬಿಕೆಯನ್ನಿಟ್ಟುಕೊಳ್ಳಿ. ನಿರಂತರವಾದ ಒಂದು ಮಹಾಶಕ್ತಿಯು ನಿಮ್ಮಲ್ಲಿ ಮನೆಮಾಡಿಕೊಂಡಿದೆ ಮತ್ತು ಇಡೀ ಭಾರತವನ್ನೇ ಮಾರ್ಪಡಿಸ ಬಲ್ಲಿರಿ. ನಾವು ಸೂರ್ಯನ ಆಶ್ರಯದಲ್ಲಿರುವ ಎಲ್ಲಾ ದೇಶಗಳಿಗೂ ಹೋಗೋಣ. ಅಲ್ಲಿ ನಮ್ಮ ಜ್ಯೋತಿಯ ಬೆಳಕನ್ನು ಬೀರೋಣ. ಇದ ಕ್ಕಾಗಿ ನನಗೆ ಹೊಸ ಹೊಸ ಯುವಕರು ಬೇಕಾಗಿದ್ದಾರೆ. ವೇದವು ಏನೆಂದು ಸಾರುತ್ತದೆ? "ಆ ಯುವಕರು, ಆ ವೀರ್ಯವಂತರು, ಆರೋಗ್ಯ ವಂತರು, ಚುರುಕಾದ ಬುದ್ಧಿಯುಳ್ಳವರು, ಅಂತಹವರು ಪರಮಾತ್ಮನನ್ನು ಕಾಣುವರು" ಎಂದು ಹೇಳುವುದು. ಇದು ನಿಮ್ಮ ಭವಿಷ್ಯವನ್ನು ರೂಪಿಸಿ ಕೊಳ್ಳುವ ವೇಳೆ. ನೀವು ಯುವಕರಾಗಿರುವಾಗ, ಯೌವನದ ವೀರ್ಯ ವನ್ನು ಹೊಂದಿರುವಾಗ, ಯೌವ್ವನದ ಚೇತನದಲ್ಲಿರುವಾಗ ನೀವು ನಿರ್ಧರಿಸ ಬೇಕು. ಜೀವನವೆಲ್ಲಾ ಸವೆದು ಜಡವಾದಾಗಲಲ್ಲ. ಇದು ನವಯುವಕ ರಿಗೆ ದುಡಿಯುವ ಕಾಲ. ಒಬ್ಬನು ನಾನು ದೇವರನ್ನು ನಂಬುವುದಿಲ್ಲ ಎಂದು ಹೇಳಬಹುದು. ಅದು ಕೇವಲ ಕ್ಷಣಿಕವಾದುದು. ! ಏಕೆಂದರೆ ಅದು ಅವನ ರಕ್ತದಲ್ಲಿಯೇ ಬಂದಿಲ್ಲ. ಈ ರೀತಿಯಾಗಿ ನಾಸ್ತಿಕರಾಗಲು ನೀವು ದಯ ವಿಟ್ಟು 'ಪ್ರಯತ್ನಿಸಬೇಡಿ ನಾನೂ ಒಂದು ಸಲ ಹುಡುಗನಾಗಿದ್ದಾಗ ಆ ರೀತಿ ಯಾಗಲು ಪ್ರಯತ್ನಿಸಿದೆನು. ಆದರೆ ಸಾಗಲಿಲ್ಲ. ಜೀವನವು ಶಾಶ್ವತವಲ್ಲ. ಆದರೆ ಆತ್ಮವು ಶಾಶ್ವತವಾದುದು. ಒಂದು ವಿಷಯ ಮಾತ್ರ ನಿಶ್ಚಿತವಾದದ್ದು. ಆದುದರಿಂದ ನಾವು ಜೀವನದಲ್ಲಿ ಒಂದು ಮಹತ್ತಾದ ಧ್ಯೇಯವನ್ನು ಹೊಂದೋಣ. ಅದಕ್ಕಾಗಿ ದುಡಿಯುವಾ ಮತ್ತು ಮಡಿಯುವಾ. ಇದು ನಮ್ಮ ದೃಢವಾದ ಸಂಕಲ್ಪವಾಗಲಿ. "ಈ ಲೋಕದಲ್ಲಿ ಜನಗಳನ್ನು ತಿದ್ದಲು ಮರಳಿ ಮರಳಿ ಬರುವ ಆ ಪರಮಾತ್ಮನು ನಮ್ಮೆಲ್ಲರನ್ನು ಆಶೀರ್ವದಿಸಲಿ. ಮತ್ತು ನಮ್ಮ ಗುರಿಯನ್ನುಮುಟ್ಟುವಂತೆ ಕರುಣಿಸಲಿ.



Edited, Printed & Published by K. V. Shenoy
at the Prabhat Printers, Ltd., Mangalore.

ಗೆಳೆಯರ ಬಳಗದ ಕಾಣಿಕೆ

# ಸೋದರಿ

## ಕನ್ನಡ ಸಾಮಾಜಿಕ ನಾಟಕ

1956



ಬೆಲೆ: ಎರಡಾಣೆ.

# ಗೆಳೆಯರ ಬಳಗ

**ನಾಟಕ ಕಲೆ:—**

ಬಹಳ ಪುರಾತನ ಕಾಲದಲ್ಲಿಯೂ ಪ್ರಚಾರದಲ್ಲಿದ್ದು ಅಂದಿನಿಂದಿಂದಿನ ವರೆಗೂ ಹಿಂದುಳಿಯದೆ ಬೆಳೆದುಬಂದಿರುವ ವಿಶಿಷ್ಟಕಲೆ. ಯುಗಯುಗಾಂತರ ಗಳಲ್ಲಿ ನಡೆದಿರಬೇಕೆಂದು ಹೇಳಲಾದ ಘಟನೆಗಳನ್ನೂ, ಇತಿಹಾಸದಲ್ಲಿ ಆಗಿ ಹೋದ ಸ್ಮರಣೀಯ ಕಥೆಗಳನ್ನೂ, ಈಗಿನ ವ್ಯವಹಾರದಲ್ಲಿ ನಡೆಯುತ್ತಿರುವ ದೃಶ್ಯಗಳನ್ನೂ, ಕೆಲವೇ ಗಂಟೆಗಳಲ್ಲಿ ಸಹಸ್ರಾರು ಜನರಿಗೆ ಸ್ಪಷ್ಟರೀತಿಯಲ್ಲಿ ತೋರಿಸುವ ದಾರಿಯೇ ನಾಟಕ ಪ್ರದರ್ಶನ. ಇದಕ್ಕಿಂತಲೂ ಸ್ಪಷ್ಟವಾಗಿ ಚಲ ಚ್ಚಿತ್ರಗಳಲ್ಲಿ ಕಾಣಬಹುದಾದರೂ ಚಲಚ್ಚಿತ್ರದ ಮಾತೃಸ್ಥಾನವು ನಾಟಕವೇ ಆಗಿದೆಯೆಂಬುದು ನಿರ್ವಿವಾದ, ಅಲ್ಲದೆ ಚಲಚಿತ್ರವು ಪೇಟೆ ಪಟ್ಟಣಗಳಲ್ಲಿ ಜನರಿಗೆ ಮನರಂಜನೆಯೊದಗಿಸುತ್ತದಲ್ಲದೆ ಹಳ್ಳಿಗರಿಗೆ ಸುಲಭಸಾಧ್ಯವಲ್ಲ.

ಸಮಾಜ ಶಿಕ್ಷಣವನ್ನು ಮನರಂಜನೆಯೊಂದಿಗೆ ಬೆರಸಿಕೊಂಡು ಪ್ರದರ್ಶಿ ಸುವುದೇ ಸಮಾಜಾಭಿವೃದ್ಧಿಗೆ ಯೋಗ್ಯ ದಾರಿಯೆಂಬುದು ಬಲ್ಲವರ ಅಭಿ ಪ್ರಾಯ. ಹಳ್ಳಿಗರೂ ನಾಟಕ ಕಲೆಯನ್ನು ಅಭ್ಯಸಿಸಬೇಕು—ಹಳ್ಳಿಗರಿಗೆ ಮನರಂಜನೆಯೊದಗಿಸಬೇಕು—ಆ ಮನರಂಜನೆಯೊಂದಿಗೆ ಸಮಾಜಶಿಕ್ಷಣ ವನ್ನೂ ಹೊಂದಿಸಿಕೊಂಡು ಸಮಾಜಾಭಿವೃದ್ಧಿಗಾಗಿ ದುಡಿಯಬೇಕು ಎಂಬಿವೇ ಮೊದಲಾದ ಧ್ಯೇಯಗಳಿಂದ ಕೋಟೆಕಾರಿನಲ್ಲಿ ಕೆಲವೇ ಮಂದಿ ತರುಣರ ಒಕ್ಕೂಟದಿಂದ "ಗೆಳೆಯರ ಬಳಗ" ಎಂಬ ನಾಟಕ ಕಲಾ ಸೇವಾ ಸಂಸ್ಥೆ ಉದಯಿಸಿತು.

ಯಾವ ಭದ್ರ ತಳಹದಿಯಾಗಲೀ, ಯೋಗ್ಯ ಭಂಡವಾಳವಾಗಲೀ ಇಲ್ಲದ ಈ ಸಂಸ್ಥೆ ಬರೆ ಮನುಷ್ಯ ಪ್ರಯತ್ನವನ್ನು ಮುಂದಿಟ್ಟುಕೊಂಡು ತನ್ನ ಪ್ರಥಮ ಕಾಣಿಕೆಯಾದ "ಸೋದರಿ" ಎಂಬ ಕನ್ನಡ ನಾಟಕವನ್ನು ಕೋಟೆಕಾರು, ದೇರಳಕಟ್ಟೆ, ದುಗ್ಗಜರಕಟ್ಟೆ ಮತ್ತಿತರ ಹಳ್ಳಿ ಕೇಂದ್ರಗಳಲ್ಲಿ ಧರ್ಮಾರ್ಥವಾಗಿ ಪ್ರದರ್ಶಿಸಿ ತನ್ಮೂಲಕ ಸಮಾಜಾಭಿವೃದ್ಧಿಗೆ—ಕಲಾಭಿವೃದ್ಧಿಗೆ ತನ್ನಿಂದಾದ ಅಳಿಲ ಸೇವೆಯನ್ನು ಮಾಡಹೊರಟಿದೆ ಈ ಸಂಸ್ಥೆ. ಸಹೃದಯತೆಯ ಸಾರ್ವ ಜನಿಕರು ಹಳ್ಳಿಯ ಕಲೆಗೆ ಪ್ರೋತ್ಸಾಹ ಕೊಡುವರೆಂದು ಗೆಳೆಯರ ಬಳಗವು ಆಶಿಸುತ್ತದೆ

ಜೈ ಕರ್ಣಾಟಕ ಮಾತೆಗೆ

'ಗೆಳೆಯರ ಬಳಗ' ಕೋಟೆಕಾರು.

## —: ಕಥಾಸಾರಾಂಶ :—

ಸುಂದರ ಯಸ್. ಯಸ್. ಯಲ್. ಸಿ. ಯನ್ನು ಕಲಿಯುತ್ತಿರುವಾಗಲೇ ತಂದೆಯನ್ನು ಕಳಕೊಳ್ಳುತ್ತಾನೆ. ಅವನ ತಾಯಿ ಗೌರಮ್ಮ ತನ್ನ ಸರ್ವಸ್ವವಾಗಿದ್ದ ದನ, ಕರು, ಪಾತ್ರೆ ಪರಡಿಗಳನ್ನು ಮಾರಿ ಮಗನ ವಿದ್ಯಾಭ್ಯಾಸವನು ಪೂರ್ತಿಗೊಳಿಸಿ, ಮಗಳು ಲೀಲ ಮತ್ತು ಮಗನೊಂದಿಗೆ ಕಷ್ಟದಲ್ಲಿ ಜೀವಿಸುತ್ತಾಳೆ. ಸುಂದರನಿಗೆ ಊರಲ್ಲಿ ಎಲ್ಲಿ ಪ್ರಯತ್ನಿಸಿದರೂ ನೌಕರಿ ದೊರೆಯುವುದಿಲ್ಲ. ಸುಂದರನ ಮಿತ್ರನೂ ನೆರೆಕರೆಯವನೂ ಆದ ಗುಣವಂತ ಭಾಸ್ಕರನು ಅವರಿಗೆ ಸ್ವಲ್ಪ ಸ್ವಲ್ಪ ಸಹಕರಿಸುತ್ತಿರುತ್ತಾನೆ. ಆ ಹೊತ್ತಿಗೆ ಸುಂದರನ ತಂದೆಯ ಸ್ನೇಹಿತರಾಗಿದ್ದು, ಬೊಂಬಾಯಿಯಲ್ಲಿ ಸರಕಾರಿ ನೌಕರಿ ಮಾಡುತ್ತಿರುವ ಸೀತಾರಾಮಯ್ಯ ಊರಿಗೆ ಬಂದವರು, ಈ ತಾಯಿ ಮಕ್ಕಳನ್ನು ನೋಡಲು ಬಂದು ದುಃಖಿಗಳೊಡನೆ ಸಹಭಾಗಿಯಾಗುತ್ತಾರೆ. ಸುಂದರ ತಾನು ಬೊಂಬಾಯಿಗೆ ಬರುವೆನೆಂದು ಸೀತಾರಾಮಯ್ಯರೊಡನೆ ಆಶೆ ವ್ಯಕ್ತಪಡಿಸಿ, ತಾಯಿಯನ್ನು ಒಪ್ಪಿಸುತ್ತಾನೆ. ಆದೊಂದುದಿನ ಸುಂದರ ತನ್ನ ತಾಯಿ ತಂಗಿಯರನ್ನು ಬೀಳ್ಕೊಟ್ಟು ಬೊಂಬಾಯಿಗೆ ಸೀತಾರಾಮಯ್ಯನೊಂದಿಗೆ ತೆರಳುತ್ತಾನೆ. ಸೀತಾರಾಮಯ್ಯ ಬೊಂಬಾಯಿಯಲ್ಲಿ ಸುಂದರನಿಗೆ ನೌಕರಿಯೊಂದನ್ನು ಕೊಡಿಸಿ, ತನ್ನ ಕೋಣೆಯಲ್ಲೇ ಉಳಕೊಳ್ಳಲು ಅವಕಾಶ ಕೊಡುತ್ತಾರೆ.

ಬಾಲ್ಯದಲ್ಲೇ ಸ್ವಲ್ಪ ಶೋಕಿಯಾದ ಸುಂದರ ಬೊಂಬಾಯಿಯಲ್ಲಿ ಸೀತಾರಾಮಯ್ಯನ ಕಣ್ಣು ತಪ್ಪಿಸಿ ದುಶ್ಚಟಗಳಿಗೆ ಗಮನ ಹರಿಸುತ್ತಾನೆ. ಅಕಸ್ಮಾತ್ ಸೀತಾರಾಮಯ್ಯನಿಗೆ ಬೆಂಗಳೂರಿಗೆ ವರ್ಗವಾಗುತ್ತದೆ. ಅನಂತರ ಸುಂದರನಿಗೆ ಮೇಲ್ವಿಚಾರಕರೂ ಇಲ್ಲದಂತಾಗಿ ಸಂಪೂರ್ಣ ದುರ್ಮಾರ್ಗಿಯಾಗಿ ವ್ಯಭಿಚಾರ-ಜುಗಾರಿಗಳಲ್ಲಿ ಕಾಲಕಳೆಯುತ್ತಿದ್ದು, ತನ್ನ ಬಡ ತಾಯಿ ತಂಗಿಯರನ್ನು ಸಂಪೂರ್ಣ ಮರೆತುಬಿಡುತ್ತಾನೆ. ಈ ತರದ ವರ್ತನೆಗೆ ಸುಂದರನಿಗೆ ರಾಜನೆಂಬ ಮಿತ್ರನು ತುಂಬಾ ಸಹಕರಿಸುತ್ತಾನೆ.

ಅತ್ತ ಗೌರಮ್ಮ ಮತ್ತು ಲೀಲಾ, ಸುಂದರನ ಕಾಗದವಾಗಲೀ ವರ್ತಮಾನವಾಗಲೀ ಹಣಸಹಾಯವಾಗಲೀ ಇಲ್ಲದೆ, ವ್ಯಸನಕ್ಕೊಳಗಾಗುತ್ತಾರೆ. ಆದರೆ ಧೈರ್ಯವಂತಳಾದ ಲೀಲ, ಚರಕದಿಂದ ನೂಲು ತಯಾರಿಸಿ ಆ ಸಣ್ಣ ಸಂಪಾದನೆಯಿಂದ ತಾಯಿಯನ್ನು ಪೋಷಿಸುತ್ತಾಳೆ. ಹೆಚ್ಚಿನ ತೊಂದರೆಗಳಿದ್ದಾಗ ನೆರೆಯವನಾದ ಭಾಸ್ಕರನೂ ನಿಸ್ವಾರ್ಥತೆಯಿಂದ ಸಹಕರಿಸುತ್ತಿರುತ್ತಾನೆ.

ಅದೇ ಹೊತ್ತಿಗೆ ಅಂಗಡಿ ರಂಗಪ್ಪ ಸಾಲವಸೂಲಿಗಾಗಿ ಗೌರಮ್ಮನ ಮನೆಗೆ ಬಂದವನು ಲೀಲಳ ಮೇಲೆ ಕಣ್ಣಿಟ್ಟು ತನ್ನ ಅಂಗರಕ್ಷಕನಾದ ಕಂಠೀರವನನ್ನು ಕಳುಹಿಸಿ ಉಪಾಯದಿಂದ—ಸಾಧ್ಯವಾಗದಿದ್ದರೆ ಬಲಾತ್ಕಾರದಿಂದ ಲೀಲಳನ್ನು ಸ್ವಾಧೀನಪಡಿಸಲು ಹಂಚಿಕೆ ಹೂಡುತ್ತಾನೆ. ಕಂಠೀರವನ ಉಪಾಯಕ್ಕೆ ಲೀಲಳು ಸಿಕ್ಕಿಬೀಳಲಿಲ್ಲ. ಹೆದರಿಕೆಗೂ ಬೆದರಲಿಲ್ಲ. ಕಂಠೀರವನು ಬಲಾತ್ಕಾರದ ಮಾತುಗಳನ್ನಾಡುತ್ತಿರುವ ಸಮಯ ಭಾಸ್ಕರನು ಪ್ರವೇಶಿಸಿ ರಂಗಪ್ಪನ ಸಾಲ ತೀರಿಸಿ ಕಂಠೀರವನನ್ನು ಗದರಿಸಿ ಆ ಬಡ ಸಂಸಾರವನ್ನು ರಕ್ಷಿಸುತ್ತಾನೆ ಒಮ್ಮೆ ಸೀತಾರಾಮಯ್ಯ ಬೆಂಗಳೂರಿಂದ ಊರಿಗೆ ಬರುತ್ತಾರೆ. ಬರುವ ದಾರಿಯಾಗಿಯೇ ಗೌರಮ್ಮನ ಮನೆಗೆ ಬರುತ್ತಾರೆ. ಗೌರಮ್ಮ ಅಳುತ್ತಾ ತನ್ನ ಮಗನು ತಮ್ಮನ್ನು ಮರೆತ ವಿಷಯವನ್ನು ತಿಳಿಸಿ, ಅವನನ್ನು ತನ್ನ ಬಳಿಗೆ ಕರೆದು ತರಬೇಕೆಂದು ಬೇಡಿಕೊಳ್ಳುತ್ತಾಳೆ. ಸೀತಾರಾಮಯ್ಯ ಆಶ್ಚರ್ಯದಿಂದಲೂ, ಕೋಪದಿಂದಲೂ, ಕೆದರಿದಂತಾಗಿ ಮರುದಿನವೇ ಬೊಂಬೈಗೆ ತೆರಳಿ, ಸುಂದರನನ್ನು ಗದರಿಸಿ, ಊರಿಗೆ ಕಳುಹಿಸಿ ತಾನು ಅಲ್ಲಿಂದಲೇ ಬೆಂಗಳೂರಿಗೆ ತೆರಳುತ್ತಾರೆ.

ಮಂಗಳೂರಿನ ಬಸ್ಸು ನಿಲ್ದಾಣದಲ್ಲಿ ಬಂದಿಳಿದ ಸುಂದರ ದುಃಖಿತ ತಾಯಿ ತಂಗಿಯರನ್ನು ನೋಡಹೋಗದೆ. ಬಾಡಿಗೆಯ ಕೋಣೆಯಲ್ಲುಳಿದು ವೇಶ್ಯಾಸಂಗಕ್ಕೆ ಆಶೆಪಟ್ಟು ದಳ್ಳಾಳಿಯ ಮುಖಾಂತರ ಅದಕ್ಕೆ ಏರ್ಪಾಡು ಮಾಡುತ್ತಾನೆ.

ಈ ಸಂಗತಿ ತಿಳಿದಿರದೆ, ಬೇರೆ ಕೆಲಸಕ್ಕಾಗಿ ಅಲ್ಲಿಗೆ ಬಂದ ಭಾಸ್ಕರ, ಸುಂದರನು ದಲ್ಲಾಳಿಯೊಡನೆ ಮಾತಾಡುವುದನ್ನು ಆಲಿಸಿ ಸುಂದರನ ದುರ್ವರ್ತನೆಗೆ ಯೋಗ್ಯ ಔಷಧಿಯನ್ನು ಆಲೋಚಿಸಿ ಉಪಾಯ ಹೂಡುತ್ತಾನೆ. ದಲ್ಲಾಳಿ, ತರುಣಿಯೋರ್ವಳನ್ನು ಸುಂದರನ ಕೋಣೆಯಲ್ಲಿ ಬಿಟ್ಟು ಹೋಗುತ್ತಾನೆ. ಸುಂದರನು ಕಾಮಾಪೇಕ್ಷಿತನಾಗಿ ತರುಣಿಯ ಕೈಹಿಡಿದು ಮುಖವೆತ್ತಿ ನೋಡುತ್ತಾನೆ. ಫಕ್ಕನೆ ಸುಂದರ ಹಿಮ್ಮೆಟ್ಟುತ್ತಾನೆ – – – ! - - - ಹುಚ್ಚನಂತಾಗುತ್ತಾನೆ - - - - ಕಾರಣವೇನು – – – ? ಗೌರಮ್ಮ ಏನಾದಳು? ಲೀಲ ಹೇಗಾದಳು - - - ? - - - ಭಾಸ್ಕರನ ಉಪಾಯ ಯಾವುದು? ಪರಿಣಾಮವೇನು? ಸುಂದರ ತನ್ನ ನಡತೆಯನ್ನು ಬದಲಾಯಿಸಿದನೇ – – – – ? ಕಾಮುಕರಿಗೆ ಅಂತ್ಯಕ್ಕೆ ಸಿಗುವ ಸುಖವಾವುದು? ಈ ಹಲವಾರು ಕುತೂಹಲಪೂರಿತ ಪ್ರಶ್ನೆಗಳಿಗೆ ಯೋಗ್ಯ ಪರಿಹಾರಗಳನ್ನು ರಂಗಭೂಮಿಯಲ್ಲಿ ನೋಡಿ ತಿಳಿದುಕೊಳ್ಳಿರಿ.

# ಹಾಡುಗಳು.



1. ಸನ್ಯಾಸಿ — ಯು. ಬಾಲಕೃಷ್ಣ

ಭೂಚಲನೆಯಂತೆ । ಆಕಾಶವೂ ಚಲಿಸುತ್ತಿದೆ.
ಇದು ಯಾರ ಕಾರ್ಯ । ಏಕಾಗಿ ಚಲನೆ ?
ಸಾಗುತ್ತಲಿಹದು । ಸಂಸಾರ ನೌಕೆ
ಎಲ್ಲಿಗೆ ಪಯಣ । ಸಾರಥಿಯಾರು ?
ಗೈವುದು ನಮ್ಮಿಚ್ಛೆ । ಕೊಯ್ವುದು ದೈವೇಚ್ಛೆ ।
ವಿಧಿಯಾಟವೆಲ್ಲಾ । ನಮ್ಮಾಟವಲ್ಲ ।
ಮನುಷ್ಯ ಪ್ರಯತ್ನ । ಇರಬೇಕು ಸತ್ಯ ।
ಕಾಲನ ಚಕ್ರದ । ಉರುಳಾಟ ನಿತ್ಯ ॥

2. ಭಾಸ್ಕರ. — ಎನ್. ಬಿ. ಶೇಕ್

ವಿಧಿಯಾಟ ನೋಡಿದಿರಾ । ಬಹುವಿಧದಾ ಸುಖಕಷ್ಟ ।
ಮಿಲನತೆಯಿಹುದೀ ಜೀವನದಿ ॥
ಸತ್ಯ ಸದ್ವರ್ತನೆಯುತ್ತಮ ಜನರಿಗೆ । ಮತ್ತೂ ಕಷ್ಟವು ಕಾದಿಹುದು ।
ಉತ್ತಮ ಬಾಳ್ವೆಗೆ ಎಡೆಯಿಲ್ಲಾ ॥
ನಾಳೆಗೆ ಬರುವಾ ಗೋಳನು ಅರಿತು । ಬಾಳಲು ಆರಿಗೆ ಸಾಧ್ಯವಿದೆ ।
ಕಾಲನ ಮಹಿಮೆಯಗಾಧವಿದೆ ॥
ಸೋಲೇಬರಲಿ ಗೆಲವೇಬರಲಿ । ಕೂಳಿಗೆ ಗತಿಯೇ ಇಲ್ಲದೆ ಇರಲಿ ।
ತಾಳುವುದೇ ನಿಜ ಜೀವನವು ॥

3. ದೇವ ನಿನಗೆ ನಮ್ಮ ಕಷ್ಟ ಕಾಣದಿರುವುದೇ ।
ಯಾವ ತಪ್ಪಿಗಾಗಿ ಎಮ್ಮ ದಣಿಸುತಿರುವುದು,
ಅಬಲೆ ನಾನು ತಿರುಗಿ ನೋಡು । ಎಮ್ಮ ಬಾಳು ಮರಳುಗಾಡು
ಪ್ರಬಲವಾದ ಕಷ್ಟದಿಂದ । ಕಾಯೊ ದೇವ ಅಭಯ ನೀಡಿ.
ಏಕೆ ನಿನಗೆ ಕರುಣೆ ಇಲ್ಲ । ಬೇಕು ನಿನ್ನ ಕೃಪೆಯ ರಕ್ಷೆ ।
ಉಣ್ಣಲೆಮಗೆ ಅನ್ನವಿಲ್ಲ । ಅಣ್ಣನೆಮ್ಮ ಮರೆತನಲ್ಲ
ಸಣ್ಣ ಕಷ್ಟವಲ್ಲ ನೋಡು । ಕಣ್ಣು ಕಾಣದಾಗಿದೆ.

# ಕಲಾವಿದರ ಪರಿಚಯ



**ಕೆ. ಟಿ. ಕರುಣಾಕರ ರೈಯವರು ನಾಟಕದ ದಿಗ್ದರ್ಶಕರು:** ಕಾಲೇಜು ಪದವೀಧರರಾದಇವರು, ಉತ್ತಮ ಸಂಘಟಕರೂ, ವಿನಯಶೀಲರೂ, ಆಗಿದ್ದು ಗೆಳೆಯರ ಬಳಗದ ಅಧ್ಯಕ್ಷರಾಗಿದ್ದಾರೆ.



'ಲೀಲ'ಳ ಪಾತ್ರ ವಹಿಸಿದ, **ಎಸ್. ರಾಘವರು** ಸೋಮೇಶ್ವರದವರಾಗಿದ್ದು, ಕಳೆದ ವರ್ಷ ತಾನೇಹೈಸ್ಕೂಲ್ ವಿದ್ಯಾಭ್ಯಾಸ ಮುಗಿಸಿದ ಎಳೆ ತರುಣರು. ಇವರು ಈ ಮೊದಲು ಇತರ ಮನರಂಜನಾ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಬಹುಮಾನ ಪಡೆದಿರುತ್ತಾರೆ.



'ಸೀತಾರಾಮಯ್ಯ'ನ ಪಾತ್ರವಹಿಸಿದ, **ಕೆ. ಗಂಗಾಧರ ರೈಯವರು,** ಕೋಟೆಕಾರಿನ ಕೃಷಿಕರಾಗಿದ್ದು ನಾಟಕ ಕಲೆಯಲ್ಲಿ ತುಂಬಾ ಹುರುಪುಳ್ಳವರಾಗಿದ್ದಾರೆ. ಇವರಲ್ಲಿ ಮುಂದಕ್ಕೆ ಉತ್ತಮ ನಟರಾಗುವ ಲಕ್ಷಣಗಳು ಕಂಡು ಬರುತ್ತವೆ.



'ಸುಂದರ'ನ ಪಾತ್ರಧಾರಿಯಾದ: **ಕೆ. ಬಾಲಕೃಷ್ಣ ಭಂಡಾರಿಯವರು** ಈ ನಾಟಕದ ಲೇಖಕರೂ,ಗೆಳೆಯರ ಬಳಗದ ಸ್ಥಾಪಕರೂ, ಈ ಪದ್ಯಾವಳಿಯ ಸಂಪಾದಕರೂ, ಆಗಿದ್ದು ಈ ಮೊದಲು ಹಲವು ನಾಟಕಗಳಲ್ಲಿ ನೈಜವಾಗಿ ಅಭಿನಯಿಸಿ ಜನಮೆಚ್ಚಿಗೆ ಗಳಿಸಿದ್ದಾರೆ. ಅಲ್ಲದೆ ಗೆಳೆಯರ ಬಳಗದ ಕಾರ್ಯದರ್ಶಿಯಾಗಿದ್ದಾರೆ.



ಭಾಸ್ಕರನ ಪಾತ್ರವಹಿಸಿದ: **ಎನ್. ಬಿ. ಶೇಕರ್‌ರವರು** ಕೋಟೆಕಾರಿನವರಾಗಿದ್ದು, ಕಾಲೇಜು ವಿದ್ಯಾಭ್ಯಾಸ ಮಾಡಿದ್ದಾರೆ. ಇವರು, ಈಮೊದಲು ಹಲವು ನಾಟಕಗಳಲ್ಲಿ ಅಭಿನಯಿಸಿದ ಅನುಭವಸ್ಥರಾಗಿದ್ದು ಉತ್ತಮ ಹಾಡುಗಾರರಾಗಿದ್ದಾರಲ್ಲದೆ ಗೆಳೆಯರ ಬಳಗದ ಕೋಶಾಧಿಕಾರಿಯಾಗಿದ್ದಾರೆ.



ರಂಗಸಜ್ಜಿಕೆಯ ಜವಾಬ್ದಾರಿ ನಿರ್ವಹಿಸಿದ: **ಕೆ. ಯಲ್. ಪಕ್ಕಳರು** ಮಂಜಿನಾಡಿಯವರಾಗಿದ್ದು, ಬಿ. ಯಸ್. ಸಿ (ಎಗ್ರಿಕಲ್ಚರ್) ವಿದ್ಯಾರ್ಥಿಯಾಗಿದ್ದಾರೆ. ಇವರು ಉತ್ತಮ ಕಾರ್ಯಕರ್ತರೂ, ಕಲಾಪ್ರಿಯರೂ ಆಗಿದ್ದಾರೆ.

ಭಾಸ್ಕರ್ ಎಸ್. ಬಿ. ಶೇಕ್

ಈ ಕಾಲದಲಿ ಸದ್ಗುಣಿಗಳಿಗೆ | ಸುಖವೆಂಬುದೇ ಸಿಗದಲ್ಲಾ
ಮತಿಮಾನದಲಿ ದಿನದೂಡುತಿಹ | ಬಡ ಸಂಸಾರಕೆ ಬೆಲೆ ಇಲ್ಲಾ
ಅತಿ ಸ್ವಾರ್ಥದಲೀ ಹಣಗಳಿಸಿರಲಿ| ವ್ಯವಹಾರದಲೀ ಸುಖದೊರಕುವುದು
ನಿಸ್ವಾರ್ಥದಲಿ ಉಪಕಾರವನು | ಗೈಯುವರಿಗೆ ಬೆಂಬಲವಿಲ್ಲ
ತನ್ನಾಶೆಯನು ಈಡೇರಿಪರ್ಗೆ | ಹೊನ್ನೆರೆಯುವ ಜನರೇ ಹೆಚ್ಚಿಹರು
ಹೊನ್ನಿನ ಬೆಲೆಯಿಂ ನನ್ನಿಯಗುಣವು ಹಿರಿದೆಂಬುವರೇ ಕಾಣುವುದಿಲ್ಲ

ಸುಂದರ ಕೆ. ಬಿ. ಭಂಡಾರಿ

ಬೊಂಬಾಯಿ ಜೀವನವು | ಸುಖನುಯಾ | ಬೊಂಬಾಯಿ ಜೀವನವು
ಬೇಕಾದ ಸುಖಗಳಿಗತಿಮುಖ್ಯ ಠಾಣ್ಯ | ನಾಕವಾಗಿಹುದು
ಸುಖಭೋಗಗಳಿಗೆ
ಬೇಸರ ಕಳೆಯುವ ಜೂಜು-ಜುಗಾರಿಗೆ | ಭೇಷಾದ ಪಟ್ಟಣವಿದು ಜನಕೆ
ಅಂಗನೆಯರ ಸಂಗಕಿದು ಸುಖಬೀಡು | ಮಂಗ ಜನರಿಗದು
ತಿಳಿಯದು ನೋಡು
ಭಂಗಿಭಾವದ ಲಲನಾಮಣಿಯರ | ಸ್ನೇಹದಿಮೆರೆಯುವ ನಾನೇ ಸುಖಿ
(ಯು

ಭಾವಗೀತೆ ಯು. ಬಾಲಕೃಷ್ಣ

ಕಾಮಾಭಿಲಾಷೆಯಾ ಚಟವೂ | ಅಂಧತೆಯಾ ಶಿಖರ
ಮಾನವತೆಯನು ತಾ | ಅಧಪತನಗೊಳಿಸುವುದು
ತನ್ನಾತ್ಮದಾ ಗತಿಯಾ | ಅರಿಯೆಯಾ ಮನುಜಾ
ಇನ್ನೇತಕೆ ದುಷ್ಟತೆಯನು ತಾ | ಸೃಷ್ಟಿಸುತಲಿರುವೆ
ಮಾನಿನಿಯರನು ಮಾನ್ಯತೆಯಲಿ | ಕಾಣುವುದೆ ಮಾನವತೆ

ಭಾವಗೀತೆ ಯು. ಬಾಲಕೃಷ್ಣ

ಮಾನವಾ, ಮಾನವಾ, ಮಾನವಾ.
ವೇಶ್ಯಾವೃತ್ತಿಯು ಅಳಿಯುವ ತನಕ | ದೇಶಾಭಿವೃದ್ಧಿಯಾಗದು.
ವೇಶ್ಯೆಯೆ ಮಾರಿ, ನರಕದ ನಾರಿ | ರೋಗಕೆ ನಿಜದಾರಿಯು
ತರುಣೀತರುಣರ ಸೋದರತೆಯಲಿ | ಪರಸ್ತ್ರೀಯರನು ನಿಷ್ಕಾಮತೆಯಲ್ಲಿ
ಸರಿಕಾಣುವುದೇ ನಿಜ ನಾಗರಿಕತೆಯು
ನಾಡಿನ ಎಲ್ಲಾ ಸ್ತ್ರೀಯರು ತನ್ನ | ಮಾತೆಯರೆಂದೇ ಭಾವಿಸಿರಿ
ಪರಸ್ತ್ರೀಯು ತನಗೇ ತಂಗೀ | ಪರಸ್ತ್ರೀಯು ತನಗೇ ತಾಯೀ |

# ಕಲಾಕಾರರ ಪರಿಚಯ.

'ಗೌರಮ್ಮ'ನ ಪಾತ್ರದಲ್ಲಿ ನೈಜ ಅಭಿನಯವನ್ನಿತ್ತ ಗೋವಿಂದರಾಯ ನಾಯಕ್‌ರು, ಕೋಟೆಕಾರಿಗೆ ಇತ್ತೀಚೆಗೆ ಬಂದವರಾಗಿದ್ದು, ಉತ್ತಮ ಹಾಡುಗಾರರಾಗಿದ್ದಾರಲ್ಲದೆ, ಇವರಿಂದ ಗೆಳೆಯರ ಬಳಗಕ್ಕೆ ಮುಂದಕ್ಕೂ ತುಂಬಾ ಸೇವೆ ಸಲ್ಲಬಹುದೆಂದು ಆಶಿಸಲಾಗಿದೆ.

'ಸನ್ಯಾಸಿ'ಯಾಗಿ ಉತ್ತಮವಾಗಿ ಹಾಡಿದ ಮತ್ತು ಭಾವಗೀತೆಗಳನ್ನೊದಗಿಸಿದ, ಯು. ಬಾಲಕೃಷ್ಣರವರು, ಸೋಮೇಶ್ವರದವರೇ ಆಗಿದ್ದರೂ ಹೆಚ್ಚು ಸಮಯ ಬೊಂಬಾಯಿಯಲ್ಲಿದ್ದು ಇತ್ತೀಚೆಗೆ ಊರಿಗೆ ಬಂದು ಗೆಳೆಯರ ಬಳಗಕ್ಕೆ ಸೇರಿದ ಉತ್ತಮ ಕಲಾಗಾರರಾಗಿದ್ದಾರೆ.

ಸುಂದರನ ಬೊಂಬಾಯಿಯ ಮಿತ್ರನಾದ 'ರಾಜ್'ನ ಪಾತ್ರ ವಹಿಸಿದ, ಕೆ. ಇಬ್ರಾಹಿಮ್ ಖಾನರು ಕೋಟೆಕಾರಿನವರಾಗಿದ್ದು ಇನ್ನೂ ವಿದ್ಯಾರ್ಥಿ ದೆಸೆಯಲ್ಲೇ ಇದ್ದಾರೆ. ಇವರು ಈ ಮೊದಲದ ತುಂಬಾ ನಾಟಕಗಳಲ್ಲಿ ಅಭಿನಯಿಸಿದ ಉತ್ಸಾಹೀ ನಟರು.

'ರಂಗಪ್ಪ'ನ ಪಾತ್ರ ವಹಿಸಿದ ಕೆ. ರಘುನಾಥ ರೈಯವರು, ಕೋಟೆಕಾರಿನವರು. ಕಳೆದ ವರ್ಷ ಹೈಸ್ಕೂಲು ವಿಧ್ಯಾಭ್ಯಾಸ ಮುಗಿಸಿದ ಇವರು ರಂಗಭೂಮಿಗೆ ತೀರಾ ಹೊಸಬರಾಗಿದ್ದು ಅಭಿನಯದಲ್ಲಿ ಹೆಚ್ಚುಕಡಮೆಗಳಿದ್ದರೂ ಕ್ಷಮಾರ್ಹರಾಗಿದ್ದಾರೆ.

'ಕಂಠೀರವ'ನ ಪಾತ್ರ ವಹಿಸಿದ, ಕೋಟೆಕಾರು ಗ್ರಾಮದ ಬಗಂಬಿಲದಲ್ಲಿರುವ ಕೆ. ಪೂವಪ್ಪ ಶೆಟ್ಟರು, ಕಳೆದ ವರ್ಷ ಹೈಸ್ಕೂಲು ವಿಧ್ಯಾಭ್ಯಾಸ ಮುಗಿಸಿ ರಂಗಭೂಮಿಗೆ ಹೊಸಬರಾಗಿದ್ದಾರೆ. ಆದರೂ ಇವರಲ್ಲಿ ಅಭಿನಯದ ಹುರುಪು ಬಹಳವಿದೆ.

'ದಳ್ಳಾಲಿ' ಪಾತ್ರ ನಟಿಸಿದ ಕೆ. ಕೃಷ್ಣಪ್ಪನವರು, ಕೋಟೆಕಾರಿನವರಾಗಿದ್ದು ನಾಟಕ ಕಲೆಯಲ್ಲಿ ಹೆಚ್ಚಿನ ಅನುಭವವಿಲ್ಲದವರಾದರೂ ಗೆಳೆಯರ ಬಳಗದ ಉತ್ತಮ ಕಾರ್ಯಕರ್ತರಾಗಿದ್ದಾರೆ.

ನಾಟಕದ ಪರಿಚಯ ದೃಶ್ಯಗಳ ಸ್ತ್ರೀ ಪಾತ್ರದಲ್ಲಿ ಕಂಡುಬರುವ, ಅತಿಥಿ ನಟ 'ಬೇಬಿ' ನಾರಾಯಣರು ಸೋಮೇಶ್ವರ ಗ್ರಾಮದ ಕೊಲ್ಯದವರಾಗಿದ್ದು

ಹೈಸ್ಕೂಲು ವಿದ್ಯಾಭ್ಯಾಸ ಮುಗಿಸಿದ್ದು, ಹಲವು ನಾಟಕಗಳಲ್ಲಿ ಸ್ತ್ರೀ ಪಾತ್ರ ವಹಿಸಿ ಉತ್ತಮ ನಟರೆಂದು ಹೆಸರು ಪಡೆದವರಾಗಿದ್ದಾರೆ

ಕೆ. ಬಿ. ಮೊೖದಿನರು, ಕಿನ್ಯದವರಿದ್ದು, ಉತ್ತಮ ಹಾಸ್ಯ ನಟರೆಂದು ಹೆಸರು ಪಡೆದಿರುವರು.

ಚತುರನಟ ಕೆ. ಗಂಗಯ ಶೆಟ್ಟರು, ಕೋಟೆಕಾರಿನಲ್ಲಿ ದರ್ಜಿಗಳಾಗಿದ್ದು, ರಂಗ ಭೂಮಿಯ ಪ್ರಥಮ ಪ್ರವೇಶದಲ್ಲೇ ನುರಿತನಟರಂತೆ ಅಭಿನಯಿಸಿದ್ದಾರೆ.

ಕೆ. ಹಸನ್‌ರವರು, ಹೈಸ್ಕೂಲು ವಿದ್ಯಾಭ್ಯಾಸ ಮುಗಿಸಿದ್ದು ನಾಲ್ಕಾರು ನಾಟಕ ಗಳಲ್ಲಿ ಅಭಿನಯಿಸಿದ ಅನುಭವಸ್ಥರಾಗಿದ್ದಾರೆ. ಇವರು ಕೋಟೆಕಾರಿ ನವರು.

ಕೆ. ರಾಘವರು, ಬಹಳ ಲಜ್ಜಾಸ್ವಭಾವದವರಾದರೂ, ಇನ್ನು ಮುಂದಕ್ಕೆ ಓರ್ವ ಉತ್ತಮ ಸ್ತ್ರೀಪಾತ್ರಧಾರಿಗಳಾಗುವರೆಂದು ಆಶಿಸಬಹುದು.

ನಾಟಕ ಪ್ರದರ್ಶನದ ಅತೀ ಮುಖ್ಯ ಕೆಲಸವಾದ 'ಮೇಕಪ್' ಕೆಲಸವನ್ನು ಸೇವಾ ದೃಷ್ಟಿಯಿಂದ ನಿರ್ವಹಿಸಿದ ಜೆ. ಸಿ ಶೇಖರ್‌ರವರು ಮಂಗಳೂರಿ ನವರಾಗಿದ್ದು ಉತ್ತಮ ಚಿತ್ರಕಾರರೂ, ನಾಟಕದ ಪಾತ್ರಧಾರಿಗಳಿಗೆ ವೇಷ ಭೂಷಣ ತೊಡಿಸುವುದರಲ್ಲಿ ಅಗ್ರಗಣ್ಯರೂ ಆಗಿದ್ದಾರೆ, ಇವರ ಸಹಾಯವು ನಮ್ಮ ನಾಟಕದ ಯಶಸ್ವಿಗೆ ಹೆಚ್ಚಿನ ಕಾರಣವಾಗಿದೆ.

ಹಾರ್ಮೋನಿಯಮ್ ಸ್ವರ ಒದಗಿಸಿ ಹಳ್ಳಿಯ ಟೊಳ್ಳು ಹಾಡುಗಳಿಗೆ ಜೀವಕಳೆ ತುಂಬಿಸಿದ ಮಂಗಳೂರಿನ ಬಿ. ಎನ್. ನರಸಿಂಹರವರು ಮತ್ತು ತಬ್ಲಾ ವಾದನಗಾರರಾದ, ಬಿ. ಎ. ಹರಿಶ್ಚಂದ್ರರಾಯರು, ಮಂಗಳೂರಿನ ಮಾಸ್ಟರ್ ವಿಠಲ್ ಶೆಟ್ಟರ ನೃತ್ಯ ಶಾಲೆಯ ಹಿಮ್ಮೇಳ ವೃಂದದವರಾಗಿ ದ್ದಾರೆ.

ತಾಂತ್ರಿಕ ವಿಭಾಗದಲ್ಲಿ ಸೇವೆ ಸಲ್ಲಿಸಿದ ಕೆ. ರಾಮಚಂದ್ರ ಆಚಾರ್ಯರು, ಕೋಟೆಕಾರಿನವರಾಗಿದ್ದು, ಉತ್ತಮ ಕಲಾಪ್ರಿಯರಾಗಿದ್ದಾರೆ.

ನಾಟಕದ ಪ್ರಚಾರಕ್ಕೆ ಸಹಾಯಕವಾಗುವ, ಚಿತ್ರಸಹಿತ ಪೋಸ್ಟರುಗಳನ್ನು ಬರೆದು ಕೊಟ್ಟ, ಯು. ರಘುರಾಮರವರು. ತೊಕ್ಕೋಟಿನವರಾಗಿದ್ದು, ಉತ್ತಮ ಚಿತ್ರಕಾರರಾಗಿದ್ದಾರೆ.



# ಅಭಿನಂದನೆಗಳು

ಗೆಳೆಯರ ಬಳಗದ ಪ್ರಥಮ ಕಾಣಿಕೆಯಾದ 'ಸೋದರಿ'ಯನ್ನು ಜನತೆಗೆ ಅರ್ಪಿಸಲು ಪ್ರಥಮವಾಗಿ ಪ್ರೋತ್ಸಾಹ ಕೊಟ್ಟು ಉತ್ತಮ ವ್ಯವಸ್ಥೆ ಮಾಡಿ ಕೊಟ್ಟ ಬೆಳ್ಮ, ಕೊಣಾಜೆ, ಮಂಜನಾಡಿ ಗ್ರಾಮೋದ್ಧಾರಕ ಸಂಘದ ಸದಸ್ಯರಿಗೆ ಮತ್ತು ಅಧ್ಯಕ್ಷ ಯಂ. ತಿಮ್ಮಪ್ಪ ಮೇಲಾಟರಿಗೆ ನಾವು ಅನಂತ ಧನ್ಯವಾದವನ್ನರ್ಪಿಸುತ್ತೇವೆ. ದುಗ್ಗಜೆರೆ ಕಟ್ಟೆಯಲ್ಲಿ ವಿಜೃಂಭಣೆಯಿಂದ 'ಸೋದರಿ' ನಾಟಕ ಪ್ರದರ್ಶಿಸಲು ಏರ್ಪಾಡು ಮಾಡಲು ಮುಂದೆ ಬಂದ ಡಾ। ಯನ್. ರಾಮಕೃಷ್ಣ ರೈ ಮತ್ತಿತರ ಕಲಾ ಪ್ರಿಯಮುಖಂಡರಿಗೂ ನಾವು ತುಂಬಾ ಅಭಾರಿಗಳಾಗಿದ್ದೇವೆ. ಇನ್ನಿತರ ಕಡೆಗಳಲ್ಲಿಯೂ ನಮ್ಮ ಕಲಾ ಸೇವೆಗೆ ವ್ಯವಸ್ಥೆಮಾಡಲು ದುಡಿದಿರುವ ಮತ್ತು ದುಡಿಯುತ್ತಿರುವ ಎಲ್ಲಾ ಮಹನೀಯರುಗಳಿಗೂ ನಾವು ಕೃತಜ್ಞರು.

ನಮ್ಮ ಈ ಪದ್ಯಾವಳಿಗಳನ್ನೂ, ಎಲ್ಲಾ ಪ್ರದರ್ಶನಗಳ ನೋಟೀಸನ್ನೂ ಅಂದವಾಗಿ ಶೀಘ್ರವಾಗಿ ಅತೀ ಕಡಿಮೆ ದರದಲ್ಲಿ ಮುದ್ರಿಸಿ ಕೊಟ್ಟ ಮಂಗಳೂರಿನ ಜಿ. ವಿ. ಬೋಳಾರ್ ಕಾರ್ ರವರ ಸಹೃದಯತೆಯು ಚಿರಸ್ಮರಣೀಯವಿದೆ.

ನಮ್ಮ ನಾಟಕ ಪ್ರದರ್ಶನಕ್ಕೆ ಮತ್ತು ನಾಟಕದ ಅಭ್ಯಾಸಕ್ಕೆ ಶಾಲಾ ಕಟ್ಟೋಣವನ್ನು ಒದಗಿಸಿಕೊಟ್ಟು ಮತ್ತು ಇತರ ಎಲ್ಲಾ ರೀತಿಯ ಸಹಾಯ ಸಹಕಾರಗಳನ್ನಿತ್ತು ಪ್ರೋತ್ಸಾಹಿಸಿದ ಕೋಟೆಕಾರು ಶಾಲಾ ಮೆನೇಜರರು ಮತ್ತು ಉಪಾಧ್ಯಾಯ ವೃಂದಕ್ಕೂ ನಮ್ಮ ಹಾರ್ದಿಕ ಅಭಿವಂದನೆಗಳು.

ನಮ್ಮ ನಾಟಕ ಪ್ರದರ್ಶನಗಳಿಗೆ, ರಿಯಾತಿ ದರದಲ್ಲಿ 'ಧ್ವನಿ ವರ್ಧಕ' ವನ್ನು ಒದಗಿಸಿ ಕೊಟ್ಟ, ಜಯರಾಮ ಪೋನೋ ಹೌಸಿನ ಮ್ಹಾಲಕರಿಗೂ ನಮ್ಮ ಕೃತಜ್ಞತೆಗಳನ್ನರ್ಪಿಸುತ್ತೇವೆ. ಈ ಪದ್ಯಾವಳಿಗೆ ಜಾಹೀರಾತುಗಳನ್ನು ಕೊಟ್ಟು ಸಹಕರಿಸಿ ಎಲ್ಲಾ ಸಹೃದಯ ಮಹನೀಯರುಗಳಿಗೆ. ಗೆಳೆಯರ ಬಳಗವು ಚಿರಋಣಿಯಾಗಿದೆ.

ಇತರ ಎಲ್ಲಾ ರೀತಿಯಲ್ಲಿ ಸಹಕರಿಸಿದ ಪ್ರೋತ್ಸಾಹಿಸಿದ ಮಹಾಜನರಿಗೂ ಅಭಿನಂದನೆಗಳನ್ನು ಸಲ್ಲಿಸಿ ಗೆಳೆಯರ ಬಳಗವು ಮುಂದಕ್ಕೂ ಇದಕ್ಕಿಂತಲೂ ಹೆಚ್ಚಿನ ಪ್ರೋತ್ಸಾಹವನ್ನು ಆಶಿಸುತ್ತದೆ.

## 'ರಾಷ್ಟ್ರೀಯ ವಿಸ್ತರಣಾ ಯೋಜನೆ'ಯ ಪ್ರೋತ್ಸಾಹ

ನಮ್ಮ ಈ ಕಲಾ ಸೇವೆ ಮತ್ತು ಜನಸೇವೆಗೆ ಬೆಂಬಲಕೊಟ್ಟು, ನಾಟಕ ಪ್ರದರ್ಶನಗಳಿಗೆ ಅತೀ ಅಗತ್ಯವಿರುವ ಪರದೆಗಳನ್ನು ಕೇಳಿದ ತಕ್ಷಣ ಕೊಟ್ಟು ಸಹಕರಿಸಿದ, ರಾಷ್ಟ್ರೀಯ ವಿಸ್ತರಣಾ ಯೋಜನೆಯ ಅಧಿಕಾರಿಗಳಿಗೆ ನಮ್ಮ ಅನಂತ ಅಭಿನಂದನೆಗಳು ಇನ್ನು ಮುಂದೆಯೂ ಅವರು ಕಲಾ ಸೇವೆಯನ್ನು ಪ್ರೋತ್ಸಾಹಿಸುವರು ಎಂದು 'ಗೆಳೆಯರ ಬಳಗ'ವು ಆಶಿಸುತ್ತದೆ.

